# ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ

(ಚಿತ್ರದುರ್ಗ, ಬಳ್ಳಾರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಿಗೆ ಸಂಬಂಧಿಸಿದಂತೆ)

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಲಾದ ಮಹಾಪ್ರಬಂಧ


ಸಂಶೋಧಕರು
ಎಂ.ಕೆ. ದುರುಗಪ್ಪ

ಮಾರ್ಗದರ್ಶಕರು
ಪ್ರೊ. ಲಕ್ಷ್ಮಣ್ ತೆಲಗಾವಿ
ಪ್ರಾಧ್ಯಾಪಕರು





ಚರಿತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ೫೮೩ ೨೭೬



೨೦೦೧

# ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ

(ಚಿತ್ರದುರ್ಗ, ಬಳ್ಳಾರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಿಗೆ ಸಂಬಂಧಿಸಿದಂತೆ)

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಲಾದ ಮಹಾಪ್ರಬಂಧ

ಸಂಶೋಧಕರು
ಎಂ.ಕೆ.ದುರುಗಪ್ಪ

ಮಾರ್ಗದರ್ಶಕರು
ಪ್ರೊ. ಲಕ್ಷ್ಮಣ್ ತೆಲಗಾವಿ
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೩

# ಪ್ರಮಾಣ ಪತ್ರ

ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪ್ರೊ. ಲಕ್ಷ್ಮಣ್ ತೆಲಗಾವಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಎಂ.ಕೆ.ದುರುಗಪ್ಪ
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 04-2-2002
ಸ್ಥಳ : ವಿದ್ಯಾರಣ್ಯ

# ದೃಢೀಕರಣ ಪತ್ರ

ಶ್ರೀ ಎಂ.ಕೆ.ದುರುಗಪ್ಪ ಇವರು ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು : ಚಾರಿತ್ರಿಕ ಅಧ್ಯಯನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಸಮಾಜವಿಜ್ಞಾನ ನಿಕಾಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿರುವ ಪ್ರಸ್ತುತ ಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಪ್ರೊ. ಲಕ್ಷ್ಮಣ್ ತೆಲಗಾವಿ
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 08.2.2002
ಸ್ಥಳ : ವಿದ್ಯಾರಣ್ಯ

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡ, ಕುಲಸಚಿವರಾದ ಡಾ.ಕೆ.ವಿ.ನಾರಾಯಣ, ಅಧ್ಯಯನಾಂಗದ ನಿರ್ದೇಶಕರಾದ ಡಾ.ಕರೀಗೌಡ ಬೀಚನಹಳ್ಳಿ ಹಾಗೂ ಪ್ರಸಾರಾಂಗದ ನಿರ್ದೇಶರಾದ ಡಾ.ಹಿ.ಚಿ. ಬೋರಲಿಂಗಯ್ಯ ಮತ್ತು ಪಿಎಚ್.ಡಿ.ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ವಿಶ್ರಾಂತ ಕುಲಪತಿಗಳಾದ ಡಾ.ಎಂ.ಎಂ.ಕಲಬುರ್ಗಿ ಅವರಿಗೆ ಕೃತಜ್ಞತೆಗಳು.

ಪಿಎಚ್.ಡಿ.ಅಧ್ಯಯನದ ಪ್ರತಿ ಹಂತದಲ್ಲೂ ಸೂಕ್ತ ಸಲಹೆಗಳನ್ನು ನೀಡಿ, ಆತ್ಮೀಯವಾಗಿ ಮಾರ್ಗದರ್ಶನ ಮಾಡಿದ ಮಾರ್ಗದರ್ಶಕರಾದ ಪ್ರೊ.ಲಕ್ಷ್ಮಣ್ ತೆಲಗಾವಿ ಅವರಿಗೆ ಯಾವತ್ತೂ ಕೃತಜ್ಞ.

ಅಧ್ಯಯನಕ್ಕೆ ಸಹಕರಿಸಿದ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ.ಟಿ.ಪಿ.ವಿಜಯ್ ಹಾಗೂ ಡಾ.ಸಿ.ಆರ್. ಗೋವಿಂದರಾಜು, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಡಾ.ಚಿನ್ನಸ್ವಾಮಿ ಸೋಸಲೆ, ಶ್ರೀ ಮೋಹನ್ ಕೃಷ್ಣರೈ ಮತ್ತು ಗುಲಬರ್ಗಾ ವಿಶ್ವವಿದ್ಯಾಲಯದ ವಿಶ್ರಾಂತ ಪ್ರಾಧ್ಯಾಪಕರಾದ ಪ್ರೊ.ಎಸ್.ಜಿ.ಘುಟಪಣದಿ, ಡಾ.ಬಿ.ಸಿ. ಮಹಾ ಬಲೇಶ್ವರಪ್ಪ, ಡಾ.ಝುಡ್.ಕೆ.ಅನ್ಸಾರಿ, ಡಾ.ಪರ್ವಿನ್ ರುಕ್ಸಾನಾ, ಡಾ.ಮಂಜುಳಾ ಚಿಂಚೂಳಿ ಅವರಿಗೆ ಅಭಾರಿ ಯಾಗಿದ್ದೇನೆ.

ಅಧ್ಯಯನಕ್ಕೆ ಪೂರಕ ಗ್ರಂಥಗಳನ್ನು ಒದಗಿಸಿದ ಬಿ.ಆರ್. ತುಬಾಕಿ, ಶ್ರೀ ಹರ್ತಿಕೋಟೆ ವೀರೇಂದ್ರಸಿಂಹ, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ನೀಡಿದ ಬೇಡ ಅರಸು ವಂಶಸ್ಥರ ಕುಟುಂಬವರ್ಗದವರಿಗೆ, ನಾಯಕ ಮತ್ತು ಇತರ ಸಮುದಾಯದ ಹಿರಿಯರಿಗೆ ಹಾಗೂ ವಿದ್ವಾಂಸರಿಗೆ,

ಅಧ್ಯಯನದ ಅಭಿರುಚಿಯನ್ನು ಹೆಚ್ಚಿಸಿ ಸಲಹೆ, ಸೂಚನೆ, ಸಹಕಾರ ನೀಡಿದ ಡಾ.ತೇಜಸ್ವಿ ಕಟ್ಟೀಮನಿ, ಡಾ.ರಂಗರಾಜ ವನದುರ್ಗ, ಡಾ.ವೈ.ಎಚ್.ನಾಯಕವಾಡಿ, ಡಾ.ಮಂಜುನಾಥ ಬೇವಿನಕಟ್ಟಿ, ಎ.ಎಸ್. ಪ್ರಭಾಕರ, ಪ್ರೊ.ಹನುಮಣ್ಣನಾಯಕ ದೊರೆ, ಡಾ.ಸಿ.ಮಹದೇವ, ರಮೇಶನಾಯಕ, ದೇವೇಂದ್ರ ಮಾಧವನವರ, ಡಾ.ಎಂ. ಕೊಟ್ರೇಶ್, ಡಾ.ಎಸ್.ವೈ.ಸೋಮಶೇಖರ ಇವರೆಲ್ಲರಿಗೂ,

ಅಧ್ಯಯನಕ್ಕೆ ವಿವಿಧ ರೀತಿಯಲ್ಲಿ ಸಹಕಾರ ನೀಡಿದ ಜಿ.ಅನಿಲ್‌ಕುಮಾರ್, ಎನ್.ಮೋಹನ್, ತುಕರಾಮನಾಯಕ ಮತ್ತು ಸಿಬ್ಬಂದಿವರ್ಗ, ಸ.ಪ.ಪೂ.ಕಾಲೇಜು, ಕನಕಗಿರಿ ಎಸ್.ವೈ.ಅಮಾತೆ, ಸಿದ್ಧರಾಮಯ್ಯ ಗುಡಿಮಠ, ಪಕೀರಪ್ಪ ವಜ್ರಬಂಡಿ, ರೇಣುಕಪ್ಪ ಹುನಗುಂದ, ಅಧ್ಯಯನಾಂಗದ ಡಿ.ವಿ.ಪ್ರಕಾಶ್ ಹಾಗೂ ಗ್ರಂಥಾಲಯದ ಸಿಬ್ಬಂದಿವರ್ಗ ದವರಾದ ಮಲ್ಲಿಕಾರ್ಜುನ, ಸುಹಾಸ, ಗುಡಿಮನಿ, ನರೆಗಲ್ಲಪ್ಪ ಅವರುಗಳಿಗೆ,

ಅಧ್ಯಯನದ ಪ್ರತಿಹಂತದಲ್ಲೂ ಸೂಕ್ತ ಸಲಹೆ ಸಹಕಾರ ನೀಡಿದ ಸ್ನೇಹಿತರಾದ ಡಾ.ಎಂ.ಯರಿಸ್ವಾಮಿ, ಡಾ.ವಿ.ಸಿ.ಮಾರುತಿ, ಡಾ.ರೇವಯ್ಯ ಒಡೆಯರ್, ಮುದ್ದುವೀರಪ್ಪ ಜಂಗಮರಹಳ್ಳಿ, ಎಸ್.ಚಂದ್ರಪ್ಪ, ಎಚ್.ಗುರು ಬಸವರಾಜ, ಪಿ.ಕೆ.ಶ್ರೀನಿವಾಸ, ಡಾ.ಕೆ.ಆರ್.ಜೆ.ರಾಜಕುಮಾರ, ಡಾ.ಕೃಷ್ಣ, ಅಮರೇಶ ಯತಗಲ್, ಗುರುಬಸಪ್ಪ ಇವರಿಗೆ ಕೃತಜ್ಞತೆಗಳು.

ಸದಾ ನನ್ನ ಶ್ರೇಯಸ್ಸನ್ನು ಬಯಸುವ ಪೂಜ್ಯ ತಂದೆ ತಿಮ್ಮಪ್ಪ, ತಾಯಿ ಪೆನ್ನಮ್ಮ, ಅಕ್ಕ ಗೌರಮ್ಮ, ಮಾವನವರಾದ ಯು.ಹಾಲಪ್ಪ ಮತ್ತು ಅಧ್ಯಯನದುದ್ದಕ್ಕೂ ತಾಳ್ಮೆಯಿಂದ ಸಹಕರಿಸಿದ ಬಾಳಸಂಗಾತಿಯಾದ ಮಂಗಳ ಮತ್ತು ಮಕ್ಕಳಾದ ಸಿಂಧೂ, ರಾಘವೇಂದ್ರ ಮತ್ತು ಭೂಮಿಕಾ ಇವರೆಲ್ಲರನ್ನು ಪ್ರೀತಿಯಿಂದ ನೆನೆಯುವೆ.

ಅಕ್ಷರ ಸಂಯೋಜಿಸಿದ ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್‌ನ ಮಾಲೀಕರಾದ ಶ್ರೀಮತಿ ಬಿ.ರಶ್ಮಿ ಕೃಪಾಶಂಕರ ಮತ್ತು ಶ್ರೀ ಎ.ಎಂ.ಕೃಪಾಶಂಕರ್ ಅವರಿಗೆ ಮತ್ತು ಸುಂದರವಾಗಿ ಬೈಂಡಿಂಗ್ ಮಾಡಿಕೊಟ್ಟ ಮಹಾಂತೇಶ ಬುಕ್ ಬೈಂಡರ್ಸ್, ಧಾರವಾಡ ಅವರಿಗೆ

*ತುಂಬಾ ಹೃದಯದ ಕೃತಜ್ಞತೆಗಳು*

ಎಂ.ಕೆ.ದುರುಗಪ್ಪ

## ಪರಿವಿಡಿ

ಕರ್ನಾಟಕ ಚರಿತ್ರೆಯಲ್ಲಿ ವಿಜಯನಗರ ಸ್ಥಾಪನೆ, ಬೆಳವಣಿಗೆ ಮತ್ತು ಪತನ ಈ ಮೂರು ಹಂತಗಳು ಪ್ರಮುಖ ಚಾರಿತ್ರಿಕ ಮೈಲುಗಲ್ಲುಗಳು. ಮಧ್ಯಕಾಲೀನ ಚರಿತ್ರೆಯಲ್ಲಿ ವಿಜಯನಗರ ಸಾಮ್ರಾಜ್ಯವು ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಮಹತ್ವ ಪಡೆದಿತ್ತು. ವಿಜಯನಗರ ಅರಸರು ಊಳಿಗಮಾನ್ಯ ಪದ್ಧತಿಯನ್ನು ಹೋಲುವಂತಹ 'ನಾಯಕರ ಆಡಳಿತಪದ್ಧತಿ'ಯನ್ನು ಜಾರಿಗೆ ತಂದಿದ್ದರು. ಈ ನಾಯಕರ ಸಹಾಯ, ರಕ್ಷಣೆಯಿಂದಾಗಿ ವಿಜಯನಗರ ಸಾಮ್ರಾಜ್ಯ ಬಲಿಷ್ಠವಾಗಿತ್ತು. ಬರ್ಟನ್ ಸ್ಟೈನ್ ತಮ್ಮ ಸೆಗ್ಮೆಂಟರಿ ಸ್ಟೇಟ್ ಸಿದ್ಧಾಂತದಲ್ಲಿ ವಿಜಯನಗರವು ತನ್ನ ಸಮಕಾಲೀನ ಯೂರೋಪಿನ ಅರಸರಂತೆ ರಾಜ್ಯದಲ್ಲೆಡೆ ಆಡಳಿತಶಾಹಿಯ ಮೇಲೆ ಹತೋಟಿ ಹೊಂದಿದ ಕೇಂದ್ರೀಕೃತ ಪ್ರಭುತ್ವ ಅಥವಾ ಸಾಮ್ರಾಜ್ಯದ ನಿರಂಕುಶ ಪ್ರಭುತ್ವವಾಗಿರಲಿಲ್ಲ; ಈ ಸಾಮ್ರಾಟರು ಬರೀ ಸಾಂಪ್ರದಾಯಿಕ ಮುಖ್ಯಸ್ಥರಾಗಿದ್ದರೆಂದು ಚರ್ಚಿಸಿರುವರು. ಆದರೆ ಸ್ಥಳೀಯ ನಾಯಕರು ಪ್ರಭಾವಶಾಲಿಗಳಾಗಿದ್ದು ರಾಜನ ಸ್ಥಾನ-ಮಾನ ಗೌರವಾದಿಗಳನ್ನು ಗಳಿಸಿದ್ದರು. ಹೀಗೆ ಪ್ರಾದೇಶಿಕವಾಗಿ ಅಸ್ತಿತ್ವಕ್ಕೆ ಬಂದಂತಹ ಇಂತಹ ಪಾಳೆಯಪಟ್ಟು ವ್ಯವಸ್ಥೆಯಲ್ಲಿ ಗುರುತಿಸಲ್ಪಟ್ಟವರೇ ಬೇಡರು. ಬೇಡ ನಾಯಕರನೇಕರು ಪಾಳೆಯಗಾರರಾಗಿ ವಿಜಯನಗರ ಅರಸರಿಗೆ ವಿಧೇಯರಾಗಿದ್ದರು. ಸೈನಿಕ, ಆಡಳಿತಾತ್ಮಕ ರಂಗಗಳಲ್ಲಿಯೂ ಉದ್ಯೋಗಿಗಳಾಗಿದ್ದರು. ವಿಜಯನಗರ ಪೂರ್ವದಲ್ಲಿ ಆ ಪ್ರದೇಶದಲ್ಲಿ ರಾಜ್ಯಾಧಿಕಾರ ನಡೆಸಿದ ಕುಮ್ಮಟದುರ್ಗದ ದೊರೆಗಳು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಕರಾಗಿದ್ದರು. ನಂತರ ಆ ಪ್ರದೇಶದ ನಾಯಕರೆಲ್ಲಾ ವಿಜಯನಗರ ಅರಸರ ರಕ್ಷಕರಾಗಿ, ಸೇವಕರಾಗಿ ಬೆಳೆದುಬಂದರು. ಹೀಗೆ ವಿಜಯನಗರ ಮತ್ತು ಬೇಡ ಜನಾಂಗದವರ ಮಧ್ಯೆ ಪರಸ್ಪರ ಸಂಬಂಧಗಳು ಏರ್ಪಟ್ಟವು.

ವಿಜಯನಗರ ಕುರಿತ ಅಧ್ಯಯನಗಳು ಅತ್ಯಧಿಕವಾಗಿದ್ದು, ವಿಜಯನಗರೋತ್ತರ ಕಾಲದಲ್ಲಿ ಬರುವ ಅನೇಕ ಕಿರು ಅರಸು ಮನೆತನಗಳು ಚರಿತ್ರೆಯಲ್ಲಿ ಇನ್ನೂ ಸರಿಯಾಗಿ ದಾಖಲುಗೊಂಡಿಲ್ಲ. ಕೆಳವರ್ಗದ ಜನಾಂಗಗಳೇ ಪ್ರಾದೇಶಿಕ ರಾಜಕೀಯದಲ್ಲಿ, ಸಂಸ್ಕೃತಿ ನಿರ್ಮಾಣದಲ್ಲಿ ಪ್ರಬಲವಾಗಿದ್ದ ಈ ಕಾಲಾವಧಿಯನ್ನು ನಿರ್ಲಕ್ಷಿಸಲು ಪ್ರಬಲ ಕಾರಣಗಳಿರಬಹುದು. ಆದರೂ ಇಂಥಾ ಕಿರುಸಂಸ್ಥಾನಿಕರನ್ನು ಕುರಿತಂತೆ ಲಭ್ಯವಿರುವ ಲೇಖನಗಳು, ಕೃತಿಗಳು, ಸಂಶೋಧನಾ ಪ್ರಬಂಧಗಳಿಗೆ ಕೊರತೆಯಿಲ್ಲ. ಇದರಿಂದ ಕಿರುಸಂಸ್ಥಾನಿಕರ ಆಳ್ವಿಕೆಯ, ಸಾಧನೆಯ ವಿವರಗಳನ್ನರಿಯುವ ಕುತೂಹಲ ಸಂಶೋಧಕರಲ್ಲಿ ಉಳಿಯುವಂತಾಗಿದೆ.

ಬುಡಕಟ್ಟು ಜನಸಮುದಾಯವಾಗಿ ಗುರುತಿಸಿಕೊಂಡಿರುವ ಬೇಡರು ಮೂಲತಃ ಕಾಡಿನ ಸಂಸ್ಕೃತಿಯ ಹಿನ್ನೆಲೆಯವರು. ನಾಗರಿಕತೆಯ ಸಂಪರ್ಕ ಹೆಚ್ಚಿದಂತೆ ಬೇಟೆವೃತ್ತಿಯಿಂದ ಇತರ ನಾಗರಿಕವೃತ್ತಿಗಳ ಕಡೆಗೆ, ಆ ಮೂಲಕ ಮಾನವೀಯತೆಯೆಡೆಗೆ ಹೊರಳಿದವರು. ಈ ದೃಷ್ಟಿಯಿಂದ ಇವರ ಬದುಕು ಚರಿತ್ರೆಯುದ್ದಕ್ಕೂ ಸ್ಥಿತ್ಯಂತರಕ್ಕೊಳಗಾದುದು ಸಹಜ. ತಮ್ಮ ಸಹಜ ಸಾಹಸಗುಣಗಳಿಂದಾಗಿ ಆ ನಂತರ ನಾಯಕ, ಗುರಿಕಾರ, ಸುಬೇದಾರ, ಜಹಗೀರುದಾರ, ದೇಸಾಯಿ, ತಳವಾರ, ಪಾಳೆಯಗಾರ, ದೊರೆ- ಹೀಗೆ ನಾನಾ ಹಂತಗಳಿಗೆ ಏರಿದುದನ್ನು ಚರಿತ್ರೆ ಗುರುತಿಸಿದೆ. ಇತ್ತೀಚಿನ ಆಧುನಿಕ ಪ್ರಾಯೋಗಿಕ ಸಂಸ್ಕೃತಿಗಳ ಪ್ರಭಾವದಲ್ಲಿ ಇವರಿಗೆ ವಿಭಿನ್ನ ಬದುಕು ನಡೆಸುವ ಪರಿಸ್ಥಿತಿ ಎದುರಾಗಿದೆ; ಆಧುನಿಕತೆಯನ್ನು ಮೈಗೂಡಿಸಿಕೊಂಡಿದ್ದಾರೆ. ಆದರೂ ಬಹುತೇಕ ಬೇಡರು ಇನ್ನು ಬುಡಕಟ್ಟು ಅವಸ್ಥೆಯಲ್ಲಿದ್ದು, ಕೂಲಿಗಳಾಗಿ, ಸೇವಕರಾಗಿ, ಜೀತದಾಳುಗಳಾಗಿ ಮುಂದುವರೆದಿರುವುದು ಕಂಡುಬರುತ್ತದೆ. ಒಂದು ಕಾಲಕ್ಕೆ ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕ ವಾಗಿ ಉನ್ನತಮಟ್ಟಕ್ಕೇರಿದ ಬೇಡ ಅರಸರು ಹಾಗೂ ಜನಾಂಗದವರು, ಚರಿತ್ರೆಯಲ್ಲಾದ ಬದಲಾವಣೆಗಳ ಸಂದರ್ಭದಲ್ಲಿ ದಿಟ್ಟತನದಿಂದ ಪ್ರವರ್ತಿಸಿದುದನ್ನು ನೋಡಬಹುದು.

## ಅಧ್ಯಯನದ ಉದ್ದೇಶ

ವಿಜಯನಗರೋತ್ತರಕಾಲೀನ ಚರಿತ್ರೆಯಲ್ಲಿ ಸ್ಥಳೀಯ ಅರಸರು ನಿರ್ವಹಿಸಿದ ಪಾತ್ರವನ್ನು ಕುರಿತು ಇತ್ತೀಚೆಗೆ ವಿಶ್ಲೇಷಣಾತ್ಮಕ ಬರಹಗಳು ಪ್ರಕಟಗೊಳ್ಳುತ್ತಿವೆ; ಸಂಶೋಧನೆಗಳನ್ನು ಕೈಗೊಳ್ಳಲಾಗುತ್ತಿದೆ. ಚಿತ್ರದುರ್ಗ, ಕೆಳದಿ, ಹರಪನಹಳ್ಳಿ, ಹಾಗಲವಾಡಿ, ಹರತಿ, ನಿಡುಗಲ್ಲು, ಕನಕಗಿರಿ, ಸಂತೇಬೆನ್ನೂರು ಮುಂತಾದ ಅರಸರನ್ನು ಕುರಿತು ಅಧ್ಯಯನಗಳು ನಡೆದಿವೆಯಾದರೂ ಅವು ಪರಿಪೂರ್ಣ ಅಧ್ಯಯನಗಳಲ್ಲ. ವಿಜಯನಗರೋತ್ತರಕಾಲೀನ ರಾಜಕೀಯ ಚರಿತ್ರೆಯಲ್ಲಿ ಅನೇಕ ಧೀರಬೇಡರು ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಂಡರು; ಪ್ರಬಲಿಸಿದಂತೆ ದೊರೆ, ಅರಸ ಎಂದೆಲ್ಲ ಕರೆದುಕೊಂಡರು. ಕರ್ನಾಟಕದ ಕೆಲವು ಕಡೆ ಇಂದಿಗೂ ಬೇಡರೆಂದರೆ ಪಾಳೆಯಗಾರರು, ತಳವಾರರು, ದೊರೆಗಳು ಎಂಬ ಭಾವನೆ ಹೊಂದಿರುವುದುಂಟು. ಹಿಂದಿನಿಂದಲೂ ಈ ವೃತ್ತಿಗಳಲ್ಲಿ ಮುಂದುವರೆದುಕೊಂಡು ಬಂದಿದ್ದರಿಂದ ಅವರ ಅಧಿಕಾರ ಸ್ಥಾನಗಳೇ ಆಯಾ ಹೆಸರಿನಲ್ಲಿ ಉಪಜಾತಿಗಳಾಗಿಯೂ ಪರಿವರ್ತನೆಯಾಗಿವೆ. ಇಂತಹ ಚಾರಿತ್ರಿಕ ಮಹತ್ವವನ್ನು ಹೊಂದಿದ ಬೇಡಜನಾಂಗ ಮತ್ತು ಬೇಡ ಅರಸರಲ್ಲಾದ ಸ್ಥಿತ್ಯಂತರಗಳನ್ನು ಕುರಿತು ಅಧ್ಯಯನ ಮಾಡುವುದೇ ಈ ಅಧ್ಯಯನದ ಪ್ರಮುಖ ಉದ್ದೇಶ.

ಈವರೆಗೆ ಬೇಡ ಸಮುದಾಯ ಕುರಿತು ಜನಾಂಗಿಕವಾಗಿ ಅಧ್ಯಯನ ನಡೆದಿದೆ. ಈ ಜನಾಂಗ ಕುರಿತ ಅಧ್ಯಯನ ಮಾಡಿದ ಕೆಲವರೆಂದರೆ, ಎಂ.ಜಿ.ಈಶ್ವರಪ್ಪ, ಕೃಷ್ಣಮೂರ್ತಿ ಹನೂರು, ಕರಿಶೆಟ್ಟಿ ರುದ್ರಪ್ಪ, ಹರತಿ ವೀರನಾಯಕ, ಎಂ.ಪಿ.ವೀಣಾ, ಧ್ರುವ ಎಂ.ಬಸವರಾಜ, ಮಲ್ಲಾಪುರೆ ಸುಚಿತಾನಂದ.ಕೆ., ಎ.ಆರ್.

ನಾಯಕ, ಆರ್.ರಾಜಣ್ಣ, ವಿರೂಪಾಕ್ಷಿ ಪೂಜಾರಹಳ್ಳಿ, ಡಿ.ಬಿ.ಡಂಗೆ, ವಿ. ರಂಗನಾಯಕ ಮುಂತಾದವರು. ಎಲ್.ಕೆ.ಎ. ಅಯ್ಯರ್, ರಂಗಚಾರಿ, ಎಡ್ಗರ್ ಥರ್‍ಸ್ಟನ್, ಎಚ್.ವಿ.ನಂಜುಂಡಯ್ಯ, ಸೈಯದ್ ಸಿರಾಜ್ ಉಲ್ ಹಸನ್ ಮುಂತಾದವರು ಬೇಡ ಜನಾಂಗದ ಜೊತೆಗೆ ಇತರ ಅನೇಕ ಜನಾಂಗಗಳ ಮಾಹಿತಿಯನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಹುಲ್ಲೂರು ಶ್ರೀನಿವಾಸ ಜೋಯಿಸ, ಎಂ.ಎಸ್.ಪುಟ್ಟಣ್ಣ, ಹರತಿ ವೀರನಾಯಕ, ಲಕ್ಷ್ಮಣ್ ತೆಲಗಾವಿ, ಪಿ.ಅಬ್ದುಲ್ ಸತ್ತಾರ್, ಫ್ಲೀಟ್, ಕಪಟರಾಳ ಕೃಷ್ಣರಾವ್, ಎಂ.ವಿ.ಚಿತ್ರಲಿಂಗಯ್ಯ, ಮೀರಾಸಾಬಿಹಳ್ಳಿ ಶಿವಣ್ಣ, ಬಿ. ರಾಜಶೇಖರಪ್ಪ, ಬಸವರಾಜ ಹೆಚ್.ಎಂ., ಜಿ. ವರದರಾಜರಾವ್, ಕುಂ.ಬಾ.ಸದಾಶಿವಪ್ಪ, ಸಂತೇಬೆನ್ನೂರು ಸುಮತೀಂದ್ರನಾಡಿಗ್, ಬಿ.ಆರ್.ತುಬಾಕಿ, ಹರ್ತಿಕೋಟೆ ವೀರೇಂದ್ರಸಿಂಹ, ಹೆಚ್.ಜಿ.ಲಕ್ಕಪ್ಪಗೌಡ, ಅಮರೇಶಯತಗಲ್, ಬಾಗೂರು, ಆರ್. ನಾಗರಾಜಪ್ಪ, ರಂಗರಾಜವನದುರ್ಗ ಮುಂತಾದವರು ಬೇಡರನ್ನು ಕುರಿತು ಲೇಖನಗಳನ್ನು, ಕೃತಿಗಳನ್ನು, ಸಂಶೋಧನ ಪ್ರಬಂಧಗಳನ್ನು ಬರೆದಿರುವರು. ಈ ಅಧ್ಯಯನಗಳಲ್ಲಿ ಬೇಡ ಅರಸರನ್ನು ಚಾರಿತ್ರಿಕ ನೆಲೆಯಲ್ಲಿ ಅಷ್ಟಾಗಿ ಗಮನಿಸಿಲ್ಲ. ಒಂದು ಪ್ರದೇಶದ ಎಲ್ಲ ಬೇಡ ಅರಸು ಸಂಸ್ಥಾನಗಳನ್ನು ಚಾರಿತ್ರಿಕವಾಗಿ ಅಧ್ಯಯನ ಕೈಗೊಂಡಿರುವುದು ಸಹಾ ಕಾಣುವುದಿಲ್ಲ. ಕೇವಲ ಜನಾಂಗಿಕ ನೆಲೆಯಲ್ಲಿ ಬೇಡರ ಚರಿತ್ರೆಯನ್ನು ಬರೆಯಲಾಗಿದೆ. ಈ ಹಿನ್ನೆಲೆಯಲ್ಲಿ ಬೇಡ ಅರಸು ಮನೆತನದವರನ್ನು ಕುರಿತು ಒಟ್ಟಾಗಿ ಚರ್ಚಿಸುವ ಹಾಗೂ ಅವರಲ್ಲಾದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕುರಿತು ಚರ್ಚಿಸಲು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಿದೆ.

ಬೇಡ ಜನಾಂಗವು ಬೇಟೆ ಸಂಸ್ಕೃತಿಯಿಂದ ನಾಡ ಸಂಸ್ಕೃತಿಗೆ ಪರಿವರ್ತನೆಗೊಂಡಂಥ ಸಂದರ್ಭಗಳನ್ನು ಪತ್ತೆಹಚ್ಚಿ, ಅವುಗಳನ್ನು ವಿಶ್ಲೇಷಣೆ ಮಾಡುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಕೈಗೊಳ್ಳಲಾಗಿದೆ. ಮಧ್ಯಕಾಲೀನ ಸೈನಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸಿದವರು ಬೇಡರು. ಆದ್ದರಿಂದ ಬೇಡರೆಂದರೆ ಸೈನಿಕರು, ಸೈನಿಕರೆಂದರೆ ಬೇಡರು ಎನ್ನುವಷ್ಟರ ಮಟ್ಟಿಗೆ ಈ ಜನಾಂಗದವರು ಪ್ರಸಿದ್ಧಿ ಪಡೆದರು. ಇಂದಿಗೂ ಬೇಡರನ್ನು ಯೋಧ ಜನಾಂಗವೆಂದೇ ಕರೆಯಲಾಗುತ್ತದೆ. ಗುಡ್ಡಗಾಡುಗಳ ತೀರದಲ್ಲೋ, ಅರಣ್ಯದಲ್ಲೋ ನೆಲೆಸಿದ ಬೇಡರು ಕ್ರಮೇಣ ನಗರ ಸಂಸ್ಕೃತಿಯಲ್ಲಿ ಬೆರೆತುಕೊಂಡರು. ಬೇಡರನ್ನು ಎದುರಿಸುವುದು ಜನರಿಗೆ, ದೊರೆಗಳಿಗೆ ಕಷ್ಟದಾಯಕವಾಗಿತ್ತು. ವಿಜಯನಗರ ಕಾಲದಲ್ಲಿ ಬೇಡನಾಯಕರು ಸಾಮಂತರೆನಿಸಿಕೊಂಡರು; ದೊರೆಗಳ ಸ್ಥಾನಮಾನಗಳನ್ನು ಅನುಭವಿಸಿದರು. ವಿಜಯನಗರ ಪತನದ ನಂತರ ಸ್ವತಂತ್ರರಾಗಿ ರಾಜಮಹಾರಾಜರಂತೆ ಜೀವನವನ್ನು ನಡೆಸಿದರು.

ಇಂಥಾ ಚಾರಿತ್ರಿಕ ಬದಲಾವಣೆಗಳನ್ನು ಗುರುತಿಸುವ ಉದ್ದೇಶ ಈ ಅಧ್ಯಯನದ್ದು. ಸೈನಿಕ ಪರಂಪರೆಯಲ್ಲಿ ಬೆಳೆದ ಬೇಡರು ಅನ್ಯವೃತ್ತಿಗಳ ಕಡೆಗೆ ಗಮನಹರಿಸಿದ್ದು ಇತ್ತೀಚಿನ ಕಾಲಾವಧಿಯಲ್ಲಿ.

ಕಾಲದ ಬದಲಾವಣೆಯಲ್ಲಿ ಬೇಡ ಅರಸರು ಯಾವ ರೀತಿಯಲ್ಲಿ ಕೆಳಹಂತದ ಬದುಕಿನ ಕಡೆಗೆ ತಳ್ಳಲ್ಪಟ್ಟರು, ಅದಕ್ಕೆ ಕಾರಣಗಳೇನು, ಪ್ರಸ್ತುತ ದಿನಗಳಲ್ಲಿ ಅವರ ಬದುಕು ಹೇಗಿದೆ? ಇತ್ಯಾದಿ ಅಂಶಗಳ ನೆಲೆಯಲ್ಲಿ ಅಧ್ಯಯನ ಮಾಡುವ ಪ್ರಯತ್ನ ಇಲ್ಲಿಯದು.

ಬೇಡ ಜನಾಂಗದ ಸಂಸ್ಥಾನಗಳು ಹೆಚ್ಚಾಗಿ ಕಂಡುಬಂದಿರುವ ಜಿಲ್ಲೆಗಳೆಂದರೆ ಚಿತ್ರದುರ್ಗ, ಬಳ್ಳಾರಿ ಮತ್ತು ರಾಯಚೂರು. ಹೈದರಾಲಿಯ ಆಳ್ವಿಕೆಯವರೆಗೆ ಬೇಡ ಅರಸರು ಯಾವ ಸ್ಥಿತಿಯಲ್ಲಿದ್ದರು, ನಂತರ ಟಿಪ್ಪೂಸುಲ್ತಾನ, ಮರಾಠ, ನಿಜಾಮ, ಬ್ರಿಟೀಷರ ಕಾಲದಲ್ಲಿ ಯಾವ ಸ್ಥಿತಿಗೆ ಬಂದರು ಎಂಬ ಅಂಶಗಳನ್ನು ಚಾರಿತ್ರಿಕವಾಗಿ ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಿದೆ. ಶೂದ್ರವರ್ಗಕ್ಕೆ ಸೇರಿದ ಬೇಡ ಅರಸರು ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ ಉನ್ನತ ಹಂತ ತಲುಪಿದುದು ಅವರ ರಾಜಕೀಯ ಅಧಿಕಾರದಿಂದ ಮಾತ್ರ. ಅವರು ಕ್ಷತ್ರಿಯರ ಸ್ಥಾನಮಾನಗಳನ್ನು ಅನುಭವಿಸಿದರು; ರಾಜ್ಯಗಳನ್ನು ಆಳಿದರು. ಆದರೆ ರಾಜ್ಯಾಧಿಕಾರ ಕಳೆದುಕೊಂಡ ಬಳಿಕ ಮತ್ತೆ ಶೂದ್ರವರ್ಗದ ಕೆಳಜಾತಿಗಳ ಸಾಲಿಗೆ ಸೇರಿದರು. ಪೂರ್ಣ ಕ್ಷತ್ರಿಯರೂ ಆಗದೆ, ಪೂರ್ಣ ಬೇಡರೂ ಆಗದೆ ಅತಂತ್ರ ಸಾಮಾಜಿಕ ವ್ಯವಸ್ಥೆಯಲ್ಲಿ ಗುರುತಿಸಲ್ಪಡುವಂತಾದುದು ಇವರ ವಿಶೇಷ. ಕರ್ನಾಟಕದಲ್ಲಿ ಬೇಡರು ಹೆಚ್ಚಾಗಿ ನೆಲೆಸಿದ ಪ್ರದೇಶಗಳು, ಅಲ್ಲಿ ಅವರಿಂದ ಸ್ಥಾಪಿಸಲ್ಪಟ್ಟ ಪಾಳೆಯಪಟ್ಟುಗಳು, ಅರಸರ ಹಂತಕ್ಕೇರಿದ ಬೇಡರಲ್ಲಾದ ಬದಲಾವಣೆಗಳ ಸ್ವರೂಪ ಮುಂತಾದ ಅನೇಕ ಅಂಶಗಳನ್ನು ಚರ್ಚಿಸುವ ಮೂಲಕ ಕೆಲವು ಜಿಜ್ಞಾಸೆಗಳನ್ನು ಪರಿಹರಿಸಲು ಪ್ರಯತ್ನಿಸಲಾಗಿದೆ. ಈಚಿನ ಬೇಡಜನಾಂಗದಲ್ಲಾದ ಪರಿವರ್ತನೆಗಳ ಸ್ವರೂಪವನ್ನೂ ಇಲ್ಲಿ ಸ್ಥೂಲವಾಗಿ ವಿಶ್ಲೇಷಿಸಿದೆ.

## ಅಧ್ಯಯನದ ವ್ಯಾಪ್ತಿ

ವಿಜಯನಗರೋತ್ತರ ಕಾಲದಲ್ಲಿ ಬೇಡ ಅರಸರ ಆಳ್ವಿಕೆಯ ಹಂತವು ಬೇಡ ಜನಾಂಗದ ಚರಿತ್ರೆಯಲ್ಲಿ ಅತ್ಯಂತ ಮಹತ್ವದ್ದು. ಅಂದಿನ ರಾಜಕೀಯ ಪರಿಸ್ಥಿತಿಯಲ್ಲಿ, ಸಾಮಾಜಿಕ ವ್ಯವಸ್ಥೆಯಲ್ಲಿ ಅನೇಕ ಬೇಡರು ಪ್ರತಿನಿಧಿತ್ವವನ್ನು ಸಾಧಿಸಿದ್ದರು. ಬದಲಾದ ರಾಜಕೀಯ ಪರಿಸ್ಥಿತಿಗನುಗುಣವಾಗಿ ಕ್ರಮೇಣ ಬೇಡ ಅರಸರಲ್ಲಿ ಮತ್ತು ಬೇಡ ಅಧಿಕಾರವರ್ಗದವರಲ್ಲಿ ನಾನಾ ಬಗೆಯ ಸ್ಥಿತ್ಯಂತರಗಳುಂಟಾದವು.

ಪ್ರಸ್ತುತ ಅಧ್ಯಯನದ ಕಾಲಮಿತಿಯೆಂದರೆ ವಿಜಯನಗರೋತ್ತರ ಕಾಲದಿಂದ ಈಚಿನವರೆಗೆ. ವಿಜಯನಗರ ಸಾಮ್ರಾಜ್ಯ ೧೫೬೫ರಲ್ಲಿ ಪತನಹೊಂದಿತು. ಅನಂತರ ಅನೇಕ ಪಾಳೆಯಗಾರರು ಸ್ವತಂತ್ರವಾಗಿ ರಾಜ್ಯವನ್ನಾಳಿದರು. ಇವರೆಲ್ಲರೂ ಬಹುತೇಕ ವಿಜಯನಗರ ಪ್ರದೇಶದವರೇ. ವಿಜಯನಗರ ಅರಸರು ಇಂತಹ ಸ್ಥಳೀಯ ನಾಯಕರಿಗೆ ಪೋಷಕರಾಗಿದ್ದರು. ಕರ್ನಾಟಕ, ಆಂಧ್ರ, ತಮಿಳುನಾಡು ರಾಜ್ಯಗಳಲ್ಲಿ

ಹಲವಾರು ಬೇಡ ಅರಸರು ಆಳ್ವಿಕೆ ನಡೆಸಿದರು. ಸಾಂಪ್ರದಾಯಿಕವಾಗಿ ಎಪ್ಪತ್ತೇಳು ಪಾಳೆಯಗಾರರು ಆಳ್ವಿಕೆ ನಡೆಸಿದರೆಂದು ಹೇಳುವುದುಂಟು. ಥಾಮಸ್ ಮನ್ರೋ ಈ ಸಂಖ್ಯೆಗಿಂತಲೂ ಹೆಚ್ಚು ಪಾಳೆಯಗಾರರನ್ನು ಗುರುತಿಸುತ್ತಾನೆ. ಇವರ ಪೈಕಿ ಅನೇಕ ಪಾಳೆಯಗಾರರಿಗೆ ತೊಂದರೆಯುಂಟು ಮಾಡಿದವರೆಂದರೆ ಹೈದರಾಲಿ ಮತ್ತು ಟಿಪ್ಪೂಸುಲ್ತಾನ್. ಇವರು ಅನೇಕ ಪಾಳೆಯಗಾರರ ಅಧಿಕಾರವನ್ನು ಮೊಟಕುಗೊಳಿಸಿದರಲ್ಲದೆ, ಅವರ ಆಳ್ವಿಕೆಗೆ ಇತಿಹಾಡಿದರು. ನಂತರ ಬ್ರಿಟೀಷರು, ಮರಾಠರು, ಹೈದ್ರಾಬಾದಿನ ನಿಜಾಮ ಇವರು ಕೂಡಾ ಕರ್ನಾಟಕದ ರಾಜಕೀಯದಲ್ಲಿ ಹಸ್ತಕ್ಷೇಪ ಮಾಡಿದರು. ೧೭೯೯ರಲ್ಲಿ ಟಿಪ್ಪೂಸುಲ್ತಾನನನ್ನು ಸೋಲಿಸುವ ಮೂಲಕ ಬ್ರಿಟೀಷರು ಕರ್ನಾಟಕದ ರಾಜಕೀಯ ರಂಗದಲ್ಲಿ ಪ್ರವೇಶ ಮಾಡಿದರು. ಈ ವೇಳೆಗಾಗಲೇ ಅಧಿಕಾರ ಕಳೆದುಕೊಂಡ ಸ್ಥಳಿಯ ಸಂಸ್ಥಾನಿಕರಲ್ಲಿ ಬೇಡ ಪಾಳೆಯಗಾರರು ಸೇರಿದ್ದರು. ಈ ಹಿನ್ನೆಲೆಯಲ್ಲಿ ೧೮೦೦ ರಿಂದ ಈಚೆಗೆ ಬೇಡ ಜನಾಂಗದಲ್ಲಿ ಹಲವಾರು ಬಗೆಯ ಪರಿವರ್ತನೆಗಳಾದವು. ಇವುಗಳ ಬಗೆಗೆ ಸಂಕ್ಷಿಪ್ತವಾಗಿಯಾದರೂ ಇಲ್ಲಿ ಚರ್ಚಿಸಿದೆ.

ಭೌಗೋಳಿಕವಾಗಿ ಅಧಿಕ ಬೇಡ ಸಂಸ್ಥಾನಗಳು ನೆಲೆಗೊಂಡಿದ್ದ ಪ್ರದೇಶವನ್ನು ಈ ಅಧ್ಯಯನ ವ್ಯಾಪ್ತಿಯಲ್ಲಿ ಗುರುತಿಸಿಕೊಳ್ಳಲಾಗಿದೆ. ಕರ್ನಾಟಕದಲ್ಲಿ ಚಿತ್ರದುರ್ಗ, ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಬೇಡರ ಸಂಸ್ಥಾನಗಳು ಕಂಡುಬರುತ್ತವೆ. ಬೇಡರು ಸಹಾ ಈ ಪ್ರದೇಶದಲ್ಲಿ ಹೆಚ್ಚಾಗಿ ನೆಲೆಸಿರುವರು. ಚಿತ್ರದುರ್ಗ ಜಿಲ್ಲೆಯಲ್ಲಿ ನಾಯಕನಹಟ್ಟಿ, ಹರತಿ, ಮತ್ತೋಡು ಮತ್ತು ಚಿತ್ರದುರ್ಗ; ಬಳ್ಳಾರಿ ಜಿಲ್ಲೆಯಲ್ಲಿ ಗುಡೇಕೋಟೆ ಮತ್ತು ಜರಿಮಲೆ; ರಾಯಚೂರು ಜಿಲ್ಲೆಯಲ್ಲಿ ಗುಡಗುಂಟಿ, ದೇವದುರ್ಗ, ಗುಂತಗೋಳ ಮತ್ತು ಕ್ಯಾದಿಗೇರಾ; ಕೊಪ್ಪಳ ಜಿಲ್ಲೆಯಲ್ಲಿ ಕನಕಗಿರಿ ಇವೇ ಮುಂತಾದ ಸ್ಥಳಗಳಲ್ಲಿ ಬೇಡ ಅರಸರು ಅಧಿಕಾರವನ್ನು ನಡೆಸಿದರು. ಜಿಲ್ಲಾ ಪುನರ್ ವಿಂಗಡಣೆಯ ನಂತರ ಹರಪನಹಳ್ಳಿಯು ದಾವಣಗೆರೆ ಜಿಲ್ಲೆಗೆ ಸೇರಿಹೋದ್ದರಿಂದ ಈ ಸಂಸ್ಥಾನಿಕರನ್ನು ಕುರಿತು ಈ ಅಧ್ಯಯನದಲ್ಲಿ ಅಷ್ಟಾಗಿ ಚರ್ಚಿಸಿಲ್ಲ. ಆದರೆ ಅನುಕೂಲದ ದೃಷ್ಟಿಯಿಂದ ರಾಯಚೂರು ಜಿಲ್ಲೆಯಿಂದ ವಿಭಜಿತಗೊಂಡ ನೂತನ ಕೊಪ್ಪಳ ಜಿಲ್ಲೆಯಲ್ಲಿ ಬರುವ ಕನಕಗಿರಿ ನಾಯಕ ಅರಸರನ್ನು ಕುರಿತು ಅಧ್ಯಯನ ಕೈಗೊಳ್ಳಲಾಗಿದೆ. ಈ ಮೇಲಿನ ನಾಲ್ಕು ಜಿಲ್ಲೆಗಳ ವ್ಯಾಪ್ತಿಯಲ್ಲಿ ಬರುವ ಬೇಡೇತರ ಸಂಸ್ಥಾನಿಕರನ್ನು ಅಧ್ಯಯನ ವ್ಯಾಪ್ತಿಯಲ್ಲಿ ಸೇರಿಸಿಕೊಂಡಿಲ್ಲ. ಈ ಪ್ರದೇಶದೊಳಗೆ ಒಟ್ಟು ಬೇಡ ಸಂಸ್ಥಾನಿಕರ ಸಂಖ್ಯೆ ೧೦ ಇದ್ದರೆ, ಬೇಡೇತರ ಪಾಳೆಯಗಾರರ ಸಂಖ್ಯೆ ಕೇವಲ ೨. ಅವರೆಂದರೆ, ಬೂದಿಹಾಳು ಮತ್ತು ಬಳ್ಳಾರಿಯ ಹಂಡೆ ಪಾಳೆಯಗಾರರು. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕದ ಈಚಿನ ಬೇಡ ಜನಾಂಗದಲ್ಲಾದ ಪರಿವರ್ತನೆಗಳನ್ನೂ ಗುರುತಿಸಲೆತ್ನಿಸಿದೆ. ಒಟ್ಟಾರೆ, ಪ್ರಸ್ತುತ ಅಧ್ಯಯನವು ಈ ಕೆಳಗಿನಂತೆ ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿದೆ:

ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನಗಳನ್ನು ಕುರಿತು ಹೇಳಲಾಗಿದೆ. ಎರಡನೇ ಅಧ್ಯಾಯದಲ್ಲಿ ಬೇಡ ಜನಾಂಗದ ಮೂಲ, ಬೇಡರ ಎರಡು ಪಂಗಡಗಳು ಮತ್ತು ಬೇಡರು ನೆಲೆಸಿರುವ ಪ್ರಮುಖ ಎಡೆಗಳು ಕುರಿತು ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಬೇಡ ಪದದ ಅರ್ಥ, ಬೇಡರನ್ನು ಕುರಿತು ಈತನಕ ದೊರೆತ ಉಲ್ಲೇಖಗಳು ಹಾಗೂ ಬೇಡ ಜನಾಂಗದ ಚಾರಿತ್ರಿಕ ಮತ್ತು ಪೌರಾಣಿಕ ಹಿನ್ನೆಲೆಯನ್ನೂ ಗುರುತಿಸಲೆತ್ನಿಸಿದೆ. ಬೇಡರ ಎರಡು ಪ್ರಮುಖ ಪಂಗಡ ಗಳಾದ ಊರು ಮತ್ತು ಮ್ಯಾಸಬೇಡರ ಬಗೆಗೆ ಸ್ಥೂಲ ಚರ್ಚೆಯೊಡನೆ ಕರ್ನಾಟಕದಲ್ಲಿ ಬೇಡರು ಅತ್ಯಧಿಕವಾಗಿ ನೆಲೆಸಿರುವ ಪ್ರದೇಶಗಳನ್ನು ಗುರುತಿಸುವ ಪ್ರಯತ್ನವನ್ನೂ ಮಾಡಲಾಗಿದೆ.

ಮೂರನೇ ಅಧ್ಯಾಯದಲ್ಲಿ ವಿಜಯನಗರಪೂರ್ವ ಮತ್ತು ವಿಜಯನಗರ ಕಾಲದಲ್ಲಿ ಬೇಡ ಜನಾಂಗದಲ್ಲಾದ ಪರಿವರ್ತನೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ವಿಜಯನಗರ ಸ್ಥಾಪನೆಯ ಪೂರ್ವದಲ್ಲಿ ಇತರ ಅರಸರ ಕಾಲದಲ್ಲಿ ಬೇಡರು ಯಾವ ಸ್ಥಿತಿಯಲ್ಲಿದ್ದರು ಮತ್ತು ಬೇಡರಾದ ಕುಮ್ಮಟ ದುರ್ಗದ ದೊರೆಗಳ ಅವಧಿಯಲ್ಲಿ ಇವರಲ್ಲುಂಟಾದ ಪ್ರಮುಖ ಬದಲಾವಣೆಗಳೇನು ಮೊದಲಾದ ಅಂಶಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ಕನೇ ಅಧ್ಯಾಯವು ಪ್ರಸ್ತುತ ಅಧ್ಯಯನದ ಮುಖ್ಯ ಭಾಗವಾಗಿದ್ದು, ಚಿತ್ರದುರ್ಗ, ಬಳ್ಳಾರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಆಳ್ವಿಕೆ ನಡೆಸಿದ ಬೇಡ ಅರಸರ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಇದರಲ್ಲಿ ಚರ್ಚಿಸಲಾಗಿದೆ. ಚಿತ್ರದುರ್ಗ, ನಾಯಕನಹಟ್ಟಿ, ಹರತಿ, ಮತ್ತೋಡು, ಜರಿಮಲೆ, ಗುಡೇಕೋಟೆ, ಕನಕಗಿರಿ, ಗುಡಗುಂಟಿ, ದೇವದುರ್ಗ ಮುಂತಾದ ಸ್ಥಳಗಳಲ್ಲಿ ಅಧಿಕಾರ ನಡೆಸಿದ ಬೇಡ ಅರಸರ ರಾಜಕೀಯ ಬೆಳವಣಿಗೆ ಮತ್ತು ಅವರ ಅವನತಿಯನ್ನು ನಿರೂಪಿಸಲಾಗಿದೆ. ಈಚಿನ ದಿನಗಳಲ್ಲಿ ಈ ಬೇಡ ಅರಸು ವಂಶಸ್ಥರ ಕೌಟುಂಬಿಕ ಪರಿಸ್ಥಿತಿ ಹಾಗೂ ಹೊಂದಿರುವ ರಾಜಕೀಯ ಸ್ಥಾನಮಾನಗಳನ್ನು ವಿಮರ್ಶಿಸಿದೆ. ಬೇಡ ಅರಸರ ಸಾಮಾಜಿಕ ಸ್ಥಾನಮಾನ, ಆರ್ಥಿಕ ಬದಲಾವಣೆ, ಸಾಂಸ್ಕೃತಿಕ ಭಿನ್ನತೆ ಮುಂತಾದವುಗಳ ಮೇಲೆ ಹಿಂದೂ, ಮುಸ್ಲಿಂ ಧರ್ಮಗಳು ಬೀರಿದ ಪ್ರಭಾವವನ್ನೂ ಚರ್ಚಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ೧೮೦೦ ರಿಂದ ಈಚಿನವರೆಗೆ ಬೇಡ ಜನಾಂಗದಲ್ಲಾದ ಪರಿವರ್ತನೆಗಳ ಕಡೆ ಗಮನಹರಿಸಲಾಗಿದೆ. ಸಾಂಸ್ಕೃತೀಕರಣ, ಪಾಶ್ಚಾತ್ಯೀಕರಣ, ಆಧುನೀಕರಣ, ನಗರೀಕರಣ, ಜಾಗತೀಕರಣ ಮುಂತಾದವುಗಳ ಪ್ರಭಾವದ ನೆಲೆಯಲ್ಲಿ ಈ ಜನಾಂಗದವರಲ್ಲಾದ ಸುಧಾರಣೆಗಳನ್ನು ಅಧ್ಯಯನ ಮಾಡುವ ಪ್ರಯತ್ನಮಾಡಲಾಗಿದೆ.

ಆರನೇ ಅಧ್ಯಾಯವೇ ಸಮಾರೋಪ. ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಇಲ್ಲಿ ವಿಶ್ಲೇಷಿಸಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಗುರುತಿಸಲಾದ ಅಂಶಗಳನ್ನು ಇಲ್ಲಿ ಕ್ರಮವಾಗಿ ನಿರೂಪಿಸಿದೆ.

## ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನವು ಚಾರಿತ್ರಿಕ ಸಂಶೋಧನ ವಿಧಿ-ವಿಧಾನಗಳನ್ನು ಅನುಸರಿಸಿದೆ. ಐತಿಹಾಸಿಕ ಮತ್ತು ಸರ್ವೇಕ್ಷಣಾ ಪದ್ಧತಿಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಬೇಡ ಜನಾಂಗವು ಬೆಳೆದುಬಂದ ವಿವಿಧ ಚಾರಿತ್ರಿಕ ಹಂತಗಳನ್ನು ಗುರುತಿಸುವ ಉದ್ದೇಶ ಇಲ್ಲಿಯದು.

ಬೇಡ ಜನಾಂಗದ ನೆಲೆ, ಹಿನ್ನೆಲೆ, ಮೂಲ ಮುಂತಾದವುಗಳ ಹಿನ್ನೆಲೆಯಲ್ಲಿ ಬೇಡರು ಚರಿತ್ರೆ ನಿರ್ಮಾಪಕರಾದ ಬಗೆ, ಬುಡಕಟ್ಟು ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದ ಬೇಡರು ಸೈನಿಕರಾಗಿ, ಅಧಿಕಾರಿಗಳಾಗಿ, ಪಾಳೆಯಗಾರರಾಗಿ, ಅಮರನಾಯಕರಾಗಿ, ದೊರೆಗಳಾಗಿ ಚರಿತ್ರೆಯಲ್ಲಿ ಗುರುತಿಸಿಕೊಂಡ ಸಂದರ್ಭ, ರಾಜ್ಯಾಧಿಕಾರ ಹೋದ ಬಳಿಕ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇವರ ಪಾಲಿಗೆ ದೊರೆತ ಸ್ಥಾನ-ಮಾನ, ಪ್ರಸ್ತುತ ಸಂದರ್ಭದಲ್ಲಿ ಬೇಡರು ಅನುಸರಿಸುತ್ತಿರುವ ಜೀವನವಿಧಾನ ಇತ್ಯಾದಿಯನ್ನು ಭಿನ್ನ ಭಿನ್ನ ದೃಷ್ಟಿಕೋನದ ಆಕರಗಳ ಬಳಕೆಯೊಡನೆ ಇಲ್ಲಿ ನಿರೂಪಿಸಲಾಗಿದೆ.

ವಿಜಯನಗರ ನಂತರದ ಅನೇಕ ಕಿರುಸಂಸ್ಥಾನಿಕರ ಅಧ್ಯಯನಕ್ಕೆ ಸಂಬಂಧಿಸಿದಂತೆ ಸಮರ್ಪಕ ಆಧಾರಗಳ ಕೊರತೆ ಅಪಾರ. ಈ ಕಾರಣಕ್ಕಾಗಿಯೇ ಇಲ್ಲಿಯವರೆಗೆ ಸ್ಥಳೀಯ ಅರಸರ ಚರಿತ್ರೆಯನ್ನು ಕ್ರಮವಾಗಿ ನಿರೂಪಿಸಲಾಗಿಲ್ಲ. ಅವರ ಪೀಳಿಗೆಯವರಲ್ಲಿದ್ದ ಅಲ್ಪಸ್ವಲ್ಪ ಮಾಹಿತಿಯೂ ಕ್ರಮಬದ್ಧವಾಗಿಲ್ಲ. ಕಾಗದ ಪತ್ರಗಳು, ವಂಶಾವಳಿ ದಾಖಲೆಗಳು ಮತ್ತಿತರ ಆಕರಗಳು ಕಾಲಕ್ರಮೇಣ ಅವರ ನಿರ್ಲಕ್ಷ್ಯದಿಂದಾಗಿ ಹಾಳಾಗಿಹೋಗಿವೆ. ಈ ಮನೆತನಗಳಲ್ಲಿರುವ ನೆನಪುಗಳು ಮೌಖಿಕ ಚರಿತ್ರೆ ಸ್ವರೂಪದ ಮಾಹಿತಿಯಾಗಿ ಇಲ್ಲಿ ಬಳಕೆಗೊಂಡಿದೆ. ಇದು ಅನಿವಾರ್ಯವೂ ಹೌದು.

ಆದರೂ ಸ್ಥಳೀಯ ಅರಸರಿಗೆ ಸಂಬಂಧಿಸಿದಂತೆ ಇಲ್ಲಿಯವರೆಗಿನ ಪ್ರಕಟಿತ ಹಾಗೂ ಅಪ್ರಕಟಿತ ಕಾಗದ ಪತ್ರಗಳನ್ನು, ವರದಿಗಳನ್ನು, ಸಂಶೋಧನ ಕೃತಿಗಳನ್ನು, ಪ್ರಬಂಧಗಳನ್ನು, ಪತ್ರಿಕೆಗಳನ್ನು, ಶಾಸನ ಸಂಪುಟಗಳನ್ನು ಹಾಗೂ ಇನ್ನಿತರ ಪ್ರಾಥಮಿಕ ಮತ್ತು ಆನುಷಂಗಿಕ ಮಾಹಿತಿಯನ್ನು ಗಮನಿಸಿ ಅವುಗಳಿಂದ ಬೇಡ ಜನಾಂಗದವರಿಗೆ ಹಾಗೂ ಬೇಡ ಅರಸರಿಗೆ ಸಂಬಂಧಿಸಿದ ವಿವರಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಚರಿತ್ರೆ, ಭೂಗೋಳ, ಸಮಾಜಶಾಸ್ತ್ರ, ಮಾನವಶಾಸ್ತ್ರ, ಜಾನಪದ ಮೊದಲಾದ ಶಿಸ್ತುಗಳಿಗೆ ಸಂಬಂಧಿಸಿದ ಆಕರಗಳನ್ನೂ ಇಲ್ಲಿ ಬಳಸಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯದ ಮೂಲಕ ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಪೂರಕ ಮಾಹಿತಿಯನ್ನು ಸಂಗ್ರಹಿಸಿದೆ. ಪ್ರಶ್ನಾವಳಿ ಮೂಲಕ ಈ ಮನೆತನಗಳವರ ಸಂದರ್ಶನ ನಡೆಸಲಾಗಿದ್ದು, ಕೆಲವಾರು ಕುಟುಂಬವರ್ಗದವರ ಛಾಯಾಚಿತ್ರಗಳನ್ನು ತೆಗೆದುಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಬರುವ ಚಿತ್ರದುರ್ಗ, ನಾಯಕನಹಟ್ಟಿ, ಹರತಿ, ಮತ್ತೋಡು, ದೊರೆಗಳಹಟ್ಟಿ(ರಾಮದುರ್ಗ), ಅರೇಹಳ್ಳಿ, ಕಾಟಪ್ಪನಹಟ್ಟಿ, ಚಳ್ಳಕೆರೆ, ಗುಡೇಕೋಟೆ, ಜರಿಮಲೆ, ಕನಕಗಿರಿ, ಹುಲಿಹೈದರ, ಗುಂತಗೋಳ, ಗುಡಗುಂಟಿ, ದೇವದುರ್ಗ, ಕ್ಯಾದಿಗೇರಾ ಮುಂತಾದ ಸ್ಥಳಗಳಲ್ಲಿ ನೆಲಸಿರುವ ಬೇಡ ಅರಸು ಮನೆತನದವರು, ಬೇಡೇತರ ಅನುಭವಿ ವ್ಯಕ್ತಿಗಳು ಕೆಲವು ವಿದ್ವಾಂಸರು, ರಾಜಪುರೋಹಿತರು, ಮೂಲಸ್ಥಳಗಳಲ್ಲಿಯೇ ನೆಲೆಸಿರುವ ಪರಿಣತರು, ಬೇಡರನ್ನು ಕುರಿತು ವಿಶೇಷ ಅಧ್ಯಯನ ಕೈಗೊಂಡ ಲೇಖಕರು ಮೊದಲಾದವರಿಂದ ಅಗತ್ಯ ಮಾಹಿತಿ ಸಂಗ್ರಹಿಸಿಕೊಳ್ಳಲಾಗಿದೆ. ಒಟ್ಟಿನಲ್ಲಿ ಬಹುಶಿಸ್ತಿಯ ಅಧ್ಯಯನದ ನೆಲೆಯಲ್ಲಿ ಇಲ್ಲಿಯ ವಿಷಯವನ್ನು ವಿಶ್ಲೇಷಿಸಲಾಗಿದೆ.

ಅಧ್ಯಾಯ ೨

# ಬೇಡ ಜನಾಂಗದ ಹಿನ್ನೆಲೆ

೨.೧ ಬೇಡ ಜನಾಂಗದ ಮೂಲ

೨.೨ ಬೇಡರ ಎರಡು ಪಂಗಡಗಳು

೨.೩ ಬೇಡರು ನೆಲೆಸಿರುವ ಪ್ರಮುಖ ಎಡೆಗಳು

ಬೇಡ ಜನಾಂಗವು ಅತ್ಯಂತ ಪ್ರಾಚೀನ ಹಿನ್ನೆಲೆಯನ್ನು ಹೊಂದಿದೆ. ಬೇಟೆಯ ವೃತ್ತಿ ಎಷ್ಟು ಹಳೆಯದೋ ಬೇಡನೂ ಅಷ್ಟೇ ಹಳಬ. ದೈಹಿಕ ಸದೃಢತೆ ಮತ್ತು ಧೈರ್ಯ ಸಾಹಸಗಳಿಗೆ ಹೆಸರಾದ ಬೇಡರ ಇತಿಹಾಸ ಭಾರತಕ್ಕಾಗಲೀ, ಕರ್ನಾಟಕಕ್ಕಾಗಲೀ ಸೀಮಿತವಿಲ್ಲ. ಕಾಡು ಮತ್ತು ಬೇಟೆಯ ಸಂಬಂಧ ದೊಂದಿಗೆ ಬೆಳೆದ ಬೇಡನದು ಮೂಲ ಸಂಸ್ಕೃತಿ. ಆದಿಕವಿ ಎಂದು ಹೆಸರಾದ ಮಹರ್ಷಿ ವಾಲ್ಮೀಕಿ ಬೇಡ ಜನಾಂಗದವನು. ಪ್ರದೇಶಕ್ಕನುಗುಣವಾಗಿ ವಿವಿಧ ಹೆಸರುಗಳಿಂದ ಕರೆಸಿಕೊಂಡು ಬಂದ ಬೇಡರ ಬದುಕು ಶತಮಾನಗಳ ಕಾಲಾವಧಿಯಲ್ಲಿ ಅನೇಕ ಸ್ಥಿತ್ಯಂತರಗಳನ್ನು ಕಂಡಿದೆ. ಕರ್ನಾಟಕದ ಇತಿಹಾಸದಲ್ಲಿ **ಬೇಡ ಜನಾಂಗ ಯೋಧ ಜನಾಂಗವೆಂದು ಹೆಸರಾಗಿದೆ. ಕೆಲವು ಕಾಲ ಅರಸು ಜನಾಂಗವಾಗಿಯೂ ಗುರುತಿಸಲ್ಪಟ್ಟಿದೆ.**

## ೨.೧. ಬೇಡ ಜನಾಂಗದ ಮೂಲ

ಬೇಡ ಎಂಬ ಪದವು ಸಂಸ್ಕೃತದ ವ್ಯಾಧ ಎಂಬ ಪದಕ್ಕೆ ಸಮಾನವಾಗಿದೆ. ರೂಢಿಯಲ್ಲಿ ಈ ಪದವು ವೇಡ ನಂತರ 'ಬೇಡ' ಎಂದು ರೂಪಾಂತರವಾಗಿದೆ.[೧] ಬೇಟೆ ಎಂಬ ಪದವೇ ಬೇಟ, ಬೇಡ ಎಂದು ರೂಪಾಂತರವಾಗಿರುವ ಸಾಧ್ಯತೆಯುಂಟು. ಬೇಡ ಎಂದರೆ a tribe of forest people living by the chage ಎಂಬ ಅರ್ಥವುಂಟು.[೨] ಬೇಟೆಯ ಮೂಲಕವೇ ಗುರುತಿಸಿಕೊಂಡವರನ್ನು ಬೇಡರು ಎಂದು ಕರೆದರು. ಪುಳಿಂದ, ಶಬರ, ಕಿರಂತ, ನಿಷಾದ ಇವು ಬೇಡ ಪದದ ಪರ್ಯಾಯ ಪದಗಳಾಗಿವೆ. ಆರ್ಯೇತರ ಪಂಗಡಕ್ಕೆ ಸೇರಿದ ಪುಳಿಂದರನ್ನು ಪ್ರಾಚೀನ ಭಾರತದ ಲೋಹಯುಗ ಸಂಸ್ಕೃತಿಯ ಜನರ ಪರಂಪರೆಗೆ ಸೇರಿದ ಮಿಶ್ರ ಬುಡಕಟ್ಟಿನವರೆಂದು ಹೇಳಲಾಗಿದೆ. ಆರ್ಯ ಸಂಸ್ಕೃತಿಯ ವಿಸ್ತರಣೆಯಿಂದಾಗಿ ದಕ್ಷಿಣ ಭಾರತದ ಕಡೆಗೆ ವಲಸೆ ಬಂದು ವಿಂಧ್ಯಪರ್ವತ ಪ್ರದೇಶದಲ್ಲಿ ನೆಲೆಸಿದರು. ನಿಷಾದರು ಪ್ರಾಚೀನ ಭಾರತದಲ್ಲಿದ್ದ ಆರ್ಯೇತರ ಬುಡಕಟ್ಟು ಜನ. ಗುಡ್ಡಗಾಡು ಪ್ರದೇಶದಲ್ಲಿ ಧೈರ್ಯ ಮತ್ತು ದಿಟ್ಟತನಗಳನ್ನು ಮೈಗೂಡಿಸಿಕೊಂಡು ಬೇಟೆಯಿಂದ ಜೀವಿಸುತ್ತಾ ಬಂದವರನ್ನು ಬೇಡರು ಎಂದು ಕರೆಯಲಾಯಿತು. ಬೇಟೆ ಮತ್ತು ಬೇಡನ ನಡುವೆ ಜೀವಸ್ಮರಣ ಸಂಬಂಧವಿತ್ತು.

ಭಾರತದಲ್ಲಿ ಬೇಡರನ್ನು ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಕರ್ನಾಟಕದಲ್ಲಿ ನಾಯಕ, ವಾಲ್ಮೀಕಿ, ಬೇಡ, ತಳವಾರ, ಪರಿವಾರ ಎಂದೂ, ಆಂಧ್ರದಲ್ಲಿ ಬೋಯಾ, ಕಿರಾತಕ, ನಿಷಾದ, ಬಿಲ್ಲ, ಚೆಂಚು ಎಂದು, ತಮಿಳುನಾಡಿನಲ್ಲಿ ವೇಡನ್, ನಾಯಕ್ಕ, ನಾಯಕ, ನಾಯಕರ್, ಬೆತ್ತಲೆ ನಾಯಕರ, ವೇತುಕನ್ ಎಂದು, ಉತ್ತರಪ್ರದೇಶದಲ್ಲಿ ಜಾಟ್, ಪಂಜಾಬಿನಲ್ಲಿ ಬಿಲ್, ಬಾಲಮೀಕಿ, ವಾಲ್ಮೀಕಿನಾಯಕ, ಯಾಂಗ್, ಕೇರಳದಲ್ಲಿ ನಾಯರ್ ಕಾಶ್ಮೀರದಲ್ಲಿ ಡೋಗ್ರಾ ಇತ್ಯಾದಿ.[೩] ಉತ್ತರ ಭಾರತದಲ್ಲಿ ವಾಸಿಗಳೆಂದು, ಉತ್ತರ ಮಲಬಾರಿನಲ್ಲಿ ಪೆದಿಂಗಲ್, ವೆಟ್ಟುವಾನ್‌ಗಳೆಂದು ತಿರುವಾಂಕೂರ ಗುಡ್ಡಗಾಡಿನ ಪ್ರದೇಶದಲ್ಲಿ ಮಲೆವೇಡನ್ ಹಾಗೂ ಸಿಲೋನಿನ ದ್ವೀಪದಲ್ಲಿ ವೆಡ್ಡರೆಂದು ಕರೆಯುತ್ತಾರೆ. ಬಹುತೇಕವಾಗಿ ಇವರೆಲ್ಲರೂ ಒಂದೇ ಬುಡಕಟ್ಟಿಗೆ ಸೇರಿದವರು.

ಬೇಡ ಜನಾಂಗವು ಭಾರತದ ಆದಿಮ ಜನಾಂಗಗಳಲ್ಲಿ ಪ್ರಮುಖವಾದುದು. ಮಾನವನ ಆದಿಮ ಸಂಸ್ಕೃತಿಯೇ ಬೇಟೆಗಾರರ ಸಂಸ್ಕೃತಿಯೊದುದರಿಂದ ಬೇಡ ಜನಾಂಗದ ಪ್ರಾಚೀನತೆ ಶಿಲಾಯುಗದ ಕಾಲದಷ್ಟು ಹಿಂದಕ್ಕೆ ಹೋಗುತ್ತದೆ. ಆದಿಯಲ್ಲಿ ಇಪ್ಪತ್ತೆರಡು ಕುಲದ ಬೇಟೆಗಾರರು ಪರಸ್ಪರ ವೈವಾಹಿಕ ಸಂಪರ್ಕಗಳನ್ನು ರೂಢಿಸಿಕೊಂಡು ಒಂದು ಸಮಗ್ರ ಬೇಡರ ಜನಾಂಗವಾಗಿ ಪರಿಣಮಿಸಿದ್ದರೆಂದು ಹೇಳಲಾಗಿದೆ.[೪] ವೇದ, ಪುರಾಣ, ಬ್ರಾಹ್ಮಣರ ಭಾಗವತ ಮುಂತಾದ ಕೃತಿಗಳಲ್ಲಿ ಬೇಡರ ಬಗ್ಗೆ ಉಲ್ಲೇಖಗಳನ್ನು ಕಾಣಬಹುದು. ವೇದಗಳಲ್ಲಿ ಅಸುರನೆಂದು ಹೇಳಿದ ಶಂಬರ ಎಂಬುವನ ಹೆಸರು ಇವರ ಒಂದು ಗುಂಪಿನ ಹೆಸರಾಗಿದೆ. ಈ ಶಂಬರನ ಗುಂಪೇ ಬೇಡರ ಗುಂಪಾಯಿತು. ಅವರನ್ನು ಶಬರರೆಂದು ಕರೆಯಲಾಯಿತು. ಮಹಾಕಾವ್ಯಗಳಲ್ಲಿ ನಿಷಾದರನ್ನು ವಿಂಧ್ಯ ಪರ್ವತದ ತಪ್ಪಲಿನಲ್ಲಿ ವಾಸಿಸುತ್ತಿದ್ದರೆಂದು ಹೇಳಲಾಗಿದೆ. ನಾಗರಿಕತೆಯ ಏಣಿಯ ಅತ್ಯಂತ ಕೆಳಭಾಗದಲ್ಲಿದ್ದ ಈ ಮೂಲನಿವಾಸಿಗಳನ್ನು ಆರ್ಯರು ಮ್ಲೇಚ್ಛರೆಂದು ಕರೆದರು. ವೇದಗಳಲ್ಲಿ ಪಂಚಜನಾ ಸಂಪ್ರದಾಯಕ್ಕನುಸಾರವಾಗಿ ಇದು ಐದು ಬಗೆಯ ಜನಾಂಗವನ್ನು ಸೂಚಿಸುತ್ತದೆ. ಅಂದರೆ ನಾಲ್ಕು ವರ್ಣಗಳೊಡನೆ ಸೇರಿದ ನಿಷಾದರೆಂಬ ಐದನೆಯ ಜಾತಿ ಯವರೇ 'ಪಂಚಜನಾ' ಎಂದಿದೆ.[೫] ವೇದಗಳ ಕಾಲಕ್ಕೆ ದಕ್ಷಿಣದಲ್ಲಿ ನೀಚ್ಯ, ಅಪಾಚ್ಯ, ಮರುಶೌರಸೇನ, ವತ್ಸ, ಚೇದಿ. ವಂಗ, ನಿಷಾದ ಎಂಬ ದೇಶಗಳಿದ್ದವೆಂದು ವೇದಗಳಿಂದ ತಿಳಿದುಬರುವುದು. ಆಂಧ್ರಕಿರಾತ, ಅಸ್ಸಕ, ಆಶ್ಮಕ ಮುಂತಾದ ಅಂತ್ಯವಾಸಿಗಳು, ಬ್ರಾಹ್ಮಣಕಗಳಲ್ಲಿಯೂ, ಪುರಾಣಗಳಲ್ಲಿಯೂ ಉಕ್ತರಾಗಿರು ವರು.[೬] ಅಶೋಕನ ೧೩ನೇ ಬಂಡೆ ಶಾಸನದ ಪ್ರತಿಗಳಲ್ಲಿ ಬೇಡರನ್ನು ಪುಳಿಂದ, ಪುಲಿಂದ, ಪುರಿಂದ ಎಂದು ಉಲ್ಲೇಖಿಸಲಾಗಿದೆ. ಅರಣ್ಯಧರ್ಮ ಸಂಪ್ರದಾಯ, ಬೇಟೆಯಾಡುವುದು, ಮೃಗಪಕ್ಷಿಗಳ ಚರ್ಮಗಳಿಂದ ಅಲಂಕರಿಸಲ್ಪಟ್ಟ ಉಡುಪುಗಳನ್ನು ಧರಿಸಿ, ಕ್ರೂರ, ಕಠೋರ ಸ್ವಭಾವಗಳನ್ನು ಮೈಗೂಡಿಸಿಕೊಂಡವರು

ಕಿರಾತ, ನಿಷಾದರೆನಿಸಿಕೊಂಡ ಇವರು ಜೀವನಕ್ಕಾಗಿ ಆಗಾಗ ದಾರಿಹೋಕರಲ್ಲಿದ್ದ ವಸ್ತುಗಳನ್ನು ದೋಚುತ್ತಿದ್ದರು.

ಬೇಡ ಜನಾಂಗ ಕುರಿತು ಕೃತಾಯುಗದಿಂದಲೇ ತಿಳಿದುಕೊಳ್ಳಬಹುದು. ಕೃತಾಯುಗದಲ್ಲಿ ನಳ ಚಕ್ರವರ್ತಿ ಸತ್ಯಪರಿಪಾಲನೆಗಾಗಿ ಸಾಕಷ್ಟು ಕಷ್ಟಗಳನ್ನು ಅನುಭವಿಸಿ ಪುರಾಣ ಪ್ರಸಿದ್ಧನಾಗಿದ್ದಾನೆ. ಇವನು ನಿಷಾದ ದೇಶದ ನಿಷಾದರ ದೊರೆಯಾಗಿದ್ದನು. ನಿಷಾದರು ಬೇಡಜನಾಂಗಕ್ಕೆ ಸೇರಿದವರೆಂದು ವ್ಯಕ್ತಪಟ್ಟಿದೆ. ನಳ ಚಕ್ರವರ್ತಿ ಬಳಿ ಕೆಲವು ಬೇಡರು ಸಿಪಾಯಿಗಳಾಗಿ ಸೇವೆ ಸಲ್ಲಿಸುತ್ತಿದ್ದರು. ಬಹುತೇಕ ಬೇಡರು ಕಾಡಿನಲ್ಲಿ ತಮ್ಮ ಜೀವನವನ್ನು ಸಾಗಿಸುತ್ತಿದ್ದರೆಂಬುದಕ್ಕೆ ನಳ ಚರಿತ್ರೆಯು ಆಧಾರವಾಗಿರುತ್ತದೆ. ವೇನ ಮತ್ತು ಮಹರ್ಷಿ ವಾಲ್ಮೀಕಿ ಇದೇ ಯುಗಕ್ಕೆ ಸೇರಿದವರು. ತ್ರೇತಾಯುಗದಲ್ಲಿ ಶ್ರೀರಾಮ ಚಂದ್ರನಿಗೆ ತಾನು ತಿಂದ ಬೋರೆಹಣ್ಣುಗಳನ್ನು ತಿನ್ನಿಸಿ ತೃಪ್ತಳಾಗಿ ಶರೀರವನ್ನು ತ್ಯಜಿಸಿದ ಮಹಾಭಕ್ತೆ ಶಬರಿ, ಶ್ರೀರಾಮಚಂದ್ರನ ಪರಮ ಸ್ನೇಹಿತ ಬೇಡರ ದೊರೆ ಗುಹ, ದ್ವಾಪರಯುಗದ ಧರ್ಮವ್ಯಾಧ ಮತ್ತು ಏಕಲವ್ಯ, ಕಲಿಯುಗದ ಸಂದಿಕಾಲದಲ್ಲಿ ಕೃಷ್ಣನ ಅಂತ್ಯಕ್ಕೆ ಪಾತ್ರನಾದ ಮೂಗನಾಯಕ, ಅರವತ್ಮೂರು ಪುರಾತನರಲ್ಲಿ ಒಬ್ಬನಾದ ಬೇಡರ ಕಣ್ಣಪ್ಪ ಮುಂತಾದವರು ಇತಿಹಾಸದಲ್ಲಿ ಪ್ರಸಿದ್ಧ ಪುರುಷರಾಗಿರುವರು.

ಬೇಡ ಜನಾಂಗದ ಮೂಲಪುರುಷನ ಬಗ್ಗೆ ನಿಖರವಾಗಿ ಹೇಳಲಾಗುವುದಿಲ್ಲ. ಕೆಲವು ಕಡೆ, ಐತಿಹ್ಯ, ನಂಬಿಕೆಗಳು ಈ ಬಗ್ಗೆ ಮಾಹಿತಿಯನ್ನ ನೀಡುತ್ತವೆ. ಧ್ರುವ ಚಕ್ರವರ್ತಿಗೆ ಅಂಗನೆಂಬ ಮಗನಿದ್ದು, ಅಂಗನಿಗೆ ವೇನನೆಂದು ಮಗ ಜನಿಸಿದನು. ಇವನಿಗೆ ಇಬ್ಬರು ಮಕ್ಕಳು, ಹಿರಿಯವನಾದ ಬಾಹುಕ ವಿಲಕ್ಷಣ ರೂಪದವನು. ಎರಡನೇ ಮಗ ಪೃಥು ಚಕ್ರವರ್ತಿಯಾಗುವ ಎಲ್ಲಾ ಲಕ್ಷಣಗಳನ್ನು ಹೊಂದಿದ್ದು, ಚಕ್ರವರ್ತಿಯಾಗಿ ಪ್ರಖ್ಯಾತಿ ಪಡೆದನು. ಬಾಹುಕನು ಜೇಷ್ಠ ಪುತ್ರನಾದರೂ ಅಧಿಕಾರವಂಚಿತನಾಗಿ ನೊಂದು ತನ್ನ ಸಹವರ್ತಿಗಳೊಂದಿಗೆ ಕಾಡು ಸೇರಿದನು. ಮತ್ತು ಅಲ್ಲಿಯೇ ಜೀವನವನ್ನು ಮುಂದುವರೆಸಿದನು. ಇವರನ್ನು ವ್ಯಾಧರೆಂದು ಕರೆಯಲಾಯಿತು.[೭] ಇನ್ನೊಂದು ಕಥೆಯ ಪ್ರಕಾರ, ಆದಿಮೂಲನಾದ ಭಗವಂತನು ಬೇಡರ ಚಂಚುಲಕ್ಷ್ಮಿಯನ್ನು ಮದುವೆಯಾಗುವ ಮೂಲಕ ಬೇಡರ ವಂಶವನ್ನು ಬೆಳೆಸಿದನೆಂದು ಹೇಳಲಾಗಿದೆ. ಮನುವಿನ ಏಳನೆಯ ತಲೆಯವನಾಗಿ ಚಂದ್ರವಂಶದಲ್ಲಿ ಹುಟ್ಟಿದ ಕಾರ್ತವೀರ್ಯಾರ್ಜುನನ ಮಕ್ಕಳು, ಪರಶುರಾಮನು ಇಲ್ಲದ ವೇಳೆಯಲ್ಲಿ ಆಶ್ರಮಕ್ಕೆ ನುಗ್ಗಿ ಜಮದಗ್ನಿಯನ್ನು ಕೊಂದರು. ಇದರಿಂದ ನೊಂದ ಪರಶುರಾಮನು ಸಿಟ್ಟಿಗೆದ್ದು ಇಪ್ಪತ್ತೊಂದು ಸಲ ಭೂಪ್ರದಕ್ಷಣೆ ಮಾಡಿ ಕ್ಷತ್ರಿಯ ಕುಲವನ್ನೇ ನಾಶಮಾಡುವುದಾಗಿ ಶಪಥ ತೊಟ್ಟನು. ಇದರಿಂದ ಹೆದರಿದ ಕ್ಷತ್ರಿಯರೆಲ್ಲರೂ ಕಾಡು ಸೇರಿದರು. ಅಲ್ಲಿಯೇ ನೆಲಸಿ ತಮ್ಮ ನಾಮವನ್ನು ನಾಯಕ ಎಂದು ಬದಲಾಯಿಸಿಕೊಂಡರು.[೮] ಕ್ಷತ್ರಿಯನಾದ ವಿಶ್ವಾಮಿತ್ರನು ತನ್ನ ೧೦೦ ಮಕ್ಕಳಲ್ಲಿ ೫೦ ಜನರ ವಿಧೇಯರಾಗಿಲ್ಲದ ಕಾರಣ

ಕೋಪದಿಂದ ನೀವು ಅಡವಿ ಸೇರಿ ಪೂರ್ವದಿಕ್ಕಿನಲ್ಲಿ ಶಬರರೆಂದು, ಉತ್ತರದಲ್ಲಿ ಪುಳಿಂದರೆಂದು, ಪಶ್ಚಿಮದಲ್ಲಿ ವ್ಯಾಧರೆಂದು ಹೆಸರು ಪಡೆದು ಬಾಳಿರೆಂದು ಶಾಪಕೊಟ್ಟ ವಿಷಯ ಸಂಸ್ಕೃತದ ಶ್ಲೋಕ ರೂಪದಲ್ಲಿದೆ.[೯] ವಾಲ್ಮೀಕಿ ಮತ್ತು ಸನಾತನೆ ಎಂಬ ದಂಪತಿಗಳಿಗೆ ಕಾಮಗೇತಿ, ಮಂದ, ಮುಳ್ಳ, ಮುಚ್ಚ, ಮೀನಗ, ಮಲ್ಲ, ಮಲ್ಯ ಎಂಬ ಏಳು ಮಕ್ಕಳು ಜನಸಿದರು. ವಾಲ್ಮೀಕಿಯು ಈ ಏಳು ಮಕ್ಕಳೊಡನೆ ಕಿರಾತವೃತ್ತಿಯಲ್ಲಿ ತೊಡಗಿದ್ದನು. ಕಾಮಗೇತಿಗೆ ಕಣ್ಣಪ್ಪನೆಂಬುವನು ಜನಿಸಿದನು. ೬೩ ಪುರಾತನರಲ್ಲಿ ಇವನೂ ಒಬ್ಬ. ಇವನ ವಂಶ ವೃದ್ಧಿಯಾಗಿ ೨೮ ಬೆಡಗುಗಳಾದವು.[೧೦] ಇಂದಿಗೂ ಬೇಡರು ವಾಲ್ಮೀಕಿಗಳೆಂದು, ವಾಲ್ಮೀಕಿ ವಂಶಜರೆಂದು, ಕನ್ನಯ್ಯನ ಮಕ್ಕಳೆಂದು, ಕನ್ನಯ್ಯನ ಕುಲದವರೆಂದು ಕರೆದುಕೊಳ್ಳುತ್ತಾರೆ. ಮಹಾರಾಷ್ಟ್ರದಲ್ಲಿ ಬೇಡರು ತಮ್ಮನ್ನು ರಾಮನ ವಂಶಸ್ಥರು ಎಂದು ಕರೆದುಕೊಳ್ಳುತ್ತಾರೆ. ಈಗಲೂ ಅಲ್ಲಿ ಬೇಡರಿಗೆ ರಾಮೋಶಿಗಳೆಂದು ಕರೆಯುವರು. ರಾಮಾಯಣ ಬೇಡ ಜನಾಂಗದ ಚರಿತ್ರೆಯಾಗಿದೆ ಎಂದು ಅಭಿಪ್ರಾಯಪಡಲಾಗಿದೆ. ಸೀತೆ ಬೇಡರವಳು ಎಂಬುದಕ್ಕೆ ಹಲವಾರು ಉಲ್ಲೇಖಗಳಿವೆ. ಕ್ಷತ್ರಿಯ ಮೂಲಪುರುಷ ಬೇಡ.[೧೧] ಬೇಡರು ಮೂಲತಃ ಕ್ಷತ್ರಿಯ ಕುಲಕ್ಕೆ ಸೇರಿದವರು ಪೌರಾಣಿಕ ಹಾಗೂ ಅದಕ್ಕೂ ಪೂರ್ವಕಾಲದಿಂದಲೂ ಇವರು ಯೌಧೇಯ (ಕ್ಷಾತ್ರ) ವೃತ್ತಿಗೆ ಹೆಸರಾದ ನಿರ್ಭೀತ ಜನಾಂಗವೆಂದೂ, ಮೂಲದಿಂದಲೇ ಇವರು ಕಿರಾತ ಜನಾಂಗವಾಗಿರದೆ ಉತ್ತರದಿಂದ ದಕ್ಷಿಣಕ್ಕೆ ವಲಸೆ ಬಂದು ಜೀವನ ನಿರ್ವಹಣೆಗಾಗಿ ಬೇಟೆಯ ಉಪಜೀವನವನ್ನು ರೂಢಿಸಿಕೊಂಡರೆಂದು ತಿಳಿದುಬರುತ್ತದೆ.[೧೨] ಕ್ಷಾತ್ರ ಪರಂಪರೆ ಬೇಡರಲ್ಲಿ ಇಂದಿಗೂ ಇದೆ. ಕಾಲದ ಪರಿವರ್ತನೆಯಲ್ಲಿ ಎಂತಹ ಕೆಳಸ್ಥಾನಕ್ಕೆ ತಳ್ಳಲ್ಪಟ್ಟರೂ ಕ್ಷಾತ್ರತ್ವವನ್ನು ಅವರು ಬಿಟ್ಟುಕೊಟ್ಟಿಲ್ಲವೆನ್ನಲು ಹಲವಾರು ಉದಾಹರಣೆಗಳು ಕಂಡುಬರುತ್ತವೆ.

ಪಾಂಡವರಲ್ಲಿ ಪ್ರತಿಯೊಬ್ಬನಿಗೂ ಒಂದೊಂದು ಪ್ರತ್ಯೇಕ ಬೇಡರ ಪಡೆ ಇದ್ದಿತು. ದಕ್ಷಿಣದ ಪೈನ ಗಂಗಾ ತೀರದ ಸುತ್ತಿನ ಪ್ರದೇಶಕ್ಕೆ ಬೇಡರ ದೊರೆಯು ಅಧಿಪತಿಯಾಗಿ ರಾಜ್ಯವಾಳಿದ. ಸೂರ್ಪಕದಿಂದ ರತ್ನಗಿರಿಯವರೆಗಿನ ಪ್ರದೇಶ ಬೇಡರ ರಾಜ್ಯವಾಗಿದ್ದಿತು. ಕಲಿಯುಗದ ಪ್ರಾರಂಭದಲ್ಲಿ ದಕ್ಷಿಣ ದೇಶದಲ್ಲಿ ಬೇಡರ ವಿನಃ ಬೇರೆ ಯಾವ ಜನಾಂಗದವರೂ ಇರಲಿಲ್ಲವೆನ್ನುವುದು ಹಾಗೂ ಅನಂತರ ದಕ್ಷಿಣದ ಇತಿಹಾಸದಲ್ಲಿ ನೆಲೆಗೊಂಡ ಅರಸು ಮನೆತನಗಳು ಮತ್ತು ಯೋಧ ಜನಾಂಗದವರು ಇದೇ ಬೇಡರ ಮೂಲ ಬುಡಕಟ್ಟಿಗೆ ಸೇರಿದವರೆಂಬುದು ಪರಿಶೀಲನ ಯೋಗ್ಯವಾದ ಅಂಶಗಳು. ಪ್ರಾಚೀನ ಕಾಲದಿಂದಲೂ ಕರ್ನಾಟಕದಲ್ಲಿ ಬೇಡರ ಬಗ್ಗೆ ತಿಳಿದುಬರುತ್ತದೆ. ಆಧುನಿಕ ಕಾಲದ ಮಧ್ಯಭಾರತದ ಡಕಾಯಿತ ಜನಾಂಗವನ್ನು ಅಥವಾ ಅಸ್ಸಾಮಿನ ನಾಗ ಜನರನ್ನು ಬಹುಮಟ್ಟಿಗೆ ಹೋಲುವ ಕೆಲವು ಜನಾಂಗಗಳು ಪ್ರಾಚೀನ ಕರ್ನಾಟಕದಲ್ಲಿ ನೆಲೆಸಿದ್ದವು. ಇವರೇ ಗುಡ್ಡಬೆಟ್ಟ ಕಾಡುಗಳಲ್ಲಿ ವಾಸಿಸುತ್ತಿದ್ದ ಬೇಡರು. ಮಲೆಪರು ಮತ್ತು ಕು(ವಿ)ಂಬರು.[೧೩] ಬೇಡ ಜನಾಂಗ ದ್ರಾವಿಡ ಜನಾಂಗವಾಗಿದೆ. ದ್ರಾವಿಡರಿಗಿಂತ

ಪೂರ್ವಕಾಲದಿಂದಲೂ ಬೇಡರ ಬದುಕನ್ನು ನೋಡುವುದರಿಂದ ಇವರು ಪೂರ್ವದ್ರಾವಿಡ ಗುಂಪಿಗೆ ಸೇರಿರಬೇಕು. ಬೆಟ್ಟಗುಡ್ಡಗಳಲ್ಲಿ ವಾಸಿಸುವ ಕುಲಗಳಾದ ಇರುಳ, ಕಾಡುಕುರುಬ ಜನಾಂಗಗಳು ದ್ರಾವಿಡರಿಗಿಂತ ಸಂಪೂರ್ಣ ಭಿನ್ನರಾದ ಪೂರ್ವ ದ್ರಾವಿಡರು ಎಂದು ವರ್ಣಿಸಲ್ಪಡುತ್ತಾರೆ. ಇವರೇ ದಕ್ಷಿಣ ಭಾರತದ ಮೂಲನಿವಾಸಿಗಳೆಂದು ತೋರುತ್ತದೆ. ಶಬರ, ಮಾತಂಗರು, ಬೇಡರು ಅವರ ಜೊತೆಯವರೇ ಈ ಬಗ್ಗೆ ಸಂಸ್ಕೃತ ಹಾಗೂ ಕನ್ನಡ ಸಾಹಿತ್ಯ ಶಾಸನಗಳಲ್ಲಿ ಅವರ ಪ್ರಸ್ತಾಪ ಬರುತ್ತದೆ.[೧೪] ಬೇಡರು ಆಡುತ್ತಿದ್ದ ಬೇಟೆಗನುಸಾರವಾಗಿ ಅವರಿಗೆ ಎಯಿನರ್, ಪುಲಿಂದರ್, ಪುಳಿಇರ್, ಕುಳಿಂದರ್ ಇತ್ಯಾದಿ ಅನೇಕ ದ್ರಾವಿಡ ಹೆಸರುಗಳಿದ್ದವು.[೧೫] ಡಾ. ಪಿ.ಬಿ.ದೇಸಾಯಿ ಅವರ ಪ್ರಕಾರ ಬೇಡರ ಜನಾಂಗದ ಪ್ರಾಚೀನ ಚರಿತ್ರೆ ಕನಿಷ್ಠ ೧೨ ಮತ್ತು ೧೩ನೇ ಶತಮಾನದಷ್ಟಾದರೂ ಹಿಂದಿನ ಕಾಲದವರೆಗೆ ಹೋಗು ವುದು. ಬೇಡರೆಂದರೆ ರಜಪೂತರು, ರಾಜಪುತ್ರರು; ಎಂದರೆ ಅರಸನ ಮಕ್ಕಳು ಎಂದು ಹೇಳಿಕೊಳ್ಳುವಂತೆ ಈ ಬೇಡರು ದೊರೆಮಕ್ಕಳು ಇಲ್ಲವೆ ಕನ್ನಯ್ಯನವರು ಎಂದೂ ಅಲ್ಲದೇ ಶ್ರೀಕೃಷ್ಣನ ಪರಿವಾರದವರು ಎಂಬುದಾಗಿಯೂ ಗೌರವದಿಂದ ಕರೆಸಿಕೊಳ್ಳುವರೆಂದು ಅಭಿಪ್ರಾಯಪಟ್ಟಿರುವರು. ವಿಜಯನಗರ ಸಾಮ್ರಾಜ್ಯದ ಪೂರ್ವ ಹಾಗೂ ವಿಜಯನಗರೋತ್ತರ ಕಾಲದಲ್ಲಿ ತಲೆ ಎತ್ತಿದ ಬಹುತೇಕ ಪಾಳೆಯಪಟ್ಟುಗಳಲ್ಲಿ ಬೇಡರವೇ ಅಧಿಕವಾಗಿದ್ದವು. ಈ ಪಾಳೆಯಗಾರರು ತಮ್ಮ ಮೂಲವನ್ನು ಹೇಳಿಕೊಳ್ಳುವಾಗ ಸೂರ್ಯ, ಚಂದ್ರ ವಂಶದವರೆಂದು ಕರೆದುಕೊಂಡಿದ್ದಾರೆ. ಈ ಕುರಿತು ಬೇಡರು ಪ್ರತಿಷ್ಠಿತರಾದ ಮೇಲೆ ತಮ್ಮ ವೀರತ್ವದ ಪ್ರತಿಷ್ಠೆಯ ಜೊತೆಗೆ ಜಾತಿಯ ಪ್ರತಿಷ್ಠೆಯನ್ನು ಸೇರಿಸಿಕೊಳ್ಳುವ ಸಲುವಾಗಿ ತಮ್ಮ ವಂಶಗಳನ್ನು ಹೇಳಿಕೊಳ್ಳುವಲ್ಲಿ ಪುರಾಣಕಾಲದ ಸೂರ್ಯಚಂದ್ರ ವಂಶದವರಿಂದ ತಮ್ಮ ವಂಶ ಉತ್ಪನ್ನವಾಯಿತೆಂದು ಹೇಳಿಕೊಳ್ಳುತ್ತಾರೆ.[೧೬] ಆದರೆ ಕಾರ್ತವೀರ್ಯಾರ್ಜುನನು ಕ್ಷತ್ರಿಯ ಕುಲಕ್ಕೆ ಸೇರಿದ ಚಂದ್ರವಂಶದವನು. ಇವನ ವಂಶಸ್ಥರೆ ಪರಶುರಾಮನ ದಾಳಿಗಂಜಿ ಅಡವಿ ಸೇರಿ ಬೇಡರೆನಿಸಿಕೊಂಡರು. ಅಲ್ಲದೆ ಕ್ಷತ್ರಿಯ ವಂಶದ ಮೂಲಪುರುಷ ಬೇಡನಾಗಿದ್ದರಿಂದ ಹೀಗೆ ಸೂರ್ಯ, ಚಂದ್ರ ವಂಶದಿಂದ ಬಂದವರೆಂದು ಹೇಳಿಕೊಳ್ಳುತ್ತಿದ್ದುದು ಅತಿಶಯೋಕ್ತಿ ಎನಿಸದು.

ಬೇಡರನ್ನು ನಾಯಕ, ನಾಯಕ ಮಕ್ಕಳು, ಗುರಿಕಾರರು, ಅರಸು ಮಕ್ಕಳು, ದೊರೆಮಕ್ಕಳು, ದೊರೆಗಳು, ಪಾಳೆಯಗಾರರು,[೧೭] ಪರಿವಾರದವರು ಎಂದು ಕರೆಯುವರು. ಇವು ಬಹುತೇಕ ಅರಸರ ಮನೆತನಕ್ಕೆ ಹಾಗೂ ಅಧಿಕಾರಕ್ಕೆ ಸಂಬಂಧಪಟ್ಟ ಪದಗಳಾಗಿವೆ. ಕ್ರಿ.ಶ. ೯ನೇ ಶತಮಾನದಲ್ಲಿ ಹಾಸನ ಜಿಲ್ಲೆ, ಅರಸಿಕರೆ ತಾಲ್ಲೂಕಿನ ಕಣಕಟ್ಟೆ ಹೋಬಳಿ ಕಲ್ಲುಗುಂಡಿ ಗ್ರಾಮದಲ್ಲಿ ದೊರೆತ ಶಾಸನದಲ್ಲಿ ಮೊದಲಬಾರಿಗೆ ಕಂಡು ಬಂದಿದೆ. ಮೊದಲು ಗೌರವ ಸೂಚಕ ಪದವಾಗಿದ್ದ ನಾಯಕ ಪದವು ಬೇಡರ ನಿರಂತರ ಪ್ರಸಿದ್ಧಿಯಿಂದಾಗಿ ಅವರ ಪಾಲಿಗೆ ಅಧಿಕಾರ ಸೂಚಕವಾಗಿ ನಂತರ ಜಾತಿಸೂಚಕವಾಗಿ ಪ್ರಸಿದ್ಧಿ ಪಡೆದಿದೆ. ವಿಜಯನಗರ

ಕಾಲದಲ್ಲಿ ಮತ್ತು ನಂತರದಲ್ಲಿ ತಲೆ ಎತ್ತಿದ ಪಾಳೆಯಗಾರರೆಲ್ಲರೂ ತಮ್ಮನ್ನು ನಾಯಕರೆಂದೇ ಕರೆದುಕೊಂಡಿದ್ದಾರೆ. ಅಲ್ಲದೆ ಬಹುತೇಕ ಪಾಳೆಯಗಾರರು ಬೇಡರೇ ಆಗಿದ್ದರು.[೧೨] ಇದರಿಂದ ಪಾಳೆಯಗಾರರೆಂದರೆ ಬೇಡರೇ ಎಂಬುದು ಸ್ಪಷ್ಟ. ಬೇಟೆಯಾಡುವಲ್ಲಿ ಪ್ರಾಣಿಗಳಿಗಿಟ್ಟ ಗುರಿ ತಪ್ಪುತ್ತಿರಲಿಲ್ಲ ಅಷ್ಟೊಂದು ಪ್ರಾವಿಣ್ಯತೆಯನ್ನು ಹೊಂದಿದವರಾದ್ದರಿಂದ ಬೇಡರನ್ನು ಗುರಿಕಾರರೆಂದು ಕರೆಯುವರು. ರಾಜನಿಗೆ ಬೇಟೆಯ ವಿದ್ಯೆಯನ್ನು ಕಲಿಸುವುದಕ್ಕಾಗಿ ಅರಮನೆ ಸಂಬಂಧ ಹೊಂದಿದ್ದ ಗುರಿಕಾರರು ನಂತರದಲ್ಲಿ ರಾಜನ ಕಛೇರಿಯಲ್ಲಿ ಪ್ರಮುಖ ಹುದ್ದೆಗಳನ್ನು ಪಡೆದರು. ಅಲ್ಲದೆ, ಸೈನ್ಯದ ಮುಖ್ಯಸ್ಥರಾಗಿಯೂ ಸೇವೆ ಸಲ್ಲಿಸಿದ್ದಾರೆ. ಪಾಳೆಯಗಾರರಾಗಿ ಅಧಿಕಾರ ನಡೆಸಿದವರನ್ನು ಸಾಮಾನ್ಯವಾಗಿ ದೊರೆಗಳೆಂದು, ಪಾಳೆಯಗಾರರೆಂದು ಅರಸರೆಂದು ಕರೆಯುವುದು ವಾಡಿಕೆಯಲ್ಲಿದೆ. ತುಂಗಭದ್ರ ನದಿಯ ಉತ್ತರ ಭಾಗದ ಬೇಡ ಸಂಸ್ಥಾನಿಕರನ್ನು ರಾಜರೆಂದೂ ದೊರೆಗಳೆಂದೂ ಕರೆಯಲಾಗುತ್ತದೆ. ಪರಿವಾರದವರೆಂದು ಕರೆಸಿಕೊಳ್ಳುವ ಮೈಸೂರು ಭಾಗದ ಜನರು ಬೇಡರೇ ಆಗಿರುವ ಸಾಧ್ಯತೆ ಇದೆ. ಈ ಪರಿವಾರದವರು ಮಾರನಾಯಕನ ವಂಶಜರೆಂದು ಹಾಗೂ ಅರಸನ ಅರಮನೆಯ ಸೇವೆಯಲ್ಲಿದ್ದವರೆಂದು ಹೇಳಲಾಗುತ್ತದೆ.[೧೩] ಆದರೆ ಎಂ.ವಿ. ಚಿತ್ರಲಿಂಗಯ್ಯನವರು ಪರಿವಾರದವರು ಬೇಡರೆನಿಸಿಕೊಳ್ಳುವುದಿಲ್ಲವೆಂಬ ತೀರ್ಮಾನಕ್ಕೆ ಬಂದಿದ್ದಾರೆ.[೧೪]

ಬೇಡರು ತಳವಾರರೆಂದು ಕರೆಸಿಕೊಳ್ಳುತ್ತಾರೆ. ಕ್ರಿ.ಶ. ೩ನೇ ಶತಮಾನದ ವೇಳೆಗೆ ಆಂಧ್ರಪ್ರದೇಶದ ನಾಗಾರ್ಜುನಕೊಂಡದ ಇಕ್ಷ್ವಾಕು ವಂಶದ ದೊರೆಗಳಿಂದ ಸ್ತಲವರ / ತಲವರ / ತಳಾರ / ತಳಾವಿ / ತಳವಾರ / ಮಹಾತಲವಾರ / ನಾಡತಳವಾರ ಎಂಬ ಪೋಲಿಸ್ ವಿಭಾಗದ ಹುದ್ದೆಗಳು ಸೃಷ್ಟಿಸಲ್ಪಟ್ಟವು. ಸ್ಥಳೀಯ ಮೂಲ ನಿವಾಸಿಗಳಾಗಿದ್ದ ಬೇಡರಿಗೆ ವಂಶಪಾರಂಪರ್ಯವಾಗಿ ಈ ತಳವಾರಿಕೆ ಅಧಿಕಾರವನ್ನು ಅನುಭವಿಸಲು ಕಟ್ಟಳೆ ಮಾಡಿದರು. ಹೀಗಾಗಿ ಇಂದಿನವರೆಗೂ ಈ ಚಾಕರಿ ಈ ಜನಾಂಗದಲ್ಲಿ ಮುಂದುವರೆದಿದೆ. ಗ್ರಾಮರಕ್ಷಣೆಯು ತಳವಾರನ ಮುಖ್ಯ ಕರ್ತವ್ಯವಾಗಿತ್ತು. ಮಧ್ಯಕಾಲೀನ ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ ತಳವಾರನ ಕುರಿತು ಅನೇಕ ಉಲ್ಲೇಖಗಳನ್ನು ಕಾಣಬಹುದು. ಬೇಡ ಜನಾಂಗದ ತಳವಾರುಗಳ ಹೆಸರುಗಳ ಕೊನೆಯಲ್ಲಿ ನಾಯಕ ಎಂಬ ಉಪನಾಮವು ಕಂಡುಬರುವುದಲ್ಲದೆ, 'ತಳಾರ /ತಳವಾರ ನಾಯಕಂ' ಎಂಬ ಪದ ಪ್ರಯೋಗವು ಸಾಕಷ್ಟು ಪ್ರಮಾಣದಲ್ಲಿ ಕಂಡುಬರುತ್ತದೆ.

ಒಟ್ಟಾರೆ, ಬೇಡ ಜನಾಂಗವು ಪೌರಾಣಿಕ ಹಾಗೂ ಚಾರಿತ್ರಿಕ ಹಿನ್ನೆಲೆಯಲ್ಲಿ ಬಾಹುಳ್ಯತೆಯನ್ನು ಗುರುತಿಸಿಕೊಂಡು, ಅತ್ಯಂತ ಪ್ರಾಚೀನ ಜನಾಂಗಗಳಲ್ಲಿ ಒಂದಾಗಿದೆ. ಕರ್ನಾಟಕದಲ್ಲಿ ಅನಾದಿ ಕಾಲದಿಂದಲೂ ಬೇಡರು ಇದ್ದಾರೆಂಬುದು ತಿಳಿದುಬರುತ್ತದೆ. ಬೇಟೆಯಂತಹ ಸಾಹಸ ವೃತ್ತಿಯಲ್ಲಿ ಸಿದ್ಧಹಸ್ತರಾದ ಬೇಡರ ಒಸ್ನೆಲೆ ಜನಾಂಗಿಕವಾಗಿ, ಚಾರಿತ್ರಿಕವಾಗಿ ತುಂಬಾ ಮಹತ್ವವನ್ನು ಪಡೆದುಕೊಂಡಿದೆ ಎಂದು ಹೇಳಬಹುದು.

## ೨.೨. ಬೇಡರ ಎರಡು ಪಂಗಡಗಳು

ಕರ್ನಾಟಕದಲ್ಲಿ ಬೇಡ ಜನಾಂಗವನ್ನು ಮುಖ್ಯವಾಗಿ ಎರಡು ಪಂಗಡಗಳಲ್ಲಿ ಗುರುತಿಸಬಹುದು. ಮ್ಯಾಸಬೇಡ (ಮ್ಯಾಸನಾಯಕ) ಮತ್ತು ಊರುಬೇಡ(ಊರುನಾಯಕ). ಈ ಪಂಗಡಗಳು ಮೂಲದಲ್ಲಿ ಒಂದೇ ಆಗಿದ್ದವು. ಕಾಲನಂತರದಲ್ಲಿ ಅವು ಬೇರೆ ಬೇರೆ ಎಂದು ಕಂಡುಬಂದಿವೆ. ಬೇಡ ಜನಾಂಗದ ಈ ಪಂಗಡಗಳ ಬಗ್ಗೆ ಉತ್ತರ ಕರ್ನಾಟಕದ ನಾಯಕರಿಗೆ ಅಷ್ಟೊಂದು ತಿಳಿದಿರುವುದಿಲ್ಲ. ಆದರೆ ಹಳೇ ಮೈಸೂರು ಭಾಗದ ಪ್ರದೇಶದಲ್ಲಿರುವ ಬೇಡರಲ್ಲಿ ಈ ಪಂಗಡಗಳ ಅಂತರದ ಆಚರಣೆ ಇದೆ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿನ ಬೇಡರಲ್ಲಿ ಈ ಪಂಗಡಗಳ ಅಂತರದ ಪ್ರಜ್ಞೆ ಹೆಚ್ಚಾಗಿರುವುದನ್ನು ನೋಡಬಹುದು. ತುಂಗಾಭದ್ರಾ ಉತ್ತರ ಭಾಗದ ಬೇಡ ನಾಯಕರಲ್ಲಿ ಬೇಡರೆಂದರೆ ಒಂದೇ ಎಂಬ ಅಭಿಪ್ರಾಯವಿರುವುದಕ್ಕೆ ಕಾರಣ ಮ್ಯಾಸನಾಯಕರೆಂದು ಕರೆಯುವ ಬೇಡನಾಯಕ ಪಂಗಡದವರು ಆ ಭಾಗದಲ್ಲಿ ನೆಲೆಸಿರುವುದಿಲ್ಲ. ಮೈಸೂರು ಭಾಗದ ಪರಿವಾರ ಜನಾಂಗ ಬೇಡ ಒಂದು ಪಂಗಡ ಎಂದು ಗುರುತಿಸಲಾಗಿದೆ.

ಕೆಲವೊಮ್ಮೆ ಮುಖ್ಯ ಸಮೂಹದಿಂದ ಚದುರಿದ ಇಲ್ಲವೆ ವಲಸೆ ಹೋದ ಜನಸಮುದಾಯಗಳು ಕಾಲಕ್ರಮೇಣ ಒಂದು ಹೊಸ ಹೆಸರನ್ನು ಪಡೆದುಕೊಳ್ಳುತ್ತವೆ. ಆಗ ತಮ್ಮ ಮೂಲ ಸಂಸ್ಕೃತಿಯ ಜೊತೆಯಲ್ಲಿ ಇತರರ ಸಂಸ್ಕೃತಿಯನ್ನು ರೂಢಿಸಿಕೊಳ್ಳುತ್ತವೆ. ನಂತರದಲ್ಲಿ ಈ ಸಮುದಾಯಗಳು ಬೇರೆ ಬೇರೆಯಾಗಿ ಕಾಣಿಸುತ್ತವೆ. ಉದಾಹರಣೆಗೆ ಕಾಡು ಸಂಸ್ಕೃತಿಯಿಂದ ನಾಡು ಸಂಸ್ಕೃತಿಗೆ ಬಂದವರು ಊರು ಸಂಸ್ಕೃತಿಯನ್ನು ರೂಢಿಸಿಕೊಳ್ಳುವುದರಿಂದ ಕಾಲಕ್ರಮೇಣ ಕಾಡುಸಂಸ್ಕೃತಿಯ ಸಂಬಂಧವನ್ನು ಕಡಿದುಕೊಂಡು ಊರು ಸಂಸ್ಕೃತಿಯಲ್ಲಿ ಮುಂದುವರೆಯಬೇಕಾಗುತ್ತದೆ. ಕಾಡುಗೊಲ್ಲ, ಊರುಗೊಲ್ಲ ಮತ್ತು ಕಾಡುಕುರುಬ, ಊರುಕುರುಬ ಇದ್ದ ಹಾಗೆಯೇ ಮ್ಯಾಸಬೇಡ, ಊರುಬೇಡ ಹೀಗೆ ಈ ಬುಡಕಟ್ಟು ಸಮುದಾಯಗಳಲ್ಲಿ ಎರಡೆರಡು ಪಂಗಡಗಳನ್ನು ನೋಡಬಹುದು. ವಿದ್ವಾಂಸರು ಬೇಡರಲ್ಲಿ ಈ ಎರಡು ಪಂಗಡಗಳ ಜೊತೆಗೆ ಇತರ ಕೆಲವು ಪಂಗಡಗಳನ್ನು ಗುರುತಿಸಿದ್ದಾರೆ.

೧. ಊರು ಬೇಡರು (ತೆಲುಗು ಚಿನ್ನ ಬೋಯಿಗಳು)

೨. ಮ್ಯಾಸಬೇಡರು (ಕೆಲವೊಮ್ಮೆ ಪೆದ್ದಬೋಯಿಗಳು ಮತ್ತು ಚೆಂಚರು ಎಂದು ಕರೆಯಲಾಗಿದೆ.)

೩. ಗುಡ್ಲುಬೇಡರು,

೪. ಮಾರಮ್ಮನ ಬೇಡರು, (ಮುತ್ಯಾಲಮ್ಮ ಅಥವಾ ಉರುಮೆ ಬೇಡರು ಮತ್ತು ಸಾದರ ಬೇಡರು)

೫. ಹಾಲು ಬೇಡರು,

೬. ಮೊಂಡ ಬೇಡರು[೨]

ವೃತ್ತಿ ಮತ್ತು ನೆಲೆಯ ಆಧಾರದ ಮೇಲೆ ಈ ರೀತಿಯ ಪಂಗಡಗಳನ್ನು ಮಾಡಲಾಗಿದೆ.

ಕ್ರಿ.ಶ. ೧೮೯೧ ಮತ್ತು ೧೯೦೧ರ ಮೈಸೂರು ಜನಗಣತಿ ವರದಿಗಳು ಬೇಡ ಜನಾಂಗದ ಇಪ್ಪತ್ತು ಉಪ ಹೆಸರುಗಳನ್ನು ತಿಳಿಸಿದೆ. ಅವುಗಳಲ್ಲಿ ಹಾಲು, ಮಾಚಿ ಅಥವಾ ಮ್ಯಾಸನಾಯಕ, ಪಾಳೇಗಾರ, ಬಾರಿಕ, ಕನ್ನಯ್ಯನ ಜಾತಿ ಮತ್ತು ಕಿರಾತಕ ಮುಖ್ಯವಾದವು.[೨೧] ಸೈಯದ್ ಸಿರಾಜ್‌ರವರು ತಮ್ಮ ಈ ಕೃತಿಯಲ್ಲಿ ಕೆಳಗಿನಂತೆ ಬೇಡರ ವಿವಿಧ ಪಂಗಡಗಳ ಬಗ್ಗೆ ತಿಳಿಸಿರುವರು.

೧. ಸಾದರ ಅಥವಾ ನಾಯಕಲು (ವಾಲ್ಮೀಕಿ) ಬೇಡರು

೨. ಟೆಂಜ್ಞ ಬೇಡರು (Tanged Bedars)

೩. ಮಂಗಲ ಬೇಡರು (ಹಜಾಮ, ಕ್ಷಾರಿಕ)

೪. ಚಾಕ್ಲಾ ಬೇಡರು (ದೋಬಿ, ಅಗಸ)

೫. ನೀಚ ಬೇಡರು

೬. ಬಸವಿ ಬೇಡರು

೭. ರಾಮೋಶಿ ಬೇಡರು

೮. ಜಾಸ್ ಬೇಡರು

೯. ಸ್ಥಳೀಯ ಬೇಡರು[೨೨]

ಸೈಯದ್ ಅವರೂ ಸಹ ಆಹಾರ, ವೃತ್ತಿ, ವಾಸ, ನಂಬಿಕೆ ಮತ್ತು ಸಂಪ್ರದಾಯಗಳ ಆಧಾರದ ಮೇಲೆ ಬೇಡರನ್ನು ವಿವಿಧ ಹೆಸರುಗಳಿಂದ ಕರೆದಿದ್ದಾರೆ. ವೃತ್ತಿಯಾಧಾರಿತ ಜಾತಿವ್ಯವಸ್ಥೆ ಬೇಡರಲ್ಲಿ ಅನೇಕ ಪಂಗಡಗಳ ಹುಟ್ಟಿಗೆ ಕಾರಣವಾಗಿರಬೇಕು. ಕಾಲ ಬದಲಾದಂತೆ ಜಾತಿ ಪ್ರಜ್ಞೆ ಕಡಿಮೆಯೇನೂ ಆಗಲಿಲ್ಲ. ಈ ಜಾತಿಬೇಧವನ್ನು ಹೋಗಲಾಡಿಸುವುದಕ್ಕಾಗಿಯೇ ಅನೇಕ ಸುಧಾರಕರು ಪ್ರಯತ್ನಪಟ್ಟರು. ಆದರೆ ದಿನದಿಂದ ದಿನಕ್ಕೆ ಈ ಜಾತಿ ಮತ್ತು ಪಂಗಡ ಪ್ರಜ್ಞೆ ಹೆಚ್ಚಾಗುತ್ತಾ ಬಂದಿದ್ದರಿಂದ ಬೇಡರಲ್ಲಿನ ಈ ಉಪಪಂಗಡಗಳಲ್ಲಿಯೂ ಅಂತರವು ಹೆಚ್ಚಾಯಿತು. ಅವು ತಮ್ಮ ಸ್ವಾಯತ್ತ ನೆಲೆಯಲ್ಲಿ ಗುರುತಿಸಿಕೊಳ್ಳಲು ಇಚ್ಛಿಸಿದವು. ಹೀಗಾಗಿ ಅವು ಬೇರೆ ಬೇರೆ ಪಂಗಡಗಳೆಂದು ಕರೆಸಿಕೊಂಡವೆನಿಸುತ್ತದೆ.

ಮುಂಬೈ ಕರ್ನಾಟಕ ಪ್ರದೇಶದಲ್ಲಿ ಮ್ಯಾಸಬೇಡ ಇತ್ಯಾದಿಯಾದ ಉಪಜಾತಿಗಳು ಕಂಡುಬರುವುದಿಲ್ಲ. ಆದರೆ ಈ ಭಾಗದಲ್ಲಿ ಕಂಡುಬರುವ ದುರುಗಮುರಗಿಯವರು, ದೊಂಬರು ಮುಂತಾದ ಕೆಲವು ಜಾತಿಗಳು ಬೇಡರ ಉಪಜಾತಿಗಳೆಂದು ಹೇಳಲಾಗುತ್ತದೆ.[೨೩] ಮುಂಬೈ ಮತ್ತು ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಊರುಬೇಡ (ನಾಯಕ), ಮ್ಯಾಸಬೇಡ ಎಂಬುದರ ಬಗ್ಗೆ ಜನರಿಗೆ ತಿಳಿಯದು. ಈ ಭಾಗದಲ್ಲಿ ಮ್ಯಾಸಬೇಡರೆಂದರೆ ಯಾರಿಗೂ ಅರ್ಥವಾಗುವುದಿಲ್ಲ. ಆದರೆ ಹಳೇ ಮೈಸೂರು ಪ್ರದೇಶಗಳಲ್ಲಿ ಊರು

ಮತ್ತು ಮ್ಯಾಸ ನಾಯಕರ ಬಗ್ಗೆ ಅಲ್ಲಿನ ಬೇಡರಿಗೆ ಅರಿವು ಇದೆ. ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ ಜಿಲ್ಲೆಗಳಲ್ಲಿ ಈ ಉಪಪಂಗಡಗಳ ನಡುವೆ ಸಾಕಷ್ಟು ಅಂತರಗಳಿರುವುದನ್ನು ಕಾಣಬಹುದು.

ಗ್ರಾಮಗಳಲ್ಲಿ ವಾಸ ಮಾಡುತ್ತಿದ್ದ ಬೇಡರನ್ನು ಊರು ಬೇಡರೆಂದು, ಕಾಡಿನಂಚಿನಲ್ಲಿ ಇಲ್ಲವೆ ಕಾಡಿನಲ್ಲಿ ವಾಸ ಮಾಡುತ್ತಿದ್ದ ಬೇಡರನ್ನೂ ಮ್ಯಾಸಬೇಡರೆಂದು ಕರೆದಿರುವರು.[೨೪] ಬೇಡರ ಕಸುಬು ಪಶುಪಾಲನೆಯನ್ನು ಆಧರಿಸಿ ಮ್ಯಾಸ ಎಂಬ ಪದವು ಮೇಯಿಸು ಎಂಬ ಪದದಿಂದ ಬಂದಿದೆಯೆಂದು ಹಾಗೂ ವಿಜಯನಗರ ಅರಸರ ಆಳ್ವಿಕೆಯಡಿ ಮೀಸಲು ನಾಯಕರಾಗಿದ್ದುದರಿಂದ ಮೀಸಲು ನಾಯಕರು ಅಥವಾ ಮ್ಯಾಸನಾಯಕರು ಎಂಬ ಅಭಿಪ್ರಾಯವಿದೆ. ಈ ಅಭಿಪ್ರಾಯವನ್ನು ಎಂ.ಜಿ. ಈಶ್ವರಪ್ಪನವರು ತಮ್ಮ 'ಮ್ಯಾಸಬೇಡರು' ಎಂಬ ಕೃತಿಯಲ್ಲಿ ತಿಳಿಸಿದ್ದಾರೆ. ಇನ್ನೂ ಕೆಲವರು ಮೇಷ ಕುರಿ ಅಥವಾ ಮೇಕೆಗಳನ್ನು ಮೇಯಿಸುವವರು ಮ್ಯಾಸಬೇಡರಾದರು ಎಂದಿದ್ದಾರೆ.[೨೫] ಬೇಡರಲ್ಲಿ ಈ ಪಂಗಡದ ವಿಂಗಡಣೆ ಯಾವಾಗ ಆರಂಭವಾಯಿತು ಎನ್ನುವ ಬಗ್ಗೆ ನಿಖರ ಮಾಹಿತಿಗಳಿಲ್ಲ. ಆದರೆ ಎಂ.ಜಿ. ಈಶ್ವರಪ್ಪನವರು ಈ ಬಗ್ಗೆ ದಾಖಲೆಯೊಂದನ್ನು ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ. ಕ್ರಿ.ಶ. ೧೪೧೫ನೇ ಇಸವಿಯಲ್ಲಿ ಭಾರತೀಯ ಶಿಬಿರ ಜನಾಂಗದಿಂದ ಮ್ಯಾಸಮಂಡಳಿಯು ಪ್ರತ್ಯೇಕಿಸಲ್ಪಟ್ಟಿತು ಎಂದು ನಿಖರವಾಗಿ ದಾವಣಗೆರೆ ತಾಲ್ಲೂಕು ಲೋಕಿಕೆರೆ ಗ್ರಾಮದ ದಾಖಲೆಯೊಂದು ಹೇಳುತ್ತದೆ. ಮಂದಲಗೋತ್ರದಲ್ಲಿ ಹುಟ್ಟಿದವನಾದ ಕನಕದಾಸ ಎಂಬುವನು ಮೈಸೂರು ಬಳಿಯಿರುವ ತಿರುಮಕೂಡಲ ವ್ಯಾಸರಾಯ ಸ್ವಾಮಿಗಳ ಇಷ್ಟದ ಶಿಷ್ಯನಾಗಿದ್ದನಂತೆ ಆತನು 'ವ್ಯಾಸರಾಯ ಸಂಸೇವಿತಾಃ' ಎಂದು ಹೇಳಿದ್ದರಿಂದ ಅವನ ಮುಂದಿನ ವಂಶಜರೆಲ್ಲ ಮ್ಯಾಸಬೇಡರಾದರು ಎಂದು ಹೇಳುತ್ತದೆ.[೨೬] ಮ್ಯಾಸ ಎಂಬ ಪದ ವ್ಯಾಸನಿಂದ ಬಂದುದು ಎಂಬುದನ್ನು ಸಮರ್ಥಿಸುವಲ್ಲಿ ರಾಜಾವಳಿ ಕಥಾಸಾರವೂ ಸ್ವಲ್ಪ ಸಹಾಯವಾಗಿದೆ. ದೇವಿಚಂದ್ರ ವಿರಚಿತ ರಾಜಾವಳಿ ಕಥಾಸಾರವು.... ಕಿರಾತನ ಮಗಳಪ್ಪ ಸತ್ಯವತಿ ವ್ಯಾಸನಂ ವೆತ್ತಳ್, ಆತನಿಂದ ಪಾಂಡವರ ವಂಶವಾಯ್ತು ಅದರಿಂದ ಕಿರಾತ ಕುಲ ಶ್ರೇಷ್ಠವೆಂದು ನುಡಿದ ಬಗ್ಗೆ ಮಾಹಿತಿ ನೀಡುತ್ತದೆ. ಇನ್ನೊಂದು ಕಥೆಯ ಪ್ರಕಾರ ಶ್ರೀಶೈಲ ಕಡೆಯಿಂದ ಬಂದವರಲ್ಲಿ ಒಬ್ಬ ಆಕಳುಕರುವಿನ ಕಾಲು ಮುರಿದು ತಿನ್ನಲು ಪ್ರಾರಂಭಿಸಿದನು. ಇದನ್ನು ನೋಡಿದ ಇನ್ನೊಬ್ಬನು ನೀನು ಗೋಮಾಂಸ ತಿಂದೆ ನೀನು "ಬ್ಯಾಡ" ಎಂದು ಹೇಳಿ ಅವನನ್ನು ಅಲ್ಲಿಯೇ ಬಿಟ್ಟು ಮುಂದೆ ಬಂದನಂತೆ. ಹೀಗೆ ಅವನು ಹಿಂದೆ ಉಳಿದವನು 'ಮ್ಯಾಸಬೇಡ'ನಾದನು. ಮುಂದೆ ಬಂದವನು ಕಾಡುಗೊಲ್ಲನಾದನು ಎಂದು ಹೇಳಲಾಗುತ್ತದೆ.[೨೭] ಈ ಕಥೆಯ ಆಧಾರದ ಮೇಲೆ ಕಾಡುಗೊಲ್ಲ ಮತ್ತು ಮ್ಯಾಸಬೇಡರು ಮೂಲತಃ ಒಂದೇ ಆಗಿದ್ದರು ಎಂಬ ಮಾತನ್ನು ಕೆಲವು ಸಂಶೋಧಕರು ಹೇಳುತ್ತಾರೆ.[೨೮]

ಗೋಮಾಂಸವನ್ನು ತಿಂದಿದ್ದನ್ನು ನೋಡಿದ ಕೆಲವು ಬೇಡರು ಅದನ್ನು ವಿರೋಧಿಸಿ ಕಾಡನ್ನು ತ್ಯಜಿಸಿ ಊರಿನ ಕಡೆ ಬಂದಿರುವ ಸಾಧ್ಯತೆಗಳಿವೆ. ನಂತರ ಅವನು ಊರಿನವರ ಸಂಸ್ಕೃತಿಯೊಡನೆ ಮಿಳಿತರಾದ್ದರಿಂದ ಊರುನಾಯಕರೆಂದು ಕರೆಸಿಕೊಂಡಿರಬಹುದು. ಏಕೆಂದರೆ ಊರುನಾಯಕರು ಹಸುವನ್ನು ಕೊಲ್ಲುವುದಿಲ್ಲ. ಅದರ ಮಾಂಸವನ್ನು ತಿನ್ನುವುದಿಲ್ಲ. ಬದಲಾಗಿ ಹಸುವನ್ನು ಗೋಮಾತೆಯೆಂದು ಪೂಜಿಸುತ್ತಾರೆ. ಕೆಲವರ ಹೇಳಿಕೆಯ ಪ್ರಕಾರ ಊರುನಾಯಕರು ಸ್ಥಳೀಯರು, ಮ್ಯಾಸನಾಯಕರು ಹೊರಭಾಗದಿಂದ ಕರ್ನಾಟಕಕ್ಕೆ ಬಂದವರು. ಊರುನಾಯಕರು ಕನ್ನಡವನ್ನು ಮಾತನಾಡಿದರೆ ಮ್ಯಾಸನಾಯಕರು ತೆಲುಗನ್ನು ಮಾತನಾಡುತ್ತಾರೆ. ಆದರೆ ಕೆಲವೊಂದು ಸ್ಥಳಗಳಲ್ಲಿ ಈ ಎರಡು ಪಂಗಡದವರೂ ತೆಲುಗು ಮತ್ತು ಕನ್ನಡವನ್ನು ಮಾತನಾಡುತ್ತಾರೆ. ಇನ್ನೊಂದು ಹೇಳಿಕೆಯ ಪ್ರಕಾರ ಬೇಡನೊಬ್ಬ ಹಸಿದುಬಂದಾಗ ಅವನ ತಾಯಿ ಅವನಿಗೆ ಸಸ್ಯಹಾರ ನೀಡಿದಳು. ಮನೆಯೊಳಗಿನಿಂದ ಮಾಂಸದ ವಾಸನೆ ಬರುತ್ತಿರುವುದನ್ನು ತಿಳಿದ ಅವನು ಮಾಂಸದ ಆಹಾರ ನೀಡುವಂತೆ ತಾಯಿಯನ್ನು ಒತ್ತಾಯಿಸಿದನು. ತಾಯಿಯು ಇಲ್ಲವೆಂದರೂ ಕೇಳದ ಮಗ ಸಿಟ್ಟಿಗೆದ್ದು ತಾಯಿಯನ್ನು ಕೊಂದನು. ನಂತರ ಮನೆಯೊಳಗೆ ಹೋಗಿ ನೋಡಲಾಗಿ ಮಾಂಸದ ಆಹಾರವಿರಲಿಲ್ಲ. ಬದಲಾಗಿ ಮಾಂಸದ ವಾಸನೆಯ ಬೇರೊಂದಿತ್ತು. ತಾಯಿಯನ್ನು ಕೊಂದ ಇವನು ತುಂಬಾ ಪಶ್ಚಾತ್ತಾಪಪಟ್ಟು ಕಾಡು ಸೇರಿದನು. ಕಾಡು ಸೇರಿದ ಇವನ ವಂಶಸ್ಥರೇ ಮ್ಯಾಸಬೇಡರ ಪೂರ್ವಜರಾದರು.[೩೨] ಮತ್ತೊಂದು ಕಥೆಯೊಂದರ ಪ್ರಕಾರ ರಾಜ್ಯವಾಳಲು ಯೋಗ್ಯವಲ್ಲದ ಕಾಡುವಾಸಿಯಾಗಿದ್ದ ಕಪ್ಪಗಿನ ರಾಕ್ಷಸನೊಬ್ಬ ಮೇನಕೆಯನ್ನು ಮೋಹಿಸಿದನು. ಅವರಿಗೆ ಹುಟ್ಟಿದ ಏಳು ಮಕ್ಕಳು ಮ್ಯಾಸಮಂಡಲದ ಮೂಲಪುರುಷರಾದರು ಅವೇ ಮುಂದೆ ಬೆಡಗುಗಳಾದವು.[೩೦]

ಬೇಡರಲ್ಲಿ ಕೆಲವರು ರಾಜಕೀಯವಾಗಿ ನಾಯಕ, ಪಾಳೆಯಗಾರ, ಮಾಂಡಲಿಕ, ದೊರೆ, ಗುರಿಕಾರ, ತಳವಾರ, ಸುಬೇದಾರ ಮುಂತಾದ ಸ್ಥಾನಮಾನಗಳಲ್ಲಿ ಜೀವನ ನಡೆಸಲು ಆರಂಭಿಸಿದರು. ಇನ್ನು ಕೆಲವರು ಕಾಡಿನಲ್ಲೋ, ಕಾಡಿನಂಚಿನಲ್ಲೋ ಉಳಿದುಕೊಂಡರು. ಊರು, ನಗರ, ರಾಜಧಾನಿಗಳ ಸಂಪರ್ಕದಿಂದ ಬೆಳೆದವರು ತಮ್ಮ ಹಿಂದಿನ ಸಂಸ್ಕೃತಿಯನ್ನು ಕೈಬಿಟ್ಟು ಊರು ಸಂಸ್ಕೃತಿಗೆ ಹೊಂದಿಕೊಂಡರು. ಮುಂದೆ ಇವರು ಊರುನಾಯಕರು ಎಂದು ಕರೆಸಿಕೊಂಡಿರಬೇಕು. ಕಾಡಿನಲ್ಲಿ ಉಳಿದುಕೊಂಡ ಕುಟುಂಬಗಳು ಕಾಡು ಸಂಸ್ಕೃತಿಯನ್ನೇ ಮುಂದುವರೆಸಿಕೊಂಡು ಬಂದವು. ಅವರು ಬೇಟೆ, ಪಶುಪಾಲನೆಯಂತಹ ವೃತ್ತಿಗಳನ್ನೇ ಮುಂದುವರೆಸಿದರು. ಅಲ್ಲದೆ ನಾಗರಿಕತೆಯ ಸಂಪರ್ಕದಿಂದ ದೂರ ಉಳಿದರು. ಹೀಗೆ ಕಾಡು ಸಂಸ್ಕೃತಿಯಲ್ಲಿ ಬೆಳೆದವರು ಮ್ಯಾಸಬೇಡರು ಆಗಿರಬೇಕು. ಈಗಲೂ ಬಹುತೇಕವಾಗಿ ಮ್ಯಾಸಬೇಡರ ನೆಲೆಗಳು ಕಾಡಿನಲ್ಲೋ, ಇಲ್ಲವೆ ಕಾಡಿನಂಚಿನಲ್ಲಿಯೇ ಇರುವುದನ್ನು ಕಾಣಬಹುದು. ಕಾಡು ಮತ್ತು ಬೇಡನ ನಂಟು ಇಂದಿಗೂ ಉಳಿದುಕೊಂಡು ಬಂದಿದೆ. ಊರುನಾಯಕರು ಕೃಷಿಯನ್ನು ಮಾಡುವುದರ ಜೊತೆಗೆ ಇತರ

ಉದ್ಯೋಗಗಳನ್ನು ಮಾಡುತ್ತ ಬಂದಿರುವರು. ಮ್ಯಾಸನಾಯಕರು ಪಶುಪಾಲನೆ, ಕುರಿ, ಮೇಕೆ, ಸಾಕಾಣಿಕೆಯನ್ನು ಮಾಡಿಕೊಂಡು ಬಂದಿರುವರು. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಅನೇಕ ಹಟ್ಟಿಗಳಲ್ಲಿ ಈ ಹಿಂದಿನ ಬುಡಕಟ್ಟು ಸಂಸ್ಕೃತಿಯನ್ನೇ ಹೊಂದಿರುವಂತಹ ಅನೇಕ ಮ್ಯಾಸಬೇಡರ ಕುಟುಂಬಗಳಿವೆ.

ಮ್ಯಾಸಬೇಡರ ಮಾತೃಭಾಷೆ ತೆಲುಗು ಜೊತೆಗೆ ಕೆಲವರು ಕನ್ನಡವನ್ನು ಮಾತನಾಡುತ್ತಾರೆ. ಆದರೆ ಊರುಬೇಡರಲ್ಲಿ ಕನ್ನಡ ಮಾತೃಭಾಷೆಯಾಗಿದೆ. ಗ್ರಾಮಸಂಸ್ಕೃತಿಗೆ ಹೊಂದಿಕೊಂಡ ಊರುನಾಯಕರು ಅಲ್ಲಿನ ಜನರ ಭಾಷೆ, ಆಚಾರ, ವಿಚಾರಗಳನ್ನು ಅನುಸರಿಸಿದರು. ಮ್ಯಾಸಬೇಡರು ತಮ್ಮ ಪೂರ್ವಿಕರ ಆಚಾರ ವಿಚಾರಗಳಲ್ಲಿಯೇ ಜೀವನ ನಿರ್ವಹಿಸುತ್ತಿದ್ದರು. ಪಾಳೆಯಗಾರರಾಗಿ ಅಧಿಕಾರ ನಡೆಸಿದವರೆಲ್ಲರೂ ಕನ್ನಡವನ್ನೇ ಮಾತನಾಡುತ್ತಿದ್ದರು. ಈಗಿರುವ ಅವರ ವಂಶಜರ ಮಾತೃಭಾಷೆ ಕನ್ನಡವಾಗಿದೆ. ಈ ಪಾಳೆಯಗಾರರಲ್ಲಿ ಮ್ಯಾಸಬೇಡರು ಮತ್ತು ಊರುಬೇಡರು ಎಂಬ ಭೇದವಿರಲಿಲ್ಲವೆಂದು ಕಂಡುಬರುತ್ತದೆ. ಏಕೆಂದರೆ ವಿಜಯನಗರೋತ್ತರ ಕಾಲದ ಬೇಡ ಪಾಳೆಯಗಾರರೆಲ್ಲರೂ ರಕ್ತಸಂಬಂಧಿಗಳೇ ಆಗಿದ್ದರು. ಚಿತ್ರದುರ್ಗ ನಾಯಕರು ಜರಿಮಲೆ, ಗುಡೇಕೋಟೆ, ರಾಯದುರ್ಗ, ಹರಪನಹಳ್ಳಿ, ಮತ್ತೋಡು, ನಾಯಕನಹಟ್ಟಿ, ಕನಕಗಿರಿ, ಗುಡಗುಂಟಿ ಮುಂತಾದ ನಾಯಕ ಮನೆತನಗಳ ಜೊತೆ ವೈವಾಹಿಕ ಸಂಬಂಧವನ್ನು ಹೊಂದಿದ್ದರು. ಈ ಪಾಳೆಯಗಾರರಲ್ಲಿ ಮ್ಯಾಸಬೇಡರು ಯಾರು, ಊರು ಬೇಡರು ಯಾರು ಎಂದು ಹೇಳುವುದು ಕಷ್ಟ. ಏಕೆಂದರೆ ಊರು ಮತ್ತು ಮ್ಯಾಸನಾಯಕರ ನಡುವೆ ಯಾವುದೇ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ಬೆಡಗುಗಳ ಆಧಾರದ ಮೇಲೂ ಇವರನ್ನು ಈ ಉಪಪಂಗಡಗಳಿಗೂ ಹೋಲಿಸುವುದೂ ಸಹ ಕಷ್ಟವಾಗಿದೆ. ಕುಮ್ಮಟದುರ್ಗದ ಅರಸ ಕಂಪಿಲರಾಯನು ಪುವ್ವಲ ವಂಶದವನೆಂದು ಹೇಳಲಾಗುತ್ತದೆ. ಅವನ ಹೆಂಡತಿ ಹರಿಯಲಾದೇವಿ ಗುಜ್ಜಲ ವಂಶದವಳು. ಪುವ್ವಲರು ಎಂಬ ಬೆಡಗು ಮ್ಯಾಸನಾಯಕರಲ್ಲಿ ಹಾಗೂ ಗುಜ್ಜಲ ಎಂಬ ಬೆಡಗು ಊರು ಬೇಡರಲ್ಲಿವೆ. ಚಿತ್ರದುರ್ಗ, ಗುಡೇಕೋಟೆ, ಜರಿಮಲೆ ಪಾಳೆಯಗಾರರ ವಂಶಸ್ಥರು ಗುಡಿಗುಂಟಿ, ಸುರಪುರ ಸಂಸ್ಥಾನದವರೊಡನೆ ವೈವಾಹಿಕ ಸಂಬಂಧ ಇಂದಿಗೂ ಮುಂದುವರೆದಿರುವುದರಿಂದ ಚಿತ್ರದುರ್ಗ, ಗುಡೇಕೋಟೆ, ಜರಿಮಲೆ, ಪಾಳೆಯಗಾರರು ಮ್ಯಾಸನಾಯಕರು, ಸುರಪುರ, ಕನಕಗಿರಿ, ಗುಡಗುಂಟಿ, ದೇವದುರ್ಗ ಸಂಸ್ಥಾನಿಕರು ಊರುನಾಯಕರು ಎಂದು ಹೇಳುವುದು ಸಾಮಾನ್ಯವೆನಿಸುತ್ತದೆ.

ಬೇಡರ ಈ ಎರಡು ಉಪಪಂಗಡಗಳನ್ನು ಕುರಿತು ಥರಸ್ಟನ್ ಅವರು ಹೀಗೆ ಅಭಿಪ್ರಾಯಪಟ್ಟಿರುವರು. ತೆಲುಗು ಮತ್ತು ಕನ್ನಡ ಮಾತನಾಡುವ ಬೇಡರಲ್ಲಿ ಊರ ಮತ್ತು ಮ್ಯಾಸ ಬೇಡರು ಇದ್ದಾರೆ. ಇವರಲ್ಲಿಯೇ ಮತ್ತೆ ಕುಲದ ಸ್ವಗೋತ್ರವಲ್ಲದ ಹೊರಗೆ ಮದುವೆಯಾಗುವ ಅನೇಕ ಬೆಡುಗಗಳಿವೆ.

ಪ್ರತಿಯೊಂದು ಬೆಡಗುಗಳ ತಮ್ಮದೇ ಆದ ದೇವರುಗಳನ್ನು ಹೊಂದಿವೆ. ಬೋಯ ಮತ್ತು ಬೇಡರಲ್ಲಿ ಬೆಡುಗುಗಳು ಒಂದೇ ರೀತಿ ಹೆಸರುಗಳನ್ನು ಹೊಂದಿವೆ. ಹಾಗೂ ಊರ ಮತ್ತು ಮ್ಯಾಸಬೇಡರಲ್ಲಿಯೂ ಬೆಡಗು ಹೆಸರಿನಲ್ಲಿ ಹೋಲಿಕೆ ಇದೆ. ಇದರಿಂದ ಇವು ಒಂದು ಕಾಲದಲ್ಲಿ ಒಂದೇ ಪಂಗಡಕ್ಕೆ ಸೇರಿದ್ದು ನಂತರ ಬೇರ್ಪಟ್ಟವು ಎಂಬುದು ಸ್ಪಷ್ಟವಾಗುತ್ತದೆ.[೩೧] ಇತ್ತೀಚೆಗೆ ಈ ಎರಡು ಉಪಪಂಗಡದವರು ವೈವಾಹಿಕ ಸಂಬಂಧಗಳನ್ನು ನಡೆಸುವ ಪ್ರಯತ್ನಗಳು ಕಂಡುಬರುತ್ತವೆ. ವಿದ್ಯಾವಂತರಲ್ಲಿ ಕೆಲವರು ಉಪಪಂಗಡಗಳ ಬಗ್ಗೆ ಉದಾರತೆಯನ್ನು ತೋರುತ್ತಿದ್ದಾರೆ. ಇನ್ನೂ ಕೆಲವರು, ಈ ಉಪಪಂಗಡಗಳಲ್ಲಿನ ಅಂತರದ ಈಗಿರುವ ಗಟ್ಟಿತನವನ್ನೇ ಮುಂದುವರೆಸಿಕೊಂಡು ಹೋಗುವ ಮನಸ್ಸು ಮಾಡುತ್ತಿದ್ದಾರೆ. ಬೇಡ ಜನಾಂಗದವರು ದಾವಣಗೆರೆ ಜಿಲ್ಲೆ, ಹರಿಹರ ಸಮೀಪ ರಾಜನಹಳ್ಳಿಯಲ್ಲಿರುವ ಮಹರ್ಷಿ ವಾಲ್ಮೀಕಿ ಗುರುಪೀಠದ ಮಹಾಸಂಸ್ಥಾನಧಿಪತಿಗಳು ಈ ಉಪಪಂಗಡಗಳಲ್ಲಿನ ಭಿನ್ನತೆಯನ್ನು ಹೋಗಲಾಡಿಸಿ ಇಡೀ ಬೇಡ ಜನಾಂಗವನ್ನು ವಾಲ್ಮೀಕಿ ನಾಯಕ ಜನಾಂಗವೆಂದು ಕರೆಯುವ ಮೂಲಕ ಈ ಪಂಗಡಗಳ ನಡುವೆ ಇರುವ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಸುತ್ತಿದ್ದಾರೆ.

## ೨.೩. ಬೇಡರು ನೆಲೆಸಿರುವ ಪ್ರಮುಖ ಎಡೆಗಳು

ಒಂದು ನಿರ್ದಿಷ್ಟ ನೆಲೆ ಮಾನವನ ನಾಗರಿಕತೆಯನ್ನು ಸೂಚಿಸುತ್ತದೆ. ಒಂದು ಸ್ಥಳ ಅವನ ಬದುಕನ್ನು ನಿರ್ಧರಿಸುವಲ್ಲಿ ಮುಖ್ಯಪಾತ್ರ ವಹಿಸುತ್ತದೆ. ಮಾನವನ ಅನಾಗರಿಕತೆಯನ್ನು ಹೋಗಲಾಡಿಸಿ ನಾಗರಿಕತೆಯನ್ನು ತರುವಲ್ಲಿ ಒಂದು ಸ್ಥಳವೇ ಕಾರಣವಾಯಿತು. ಅಲೆಮಾರಿಗಳಾಗಿದ್ದ ಕೆಲವು ಬುಡಕಟ್ಟು ಸಮುದಾಯಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುತ್ತಿದ್ದುದನ್ನು ನಿಲ್ಲಿಸಿ ಕಾಡಿನಲ್ಲೋ, ಕಾಡಿನಂಚಿನಲ್ಲೋ ನೆಲೆಸಿ ಜೀವನವನ್ನು ರೂಪಿಸಿಕೊಂಡರು. ಕಾಡು ಅವರ ಅವಿಭಾಜ್ಯ ಅಂಗವಾಗಿತ್ತು. ಕಾಡು, ಬೆಟ್ಟಗುಡ್ಡ, ಕಣಿವೆ ಪ್ರದೇಶದಲ್ಲಿ ಅನೇಕ ಬುಡಕಟ್ಟು ಜನಸಮುದಾಯಗಳು ಇಂದಿಗೂ ಜೀವನವನ್ನು ನಡೆಸಿಕೊಂಡು ಬಂದಿವೆ. ಕರ್ನಾಟಕದಲ್ಲಿ ಕಂಡುಬರುವ ಅನೇಕ ಬುಡಕಟ್ಟು ಜನಸಮುದಾಯಗಳಲ್ಲಿ ಬೇಡ ಜನಾಂಗವೂ ಒಂದೆಂಬುದನ್ನೂ ಈಗಾಗಲೇ ಗಮನಿಸಿದ್ದೇವೆ. ಕುರುಚಲ ಗಿಡಗಳಿಂದ ಕೂಡಿದ, ಕಲ್ಲುಗುಡ್ಡಗಳಿಂದ ಆವೃತವಾದ ಅರಣ್ಯತೀರದ ಪ್ರದೇಶದಲ್ಲಿ ಬೇಡರು ಕರ್ನಾಟಕದಲ್ಲಿ ಈ ಹಿಂದಿನಿಂದಲೂ ವಾಸಿಸುತ್ತಾ ಬಂದಿದ್ದಾರೆ. ಆದರೆ ನಾಗರಿಕತೆಯ ತೀವ್ರ ಬೆಳವಣಿಗೆಯಿಂದಾಗಿ ಈ ಅರಣ್ಯಪ್ರದೇಶ ಬಹಳಷ್ಟು ಬದಲಾಗಿದೆ. ಹಿಂದೆ ಅಧಿಕಾರಕ್ಕೆ ಬಂದ ಪಾಳೆಯಗಾರರ ನೆಲೆಗಳು ಇಂತಹ ಅರಣ್ಯಪ್ರದೇಶಗಳಿಂದಲೇ ರೂಪಿತವಾಗಿದ್ದವು. ಪಾಳೆಯಗಾರರು ದಖನ್‌ಪ್ರಸ್ಥ ಭೂಮಿಯಾದ್ಯಂತ ಹರಡಿರುವ ಬೆಟ್ಟಗುಡ್ಡಗಳ ಮೇಲೆ ಕಟ್ಟಿದ ದುರ್ಗಗಳ ಭವನಗಳಲ್ಲಿ ವಾಸಮಾಡುತ್ತಿದ್ದರೆಂಬುದು ತಿಳಿದುಬರುತ್ತದೆ.[೩೨]

ಪುರಾಣಗಳು ತಿಳಿಸುವಂತೆ, ದ್ವಾಪರಯುಗದಿಂದಲೂ ದಕ್ಷಿಣದ ಪೈನಗಂಗ ತೀರಪ್ರದೇಶದಿಂದ ರತ್ನಗಿರಿಯವರೆಗಿನ ಪ್ರದೇಶ ಬೇಡರ ರಾಜ್ಯವಾಗಿತ್ತು. ಕಲಿಯುಗ ಪ್ರಾರಂಭದಲ್ಲಿ ದಕ್ಷಿಣ ದೇಶದಲ್ಲಿ ಬೇಡರ ವಿನಃ ಬೇರೆ ಯಾವ ಜನಾಂಗವೂ ಇರಲಿಲ್ಲ. ವೇದಗಳು ಹಾಗೂ ಮಹಾಕಾವ್ಯಗಳು ಸಹಾ ಬೇಡರ ನೆಲೆ, ರಾಜ್ಯಗಳ ಕುರಿತು ಮಾಹಿತಿಯನ್ನು ನೀಡುತ್ತವೆ. ಬೇಡರು ತಪತೀ ನದಿಗಳ ಪ್ರದೇಶದಿಂದ ಹಿಡಿದು ವಿಂದ್ಯಾಪರ್ವತದೆಲ್ಲೆಲ್ಲ ಹೆಚ್ಚಾಗಿದ್ದು ತದನಂತರ ಬಳ್ಳಾರಿ, ಚಿತ್ರದುರ್ಗ, ಗುಂಟೂರು, ಕಡಪ, ಕರ್ನೂಲು, ಅನಂತಪುರ ಜಿಲ್ಲೆಗಳಲ್ಲಿ ಹೆಚ್ಚಾಗಿ ವಾಸಿಸತೊಡಗಿದ್ದರು. ಆರ್ಯ ಸಂಸ್ಕೃತಿಯ ವಿಸ್ತರಣೆಯಿಂದಾಗಿ ದಕ್ಷಿಣ ಭಾರತದ ಕಡೆಗೆ ಬಂದು ವಿಂಧ್ಯಪರ್ವತ ಪ್ರದೇಶದಲ್ಲಿ ನೆಲೆಯೂರಿದರು ಎಂಬ ಉಲ್ಲೇಖವು ಋಗ್ವೇದದ ಕಡೆಯ ಶ್ಲೋಕಗಳಲ್ಲಿ ಇದೆ. ಭಾರತದ ಅತ್ಯಂತ ಪ್ರಾಚೀನ ಪ್ರದೇಶವಾಗಿದ್ದ ವಿಂಧ್ಯ ಪರ್ವತ ಹಾಗೂ ಕನ್ಯಾಕುಮಾರಿಗಳ ನಡುವಿನ ದೇಶದಲ್ಲಿ ಈ ಜನ ವಾಸಿಸುತ್ತಿದ್ದರು. ವಿಂಧ್ಯ ಪರ್ವತ ಪ್ರದೇಶ ಈ ಹಿನ್ನೆಲೆಯಲ್ಲಿ ಅವರ ಮೂಲ ಸ್ಥಳವಾಗಿರಬಹುದು. ಆದರೆ ಋಗ್ವೇದದಲ್ಲಿನ ಉಲ್ಲೇಖವನ್ನು ನೋಡಿದಾಗ ಸಿಂಧೂ ತೀರಪ್ರದೇಶವೇ ಬೇಡರ ನೆಲೆಯಾಗಿರಬಹುದೆಂದು ತಿಳಿದುಬರುತ್ತದೆ.

ಕರ್ನಾಟಕದಲ್ಲಿ ನೆಲಸಿರುವ ಕೆಲವು ಬೇಡರು ತಾವು ಶ್ರೀಶೈಲ ಪ್ರದೇಶದಿಂದ ಬಂದವರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಹೀಗೆ ಹೇಳಿಕೊಳ್ಳುವ ಅನೇಕ ಕುಟುಂಬಗಳನ್ನು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕಾಣಬಹುದು. ಪಶುಪಾಲನೆ ಕೈಗೊಂಡು ಜೀವನ ನಡೆಸುತ್ತಿರುವಾಗ ಒಮ್ಮೆ ಶ್ರೀಶೈಲ ಪ್ರದೇಶದಲ್ಲಿ ಭೀಕರ ಬರಗಾಲ ಕಾಣಿಸಿಕೊಂಡಿತು. ಆಗ ತಮ್ಮ ರಾಸುಗಳೊಡನೆ ಕರ್ನಾಟಕದ ಕಡೆ ವಲಸೆ ಬಂದರು ಎಂದು ಹೇಳಲಾಗುವುದು. ನಾಯಕನಹಟ್ಟಿ ಪಾಳೆಯಗಾರರ ಮೂಲಪುರುಷ ಕಾಟೇಮಲ್ಲನಾಯಕನು ಶ್ರೀಶೈಲ ಪ್ರದೇಶದಿಂದಲೇ ಬಂದವನಾಗಿದ್ದಾನೆ. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಬೇಡರು ನೆಲೆಸಿರುವುದನ್ನು ಕಾಣಬಹುದು. ಚಿತ್ರದುರ್ಗ, ಬಳ್ಳಾರಿ, ರಾಯಚೂರು, ಕೊಪ್ಪಳ, ಗುಲ್ಬರ್ಗಾ, ತುಮಕೂರು, ದಾವಣಗೆರೆ, ಕೋಲಾರ ಮುಂತಾದ ಜಿಲ್ಲೆಗಳಲ್ಲಿ ಅತ್ಯಧಿಕವಾಗಿ ಬೇಡರು ನೆಲೆಸಿದ್ದಾರೆ. ಭಾರತದ ಜನಗಣತಿ ವರದಿಗಳು ಇದನ್ನು ಪುಷ್ಟೀಕರಿಸುತ್ತವೆ. ಕ್ರಿ.ಶ. ೧೯೧೧ರಲ್ಲಿ ರಾಯಚೂರು (ಈಗಿನ ಕೊಪ್ಪಳ ಜಿಲ್ಲೆ ಸೇರಿ) ಜಿಲ್ಲೆಯಲ್ಲಿ ಒಟ್ಟು ೧,೪೦,೮೫೨ ಬೇಡರು ನೆಲೆಸಿದ್ದರು.[೩೩] ೧೯೨೧ರ ಮೈಸೂರು ಜನಗಣತಿ ವರದಿ ಪ್ರಕಾರ ಚಿತ್ರದುರ್ಗ ಜಿಲ್ಲೆಯಲ್ಲಿ ಅತ್ಯಧಿಕ ಅಂದರೆ ೬೮,೧೭೪ ಬೇಡರು ನೆಲೆಸಿದುದು ಕಂಡುಬರುತ್ತದೆ.[೩೪] ೧೯೭೧ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ನಾಯಕ ಹಾಗೂ ನಾಯಕ ಪರ್ಯಾಯ ನಾಮದವರ ಜನಸಂಖ್ಯೆ ೧೨,೬೩,೫೫೦. ೧೯೭೨ರ ಎಲ್.ಜಿ. ಹಾವನೂರು ವರದಿ ಪ್ರಕಾರ ರಾಜ್ಯದ ಬೇಡರ ಜನಸಂಖ್ಯೆ ಒಟ್ಟು ೧೫,೧೯,೬೨೧. ಆಗ ಅತೀ ಹೆಚ್ಚು ಬೇಡ ಜನಸಂಖ್ಯೆ ಹೊಂದಿದ್ದ ಜಿಲ್ಲೆಗಳು ಇಂತಿವೆ. ಚಿತ್ರದುರ್ಗ ೨,೩೩,೪೫೯, ರಾಯಚೂರು ೨,೨೩,೬೮೩ ಮತ್ತು ಬಳ್ಳಾರಿ

೨,೧೪,೩೮೨.[೩೫] ೧೯೮೮ರಲ್ಲಿ ಕರ್ನಾಟಕದ ಒಟ್ಟು ಜನಸಂಖ್ಯೆ ೪,೪೦,೮೮,೫೯೭. ಈ ಜನಸಂಖ್ಯೆಯಲ್ಲಿ ಬೇಡರ ಒಟ್ಟು ಸಂಖ್ಯೆ ೧೦,೯೯,೫೮೬ರಷ್ಟು ಇತ್ತು. ೧೯೯೧ರ ಜನಗಣತಿ ಪ್ರಕಾರ ರಾಜ್ಯದ ಒಟ್ಟು ಬೇಡ ಜನಾಂಗದವರ ಸಂಖ್ಯೆ ೧೯,೧೫,೬೯೧ ಎಂದು ನಮೂದಾಗಿದೆ. ಈ ಪ್ರಕಾರ ಅತ್ಯಧಿಕವಾಗಿ ಚಿತ್ರದುರ್ಗ ಜಿಲ್ಲೆಯಲ್ಲಿ ೦೨,೨೨,೭೬೩, ಬಳ್ಳಾರಿ ಜಿಲ್ಲೆಯಲ್ಲಿ ೦೧,೪೭,೮೬೯, ರಾಯಚೂರು ಜಿಲ್ಲೆಯಲ್ಲಿ ೦೧,೨೦,೪೪೪, ಕೊಪ್ಪಳ ಜಿಲ್ಲೆಯಲ್ಲಿ ೫೯,೮೨೮ರಷ್ಟು ಬೇಡರು ನೆಲೆಸಿರುವುದನ್ನು ನೋಡಬಹುದು. ಆದರೆ ಚಿತ್ರದುರ್ಗ ಜಿಲ್ಲೆಯನ್ನು ಹೊರತುಪಡಿಸಿ ಉಳಿದ ಜಿಲ್ಲೆಗಳಲ್ಲಿ ಆ ಕಾಲಕ್ಕೆ ಬೇಡರನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಿರಲಿಲ್ಲ. ಹಾಗಾಗಿ ಅವರ ಜನಸಂಖ್ಯೆಯಲ್ಲಿ ಸ್ವಲ್ಪ ವ್ಯತ್ಯಾಸವನ್ನು ಕಾಣಬಹುದು. ೧೯೯೧ರ ಜನಗಣತಿಯ ಪ್ರಕಾರ ನಮೂದಾದ ಬೇಡರ ಜನಸಂಖ್ಯೆಯನ್ನು ಬೇಡನಾಯಕರು ಒಪ್ಪದೇ ಸುಮಾರು ೬೫ ಲಕ್ಷದಷ್ಟು ಬೇಡರು ಕರ್ನಾಟಕದಲ್ಲಿ ನೆಲೆಸಿದ್ದಾರೆ ಎಂದು ವಾದಿಸುತ್ತಾರೆ. ಈ ವಾದವನ್ನು ಒಪ್ಪಲು ಅಡ್ಡಿಯಿಲ್ಲ. ಏಕೆಂದರೆ ೧೯೯೩ರವರೆಗೆ ಕೆಲವು ಜಿಲ್ಲೆಗಳಲ್ಲಿ ಮಾತ್ರ ನಾಯಕರನ್ನು ಪರಿಶಿಷ್ಟ ಪಂಡಗಕ್ಕೆ ಸೇರಿಸಿದ್ದರು. ಉಳಿದ ಜಿಲ್ಲೆಗಳಲ್ಲಿರುವ ಬೇಡರನ್ನು ಹಿಂದುಳಿದ ವರ್ಗಗಳಲ್ಲಿ ಸೇರಿಸಿದ್ದರು. ಹಾಗಾಗಿ ಬೇಡರನ್ನು ಪರಿಶಿಷ್ಟ ಪಂಗಡ ಎಂದು ಗುರುತಿಸುವಾಗ ಕೆಲವು ಜಿಲ್ಲೆಗಳ ಬೇಡರು ಈ ಸೌಲಭ್ಯದಿಂದ ಹೊರತಾಗಿದ್ದರು. ಆಗ ಅವರ ಜನಸಂಖ್ಯೆಯಲ್ಲೂ ವ್ಯತ್ಯಾಸವಾಯಿತು.

ಭಾರತದ ವಿವಿಧ ಭಾಗಗಳಲ್ಲಿ ಬೇಡರು ಅನೇಕ ಹೆಸರುಗಳಿಂದ ಕರೆಸಿಕೊಂಡು ನೆಲೆಸಿದ್ದಾರೆ. ಅವರನ್ನು ಆ ಪ್ರದೇಶದಲ್ಲಿ ಬುಡಕಟ್ಟು ಜನರೆಂದೇ ಗುರುತಿಸುತ್ತಾರೆ. ದಕ್ಷಿಣ ಭಾರತದ ಮಧ್ಯಯುಗೀನ ಕಾಲದಲ್ಲಿ ಪ್ರಸಿದ್ಧಿ ಪಡೆದ ವಿಜಯನಗರ ಸಾಮ್ರಾಜ್ಯಕ್ಕಿಂತ ಮುನ್ನ ತುಂಗಭದ್ರ ನದಿತೀರ ಪ್ರದೇಶದಲ್ಲಿದ್ದ ಕುಮ್ಮಟದುರ್ಗ ಅರಸರ ಕಾಲದಲ್ಲಿ ಬೇಡರು ಒಂದು ನಿಶ್ಚಿತ ನಿರ್ದಿಷ್ಟ ನೆಲೆಯನ್ನು ಕಂಡುಕೊಂಡರು. ಅದಕ್ಕಾಗಿ ದೊರೆಗಳು ಅವರನ್ನು ನೆಲೆಸುವಂತೆ ಮಾಡಲು ಅನೇಕ ಅಗತ್ಯಕ್ರಮಗಳನ್ನು ಕೈಗೊಂಡರು. ಆಗ ಬೇಡರು ಕುಮ್ಮಟದುರ್ಗದ ಪ್ರದೇಶದ ಸುತ್ತಮುತ್ತ ಬಂದು ನೆಲೆಸಿದರು. ವಿಜಯನಗರ ಕಾಲದಲ್ಲಿ ದೊರೆತ ರಾಜಾಶ್ರಯದಿಂದ ಬಲಿಷ್ಟರಾದ ಕೆಲವು ಬೇಡರು ಪಾಳೇಗಾರಿಕೆಯನ್ನು ಆರಂಭಿಸಿದರು. ಆನೆಗೊಂದಿಯೇ ಬೇಡ ಪಾಳೇಗಾರಿಕೆಯ ಮೊದಲ ಸ್ಥಳ. ನಂತರದಲ್ಲಿ ಕರ್ನಾಟಕ, ಆಂಧ್ರ, ತಮಿಳುನಾಡು ಭಾಗಗಳಲ್ಲಿ ಬೇಡರು ವಿಜಯನಗರ ಅರಸರ ಅಧೀನರಾಗಿ ಪಾಳೆಯಗಾರರಾಗಿ ಮಾಂಡಲಿಕರಾಗಿ ಸೇವೆಯನ್ನು ಸಲ್ಲಿಸಿದರು. ವಿಜಯನಗರೋತ್ತರ ಕಾಲದಲ್ಲಿ ಸುಮಾರು ಎಪ್ಪತ್ತೇಳು ಪಾಳೆಯಗಾರರು ಇದ್ದರೆಂದು ಹೇಳಲಾಗುವುದು. ಮದ್ರಾಸ್ ಕಂದಾಯ ಸಂಗ್ರಹಣ ಮುಖ್ಯಾಧಿಕಾರಿಯಾಗಿದ್ದ ಥಾಮಸ್ ಮನ್ರೋ ಒಟ್ಟು ಎಂಬತ್ತು ಮಂದಿ ಪಾಳೆಯಗಾರರ ಯಾದಿಯನ್ನು ಸಿದ್ಧಪಡಿಸಿದನು. ಚಿತ್ರದುರ್ಗ, ತುಮಕೂರು, ಚಿಕ್ಕಮಗಳೂರು, ಕೋಲಾರ, ದಾವಣಗೆರೆ, ಬಳ್ಳಾರಿ, ಕೊಪ್ಪಳ, ರಾಯಚೂರು, ಗುಲ್ಬರ್ಗಾ

ಜಿಲ್ಲೆಗಳಲ್ಲಿ ವಿಜಯನಗರೋತ್ತರದಲ್ಲಿ ಅನೇಕ ಪಾಳೆಯಗಾರರು ಸ್ವತಂತ್ರಗೊಂಡು ಅಧಿಕಾರ ನಡೆಸಿದರು. ಅನೇಕ ಪಾಳೆಯಗಾರರ ವಂಶಜರು ಆನೆಗುಂದಿಯೇ ತಮ್ಮ ಮೂಲ ಸ್ಥಳವೆಂದು ಹೇಳಿಕೊಳ್ಳುತ್ತಾರೆ. ಕರ್ನಾಟಕದ ವಿವಿಧ ಸ್ಥಳಗಳಲ್ಲಿ ಅಲ್ಲದೆ ವಿದೇಶದಲ್ಲೂ ಕೆಲವು ಪಾಳೆಯಗಾರರ ವಂಶಸ್ಥರು ನೆಲಸಿದ್ದಾರೆ.

ಕರ್ನಾಟಕದಲ್ಲಿ ಪೂರ್ವ ಕಾಲದಿಂದ ಕ್ಷಾತ್ರವೃತ್ತಿಯಿಂದ ಉಪಜೀವನ ಮಾಡುತ್ತಿದ್ದ ಬೇಡರು ವಿಶೇಷವಾಗಿ ಕರ್ನಾಟಕ ಮತ್ತು ಆಂಧ್ರದಲ್ಲಿರುವರು. ಕಲ್ಬುರ್ಗಿ, ಬಿಜಾಪುರ, ಬೆಳಗಾವಿ ಜಿಲ್ಲೆಗಳ ದಕ್ಷಿಣ ಭಾಗದ ಅಂದರೆ ಕೃಷ್ಣಾ ನದಿಯ ದಂಡೆಗುಂಟ ಹಿಡಿದು ರಾಯಚೂರು, ಬಳ್ಳಾರಿ, ಕರ್ನೂಲು, ಕಡಪ, ಅನಂತಪುರ, ಚಿತ್ರದುರ್ಗ, ಉತ್ತರ ಆರ್ಕಾಟ್ ಜಿಲ್ಲೆಗಳಲ್ಲಿ ವಾಸಿಸುತ್ತಿರುವರು.[೩೬] ಚಿನ್ನಹಗರಿ ನದಿಯ ಪರಿಸರದಲ್ಲಿ ಅಥವಾ ತುಂಗಭದ್ರ ಮತ್ತು ವೇದಾವತಿ ನದಿ ಮಧ್ಯಪ್ರದೇಶವನ್ನು ಬೇಡರ ನಾಡು ಎನ್ನಲಾಗುತ್ತದೆ.[೩೭]

ಬೇಡರು ಯಾವುದೇ ಸ್ಥಳಕ್ಕೆ ಹೋಗಿ ನೆಲೆಸಿದ್ದರೂ ವಿಜಯನಗರದೊಡನೆ ಮೊದಲಿದ್ದಂತಹ ಸಂಬಂಧವನ್ನೇ ಮುಂದುವರೆಸಿಕೊಂಡು ಬಂದಿದ್ದಾರೆ. ಆಗಾಗ ಅಲ್ಲಿಗೆ (ಹಂಪಿ) ತೆರಳಿ ತಮ್ಮ ಪೆಟ್ಟಿಗೆ ದೇವರುಗಳನ್ನು ಪೂಜಿಸಿಕೊಂಡು, ಅಲ್ಲಿನ ರಾಜವಂಶಸ್ಥರಿಗೆ ಕಾಣಿಕೆಯನ್ನು ನೀಡಿಬರುವ ಸಂಪ್ರದಾಯವಿದೆ. ಹರತಿ ದೊರೆ ತಿಪ್ಪರಾಜನ ತಂದೆಯೋ, ತಾತನೋ ಆನೆಗೊಂದಿ ಮತ್ತು ವಿಜಯನಗರ ಕಡೆಯಿಂದ ವಲಸೆ ಬಂದವರು ಎನ್ನಲಾಗಿದೆ. ಕಾಟೇಮಲ್ಲನಾಯಕನು ಸಹ ಮೊದಲು ಆನೆಗೊಂದಿಗೆ ಬಂದು ನಂತರ ಹಟ್ಟಿ ಮನೆತನ ಸ್ಥಾಪಿಸಿದನು ಎನ್ನಲಾಗುತ್ತದೆ.[೩೮] ತರೀಕೆರೆ ಪಾಳೆಯಗಾರ ವಂಶ ವೃತ್ತಾಂತದ ಪ್ರಕಾರ ಧೂಮರಾಜ ಎಂಬುವನು ವಿಜಯನಗರದಿಂದ ಬಂದವನು.[೩೯] ಚಿತ್ರದುರ್ಗದ ಮೂಲಪುರುಷ ಚಿತ್ರನಾಯಕ ಆನೆಗೊಂದಿಯ ಕಡೆಯಿಂದ ಬಂದು ಉಚ್ಚಂಗಿದುರ್ಗ, ಬಿಳಿಚೋಡು, ಕೋಗುಂಡೆ, ಹೆಬ್ಬಾಳು ಮಾರ್ಗವಾಗಿ ನೀರ್ಥಡಿಗೆ ಬಂದು ಪಾಳೆಯ ಹಾಕಿದನಂತೆ. ಆನೆಗೊಂದಿ ಮತ್ತು ಬೇಡರ ಬಗ್ಗೆ ಜಿ. ವರದರಾಜರಾವ್ ಅವರು, ವಿಜಯನಗರವು ಆನೆಗೊಂದಿ ಬೇಡರ ಪ್ರಮುಖ ಕೇಂದ್ರವಾಗಿತ್ತು. ಈ ಸ್ಥಳವು ಕರ್ನಾಟಕದಲ್ಲಿ ವಿಜಯನಗರೋತ್ತರ ಕಾಲದಲ್ಲಿ ತಲೆ ಎತ್ತಿದ ಅನೇಕ ಬೇಡ ಪಾಳೆಯಪಟ್ಟುಗಳ ಕೇಂದ್ರಸ್ಥಾನವೂ ಆಗಿತ್ತು. ಒಂದು ಕಾಲದಲ್ಲಿ ಬೇಡರ ಮುಖ್ಯ ನೆಲೆಯಾಗಿದ್ದ ಈ ಆನೆಗೊಂದಿಯಿಂದ ಅನೇಕ ಶಾಖೆಗಳವರು ಬೇರೆ ಬೇರೆ ಕಡೆಗೆ ಹೋಗಿ ನೆಲೆಸಿದುದನ್ನು ಕಂಪಳ ಎಂದು ಕರೆಯುವುದುಂಟು ಎಂಬ ಸಂಗತಿಯನ್ನು ತಿಳಿಸಿದ್ದಾರೆ. ಹಲಗಲಿಯ ಬೇಡರು ಶೂರರು, ಕಲಿಗಳು ಆಗಿದ್ದುದನ್ನು ಸ್ವಾತಂತ್ರ್ಯ ಹೋರಾಟವೇ ನಿರೂಪಿಸುತ್ತದೆ. ಅವರದಂದು ಸೈನಿಕ ಸೇವಾವರ್ಗವಾಗಿತ್ತು. ಅವರು ತರೀಕೆರೆ, ಚನ್ನಗಿರಿ, ಸುರಪುರ, ಚಿತ್ರದುರ್ಗ, ಹರಪನಹಳ್ಳಿ ಮುಂತಾದ ಸ್ಥಳಗಳಲ್ಲಿ ಹೋಗಿ ಸೈನಿಕರಾಗಿ ಸೇವೆ ಸಲ್ಲಿಸುತ್ತಾ ಅವರ ರಕ್ಷಕರಾಗಿದ್ದರು. ಪಾಳೆಯಗಾರರ ಆಶ್ರಯದಲ್ಲಿ ನೆಮ್ಮದಿಯ ಬದುಕನ್ನು ಕಳೆಯುತ್ತಿದ್ದರು.[೪೦]

ಈ ಸಂಸ್ಥಾನಗಳು ಒಂದೊಂದಾಗಿ ಅಧಿಕಾರವನ್ನು ಕಳೆದುಕೊಳ್ಳುತ್ತಾ ಬಂದಹಾಗೆ ಅವರ ಜೀವನವೂ ಅತಂತ್ರವಾಯಿತು. ಯುದ್ಧಗಳು, ಟಿಪ್ಪುಸುಲ್ತಾನ ಮತ್ತು ಅವನ ತಂದೆ ಹೈದರನ ಮತಾಂತರ ಹಾಗೂ ದಾಳಿಗಳಿಗೆ ಅಂಜಿದ ಕೆಲ ಬೇಡರು ಬೇರೆ ಬೇರೆ ಸ್ಥಳಗಳಿಗೆ ಹೋಗಿ ನೆಲೆಸಿರುವರು. ಜೀವನ ನಿರ್ವಹಣೆಗಾಗಿಯೂ ಕೆಲ ಕುಟುಂಬಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಿರುವುದುಂಟು.

**ಟಿಪ್ಪಣಿಗಳು**

೧. ಎಲ್.ಕೆ.ಎ.ಅಯ್ಯರ್; ದಿ ಮೈಸೂರ್ ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್, ೧೯೮೮, ಸಂ.೨, ಪು.೧೯೭

೨. ರೆವಿ.ಎಸ್.ಕಿಟ್ಟಲ್; ಕನ್ನಡ-ಇಂಗ್ಲೀಷ್ ಡಿಕ್ಷನರಿ, ೧೯೯೧ ಪು.೧೧೪೮

೩. ರಂಗರಾಜ ವನದುರ್ಗ; *ಬೇಡಜನಾಂಗದ ಉಗಮ ಹಾಗೂ ವಿಕಾಸ*(ಸಂ.ಹರ್ತಿಕೋಟೆ ವೀರೇಂದ್ರಸಿಂಹ), ೧೯೯೮, ವಾಲ್ಮೀಕಿ ಕಿರಣ, ಪು.೫೯

೪. ಡಾ.ಎಸ್.ಶ್ರೀಕಂಠಶಾಸ್ತ್ರೀ; ಭಾರತೀಯ ಸಂಸ್ಕೃತಿ, ೧೯೭೫, ಪು.೨೧

೫. ಡಾ.ಶಿವಾನಂದ ಕೆಳಗಿನಮನಿ; *ದಲಿತರ ಇತಿಹಾಸ ಮತ್ತು ಸಾಂಸ್ಕೃತಿಕ ಹಿರಿಮೆ,* (ಸಂ.ಹರ್ತಿಕೋಟೆ ವೀರೇಂದ್ರ ಸಿಂಹ ಮತ್ತು) ಘಟ್ಟಿಹೊಸಹಳ್ಳಿ ಗಟ್ಟಿಗ, ೨೦೦೨, ಪು.೧೨೧

೬. ಭಾರತೀಯ ಸಂಸ್ಕೃತಿ, ಪೂರ್ವೋಕ್ತ, ಪು.೬೯

೭. ಆರ್.ರಾಜಣ್ಣ; ನಾಯಕ ಜನಾಂಗದ ಇತಿಹಾಸ, ೧೯೮೨, ಪು.೧೦, ೧೨.

೮. ಎಚ್.ವಿ.ವೀರನಾಯಕ; ಕ್ಷಾತ್ರಾಂಶ ಪ್ರಭೋಧ, ೧೯೮೭ ಪು-೩,೫.

೯. ದೇವೇಂದ್ರ ಮಾದನವರ; ರಾಮ-ಸೀತೆ : ಹೊಸ ಶೋಧ; ಘಟ್ಟಿಹೊಸಹಳ್ಳಿ ಗಟ್ಟಿಗ, ಪೂರ್ವೋಕ್ತ, ಪು.೭೨.

೧೦. ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ); ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ೧೯೯೫, ಪು.೪೫೬.

೧೧. ಹರ್ತಿಕೋಟೆ ವೀರೇಂದ್ರಸಿಂಹ; ನಾಯಕ ಜನಾಂಗದ ಪರಂಪರೆ : ವಾಲ್ಮೀಕಿ ಕಿರಣ, ಪು.೨೮.

೧೨. ಪಿ.ಅಬ್ದುಲ್ ಸತ್ತಾರ್; ತರೀಕೆರೆಯ ಪಾಳೆಯಗಾರರು, ೧೯೯೭, ಪು.೧೧, ೧೨.

೧೩. ಡಾ.ಎಂ.ಚಿದಾನಂದಮೂರ್ತಿ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೯, ಪು.೨೯೫.

೧೪. ಡಾ.ರಂ.ಶ್ರೀ.ಮುಗಳಿ; ಕರ್ನಾಟಕದ ಸಾಂಸ್ಕೃತಿಕ ಪರಂಪರೆ, ೧೯೭೬, ಪು.೩೦.

೧೫. ಡಾ.ಶೇಷಶಾಸ್ತ್ರೀ; ಕರ್ನಾಟಕದ ವೀರಗಲ್ಲುಗಳು, ೧೯೮೨, ಪು.೨೪.

೧೬. ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್, ಪು.೧೯೭.

೧೭. ನೇಗಿನಹಾಳ ಎಂ.ಬಿ., ಕನ್ನಡ ಸಾಹಿತ್ಯ ಕೃತಿಗಳಲ್ಲಿ ಬೇಡ ಜನಾಂಗ, ವಾಲ್ಮೀಕಿ ಜ್ಯೋತಿ, ಪು.೨೫.

೧೮. ಜಿ.ಜಿ.ಗೋಸ್ವಾಮಿ, ಎಸ್.ಜಿ.ಮೊಬ(ಅನು) ಮಹೇಶ ತಿಪ್ಪಶೆಟ್ಟಿ; ಮೈಸೂರು ಚಾಮುಂಡೇಶ್ವರಿ ದೇವಸ್ಥಾನ ಒಂದು ಸಾಮಾಜಿಕ ಅಧ್ಯಯನ, ೨೦೦೧, ಪು.೪೬.

೧೯. ವಾಲ್ಮೀಕಿ ಸಂದೇಶ, ಪು.೨೦, ಮಾರ್ಚ್ ೧೯೮೪.

೨೦. ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್, ಪೂರ್ವೋಕ್ತ, ಪು.೨೦೫.

೨೧. ಥರ್ಸ್‌ಟನ್ ಎಡ್ಗರ್ ಮತ್ತು ರಂಗಚಾರಿ ಕೆ.; ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸೌಥರನ್ ಇಂಡಿಯಾ, ೧೯೮೭, ಸಂ.I, ಪು.೧೮೫.

೨೨. ಹಸನ್, ಸೈಯದ್ ಸಿರಾಜುಲ್; ದಿ ಕ್ಯಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಆಫ್ ಎಚ್.ಇ.ಎಚ್, ದಿ ನಿಜಾಮನ್, ಡೊಮಿನಿಯನ್ಸ್, ೧೯೮೯, ಪು.೩೭.

೨೩. ನೇಗಿನಹಾಳ; ವಾಲ್ಮೀಕಿ ಕಿರಣ, ಪೂರ್ವೋಕ್ತ, ಪು.೪೭.

೨೪. ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್ ಪೂರ್ವೋಕ್ತ, ಪು.೨೦೩

೨೫. ಮೈತ್ರಿ ಕೆ.ಎಂ.; ಬುಡಕಟ್ಟು ಅಧ್ಯಯನ ನೆಲೆಯಲ್ಲಿ ಬೇಡ ನಾಯಕರು, ಘಟ್ಟಿಹೊಸಹಳ್ಳಿ ಗಟ್ಟಿಗ, ಪು.೧೦

೨೬. ಎಂ.ಜಿ.ಈಶ್ವರಪ್ಪ; ೧೯೮೨, ಮ್ಯಾಸಬೇಡರು, ಪು.೮

೨೭. ಅದೇ, ಪು.೭

೨೮. ಮಿರಾಸಾಬಿಹಳ್ಳಿ ಶಿವಣ್ಣ; ಚಿತ್ರದುರ್ಗ ಜಿಲ್ಲೆಯ ಜಾನಪದ,(ಸಂ.ವೀರಣ್ಣದಂಡೆ), ಜಾನಪದ, ೧೯೯೨ ಪು.೫೭

೨೯. ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಸೌಥರನ್ ಇಂಡಿಯಾ, ಪು.೧೮೭

೩೦. ಕ್ಯಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಸೌಥರನ್ ಇಂಡಿಯಾ, ಪು.೩೫

೩೧. ದಿ ಕ್ಯಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಆಫ್ ಎಚ್.ಇ.ಎಚ್., ಪು.೩೫

೩೨. ಪ್ರೊ.ಬಿ.ಷೇಕ್ ಅಲಿ(ಸಂ); ಕರ್ನಾಟಕ ಚರಿತ್ರೆ, ಸಂಪುಟ ೬, ೧೯೯೭, ಪು.೨೯೭

೩೩. ಕ್ಯಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಆಫ್ ಎಚ್.ಇ.ಎಚ್., ಪು.೪೩

೩೪. ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್, ಪು.೨೦೨

೩೫. ಎಲ್.ಜಿ.ಹಾವನೂರು; ಹಿಂದುಳಿದ ವರ್ಗಗಳ ಆಯೋಗದ ವರದಿ, ಸಂಪುಟ.೨, ಪು.೨೦೨

೩೬. ಕಪಟರಾಳ ಕೃಷ್ಣರಾವ್; ಸುರಪುರ ಸಂಸ್ಥಾನ ಇತಿಹಾಸ, ೧೯೭೭, ಪು.೨೨೫

೩೭. ಕರ್ನಾಟಕ ಇತಿಹಾಸ ಅಕಾಡೆಮಿ; ಇತಿಹಾಸ ದರ್ಶನ, ಸಂಪುಟ-೧೨

೩೮. ಮೀರಾಸಾಬಿಹಳ್ಳಿ ಶಿವಣ್ಣ, *ನಾಯಕನಹಟ್ಟಿ ಪಾಳೆಯಗಾರರು*(ಸಂ.ವಸು.ಎಂ.ವಿ), ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ೨೦೦೧, ಪು.೭೬

೩೯. ತರೀಕೆರೆಯ ಪಾಳೆಯಗಾರರು ಪೂರ್ವೋಕ್ತ, ಪು.೨

೪೦. ಶ್ರೀನಿವಾಸ ಕೊರಟಿ; ರಾಜಾವೆಂಕಟಪ್ಪನಾಯಕ, ೧೯೭೨

# ಅಧ್ಯಾಯ ೩

# ವಿಜಯನಗರಪೂರ್ವ ಮತ್ತು ವಿಜಯನಗರಕಾಲೀನ ಬೇಡ ಜನಾಂಗ

ಮೌರ್ಯರ ಕಾಲದಿಂದಲೂ ಬೇಡರು ಅಧಿಕಾರಸ್ಥರಾಗಿ ಅಲ್ಲದಿದ್ದರೂ ತಮ್ಮ ಗುಂಪು ಬಲ, ವೃತ್ತಿ, ಸ್ವಭಾವ ಇತ್ಯಾದಿಗಳಿಂದ ಚರಿತ್ರೆಯಲ್ಲಿ ದಾಖಲಾಗಿದ್ದಾರೆ. ಅಶೋಕನ ಶಾಸನಗಳು ಕರ್ನಾಟಕದಲ್ಲಿ ಗುಲಬರ್ಗಾ, ರಾಯಚೂರು, ಬಳ್ಳಾರಿ, ಚಿತ್ರದುರ್ಗ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ದೊರೆತಿವೆ. ಅಶೋಕನ ೧೩ನೇ ಬಂಡೆ ಶಾಸನದ ಪ್ರತಿಗಳಲ್ಲಿ ಬೇಡರನ್ನು ಪುರಿಂದ, ಪುಳಿಂದ ಎಂದು ಉಲ್ಲೇಖಿಸಲಾಗಿದೆ. ಇವನ ಕಾಲದಲ್ಲಿ ಮಧ್ಯಪ್ರಾಂತ್ಯದಲ್ಲಿ ಅಟವೀ ರಾಜ್ಯಗಳೆಂಬುವು ಇದ್ದವೆಂದು ತಿಳಿದುಬರುತ್ತದೆ.[೧] ಕೌಟಿಲ್ಯನ ಅರ್ಥಶಾಸ್ತ್ರವು ಹೇಳುವ 'ಅಟವಿಬಲ' ಈ ರಾಜ್ಯಗಳಿಗೆ ಸಂಬಂಧಪಟ್ಟಿದೆ. ಇವರು ಲೂಟಿ ಹೊಡೆಯಲು ಯಾವಾಗಲೂ ಕಾತರರಾಗಿರುತ್ತಾರೆಂದು ಕೌಟಿಲ್ಯನು ಹೇಳುತ್ತಾನೆ.[೨] ಅನಾಮಧೇಯ ಕೃತಿಯಾದ 'ಪೆರಿಪ್ಲಸ್ ಆಪ್ ಎರಿತ್ರಿಯನ್‌ಸೀ'ಯಲ್ಲಿ ಒರಿಸ್ಸಾ ಉತ್ತರ ಭಾಗದಲ್ಲಿ ಅನಾಗರಿಕ ಜನಾಂಗಗಳಿರುವ ನಾಡುಗಳು ಸಿಕ್ಕುತ್ತವೆ. ಈ ಅನಾಗರಿಕರಲ್ಲಿ ಕಿರ್‍ಹಾಡೀ(ಕಿರಾತ) ಎಂಬುವರು ಮುಖ್ಯವಾದ ಜನ. ಇವರ ಮೂಗು ಚಪ್ಪಟೆ ಬಹುಕ್ರೂರಿಗಳು[೩] ಎಂಬ ಮಾಹಿತಿಯನ್ನು ನೀಡುತ್ತದೆ. ಕಾಡು ಪ್ರದೇಶ ದಲ್ಲಿ ತಮ್ಮ ಗುಂಪು ಕಟ್ಟಿಕೊಂಡು ಬದುಕಿಗಾಗಿ ಇತರ ಪ್ರದೇಶಗಳ ಮೇಲೆ ದಾಳಿ ಮಾಡುತ್ತಿದ್ದ ಬೇಡರು ನಂತರ ರಾಜ್ಯ ಕಟ್ಟುವ ಯೋಚನೆ ಮಾಡಿದರೆಂದು ತೋರುತ್ತದೆ. ಏಕೆಂದರೆ ಅಷ್ಟೊತ್ತಿಗೆ ಬೇಡ ರಾಜ್ಯಗಳಿದ್ದವು. ಕೇರಳದ ಚೊದರು ಮೂಲತಃ ಬೇಡ ಜನಾಂಗಕ್ಕೆ ಸೇರಿದವರು ಎಂದು ಡಾ.ಸುಬ್ರಮಣಿಯನ್ ಅಭಿಪ್ರಾಯಪಟ್ಟಿರುತ್ತಾರೆ. ಕುರುಬರು, ಇಂಡಿಡ್ ಜನರು, ಮೆಲಾನಿಡ್ ಜನರು ಮಲೇರು, ಇರುಳಿಗ, ಸೋಲಿಗ ಮುಂತಾದ ಕಾಡುವಾಸಿಗಳ ಜೊತೆಯಲ್ಲಿ ಬೇಡರೂ ಗುರುತಿಸಿಕೊಂಡಿರುವುದರಿಂದ ಚಾರಿತ್ರಿಕ ಕಾಲದಲ್ಲಿ ಕರ್ನಾಟಕ ಚರಿತ್ರೆಗೆ ಈ ವರ್ಗಗಳೇ ಕಾರಣವೆಂದು ಐಕ್‌ಸ್ಟೆಡ್ ಅಭಿಪ್ರಾಯಪಟ್ಟಿರುವುದು[೪] ಬೇಡರ ರಾಜ್ಯ ಕಟ್ಟುವ ಯೋಚನೆಯನ್ನು ಪುಷ್ಟೀಕರಿಸುತ್ತದೆ.

ಶಾತವಾಹನರ ಕಾಲಕ್ಕೆ ಬೇಡರು ಅಧಿಕಾರವರ್ಗವಾಗಿರುವುದು ಕಂಡುಬರುತ್ತದೆ. ಇವರ ಕಾಲದಲ್ಲಿ ಬೋಜ/ಬೋಜಕ/ಬೋಜಿ ಎಂಬ ಉನ್ನತ ಹುದ್ದೆಗಳಿದ್ದವು. ಆ ಗೌರವಾನ್ವಿತವಾದ ಅಧಿಕಾರ ಸೂಚಕ ಪದಗಳೇ ತದ್ಭವವಾಗಿ ಬೇಡರ ಪಾಲಿಗೆ ಬೋವ/ಬೋಯ/ಬೋಯಿ ಎಂಬ ರೂಪಗಳಲ್ಲಿ ಬಳಕೆಯಲ್ಲಿ ಬಂದವು ಎಂಬ ಅಭಿಪ್ರಾಯವಿದೆ. ಗುಪ್ತ ದೊರೆಗಳ ಕಾಲಕ್ಕೆ ದಕ್ಷಿಣದಲ್ಲಿ ಬೇಡರ ರಾಜ್ಯ ಹಾಗೂ ರಾಜರುಗಳಿದ್ದ ಬಗ್ಗೆ ತಿಳಿದುಬರುವುದು. ಸಮುದ್ರಗುಪ್ತನು ದಕ್ಷಿಣದಲ್ಲಿ ಗೆದ್ದ ರಾಜರಲ್ಲಿ ಮಹಾಕಾಂತಾರದ

ವ್ಯಾಘ್ರರಾಜನು ಒಬ್ಬನಾಗಿದ್ದನು. ಇವನು ಶಬರ ನಾಯಕ.[೫] ರಾಜರುಗಳ ಕಾಲದಲ್ಲಿ ತಳವಾರ ಎಂಬುದು ಒಂದು ಗೌರವಾನ್ವಿತ ಹುದ್ದೆಯಾಗಿತ್ತು. ಬೇಡರು ಕ್ರಿ.ಪೂ.೩ನೇ ಶತಮಾನದಿಂದಲೂ ತಳವಾರು ಹುದ್ದೆಯನ್ನು ಅನುಭವಿಸಿಕೊಂಡು ಬಂದಿದ್ದಾರೆ. ಜನಸಂಖ್ಯೆಗನುಗುಣವಾಗಿ ಹುದ್ದೆಗಳನ್ನು ನೀಡುವ ಪದ್ಧತಿಯನ್ನು ನಾಗರ್ಜುನಕೊಂಡ ಇಕ್ಷ್ವಾಕು ವಂಶದ ದೊರೆಗಳು ಆರಂಭ ಮಾಡಿದ್ದರಿಂದ ಬೇಡರು ಎಲ್ಲಿ ದಟ್ಟವಾಗಿ ನೆಲೆಸಿರುವರೋ ಅಲ್ಲಲ್ಲಿ ಅಧಿಕಾರಿಗಳಾಗಿ ನೇಮಕಗೊಂಡರು. ಈ ನೇಮಕದಿಂದಾಗಿ ಬೇಡರ ರಾಜಕೀಯ ಶಕ್ತಿಯು ಇಮ್ಮಡಿಯಾಯಿತು.

ಕದಂಬ ಮನೆತನ, ಕನ್ನಡದ ಮೊದಲ ರಾಜಮನೆತನವಾಗಿದೆ. ಶಿವಸ್ಕಂದವರ್ಮನ ವಿರುದ್ಧ ಮಯೂರ ಶರ್ಮನಿಗೆ ಶ್ರೀಶೈಲ ಪರ್ವತ ಪ್ರದೇಶದಲ್ಲಿ ಬೇಡ ಸೈನಿಕರು ಸಹಾಯ ಮಾಡಿದರು. ಮತ್ತು ಮಯೂರ ಶರ್ಮನು ಅವರ ಸಹಾಯದಿಂದ ಕದಂಬ ರಾಜ್ಯವನ್ನು ಕಟ್ಟಿದನು. ಶ್ರೀಶೈಲ ಗುಡ್ಡಗಾಡು ಪ್ರದೇಶ ಬೇಡರ ನೆಲೆಗಳಲ್ಲಿ ಒಂದಾಗಿದೆ. ಬೇಡರು ಶ್ರೀಶೈಲ ಪ್ರದೇಶದಿಂದ ಕರ್ನಾಟಕದ ಕಡೆ ಬಂದವರು ಎಂಬ ಅಭಿಪ್ರಾಯವಿದೆ. ಬುಕಾನನ್‌ನು ಕದಂಬರು ಬೇಡರು ಎಂದು ಕರೆದಿರುವನು.[೬] ಕ್ಷಾತ್ರ ಪರಂಪರೆಯ ಲಕ್ಷಣಗಳನ್ನು ಹೊಂದಿದ್ದ ಬೇಡರನ್ನು ರಾಜರು ಯುದ್ಧಾಸ್ತ್ರಗಳನ್ನಾಗಿ ಬಳಕೆ ಮಾಡಿಕೊಂಡರು. ದೈಹಿಕವಾಗಿ ಸದೃಢರಾಗಿದ್ದು, ಎಂತಹ ಸಂದರ್ಭದಲ್ಲೂ ನಿರ್ಭಯವಾಗಿ ಹೋರಾಡುವ ಶಕ್ತಿಯನ್ನು ಹೊಂದಿದ್ದ ಬೇಡರನ್ನು ರಾಜರು ಸೈನ್ಯಕ್ಕೆ ಸೇರಿಸಿಕೊಂಡರು. ಕಾಡಿನಲ್ಲಿದ್ದ ಇವರನ್ನು ಯುದ್ಧ ಸಂದರ್ಭಗಳಲ್ಲಿ ಕರೆಸಿಕೊಂಡು ಯುದ್ಧ ಭೂಮಿಗೆ ಕಳುಹಿಸಿ ಸುಲಭವಾಗಿ ಎದುರಾಳಿಗಳನ್ನು ಗೆಲ್ಲುತ್ತಿದ್ದರು. ಮಹೇಂದ್ರ ಎಂಬುವನು (ಬಹುಶಃ ಪಲ್ಲವರ ದೊರೆ ಮೊದಲ ಮಹೇಂದ್ರವರ್ಮ) ಶಿಲಾದಿತ್ಯನೊಡನೆ ಹೋರಾಡುವಾಗ ಬೇಡರನ್ನು ಮಲೆಪರನ್ನು ತನ್ನ ಸಹಾಯಕ್ಕಾಗಿ ತೆಗೆದುಕೊಂಡು ಹೋದನೆಂದು ಶಾಸನವೊಂದು ತಿಳಿಸುತ್ತದೆ.[೭] ರಾಜರು ಆಗ ಸಾಮಾನ್ಯ ಜನರಿಗೆ ದುಸ್ವಪ್ನವಾಗಿದ್ದ ಕಾಡು ಜನರನ್ನು ಯುದ್ಧದಲ್ಲಿ ಬಳಸಿಕೊಂಡು ಮತ್ತೆ ಕಾಡಿಗೆ ಕಳುಹಿಸುತ್ತಿದ್ದರು. ಒಂದು ರೀತಿಯಲ್ಲಿ ಈ ಜನರ ಸೊಕ್ಕನ್ನು ಮುರಿಯುವ ಹುನ್ನಾರವೂ ರಾಜರಲ್ಲಿತ್ತು. ಇನ್ನೊಂದಡೆ ಈ ಜನರನ್ನು ತಮ್ಮ ಬಳಿ ಇಟ್ಟು ಕೊಂಡು ಅವರಲ್ಲಿ ಭಯವನ್ನುಂಟು ಮಾಡಿ, ರಾಜ್ಯದೊಳಗೆ ದಂಗೆಗಳು ಏಳದಂತೆ ನೋಡಿಕೊಳ್ಳುವುದಾಗಿತ್ತು. ಕಳ್ಳರು, ದರೋಡೆಕೋರರು, ಕ್ರೂರಿಗಳು ಎಂದೆಲ್ಲಾ ಜನರು ಈ ಜನಾಂಗವನ್ನು ಕರೆಯುತ್ತಿದ್ದರು. ಆಸೆ, ಆಮಿಷಕ್ಕೆ ಹಾಗೂ ಹೊಗಳಿಕೆಗೆ ಬೇಗ ಬಲಿಯಾಗುತ್ತಿದ್ದ ಈ ಜನರನ್ನು ರಾಜರುಗಳು ತಮಗೆ ಅಗತ್ಯವಿರುವಷ್ಟು ದುಡಿಸಿಕೊಂಡರು. ಯುದ್ಧಭೂಮಿಯಲ್ಲಿ ಬೇಡರು ನಡೆಸುತ್ತಿದ್ದ ಬರ್ಬರ ದಾಳಿಗಳಿಂದಾಗಿ ಜನರು ಆಗ ಇವರ ಬಗ್ಗೆ ಭಯಪಡಬೇಕಾದದ್ದು ಸಹಜವೇ ಆಗಿತ್ತು. ರಾಜನ ಉದ್ದೇಶ ಕೊಳ್ಳೆ ಹೊಡೆಯುವುದಕ್ಕಿಂತ ರಾಜ್ಯ ಗೆಲ್ಲುವುದಾಗಿತ್ತು. ಹಾಗೆಯೇ ಬೇಡರು ಕೆಲವೊಂದು ಸಂದರ್ಭಗಳಲ್ಲಿ

ತಮ್ಮ ಹೊಟ್ಟೆಪಾಡಿಗಾಗಿ ಹಳ್ಳಿಗಳ ಮೇಲೆ ದಾಳಿ ಮಾಡುವುದು, ಕಳ್ಳತನ ಮಾಡವುದು, ದಾರಿ ಹೋಕರನ್ನು ಹೆದರಿಸಿ ಅವರಿಂದ ವಸ್ತುಗಳನ್ನು ದೋಚುವುದು ಮುಂತಾದ ಕೃತ್ಯಗಳಲ್ಲಿ ತೊಡಗಿದ್ದರು. ಹೀಗಾಗಿ ಬೇಡರೆಂದರೆ ಜನರಲ್ಲಿ ಭಯದ ಛಾಯೆ ಇತ್ತು.

ಗಂಗರ ರಾಜಧಾನಿಯಾದ ತಲಕಾಡಿನ ಸ್ಥಳನಾಮದ ಹಿನ್ನೆಲೆಯನ್ನು ತಲ ಮತ್ತು ಕಾಡು ಎಂಬ ಬೇಡ ಸಹೋದರರ ಹೆಸರಿರುವುದನ್ನು ಒಂದು ಕೈಫಿಯತ್ತು ತಿಳಿಸುತ್ತದೆ.[೮] ಗಂಗರ ಕಾಲಕ್ಕೆ ಬೇಡ ಜನಾಂಗವು ರಾಜಕೀಯದಲ್ಲಿ ಹೆಸರಾಗಿತ್ತು. ಆಸ್ಥಾನದಲ್ಲಿ ಬೇಡ ಹೆಣ್ಣುಮಕ್ಕಳು ವಿವಿಧ ಕೆಲಸಗಳಲ್ಲಿ ತೊಡಗಿದ್ದರು. ಗಂಗರು ೧ನೇ ಶಿವಮಾರನ ಕ್ರಿ.ಶ.೭೧೩ರ ಶಾಸನದಲ್ಲಿ ಕಿರಾತ ಹೆಣ್ಣು ನವ ಕಾಮನ ಆಸ್ಥಾನದಲ್ಲಿ ನರ್ತಕಿಯಾಗಿದ್ದಾಳೆಂದು ಉಲ್ಲೇಖಿತವಾಗಿದೆ.[೯] ಸೈನ್ಯದ ಕೊರತೆ ಬಿದ್ದಾಗಲೆಲ್ಲ ಗುಡ್ಡಗಾಡು ಜನರನ್ನು ಕರೆಸಿ ಪ್ರತ್ಯೇಕ ಪಡೆಯನ್ನಾಗಿ ಮಾಡಿ ಸೈನ್ಯ ತರಬೇತಿ ನೀಡುತ್ತಿದ್ದರು. ಕಾಲಕ್ರಮೇಣ ರಾಜ್ಯಗಳ ಉದಯ ಹೆಚ್ಚಾದಂತೆ ರಾಜ ರಾಜರಲ್ಲಿ ಸೈನ್ಯ ಕಟ್ಟುವಲ್ಲಿ ಸ್ಪರ್ಧೆಯುಂಟಾಯಿತು. ಹೀಗೆ ಗುಡ್ಡಗಾಡು ಜನರು ಸೈನ್ಯದಲ್ಲಿ ಸೇರಿಕೊಳ್ಳುವ ಕ್ರಿಯೆಯೂ ಜೋರಾಯಿತು. ಗಂಗರು ಬೇಡರನ್ನು ಸೈನ್ಯಕ್ಕೆ ಸೇರಿಸಿಕೊಳ್ಳುವ ಕೆಲಸ ಮಾಡಿದರು. ಇದು ಹೊಯ್ಸಳರ ಕಾಲದವರೆಗೂ ಮುಂದುವರೆಯಿತು.[೧೦] ನಂತರ ಸೈನಿಕರಾದವರಲ್ಲಿ ಪ್ರಬಲರಾದವರೇ ರಾಜ್ಯವನ್ನು ಕಟ್ಟುವಲ್ಲಿ ಯಶಸ್ವಿಯಾದರು. ಬೇಡರು ಬಿಲ್ಲುಗಾರಿಕೆಯಲ್ಲಿ ನಿಪುಣರಾಗಿದ್ದರು ಮತ್ತು ತಾವು ಕಟ್ಟಿಕೊಂಡ ಸೈನ್ಯದಿಂದ ಆಗಿನ ರಾಜರುಗಳಿಗೆ ಸವಾಲಾದರು. ಇವರ ಉಪಟಳದಿಂದ ಬೇಸತ್ತ ದೊರೆಗಳು ಅವರನ್ನು ಹೆದರಿಸಲು ಕಷ್ಟಪಡಬೇಕಾಯಿತಾದರೂ ಗಂಗರ ಕೊಂಗುಣಿವರ್ಮ ಧರ್ಮರಾಜ ಶಿವಮಾರನು ಕ್ರಿ.ಶ.೯೭೩ರಲ್ಲಿ ಕಿರಾತರನ್ನು ಹತ್ತಿಕ್ಕುವಲ್ಲಿ ಯಶಸ್ವಿ ಯಾದನು.[೧೧]

ಬಾದಾಮಿ ಚಾಲುಕ್ಯರ ಪ್ರಸಿದ್ಧ ದೊರೆ ಇಮ್ಮಡಿ ಪುಲಕೇಶಿಯು ನರ್ಮದಾ ನದಿಯವರೆಗೆ ದಂಡಯಾತ್ರೆಯನ್ನು ಕೈಗೊಂಡು ಉತ್ತರಪಥೇಶ್ವರನೆಂದು ಮೆರೆಯುತ್ತಿದ್ದ ಹರ್ಷವರ್ಧನನ್ನು ಸೋಲಿಸಿದನು. ಪುಲಕೇಶಿಯ ಸೈನ್ಯವನ್ನು 'ಕರ್ನಾಟಕ ಬಲ' ಎಂದು ಕರೆಯಲಾಗುತ್ತಿತ್ತು. ಕನ್ನಡಿಗರ ಸೈನ್ಯ ಸಾಹಸದ ಬಗ್ಗೆ ಹೂಯನ್‌ತ್ಸಾಂಗ್ ಮತ್ತು ಆಲ್‌ಮಸೂದಿ ಮತ್ತಿತರ ಪ್ರವಾಸಿ ಬರಹಗಾರರು ಹೊಗಳಿದ್ದಾರೆ.[೧೨] ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲದಲ್ಲಿ ಬೇಡ ಪಡೆಗಳು ಕರ್ನಾಟಕ ಸೈನ್ಯದಲ್ಲಿ ಪ್ರಸಿದ್ಧಿಯಾಗಿದ್ದವು. ಕರ್ನಾಟಕ ಸೈನ್ಯವೆಂದರೆ ಬೇಡರ ಸೈನ್ಯವೆಂದೇ ಹೆಸರಾಗಿತ್ತು. ಏಕೆಂದರೆ, ಕರ್ನಾಟಕ ಸೈನ್ಯದಲ್ಲಿ ಬೇಡರೇ ಹೆಚ್ಚು ಸಂಖ್ಯೆಯಲ್ಲಿದ್ದರು.[೧೩] ಕರ್ನಾಟಕ ಸೈನ್ಯವನ್ನು ಎದುರಿಸಲಾಗದೇ ಮುಸ್ಲಿಂ ದೊರೆಗಳು ಅನೇಕ ಬಾರಿ ಕಷ್ಟಕ್ಕೊಳಗಾದರು. ಬೇಡರು ರಾಷ್ಟ್ರಕೂಟರ ಕಾಲಕ್ಕೆ ಅಧಿಕಾರಿಗಳಾಗಿ ಅನೇಕ ಹುದ್ದೆಗಳನ್ನು ಗಿಟ್ಟಿಸಿಕೊಂಡರು. ನಾಡಗಾವುಂಡರಾಗಿ ಬೇಡರು ನೇಮಕಗೊಂಡಿರುವುದು ತಿಳಿದುಬರುತ್ತದೆ.[೧೪] ಬೇಡರು ಬಹು ಹಿಂದಿನಿಂದಲೂ ಬಹುಸಂಖ್ಯೆಯಲ್ಲಿ ಸೈನಿಕ ಶಸ್ತ್ರಧಾರಿಗಳು ಮತ್ತು ಆಯುಧ ಜೀವಿಗಳೂ

ಆಗಿದ್ದರಿಂದ ರಾಷ್ಟ್ರಕೂಟರ ಕಾಲದಲ್ಲಿ ನಾಯಕ ಎಂಬ ಹೆಸರು ಬಹುಪಾಲು ಅನ್ವಯಿಸುತ್ತಿದ್ದುದು ಬೇಡರಿಗೆ.

ಬೇಡರು ತಮ್ಮ ಪ್ರದೇಶಗಳಲ್ಲಿ ಪ್ರಬಲರಾಗಿ ತಮ್ಮದೇ ಆದ ಗಣರಾಜ್ಯಗಳನ್ನು, ಗ್ರಾಮ ರಾಜ್ಯ ಗಳನ್ನು ಸ್ಥಾಪಿಸಿಕೊಂಡರು. ಪ್ರಾಚೀನ ಕಾಲದಿಂದಲೂ ಈ ರೀತಿಯ ರಾಜ್ಯಗಳಿದ್ದುದನ್ನು ಸಾಹಿತ್ಯ ಕೃತಿಗಳು ಹಾಗೂ ಶಿಲಾಶಾಸನಗಳು ತಿಳಿಸುತ್ತವೆ. ಇಂತಹ ಬೇಡರ ಗಣರಾಜ್ಯಗಳಿಗೆ 'ಬೇಡವಟ್ಟುಗಳು' ಎಂಬ ಹೆಸರಿದ್ದಿತು. ಅವುಗಳ ಬಳಿ ಅವುಗಳದೇ ಆದ ಬೇಡರ ಪಡೆಗಳಿರುತ್ತಿದ್ದವು. ಆ ಸೈನ್ಯಗಳಿಗೆ 'ಬೇಡರ ಘಟ್ಟ' ಎಂಬ ಹೆಸರಿದ್ದಿತು. ಹಾಗೇ ಪರಾಧೀನರಾಗದೆ ಸ್ವತಂತ್ರವಾಗಿ ಜೀವಿಸುತ್ತಿದ್ದ ಬೇಡರ ಘಟ್ಟಗಳ ಮುಂದಾಳುಗಳನ್ನು ಬೇಡನಾಯಕರು ಎಂದು ಕರೆಯಲಾಗುತ್ತಿತ್ತು. ಅಂತಹ ಬೇಡನಾಯಕರುಗಳು ತಮ್ಮ ಬೇಡರ ಘಟ್ಟಗಳೊಡನೆ ತುರುಗೋಳ್ ಅಥವಾ ಗೋಗ್ರಹಣಕ್ಕೆ ಹೊರಟು ಹಳ್ಳಿಗಳ ಮೇಲೆ ದಾಳಿ ಮಾಡಿ ಮಾರಂತರನ್ನು ಕೊಂದು ಹಳ್ಳಿಯ ಗೋವುಗಳನ್ನು ಅಟ್ಟಿಕೊಂಡು ತೆರಳುತ್ತಿದ್ದರು. ಈ ಬಗ್ಗೆ ಕನ್ನಡ ನಾಡಿನಲ್ಲಿ ಸಾಕಷ್ಟು ಶಾಸನಗಳು ದೊರಕುತ್ತವೆ. ಬೇಡ ನಾಯಕರ ಗಣರಾಜ್ಯಗಳಾಗಿದ್ದ ಬೇಡವಟ್ಟುಗಳಲ್ಲಿ ಕೆಲವಂತೂ ದೊಡ್ಡ ದೊಡ್ಡ ಚಕ್ರವರ್ತಿಗಳಿಗೂ ತಗ್ಗಿಬಗ್ಗಿ ನಡೆಯುತ್ತಿರಲಿಲ್ಲವೆಂದು ಇಮ್ಮಡಿ ತೈಲಪ ಚಕ್ರವರ್ತಿಯ ಒಂದು ಘಟನೆಯಿಂದ ಗೊತ್ತಾಗುತ್ತದೆ. ತೊರಗಲ್ಲು-ಬೆಳಗಾವಿ(ಜಿ), ರಟ್ಟಹಳ್ಳಿ-ಧಾರವಾಡ(ಜಿ), ಅಜಿರಗೋಳ-ಉತ್ತರ ಕನ್ನಡ(ಜಿ) ಸ್ಥಳಗಳಲ್ಲಿ ಭೂತಗ, ಬೀರುಗ ಮತ್ತು ಗೋಯ ಎಂಬ ಬೇಡ ನಾಯಕರು ತಮ್ಮ ಬೇಡವಟ್ಟುಗಳನ್ನು ನಿರ್ವಹಿಸುತ್ತಾ ಯಾರಿಗೂ ಅಧೀನರಾಗದೇ ಸ್ವತಂತ್ರವಾಗಿದ್ದುಕೊಂಡು ಭಯಂಕರವಾಗಿದ್ದರು. ಪೂರ್ವಕಾಲದ ಚಕ್ರವರ್ತಿಗಳಿಂದ (ರಾಷ್ಟ್ರಕೂಟರು) ಅವರನ್ನು ಸೋಲಿಸಲಾರದೇ ಹೋದರಂತೆ ಕೊನೆಗೆ ತೈಲಪ ಚಕ್ರವರ್ತಿಯೇ ಅವರನ್ನು ಬೇಡರಪಡೆ ಹತ್ತಿಕ್ಕಲು ದಂಡೆತ್ತಿ ಬರಬೇಕಾಯ್ತು. ಇದು ತಿಳಿದುಬರುವುದು ನಾಗವರ್ಮನ ಕಾವ್ಯಾವಲೋಕನ ಗ್ರಂಥದಿಂದ. ಬೇಡರಘಟ್ಟ ಬಗ್ಗೆ ಶಿವಮೊಗ್ಗ (ಜಿ) ಶಿಕಾರಿಪುರ(ತಾ) ಉಡುಗಣಿ ಹೋಬಳಿಯ ಅಡಗಂಟಿ ಗ್ರಾಮದ ಕ್ರಿ.ಶ.೧೦೫೮ರ ಒಂದು ಶಾಸನ ಮಾಹಿತಿ ನೀಡುತ್ತದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಕನ್ನಡಿಗರೆಂದರೆ ಸೈನಿಕರೆಂದು ಪ್ರಸಿದ್ಧಿಯಿದ್ದಿತು. ಕಾಲ್ಪಳದಲ್ಲಿ ಬೇಡರ ಪಡೆಯು ಪ್ರಖ್ಯಾತಿಯನ್ನು ಪಡೆದಿತ್ತು. ಈ ಪಡೆಯಿಂದ ಅನೇಕ ಗೋವುಗಳನ್ನು ದೊರೆಗಳು ಪಡೆಯುತ್ತಿದ್ದರು. ಪಶ್ಚಿಮ ಚಾಲುಕ್ಯರ ಕಾಲದಲ್ಲಿ ರಟ್ಟರನ್ನು ಇತರ ವಿರೋಧಿಗಳನ್ನು ಹತ್ತಿಕ್ಕಿದ್ದು ಬೇಡರ ಸಾಧನೆಯೇ ಸರಿ. ಬೇಡರು ಯುದ್ಧದಲ್ಲಿ ತಂದುಕೊಟ್ಟ ಜಯಕ್ಕಾಗಿ ದಾನ ದತ್ತಿಗಳನ್ನು ಪಡೆದಿರುವುದು ಹೆಮ್ಮೆಯ ಸಂಗತಿ. ಬೇಡರಘಟ್ಟಗಳ ನಾಯಕರು ಗೋವುಗಳನ್ನು ದ ೀಕರಿಂದ ಸಂಪತ್ತನ್ನು, ಹಳ್ಳಿಗಳ ಮೇಲೆ ದಾಳಿ ಮಾಡಿ ಲೂಟಿ ಹೊಡೆಯುವುದು ಮುಂತಾದ ಕೃತ್ಯಗಳ ಜೊತೆಗೆ ಸುಂದರವಾದ ಸ್ತ್ರೀಯರನ್ನು ಅಪಹರಿಸಿ ಮದುವೆ ಮಾಡಿಕೊಳ್ಳುತ್ತಿದ್ದರೆಂದು ಕಂಡುಬರುತ್ತದೆ.

ಜೈನ ಕ್ಷತ್ರಿಯ ವಿಕ್ರಮ ಚಾಂಗಾಳ್ವನು ದ್ವಾರಕಾ ಪಟ್ಟಣದಿಂದ ತುಂಗಾ ಎಂಬಲ್ಲಿಗೆ ಬಂದು ನೆಲೆಸಿ, ಸುತ್ತಮುತ್ತಲ ಬೇಡರ ನಾಯಕರನ್ನು ಸೋಲಿಸಿ ರಾಜ್ಯವನ್ನು ವಿಸ್ತರಿಸಿದನು. ಬೇಡನಾಯಕರಲ್ಲಿ ಪ್ರಬಲರಾದವರು ವಲಸೆ ಬಂದ ಚಂಗಾಳ್ವ ಹೆಣ್ಣುಗಳ ಸೌಂದರ್ಯಕ್ಕೆ ಸೋತು ವಿವಾಹ ಸಂಬಂಧಕ್ಕೆ ಒತ್ತಾಯ ಮಾಡಿದಾಗ ವಿಕ್ರಮ ಚೆಂಗಾಳ್ವನು ಅವರನ್ನು ಮೋಸದಿಂದ ಕೊಂದನು.[೧೫]

ಕರ್ನಾಟಕ ಇತಿಹಾಸದಲ್ಲಿ ಕ್ರಿ.ಶ.೧೨ನೇ ಶತಮಾನ ಒಂದು ವಿಶಿಷ್ಟ ಕಾಲ. ಸಾಂಪ್ರದಾಯಿಕ ಸಾಮಾಜಿಕ ಮತ್ತು ಧಾರ್ಮಿಕ ರಂಗಗಳಲ್ಲಿ ಅನೇಕ ಸುಧಾರಣೆಗಳು ಕಂಡುಬಂದವು. ಬಸವೇಶ್ವರರ ಪ್ರಯತ್ನದ ಫಲವಾಗಿ ನಡೆದ ವೀರಶೈವ ಕ್ರಾಂತಿಯಲ್ಲಿ ಕೆಳವರ್ಗದವರು ಭಾಗವಹಿಸಿದರು. ಅವರು ಅನೇಕ ವಚನಗಳನ್ನು ರಚಿಸಿ ವಚನಕಾರರೆನಿಸಿಕೊಂಡರು. ಈ ಕಾಲದಲ್ಲಿ ಮೇಲು ಕೀಳು ಎಂಬ ಜಾತಿಪ್ರಜ್ಞೆಯ ಪ್ರಭಾವ ಕಡಿಮೆಯಾಯಿತು. ಉನ್ನತವರ್ಗದವರು ಅಲ್ಲಿಯವರೆಗೆ ಅನುಭವಿಸುತ್ತಿದ್ದ ಅವಕಾಶಗಳು ಕೆಳವರ್ಗದವರು ಅನುಭವಿಸಲು ಆರಂಭಿಸಿದರು. ಬಿಜ್ಜಳನ ಕಾಲದಲ್ಲಿ ಬ್ರಾಹ್ಮಣ ನಾಯಕರು ವಹಿಸುತ್ತಿದ್ದ ಉನ್ನತ ಅಧಿಕಾರ ಸ್ಥಾನಗಳಲ್ಲೆಲ್ಲ ಬೇಡ ನಾಯಕರು ವಿರಾಜಿಸತೊಡಗಿದರು. ಅದಕ್ಕೆ ಅಂದಿನ ಬೇಡರಲ್ಲಿದ್ದ ಶೂರತನ ಮತ್ತು ಸಾಹಸಗಳೇ ಕಾರಣ. ಬಿಜ್ಜಳನು ಬೇಡರ ಸಾಹಸಗಳನ್ನು ಮೆಚ್ಚಿಕೊಂಡು ಅವರಿಗೆ ಉನ್ನತ ಹುದ್ದೆಗಳನ್ನು ನೀಡಿದನು. ಬೇಡರ ರಾಜಕೀಯ ಉನ್ನತಿಯನ್ನು ಮನಗಂಡ ಚೆನ್ನಬಸವಣ್ಣನವರು ತಮ್ಮ ಒಂದು ವಚನದಲ್ಲಿ "ಕಿರಾತರು ಹೆಚ್ಚಿ ಪುರಾತನರು ಅಡಗಿದರು" ಎಂದು ಆ ಕಾಲದ ರಾಜಕೀಯ ವಲಯಗಳಲ್ಲಾಗುತ್ತಿದ್ದ ಪರಿವರ್ತನೆಯನ್ನು ಸೂಚಿಸಿದ್ದಾರೆ. ಬಿಜ್ಜಳ ಮತ್ತು ಅವನ ಮಕ್ಕಳ ಕಾಲದ ಶಾಸನಗಳಲ್ಲಿ ಕಂಡುಬಂದ ಬೇಡ ನಾಯಕರ ವಿಶೇಷ ಉಲ್ಲೇಖಗಳು ಇದನ್ನು ಪುಷ್ಟೀಕರಿಸುತ್ತವೆ. ಬೇಡರಿಗೆ ಆ ಕಾಲ ಕೊಂಚಮಟ್ಟಿಗೆ ಉಚ್ಛ್ರಾಯದ ಕಾಲವೆನ್ನಬಹುದು.

ಹೊಯ್ಸಳವಂಶದ ಸ್ಥಾಪಕ ಸಳನು ಬೇಡನಾಗಿದ್ದನು ಎಂಬ ಅಭಿಪ್ರಾಯವಿದೆ. ಈ ಕುರಿತು ಹೆಚ್ಚಿನ ಸಂಶೋಧನೆಯ ಅಗತ್ಯವಿದೆ. ಹೊಯ್ಸಳ ಪ್ರಸಿದ್ಧ ದೊರೆ ವಿಷ್ಣುವರ್ಧನನು ಬೇಡರನ್ನು ಸೈನ್ಯದಲ್ಲಿ ನೇಮಿಸಿಕೊಂಡಿದ್ದನು. ಅವನ ಸೈನ್ಯದಲ್ಲಿ ಬೇಡರ ಪಡೆಯೇ ಮುಖ್ಯವಾಗಿತ್ತು. ಇವನು ಕ್ರಿ.ಶ.೧೧೧೭ರಲ್ಲಿ ಕಿರಾತ ಮುಖ್ಯಸ್ಥರನ್ನು, ಶಕ್ತಿಶಾಲಿ ವೀರರನ್ನು ತನ್ನ ಸಹಾಯಕ್ಕಾಗಿ ನೇಮಿಸಿಕೊಂಡಿದ್ದನು, ಇದೇ ಸಮಯದಲ್ಲಿ ಹೊಯ್ಸಳರಿಗೆ ಮತ್ತು ಸೇವುಣರಿಗೂ ಯುದ್ಧವಾದಾಗ, ಬೇಡ ಸೈನಿಕರ ಪಾತ್ರ ನಿರ್ಣಾಯಕವಾಗಿತ್ತು.[೧೬] ಹೊಯ್ಸಳರ ಸೈನ್ಯದಲ್ಲಿ ನಾಡಾಳು ಪಡೆಯು ಮುಖ್ಯವಾಗಿತ್ತು. ಈ ಪಡೆಯು ಬೇಡರು, ಕಳ್ಳರು, ಮೊದಲಾದ ಗಿರಿಕಂದರವಾಸಿಗಳಿಂದ ಕೂಡಿತ್ತು.[೧೭] ಬಾಣ ಪ್ರಯೋಗ ಚತುರರಾದ ಬೇಡರ ಪಡೆಯು ಕಾಲ್ಬಲದ ಮುಖ್ಯಾಂಗವಾಗಿತ್ತು. ಬೇಡರು ಹಳ್ಳಿಗಳಲ್ಲೂ ದನಗಳ ಅಪಹರಣ

ಮೊದಲಾದ ಕಾರ್ಯಗಳನ್ನೆಸಗಿ ಶಾಂತಿಭಂಗಕ್ಕೆ ಕಾರಣವಾಗುವ ಸಂಭವವಿದ್ದುದರಿಂದ ಅವರನ್ನು ಹೊಯ್ಸಳರು ಸೈನ್ಯಕ್ಕೆ ಸೇರಿಸಿಕೊಂಡು ಅಲ್ಲಲ್ಲಿ ತಲೆದೋರುವ ಬಂಡಾಯಗಳ ನಿಗ್ರಹಕ್ಕೆ, ಹೊಸರಾಜ್ಯ ಆಕ್ರಮಣಕ್ಕೆ, ಕಾರ್ಯಾಚರಣೆಗೆ ಹೊರಡುವ ಸೈನ್ಯಕ್ಕೆ ಬಳಸಿಕೊಳ್ಳುತ್ತಿದ್ದರು. ಈ ಕಾರಣದಿಂದ ಆ ಕಾಲದ ಶಾಸನಗಳು ಅವರನ್ನು "ಹೊಯ್ಸಳ ಬೀಡಿನ ಪರಮ ವಿಶ್ವಾಸಿಗಳ್" ಎಂದು ಗೌರವಪೂರ್ವಕವಾಗಿ ಕರೆದಿವೆ.[೧೯] ಬಿಲ್ಲಾಳುಗಳಾಗಿದ್ದ ಅಡವಿಯನ್ನೇ ನೆಚ್ಚಿಕೊಂಡು ಬೇಟೆಗಾರ ಬುಡಕಟ್ಟಿನವರಾದ ಬಿಲ್ಲ, ಬಿಲುಪಡ್ಡೆಕಾರರು, ಕಾಡಾನೆ ಮಲ್ಲರು, ನೋಡಿ ತಪ್ಪದೆಸೆವ ಕಣ್ಣಂಬಿನವರು, ಅರಣ್ಯಭಂಡಾರರು ಮುಂತಾದವರನ್ನು ಅರೆಬಯಲು ನಾಡಿನ ಶಾಸನಗಳಲ್ಲಿ ಮಲೆಪರು, ಬೇಡರು, ಕಿರಾತರು ಎಂದೆಲ್ಲಾ ಕರೆಯಲಾಗಿದೆ.[೨೦] ಹೊಯ್ಸಳರ ಮಾಂಡಲೀಕ ಪೆರುಮಾಳದೇವ ದಂಡನಾಯಕ ಬೇಡ ಜನಾಂಗದವನಿರಬೇಕು. ಅಲ್ಲದೆ ಇನ್ನೊಬ್ಬ ಹೊಯ್ಸಳ ಮಾಂಡಲೀಕ ಆಸಂದಿಯ ಅರಸನಾದ ಮೊದಲನೆ ವೈಜರಸನ ಕಾಲದ ಕಣ್ಣಂಬಿ ಘಟನೆಯಲ್ಲಿ ಬರುವ ಅಗ್ಗದರಾಯನು ಬೇಡ ದೊರೆಯಾಗಿರಬಹುದು. ಏಕೆಂದರೆ ಆಸಂದಿನಾಡಿನ ಅನೇಕ ಶಿಲಾಶಾಸನಗಳಲ್ಲಿ ಬೇಡರ ದಾಳಿಗಳನ್ನು ಉಲ್ಲೇಖಿಸಲಾಗಿದೆ. ಬೇಡರ ಬಂಕೆಗಳಿದ್ದ(ವನ) ಬಗ್ಗೆ ಈ ಘಟನೆಯಿಂದ ತಿಳಿದುಬರುತ್ತದೆ.[೨೧] ಕನ್ನಡ ಶಾಸನಗಳಲ್ಲಿ ಕಂಡುಬರುವ ಲೆಂಕರು ಬೇಡ ವೀರರೇ ಇರಬೇಕು. ಧೈರ್ಯ, ಸಾಹಸ ಮತ್ತು ಪ್ರಾಣದ ಹಂಗು ತೊರೆದು ತಮ್ಮ ಸ್ವಾಮಿಗಾಗಿ ಹೋರಾಡುತ್ತಿದ್ದ ಇವರ ಗುಣಗಳು ಬೇಡರ ಗುಣಗಳಿಗೆ ಸರಿಸಮನಾಗಿವೆ. ಇವರು ಯುದ್ಧ ಶಿಕ್ಷಣವನ್ನು ಹೊಂದಿ ತಮ್ಮ ತಮ್ಮ ಊರುಗಳಲ್ಲಿ ಜೀವಿಸುತ್ತಾ ಯುದ್ಧ ಸಮಯದಲ್ಲಿ ಸೇನೆಯನ್ನು ಸೇರಿಕೊಳ್ಳುತಿದ್ದರು. ಇವರಿಗೆ ಕೆಲವು ಊರುಗಳನ್ನು ಬಿಟ್ಟುಕೊಟ್ಟು ಆ ಊರುಗಳ ಆದಾಯವನ್ನು ಅನುಭವಿಸುವಂತೆ ರಾಜನೋ, ಸಾಮಂತನೋ ನೇಮಿಸುತ್ತಿದ್ದನು.[೨೨] ಹೀಗಾಗಿ ಯುದ್ಧದಲ್ಲಿ ಭಾಗವಹಿಸುವುದು ವಂಶಪಾರಂಪರ್ಯವೆನಿಸಿತು. ಬೇಡರು ಬೆಳೆಯಲು ಅವರ ಸೈನ್ಯ, ವೃತ್ತಿಯೂ ಸಹಾಯವಾಯಿತು. ನಂತರ ಈ ವೃತ್ತಿಯು ವಂಶಪಾರಂಪರೆಯೂ ಆಯಿತು.

ಮೂರನೇ ಬಲ್ಲಾಳನ ಕಾಲದಲ್ಲಿ ದೆಹಲಿ ಸುಲ್ತಾನರು ದಕ್ಷಿಣದ ಕಡೆ ರಾಜ್ಯವನ್ನು ವಿಸ್ತರಿಸುವ ಪ್ರಯತ್ನ ಮಾಡಿದರು. ಅಲ್ಲಾವುದ್ದೀನ್ ಖಿಲ್ಜಿಯ ಸೇನಾ ದಂಡನಾಯಕ ಮಲ್ಲಿಕಾಫರನು ದಕ್ಷಿಣ ಭಾರತದ ಮೇಲಿನ ದಂಡೆಯಾತ್ರೆಯ ನೇತೃತ್ವವನ್ನು ವಹಿಸಿದ್ದನು.

ಆಗ ದಕ್ಷಿಣ ಭಾರತದ ಅರಸು ಮನೆತನಗಳಲ್ಲಿ ಹೊಂದಾಣಿಕೆ ಇರಲಿಲ್ಲ. ಇದರ ಸಂಪೂರ್ಣ ಪ್ರಯೋಜನವನ್ನು ಮಲ್ಲಿಕಾಫರನು ಪಡೆದುಕೊಂಡನು. ಮೂರನೇ ಬಲ್ಲಾಳನು ಮುಸ್ಲಿಂ ದಾಳಿಯನ್ನು ತಡೆಯಲು ಬೇಡರನ್ನು ಆಯಕಟ್ಟಿನ ಸ್ಥಳಗಳಲ್ಲಿ ನೇಮಿಸಿದನು. ಆದರೆ ಅವನ ಪ್ರಯತ್ನಗಳೆಲ್ಲಾ ವಿಫಲವಾದವು. ಮಲ್ಲಿಕಾಫರನು ದೇವಗಿರಿ (ಕ್ರಿ.ಶ.೧೩೦೭), ವಾರಂಗಲ್ (ಕ್ರಿ.ಶ.೧೩೧೦), ದ್ವಾರಸಮುದ್ರ

(ಕ್ರಿ.ಶ.೧೩೧೧), ಮಧುರೆ (ಕ್ರಿ.ಶ.೧೩೧೧), ಪುನಃ ದೇವಗಿರಿ(ಕ್ರಿ.ಶ.೧೩೧೩) ಮೇಲೆ ದಾಳಿ ಮಾಡಿ ಅಲ್ಲಿನ ರಾಜರುಗಳನ್ನು ಸೋಲಿಸಿದ್ದಲ್ಲದೆ ಅವರಿಂದ ಬಲತ್ಕಾರವಾಗಿ ಸಾಕಷ್ಟು ಕಪ್ಪಕಾಣಿಕೆಯನ್ನು ಸ್ವೀಕರಿಸಿದನು. ಮಲ್ಲಿಕಾಫರನ ದಾಳಿಯಿಂದ ಆರ್ಥಿಕವಾಗಿ ದಕ್ಷಿಣ ಭಾರತ ಸಾಕಷ್ಟು ಹಿಂದುಳಿಯಿತು. ರಾಜಕೀಯವಾಗಿ ದಕ್ಷಿಣ ಭಾರತದ ಮೇಲೆ ಅಧಿಕಾರ ಸ್ಥಾಪಿಸುವ ಉದ್ದೇಶ ಅಲ್ಲಾವುದ್ದೀನ್ ಖಿಲ್ಜಿಯು ಹೊಂದಿರಲಿಲ್ಲ. ಬದಲಾಗಿ ಅವನ ದಾಳಿಯ ಉದ್ದೇಶ ಕೇವಲ ಶರಣಾಗತಿ ಮತ್ತು ಕಪ್ಪಕಾಣಿಕೆ ಸ್ವೀಕರಿಸುವುದಕ್ಕಷ್ಟೇ ಸೀಮಿತವಾಗಿತ್ತು. ಆದರೂ ಮುಸ್ಲಿಮರ ವಕ್ರದೃಷ್ಟಿಯಿಂದ ದಕ್ಷಿಣ ಭಾರತವು ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಯಿತು.

ವಿಜಯನಗರ ಸ್ಥಾಪನೆಯಾಗುವ ಮುನ್ನ ತೆಲುಗು ಸೀಮೆಯಲ್ಲಿ ಬೇಡರ ಸಂಸ್ಥಾನಗಳಿದ್ದವು.[೨೨] ಬೇಡರು ಈ ಹಿಂದಿನಿಂದ ಅನುಭವಿಸಿಕೊಂಡು ಬಂದ ಸೈನಿಕ ವೃತ್ತಿಯನ್ನು ಮುಂದುವರೆಸಿದ್ದರು. ಮೂರನೇ ಬಲ್ಲಾಳನು ತನ್ನ ಕೋಟೆಯ ರಕ್ಷಣೆಗಾಗಿ ಕಿರಾತ ಪಡೆಯನ್ನು ಸ್ಥಾಪಿಸಿದನು.[೨೩] ಮಲ್ಲಿಕಾಫರನ ದಾಳಿಯನ್ನು ತಡೆಯಲು ೩ನೇ ಬಲ್ಲಾಳನು ಮಾಡಿದ ಪ್ರಯತ್ನಗಳೆಲ್ಲಾ ವಿಫಲವಾದವು. ದಕ್ಷಿಣಭಾರತದಲ್ಲಿದ್ದ ಎಲ್ಲಾ ಅರಸರು ಅವನಿಗೆ ಶರಣಾಗಿ ಕಪ್ಪಕಾಣಿಕೆಯನ್ನು ನೀಡಿದರು. ಆದರೆ ತುಂಗಭದ್ರಾ ತೀರದಲ್ಲಿದ್ದ ಕುಮ್ಮಟದುರ್ಗ ಮಾತ್ರ ಮುಸ್ಲಿಂ ದೊರೆಗಳಿಗೆ ಸುಲಭವಾಗಿ ಶರಣಾಗಲಿಲ್ಲ. ಅಲ್ಲಿನ ಬೇಡ ಪಾಳೆಯಗಾರರ ಧೈರ್ಯ ಸಾಹಸ, ಮುಸ್ಲಿಂರ ವಿರುದ್ಧ ನಡೆಸಿದ ಹೋರಾಟ, ಅವರಲ್ಲಿದ್ದ ರಾಜ್ಯಕಟ್ಟುವ ಹುಮ್ಮಸ್ಸು ಯಾವ ಸಾಮ್ರಾಜ್ಯದೊಡೆಯನಿಗಿಂತ ಕಡಿಮೆಯೇನು ಇರಲಿಲ್ಲ. ಮುಮ್ಮಡಿ ಸಿಂಗನು ಕುಮ್ಮಟದುರ್ಗದ ಮೊದಲ ಪಾಳೆಯಗಾರ ಎಂಬುದನ್ನು ಕ್ರಿ.ಶ.೧೨೮೦ ಮತ್ತು ೧೨೮೭ರ ಶಾಸನಗಳು ಸಮರ್ಥಿಸುತ್ತವೆ. ಇವನು ಉತ್ತರದ ಯಾದವ ಮತ್ತು ದಕ್ಷಿಣದ ಹೊಯ್ಸಳರೊಡನೆ ಹೋರಾಡುವಷ್ಟು ಸಾಮರ್ಥ್ಯವನ್ನು ಹೊಂದಿದ್ದನು.[೨೪] ಮುಮ್ಮಡಿ ಸಿಂಗನು ರಾಜನಾದ ನಂತರ ತನ್ನ ಬಂಧು ಬಳಗದವರನ್ನು ತನ್ನ ರಾಜ್ಯದ ಸುತ್ತಮುತ್ತ ಬಂದು ನೆಲೆಸುವಂತೆ ಮಾಡಿದನು. ಕುಮ್ಮಟದುರ್ಗ ರಾಜ್ಯ ಸ್ಥಾಪನೆ ಬೇಡರನ್ನು ಒಂದಡೆ ತಂದಿಟ್ಟಿತು ಮತ್ತು ಅವರ ಜೀವನವನ್ನು ಸುಧಾರಿಸುವಲ್ಲಿ ಮುಖ್ಯ ಪಾತ್ರವಹಿಸಿತು. ಈ ಮೊದಲು ಮುಮ್ಮಡಿ ಸಿಂಗನು ತನ್ನ ದಾಯಾದಿಗಳ ಚಟುವಟಿಕೆಗಳಿಂದ ಬೇಸತ್ತು ದೇವಗಿರಿಯ ರಾಮದೇವನ ಬಳಿ ಬಂದು ೫೦೦ ವರಹ ಸಂಬಳಕ್ಕೆ ನೇಮಕವಾದನು. ಆಗ ಅವನ ದಾಯಾದಿಗಳು ಸಹ ಸಿಂಗನಾಯಕನ ಸಹಾಯದಿಂದ ರಾಮದೇವನ ಆಶ್ರಯದಲ್ಲಿ ಉಳಿದರು. ಅವರಿಗೆ ಕೆಲವು ಚಾಕರಿಗಳನ್ನು ಕೊಡಲಾಯಿತು. ಅದೃಷ್ಟವಶಾತ್ ಸಿಂಗನಾಯಕನಿಗೆ ದ್ರವ್ಯವೊಂದು ಸಿಕ್ಕಿತು. ಅದರಿಂದ ಗ್ರಾಮವೊಂದನ್ನು ಮತ್ತು ಅಲ್ಲಿ ಅರಮನೆಯನ್ನು ಕಟ್ಟಿಸಿದನು. ಇದೇ ಸಂದರ್ಭದಲ್ಲಿ ಯಾರೂ ಎದುರಿಸಲಾಗದ ವ್ಯಾಘ್ರವೊಂದನ್ನು ಸಿಂಗನಾಯಕನು ಕೊಂದನು. ಇವನ ಧೈರ್ಯ ಸಾಹಸವನ್ನು ಮೆಚ್ಚಿ,

ರಾಮದೇವನು 'ಮುಮ್ಮಡಿ' ಎಂಬ ಬಿರುದನ್ನು ಕೊಟ್ಟು ಗೌರವಿಸಿದನು. ನಂತರ ರಾಯದುರ್ಗದ ಮಲ್ಲಭೂಪನು ಸಿಂಗನಾಯಕನಿಗೆ ದಳವಾಯಿ ಪದವಿ ನೀಡಿದನು.[೨೪] ನಂತರದಲ್ಲಿ ರಾಯದುರ್ಗದ ರಾಜನಾಗಿ ಅಧಿಕಾರ ಸ್ಥಾಪಿಸಿದನು.[೨೫] ತನ್ನ ಸಾಮರ್ಥ್ಯದಿಂದ ಮುಮ್ಮಡಿ ಸಿಂಗನು ರಾಜ್ಯವನ್ನು ವಿಸ್ತರಿಸಿದನು. ಕೃಷ್ಣಾನದಿಯ ತಡಿಯಾದ ಕರ್ನೂಲವರೆಗೂ ಪೂರ್ವದಲ್ಲಿ ಕಡಪ ನೆಲ್ಲೂರ(ಜಿ) ಪಶ್ಚಿಮ ಭಾಗದವರೆಗೂ ತನ್ನ ಅಧಿಪತ್ಯವನ್ನು ಸ್ಥಾಪಿಸಿದನು. ಒಟ್ಟಿನಲ್ಲಿ ಅಂದಿನ ಚಿತ್ರದುರ್ಗ ಜಿಲ್ಲೆಯ ಉತ್ತರಾರ್ಧವಾದ ಹರಿಹರ, ದಾವಣಗೆರೆ, ಜಗಲೂರು, ಮೊಳಕಾಲ್ಮೂರು, ಬಳ್ಳಾರಿ ಜಿಲ್ಲೆಯ ಪಶ್ಚಿಮಾರ್ಧವಾದ ರಾಮದುರ್ಗ ಮತ್ತು ಸಂಡೂರು ಸಂಸ್ಥಾನವೂ ಇವನ ಅಧೀನಕ್ಕೆ ಒಳಪಟ್ಟಿದ್ದವು.[೨೬]

ಮುಮ್ಮಡಿ ಸಿಂಗನ ಉತ್ತರಾಧಿಕಾರಿಯಾಗಿ ಬಂದ ಅವನ ಮಗ ಕಂಪಿಲರಾಯನು ಚಿಕ್ಕವನಿದ್ದನು. ಈ ಸಮಯದಲ್ಲಿ ರಾಜ್ಯದಲ್ಲಿ ಕ್ಷೋಭೆಯುಂಟಾಯಿತು. ಹೊಯ್ಸಳ ವೀರಬಲ್ಲಾಳ ಗುತ್ತಿಯ ಚಾಮರಾಜ, ಓರಂಗಲ್ಲಿನ ಪ್ರತಾಪರುದ್ರ ಮುಂತಾದ ಶತ್ರುಗಳು ಕಂಪಿಲರಾಯನ ದೇಶದ ಮೇಲೆ ದಾಳಿ ಮಾಡಿ ಕೆಲವು ಭಾಗಗಳನ್ನು ಗೆದ್ದುಕೊಂಡರು. ಹೀಗಾಗಿ ಕಂಪಿಲರಾಜ್ಯವು ಕುಸಿಯಿತು.[೨೭] ಇದೇ ಕಾಲದಲ್ಲಿ ಜಟ್ಟಂಗಿ ಪ್ರದೇಶಕ್ಕೆ ಬರಗಾಲವೂ ಅಪ್ಪಳಿಸಿತು. ರಾಜ್ಯದ ಸ್ಥಿತಿ ಶೋಚನೀಯವಾಯಿತು. ಆದರೆ ಇದೇ ಪರಿಸ್ಥಿತಿ ಮುಂದವರೆಯಲಿಲ್ಲ. ಕೆಲವು ದಿನಗಳ ನಂತರ ಬರಗಾಲ ಕ್ಷೀಣಿಸಿತು. ಬೆಳೆಯು ಸಮೃದ್ಧವಾಗಿ ಸುಖವುಂಟಾಯಿತು. ವೃದ್ಧಿಯಾದ ಪರಿವಾರಕ್ಕೂ ಕುರಿ, ಮೇಕೆ, ಗೋ ವೃಂದಗಳಿಗೆ ಸಾಕಷ್ಟು ವಸತಿಯನ್ನು ಹುಡುಕುತ್ತಾ ಕಂಪಿಲದೇವರಾಯನು ಅವನ ಪರಿವಾರದವರೂ ವಲಸೆ ಹೊರಟು ನಡುಮಲೆಯಲ್ಲಿ ಹಟ್ಟಿ ಹಾಕಿಕೊಂಡು ಜೀವಿಸುತ್ತಿದ್ದರು.[೨೮] ನಂತರ ಹೊಸಮಲೆ ಎಂಬ ಅರಣ್ಯಕ್ಕೆ ಬಂದು ಹಟ್ಟಿಯನ್ನು ಹಾಕಿಕೊಂಡು ಶಬರ ವೃತ್ತಿಯನ್ನು ಆರಂಭಿಸಿದರು. ಇದು ತಾತ್ಕಲಿಕವಾಗಿ ಜೀವನೋಪಾಯಕ್ಕಾಗಿ ಕೈಗೊಂಡ ವೃತ್ತಿಯಾಗಿತ್ತು. ನಂತರದಲ್ಲಿ ಈ ಶಬರ ಗುಂಪನ್ನು ಬೇಡಪಡೆಯನ್ನಾಗಿ ಪರಿವರ್ತಿಸಿದನು. ಅವನ ಸಹಾಯದಿಂದ ರಾಜನಾಗಿ ಹೊಸಮಲೆದುರ್ಗ ಕೋಟೆಯನ್ನು ನಿರ್ಮಿಸಿದನು. ಇವನ ಕಾಲದಲ್ಲೂ ಕುಮ್ಮಟದುರ್ಗವು (ಹೊಸಮಲೆದುರ್ಗ) ದೇವಗಿರಿ ಯಾದವರ ಒಂದು ಆಶ್ರಿತ ಸಂಸ್ಥಾನವಾಗಿತ್ತು. ದೇವಗಿರಿಯ ರಾಮಚಂದ್ರನು ಅಲ್ಲಾವುದ್ದೀನ್ ಖಿಲ್ಜಿಗೆ ಸೋತು ಶರಣಾದನು. ರಾಮಚಂದ್ರನ ಈ ನಿರ್ಧಾರ ಕಂಪಿಲನಿಗೆ ಇಷ್ಟವಾಗಲಿಲ್ಲ. ಶರಣಾಗತಿಗಿಂತ ಹೋರಾಟ ಮಾಡಬೇಕಾಗಿತ್ತು ಎಂಬುದು ಕಂಪಿಲನ ಬಯಕೆಯಾಗಿತ್ತು. ಹೀಗಾಗಿ ಇಂತಹವನ ಆಶ್ರಿತನಾಗಿರುವುದಕ್ಕಿಂತ ಸ್ವತಂತ್ರವಾಗಿರುವುದೇ ಲೇಸೆಂದು ಕಂಪಿಲರಾಯನು ತನ್ನ ಸ್ವಾತಂತ್ರ್ಯವನ್ನು ಘೋಷಿಸಿಕೊಂಡನು. ನಂತರದಲ್ಲಿ ಕಂಪಿಲರಾಯನು ಮಲ್ಲಿಕಾಫರನು ನಡೆಸಿದ ದಾಳಿಯನ್ನು (ಕ್ರಿ.ಶ.೧೩೧೩-೧೫) ಅತ್ಯಂತ ಯಶಸ್ವಿಯಾಗಿ ಎದುರಿಸಿದನು.[೨೯] ಮಲ್ಲಿಕಾಫರನ ದಾಳಿಯನ್ನು ತಡೆಹಿಡಿದ ನೆನಪಿಗಾಗಿ 'ಪ್ರತಾಪ ಚಕ್ರವರ್ತಿ' ಎಂಬ ಬಿರುದನ್ನು ಧರಿಸಿ

ಸ್ವತಂತ್ರವಾಗಿ ಆಡಳಿತ ನಡೆಸುತ್ತಿದ್ದನು.[೩೦] ಆಗಿನಿಂದ ಈ ಚಿಕ್ಕ ರಾಜ್ಯದ ಅಧಿಕಾರ ಬಲ ಹಾಗೂ ಘನತೆ ಹೆಚ್ಚುತ್ತಾ ಹೋಯಿತು. ಅಷ್ಟು ಹೊತ್ತಿಗೆ ಅದು ಅನಂತಪುರ, ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಗಳ ಕೆಲವು ಭಾಗಗಳನ್ನು ಒಳಗೊಂಡಿತ್ತು.[೩೧]

ಕಂಪಿಲರಾಯನ ಮಗ ಕುಮಾರರಾಮನು ತಂದೆಯಂತೆಯೇ ಸ್ವಾತಂತ್ರ್ಯಾಭಿಮಾನಿ, ಶೂರ, ಹೋರಾಟಗಾರನಾಗಿದ್ದನು. ಕಂಪಿಲರಾಯನಿಗೆ ಸಹಾಯಕನಾಗಿ ನಿಂತು ಕುಮಾರರಾಮನು ಅನೇಕ ಯುದ್ಧಗಳನ್ನು ಗೆದ್ದನು. ಕುಮಾರರಾಮನ ಅಪೇಕ್ಷೆ ಮೇರೆಗೆ ಕುಮ್ಮಟದುರ್ಗವು ಒಂದು ಹೊಸರಾಜಧಾನಿಯಾಗಿ ಮಾರ್ಪಟ್ಟಿತು.[೩೨] ಹೊಸಮಲೆ ಪಟ್ಟಣದ ಪ್ರಜೆಗಳೆಲ್ಲರೂ ಹೊಸ ಕುಮ್ಮಟದುರ್ಗಕ್ಕೆ ಬಂದು ನೆಲೆಸಿದರು. ರಾಮನಾಥನ ಭಾವಮಲ್ಲ ಎಂಬುವನು ನಾನಾ ದೊರೆಗಳಿಗೆ ಕಳುಹಿಸಿ ವೀರದ ಬೇಡರನ್ನು ಕರೆಸಿಕೊಂಡು ಬೇಡ ಪಡೆಗಳನ್ನು ಏರ್ಪಡಿಸಿದನು. ಈ ರೀತಿಯಾಗಿ ಬೋಟಿ ಬೊಮ್ಮ, ಮುದಿಗೊಂಡಲೋಬ, ಬೇಟೆಸಿಂಗ ಮೊದಲಾದ ಎಪ್ಪತ್ತು ಮಾನ್ಯರ ಅಧೀನದಲ್ಲಿ ಬೇಡ ಸೈನ್ಯವು ತುಕಡಿಗಳಾಗಿ ವಿಂಗಡಿಸಲ್ಪಟ್ಟಿತು. ಸೋದರ ಮಾವಂದಿರು ಅಶ್ವಸೇನಾಪತಿಗಳಾದರು.[೩೩] ಅಪ್ರತಿಮ ಶೂರನಾಗಿದ್ದ ಕುಮಾರರಾಮನು ಅನೇಕ ಯುದ್ಧಗಳಲ್ಲಿ ಗೆಲುವನ್ನು ಪಡೆದನು. ಒರಂಗಲ್ಲಿನ ಪ್ರತಾಪರುದ್ರನ ಮೇಲೆ ಸೈನ್ಯ ಸಮೇತನಾಗಿ ಹೋಗಿ ಜಯಶೀಲನಾಗಿ ಅಲ್ಲಿಂದ ಪ್ರಸಿದ್ಧ 'ಎಪ್ಪತರಾಯನ ಬೊಲ್ಲ' ಎಂಬ ಪ್ರಸಿದ್ಧ ಅಶ್ವವೊಂದನ್ನು ತೆಗೆದುಕೊಂಡು ಬಂದು ಸಕಲಬಿರುದುಗಳನ್ನು ಇಟ್ಟುಕೊಂಡನು.[೩೪] ಹೊಯ್ಸಳ ದೊರೆ ವೀರಬಲ್ಲಾಳನ ಮೇಲೆ ೧೬ ಸಾವಿರ ಪಡೆಯೊಂದಿಗೆ ದಾಳಿ ಮಾಡಿದನೆಂದರೆ ಕುಮಾರರಾಮನ ಸೈನ್ಯದ ಸಾಮರ್ಥ್ಯ ಗೊತ್ತಾಗುತ್ತದೆ. ಕೊಂಗು ಮಲೆಯಾಳ, ಮಧುರೆ, ಕೊಡಗು, ಕೋಲಾರ, ಪೆನಗೊಂಡೆ, ನಿಡಗಲ್ಲು, ಮಿಡಗೇಶಿ, ಮಾಗಡಿ, ಮಧುಗಿರಿ, ಕಡಪ, ಕರ್ನೂಲು, ರಾಯದುರ್ಗ, ಕೆಳದಿನಾಡು, ಹಾವನೂರು, ಹುಬ್ಬಳ್ಳಿ, ಜರಿಮಲೆ, ಕನಕಾದ್ರಿ, ರಾಯಪೀಠ, ಆನೆಗೊಂದಿ ಮುಂತಾದ ಪ್ರದೇಶದ ರಾಜರುಗಳು ರಾಮನಿಗೆ ಕೈಮುಗಿದು ಉಡುಗೊರೆ ಹೊನ್ನನ್ನು ಮುಂತಾದವುಗಳನ್ನು ಒಪ್ಪಿಸಿದರು. ಅವರಿಗೆಲ್ಲಾ ರಾಮನು ಸರಿಯಾದ ಉಡುಗೊರೆಯನ್ನು ಕೊಟ್ಟು ಕಳುಹಿಸಿದನು.[೩೫] ಕುಮಾರರಾಮನಿಗೆ ಕಪ್ಪಕೊಡುತ್ತಾ ಹನ್ನೊಂದು ಅರಸರು ಮತ್ತು ಇತರೆ ಅನೇಕ ಸಣ್ಣಪುಟ್ಟ ಮಂದಿ ಕುಮಾರರಾಮನ ಆಜ್ಞೆಗಳನ್ನು ಪಾಲಿಸುತ್ತಾ ಇದ್ದರು ಎಂಬುದನ್ನು ಕೈಫಿಯತ್ತು ತಿಳಿಸುತ್ತದೆ.[೩೬] ಕುಮಾರರಾಮನ ಪ್ರಸಿದ್ಧಿ ಉತ್ತರಭಾರತದ ದೆಹಲಿ ಸುಲ್ತಾನರಿಗೂ ಮುಟ್ಟಿತು. ಇವನು ಅನೇಕ ಬಿರುದುಗಳ ಒಡೆಯನಾದನು. ಆದರೆ ಬೇಡರಲ್ಲೊಬ್ಬ ಈ ಪ್ರಸಿದ್ಧಿಯನ್ನು ಪಡೆದುಕೊಂಡಿದ್ದು ಕೆಲವರಿಗೆ ಇಷ್ಟವಾಗಲಿಲ್ಲ. ಕುಮಾರರಾಮನನ್ನು ಕಳ್ಳಬೇಡ ಎಂದು ಕರೆದು ಮಾರನಗೌಡ ಎಂಬುವನನ್ನು ಕುಮಾರರಾಮನು ಅವನ ಗರ್ವವನ್ನು ಭಂಗ ಮಾಡಿದನು.[೩೭]

ಮಹಮ್ಮದ್‌ಬಿನ್ ತುಘಲಕನ ಸೋದರಿಯ ಮಗ ಬಹಾ-ಉದ್-ದೀನ್ ಗುರಾಷಾಸ್ಪನು ಮಹಮ್ಮದ್ ಬಿನ್ ತುಘಲಕನ ವಿರುದ್ಧವೇ ದಂಗೆ ಎದ್ದು ಕಂಪಿಲರಾಯನ ಆಶ್ರಯಕ್ಕೆ ಬಂದನು. ಕಂಪಿಲರಾಯನು ಮುಂದೆ ಆಗಬಹುದಾದ ವಿಪತ್ತನ್ನು ಯೋಚಿಸದೇ ಆಶ್ರಯಕೋರಿ ಬಂದವನನ್ನು ರಕ್ಷಿಸಿದನು. ಈ ಸುದ್ದಿ ತಿಳಿದ ತುಘಲಕನು ಪ್ರಬಲವಾದ ಪಡೆಯೊಂದನ್ನು ಕಂಪಿಲರಾಯನ ವಿರುದ್ಧ ಕಳುಹಿಸಿದನು. ಈ ಸೈನ್ಯವನ್ನು ಕಂಪಿಲರಾಯನು ಅತ್ಯಂತ ವೀರೋಚಿತವಾಗಿ ಎದುರಿಸಿದನು. ಎರಡು ಬಾರಿ ತುಘಲಕನ ಸೈನ್ಯವನ್ನು ಸೋಲಿಸಿದನು.[೩೮] ಬೇಡರ ಪಡೆಯು ನಿರ್ಭಯವಾಗಿ ಹೋರಾಡುತ್ತಿತ್ತು. ಕುಮ್ಮಟದ ರಕ್ಷಣೆ ತಮ್ಮ ರಕ್ಷಣೆಯೇ ಆಗಿತ್ತು. ಮುಸಲ್ಮಾನರ ದಾಳಿಗಳನ್ನು ಒಗ್ಗಟ್ಟಿನಿಂದ ಎದುರಿಸುತ್ತಿದ್ದರು. ಮುಸ್ಲಿಂ ದಂಡು ಕುಮ್ಮಟದುರ್ಗವನ್ನು ಮುತ್ತಿದಾಗ ಹರಿಯಾಲದೇವಿ ಸೋದರರು ೬೦೦೦ ಗಾವುತರೊಂದಿಗೆ ಹೋಗಿ ದಾರಿಯಲ್ಲಿ ಬರುತ್ತಿದ್ದ ದಂಡನ್ನು ಎದುರಿಸಿದರು.[೩೯] ಗುಜ್ಜಲವಂಶಕ್ಕೆ ಸೇರಿದ ಹರಿಯಲಾದೇವಿ ಕನಕಗಿರಿಯವಳು. ವಿಜಯನಗರ ಕಾಲಕ್ಕೆ ಕನಕಗಿರಿ ನಾಯಕರು ಪ್ರಸಿದ್ಧಿಗೆ ಬಂದರು. ಕುಮ್ಮಟದುರ್ಗವು ಬಲಿಷ್ಠಕೋಟೆಗಳಲ್ಲಿ ಒಂದಾಗಿತ್ತು. ಕಂಪಿಲರಾಯನು ತನ್ನ ಮಗ ಕುಮಾರರಾಮನು ಪ್ರಾಪ್ತ ವಯಸ್ಸಿಗೆ ಬಂದಿದ್ದರೂ ರತ್ನಾಜಿ ಎಂಬ ಸುಂದರಿಯನ್ನು ಮೆಚ್ಚಿ ಮದುವೆ ಮಾಡಿಕೊಂಡನು. ಇವಳು ಕುಮಾರರಾಮನನ್ನು ಕೊಲ್ಲಲೆಂದು ಬಂದವಳು ಎನಿಸುತ್ತದೆ. ಕುಮಾರರಾಮನು ತನ್ನ ಸ್ನೇಹಿತರ ಜೊತೆ ಮುತ್ತಿನ ಚೆಂಡಿನಾಟ ಆಡುವಾಗ ರತ್ನಾಜಿ ಅವನ ಮೇಲೆ ಮೋಹಗೊಂಡಳು. ಆದರೆ ಕುಮಾರರಾಮನು ಹೆತ್ತ ತಾಯಿಯ ಸಮವೆಂದು ತಿಳಿದು ಅವಳನ್ನು ತಿರಸ್ಕರಿಸಿದನು. ಇದರಿಂದ ಸಿಟ್ಟಿಗೆದ್ದ ರತ್ನಾಜಿ ಕುಮಾರರಾಮನನ್ನು ಕೊಲ್ಲುವ ಸಂಚು ಹೂಡಿದಳು. ಸಲ್ಲದ ಆಪಾದನೆಗಳನ್ನು ಕುಮಾರರಾಮನ ಮೇಲೆ ಆರೋಪಿಸಿ, ಕಂಪಿಲರಾಯನಲ್ಲಿ ತನ್ನ ಕಳ್ಳದುಃಖವನ್ನು ಹೇಳಿಕೊಂಡಳು. ರತ್ನಾಜಿ ಹೇಳಿದ ಮಾತುಗಳನ್ನು ನಂಬಿದ ಕಂಪಿಲರಾಯನು ಕುಮಾರರಾಮನನ್ನು ಕೊಲ್ಲುವಂತೆ ಆದೇಶಿಸಿದನು. ಆದರೆ ಮಂತ್ರಿ ಬೈಚಪ್ಪನ ಜಾಣತನದಿಂದ ಕುಮಾರರಾಮನು ಸುರಕ್ಷಿತವಾಗಿ ಉಳಿದುಕೊಂಡನು. ಮೂರನೇ ಬಾರಿಗೆ ಮಹ್ಮಮದ್ ಬಿನ್ ತುಘಲಕನು ಕಂಪಿಲಿ ರಾಜ್ಯದ ಮೇಲೆ ದಾಳಿ ಮಾಡಿದಾಗ ಕಂಪಿಲರಾಯನು ತೀರಾ ಇಕ್ಕಟ್ಟಿನ ಸ್ಥಿತಿಯಲ್ಲಿದ್ದಾಗ ಕುಮಾರರಾಮನು ತಂದೆಯ ಜತೆಗೂಡಿ ರಣರಂಗದಲ್ಲಿ ಹೋರಾಡುತ್ತಾ ವೀರಮರಣ ಹೊಂದಿದನು. ಈ ಸಂದರ್ಭದಲ್ಲಿ ರಾಜನ ಸಲಹೆ ಮೇರೆಗೆ ರಾಜ ಕುಟುಂಬದ ಸ್ತ್ರೀಯರು ಸಹ ಜೌಹರ ವಿಷಯ ಮೂಲಕ ಮರಣವನ್ನು ಆಶ್ರಯಿಸಿದರು.[೪೦] ಸುಮಾರು ೩೧ ವರ್ಷಗಳ ಸ್ವತಂತ್ರವಾಗಿ ಎಲ್ಲಾ ವಿಧದ ದಾಳಿಗಳನ್ನು ಎದುರಿಸಿ ಸಂಪದ್ಭರಿತ ವ್ಯವಸ್ಥಿತ ರಾಜ್ಯವಾಗಿ ಮೆರೆದ ನಾಡು ಕ್ರಿ.ಶ.೧೩೨೭ರಲ್ಲಿ ನಾಶವಾಗಿ ಹೋಯಿತು.[೪೧] ತನ್ನ ೧೬ನೇ ವರ್ಷದಲ್ಲಿ ಕುಮಾರರಾಮನು ಹೋರಾಡುತ್ತಾ ವೀರಸ್ವರ್ಗ

ಸೇರಿದನು.[೪೨] ಕುಮಾರರಾಮ ಒಬ್ಬ ವ್ಯಕ್ತಿ ಅವನೊಬ್ಬ ದೈವೀ ಶಕ್ತಿ ಎಂಬ ಹಿನ್ನೆಲೆಯಲ್ಲಿ ಬೇಡರ ಆರಾಧ್ಯ ದೈವವಾಗಿ ಇಂದಿಗೂ ಪೂಜಿಸಲ್ಪಡುತ್ತಾನೆ. ಇವನ ಕಲಿತನ ಎಷ್ಟು ಅವನನ್ನು ಉನ್ನತ ಮಟ್ಟಕ್ಕೇರಿಸಿತೋ ಅಷ್ಟೇ ಅವನ ಪರದಾರ ಸಹೋದರರತ್ವವೂ ಕಾರಣವಾಯಿತು.[೪೩]

ಕಂಪಲಿಯನ್ನು ವಶಪಡಿಸಿಕೊಂಡ ತುಘಲಕ್ ಮಲ್ಲಿಕ್ ಮಹಮ್ಮದ್ ಎಂಬುವನನ್ನು ಅದರ ಪ್ರಾಂತ್ಯಪಾಲಕನನ್ನಾಗಿ ನೇಮಿಸಿದನು. ಉತ್ತರದಲ್ಲಿ ಆಗ ದಾಳಿಗಳು ಆರಂಭವಾದ್ದರಿಂದ ಮಲ್ಲಿಕ್ ಮಹಮ್ಮದನ ಸಹಾಯಕ್ಕಾಗಿ ಸೈನ್ಯವನ್ನು ಬಿಟ್ಟು ಅನೇಕ ಜನರನ್ನು ಸೆರೆಯಾಳುಗಳನ್ನಾಗಿ ಮಾಡಿಕೊಂಡು ದೆಹಲಿಗೆ ಹೊರಟು ಹೋದನು. ಅಷ್ಟೊತ್ತಿಗೆ ಮುಸಲ್ಮಾನರ ಸಂಕೋಲೆಯಿಂದ ದೇಶವನ್ನು ಮುಕ್ತಗೊಳಿಸುವ ಪ್ರಯತ್ನಗಳು ಆರಂಭವಾಗಿದ್ದವು.[೪೪] ಬೇಡ ನಾಯಕರು ಮಾಡಿದ ಇಂತಹ ಪ್ರಯತ್ನಗಳನ್ನು ಮಾಡಿದ್ದನ್ನು ಸ್ಮರಿಸಬಹುದು. ಪ್ರೋಲಯನಾಯಕನೆಂಬುವನು ಹಿಂದೂ ಧರ್ಮವನ್ನು ರಕ್ಷಿಸುವುದಕ್ಕಾಗಿ ಹೋರಾಡಿ ೧೩೩೦-೩೫ರಲ್ಲಿ ಮರಣ ಹೊಂದಿದನು. ನಂತರ ಅವನ ಮಗ ಕಾಪಾಯನಾಯಕ ಎಪ್ಪತ್ತೈದು ರಾಜರುಗಳ ಕೂಟದ ನಾಯಕನಾಗಿದ್ದನು. ಸುಲ್ತಾನನ ಸಾಮ್ರಾಜ್ಯವನ್ನು ನಿರ್ನಾಮಗೊಳಿಸುವ ಕಾರ್ಯಗತಿಯನ್ನು ಶೀಘ್ರಗೊಳಿಸಲು ದಕ್ಷಿಣದ ಹಿಂದೂ ರಾಜರ ಒಂದು ಒಕ್ಕೂಟವನ್ನು ಸ್ಥಾಪಿಸಲು ಅವನು ಪ್ರಯತ್ನಿಸಿದನು.[೪೫]

ಮಲ್ಲಿಕ್‌ನಾಯಿಬನ ವಿರುದ್ಧ ಕಂಪಿಲಿಯ ಜನರು ಬಂಡಾಯ ಆರಂಭಿಸಿದರು. ತೆರಿಗೆಗಳನ್ನು ಪಾವತಿ ಮಾಡದೆ ಹಾಗೆಯೇ ಉಳಿಸಿಕೊಂಡರು. ಅವರು ಆ ಪ್ರಾಂತಪಾಲನ ಮುಖ್ಯ ಕಛೇರಿಯನ್ನು ಸುತ್ತುವರಿದರು. ಅಷ್ಟೇ ಅಲ್ಲದೆ ಯಾವ ವಸ್ತುವೂ ಅವನಿಗೆ ದೊರೆಯದಂತೆ ತಡೆಗಟ್ಟಿದರು.[೪೬] ಈ ದಂಗೆಯನ್ನು ಶಮನ ಮಾಡಲು ಹಿಂದುಗಳನ್ನೇ ಆ ಪ್ರದೇಶಕ್ಕೆ ಪ್ರಾಂತಪಾಲರನ್ನಾಗಿ ನೇಮಿಸಬೇಕೆಂಬ ವಿಚಾರ ಸುಲ್ತಾನನಿಗೆ ಮುಟ್ಟಿತು. ಸೆರೆಯಾಳುಗಳನ್ನಾಗಿ ಮಾಡಿಕೊಂಡು ಹೋಗಿದ್ದವರಲ್ಲಿ ಇಬ್ಬರು ಸಹೋದರರು (ಹರಿಹರ-ಬುಕ್ಕರು) ಕಂಪಿಲಿ ಪ್ರಾಂತ್ಯದ ಪ್ರಾಂತಪಾಲ ಮತ್ತು ಉಪಪ್ರಾಂತಪಾಲರಾಗಿ ನೇಮಕವಾದರು. ಶಾಂತಿ ಶಿಸ್ತು ಸ್ಥಾಪಿಸಲು ಅವರ ಜೊತೆ ಸೈನ್ಯವೊಂದನ್ನು ಕಳುಹಿಸಿದನು. ಈ ನಡುವೆ ನಡೆಯುತ್ತಿದ್ದ ಹಿಂದೂ ರಾಷ್ಟ್ರೀಯ ಚಳುವಳಿಯ ಪ್ರಭಾವಕ್ಕೆ ಹರಿಹರ ಬುಕ್ಕರು ಒಳಗಾದರು. ವಿದ್ಯಾರಣ್ಯರಿಂದ ಪ್ರೇರಿತರಾಗಿ ಇಸ್ಲಾಂ ಧರ್ಮವನ್ನು ತ್ಯಜಿಸಿ ಚಳುವಳಿಯ ನೇತೃತ್ವವನ್ನು ವಹಿಸಿಕೊಂಡರು.[೪೭] ಅಲ್ಲದೆ ಕ್ರಿ.ಶ.೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು. ಇವರು ಕುಮ್ಮಟದುರ್ಗದಲ್ಲಿ ಈ ಓಂದೆ ಹರಿಹರ ಮತ್ತು ಬುಕ್ಕರು ಕಾವಲುಗಾರರಾಗಿದ್ದರು. ಅವರು ಕಂಪಿಲರಾಯನ ಭಾವಸಂಗಮನ ಮಕ್ಕಳಾಗಿದ್ದರು. ಹೀಗಾಗಿ ಕಂಪಿಲರಾಯನ ಕಡೆ ಅಳಿದುಳಿದ ಜನರು ವಿಜಯನಗರದ ಸ್ಥಾಪನೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿದ್ದರು.[೪೮]

## ವಿಜಯನಗರ ಕಾಲದಲ್ಲಿ ಬೇಡಜನಾಂಗ

ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಮಧ್ಯಕಾಲೀನ ಭಾರತೀಯ ಚರಿತ್ರೆಯಲ್ಲಿ ಒಂದು ಮೈಲುಗಲ್ಲು. ಈ ಸಮಯದಲ್ಲಿ ದಕ್ಷಿಣ ಭಾರತದ ಅನೇಕ ಹಿಂದೂ ರಾಜಮನೆತನಗಳು ಮುಸ್ಲಿಮರ ಅಧೀನವಾಗಿದ್ದವು. ಅಲ್ಲದೆ ಅವರ ದಾಳಿಗಳಿಂದ ಜನರು ಅನೇಕ ನೋವುಗಳನ್ನು ಅನುಭವಿಸಿದರು. ದೇವಾಲಯಗಳು ಹಾಳದವು. ಸಂಪತ್ತನ್ನು ದೋಚಲಾಯಿತು. ಅಲ್ಲಾವುದ್ದೀನ್ ಖಿಲ್ಜಿ ಮತ್ತು ಮಹಮ್ಮದ್‌ಬಿನ್ ತುಘಲಕರ ವಿರುದ್ಧ ಇಲ್ಲಿನ ಅರಸರು ಶರಣಾಗತಿ ಮತ್ತು ಕಪ್ಪಕಾಣಿಕೆ ನೀತಿಯನ್ನು ಅನುಸರಿಸಿದರು. ಮುಸ್ಲಿಂ ದಾಳಿಯನ್ನು ತಡೆಯುವ ಸಾಮರ್ಥ್ಯವಾಗಲಿ, ಒಗ್ಗಟ್ಟಾಗಲಿ ಅವರಲ್ಲಿರಲಿಲ್ಲ. ಇಂತಹ ಕ್ಲಿಷ್ಟ ಸನ್ನಿವೇಶದಲ್ಲಿ ಕುಮ್ಮಟದುರ್ಗದ ಪಾಳೆಯಗಾರರು ದೆಹಲಿ ಸುಲ್ತಾನರನ್ನು ಕಡೆಗಣಿಸಿ ಸ್ವತಂತ್ರವಾಗಿ ಅಧಿಕಾರವನ್ನು ನಡೆಸಿದರಾದರೂ ಮುಸ್ಲಿಂ ದಾಳಿಕೋರರ ಹೊಡೆತಕ್ಕೆ ಸಿಕ್ಕು ತತ್ತರಿಸಿಬೇಕಾಯಿತು. ಇಡೀ ದಕ್ಷಿಣ ಭಾರತವೇ ಮುಸ್ಲಿಮರ ಹಿಡಿತಕ್ಕೊಳಪಟ್ಟಿತು. ಹಿಂದೂಧರ್ಮ ಅವನತಿಯಲ್ಲಿತ್ತು. ಅಧಿಕಾರಿಗಳು, ಜನರು ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸುವಲ್ಲಿ ನಿರ್ಣಾಯಕ ಪಾತ್ರವಹಿಸಿದರು. ವಿದ್ಯಾರಣ್ಯರ ಸಹಾಯದೊಂದಿಗೆ ಹರಿಹರ ಮತ್ತು ಬುಕ್ಕರು ಕ್ರಿ.ಶ.೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಅಡಿಗಲ್ಲು ಹಾಕಿದರು.

ಕುಮ್ಮಟದುರ್ಗ ಹಾಳಾದ ಮೇಲೆ ಚದುರಿಹೋದ ನಾಯಕ ಜನಾಂಗದವರು ಮತ್ತೆ ವಿಜಯನಗರಕ್ಕೆ ಮರಳಿ ಬಂದರು. ಅಲ್ಲದೆ ಆಯಕಟ್ಟಿನ ಸ್ಥಳಗಳಲ್ಲಿ ಪಾಳೆಯಗಾರಿಕೆಯನ್ನು ಸ್ಥಾಪಿಸಿಕೊಂಡು ವಿಜಯನಗರದ ರಕ್ಷಣಾ ಕಾರ್ಯದಲ್ಲಿ ನಿರತರಾದರು. ಇವರ ಸಹಾಯದಿಂದ ಹಕ್ಕ ಬುಕ್ಕರು ತಮ್ಮ ರಾಜ್ಯವನ್ನು ವಿಸ್ತರಿಸಲು ಹೆಚ್ಚು ಅನುಕೂಲವಾಯಿತು.[೪೯] ನಂಬಿಕೆಗೆ ಅರ್ಹರಾದ ಮತ್ತು ಹೋರಾಟಗಳಲ್ಲಿ ನಿಪುಣರೂ, ಧೈರ್ಯಶಾಲಿಗಳೂ ಆಗಿದ್ದ ಬೇಡರಿಗೆ ರಾಜಮಹಾರಾಜರು ಈ ಹಿಂದಿನಿಂದಲೂ ಒಳ್ಳೆಯ ಸ್ಥಾನಮಾನವನ್ನು ನೀಡುತ್ತಾ ಬಂದಿದ್ದರು. ವಿಜಯನಗರ ಅರಸರೂ ಸಹ ಬೇಡ ಜನಾಂಗಕ್ಕೆ ತಕ್ಕ ಸ್ಥಾನಮಾನಗಳನ್ನು ನೀಡಿ ರಾಜಕೀಯವಾಗಿ ಬೆಳೆಯಲು ಕಾರಣರಾದರು. ಯೋಧ ವೃತ್ತಿಯಲ್ಲಿ ಪಳಗಿದ್ದವರು ಈ ನಾಯಕರು. ಅವರ ಮುಖ್ಯ ವೃತ್ತಿ ಯುದ್ಧ ಮಾಡುವುದಾಗಿತ್ತು.[೫೦] ಯೋಧ ವೃತ್ತಿಯು ವಂಶಪಾರಂಪರ್ಯವಾಗಿ ಬೇಡ ಜನಾಂಗದಲ್ಲಿ ಮುಂದುವರೆಯಿತು. ವಿಜಯನಗರ ಅರಸರು ಬೇಡರನ್ನು ಸೈನ್ಯದಲ್ಲಿ ಸೇರಿಸಿಕೊಂಡರು. ವಿಜಯನಗರ ಸೈನ್ಯದ ಬಹುಭಾಗವು ಈ ಬೇಡರ ಕಾಲಾಳುಗಳ ಪಡೆಯಿಂದ ಕೂಡಿದ್ದಿತು.[೫೧] ಅಲ್ಲದೆ ಸೈನ್ಯದ ಅನೇಕ ಹುದ್ದೆಗಳಲ್ಲಿ ಬೇಡರಿದ್ದರು.[೫೨] ಕೆಲವು ಉಪಜಾತಿಗಳ ಗಣ್ಯರನ್ನು ಮುಖ್ಯವಾಗಿ ಅಮರ ನಾಯಕರನ್ನಾಗಿ ಗೇಣಿ ರೈತರಾಗಿ, ಕಾವಲುಗಾರನಾಗಿ ನೇಮಕ ಮಾಡಲಾಗಿತ್ತು.[೫೩] ಕ್ರಿ.ಶ.೧೩೪೬ರಲ್ಲಿ

ಬಹುಮನಿ ಸಾಮ್ರಾಜ್ಯವು ಸ್ಥಾಪನೆಯಾಯಿತು. ಬಹುಮನಿಯ ಸುಲ್ತಾನರು ವಿಜಯನಗರದ ಮೇಲೆ ಸದಾ ಕಾಳಗವನ್ನು ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಮುಸ್ಲಿಂ ದಾಳಿಗಳನ್ನು ತಡೆಯುವುದಕ್ಕಾಗಿ ಬೇಡರನ್ನು ನೇಮಕ ಮಾಡಿಕೊಂಡರು. ಈ ಜವಾಬ್ದಾರಿಯನ್ನು ಬೇಡ ಸೈನಿಕರು ಸಮರ್ಥವಾಗಿ ನಿರ್ವಹಿಸಿದರು. ಅವರು ಮುಸ್ಲಿಂ ದಾಳಿಗಳು ಕೃಷ್ಣ ನದಿಯನ್ನು ದಾಟದಂತೆ ನೋಡಿಕೊಳ್ಳುವಲ್ಲಿ ಮುಖ್ಯಪಾತ್ರವಹಿಸಿದ್ದರು.[೫೪] ವಿಜಯನಗರ ಸಾಮ್ರಾಜ್ಯದ ಸೈನ್ಯದಲ್ಲಿ ಮೀಸಲು ಪಡೆಯೆಂಬುದು ಇತ್ತು, ಆ ಮೀಸಲು ಪಡೆಯಲ್ಲಿ ಬೇಡರು ನಾಯಕರಾಗಿದ್ದರು ಎಂದು ಹೇಳಲಾಗಿದೆ.[೫೫] ವಿಜಯನಗರ ಕಾಲಕ್ಕೆ ಭೇಟಿ ನೀಡಿದ ವಿದೇಶಿ ಪ್ರವಾಸಿಗರು ವಿಜಯನಗರ ಸೈನ್ಯದ ಬಗ್ಗೆ ತುಂಬಾ ಕೊಂಡಾಡಿದ್ದಾರೆ. ಸೈನ್ಯದಲ್ಲಿ ಬೇಡರು ಪ್ರಮುಖ ಸ್ಥಾನದಲ್ಲಿದ್ದರು. ಪೆರಿಯ ಓಬಳನಾಯಕ ಎಂಬುವನು ವಿಜಯನಗರ ಸೈನ್ಯದಲ್ಲಿ ಉನ್ನತ ಹುದ್ದೆಯನ್ನು ಹೊಂದಿದ್ದನು.[೫೬] ಯೋಧ ವೃತ್ತಿಯಲ್ಲಿ ಪ್ರಸಿದ್ಧಿಯನ್ನು ಪಡೆದ ಬೇಡ ಜನಾಂಗವನ್ನು ದಕ್ಷಿಣ ಭಾರತದ ಅರಸರು ಹೋರಾಟದ ಸಾಧನವನ್ನಾಗಿ ಬಳಸಿಕೊಳ್ಳುತ್ತಿದ್ದರು.[೫೭] ಬೇಡರು ಬಳಸುತ್ತಿದ್ದ ಶಸ್ತ್ರಗಳು ಅವರ ಮನೆಯಲ್ಲಿ ಹಾಗೇ ಉಳಿದುಕೊಂಡು ಬಂದು ಕಾಲಕ್ರಮೇಣ ಬಹುಸಂಖ್ಯೆಯಲ್ಲಿ ಶಸ್ತ್ರಗಳು ಹಾಳಾಗಿವೆ. ಆದರೂ, ಕೆಲವು ಶಸ್ತ್ರಗಳನ್ನು ಬೇಡರ ಮನೆಗಳಲ್ಲಿ ಇಂದಿಗೂ ಕಾಣಬಹುದು. ಈ ಶಸ್ತ್ರಗಳು ಅವರಿಗೆ ಆಸ್ತಿ ಇದ್ದಂತೆ ಅತ್ಯಂತ ಪೂಜ್ಯನೀಯ ಭಾವನೆಗಳಿಂದ ಅವುಗಳನ್ನು ಕಾಯ್ದುಕೊಂಡು ಬಂದಿದ್ದಾರೆ. ವಿಶೇಷ ಹಬ್ಬಹರಿದಿನಗಳಲ್ಲಿ ಅವುಗಳನ್ನು ಪೂಜಿಸುತ್ತಾರೆ. ವಿಜಯನಗರ ಆಡಳಿತದಲ್ಲಿ ಮೈಸೂರು ಜಿಲ್ಲೆಯ ಬೇಡರ ಜಾತಿಯ ಅಧಿಕಾರಿಗಳು ಬಹಳಷ್ಟು ಮಂದಿ ಇದ್ದರು ಎಂಬುದಕ್ಕೆ ಶಿಲಾಶಾಸನ ಆಧಾರವಿದೆ. ಬೆಟ್ಟದಪುರ, ರಾವಂದೂರು, ಕೊಳ್ಳೇಗಾಲಗಳಲ್ಲಿ ಬೇಡ ನಾಯಕರ ಪ್ರಾಚೀನ ಶಿಲಾಶಾಸನಗಳು ದೊರಕುತ್ತವೆ. ವಿಜಯನಗರದ ಸ್ಥಳೀಯ ಆಡಳಿತದಲ್ಲಿ ಬೇಡರು ಅಧಿಕಾರಿಗಳಿದ್ದರು.[೫೮] ಸೈನ್ಯದಲ್ಲಿ ಹೆಚ್ಚಾಗಿ ಬೇಡರನ್ನೇ ನೇಮಿಸಿಕೊಳ್ಳುತ್ತಿದ್ದರು.[೫೯]

ಬೇಡ ನಾಯಕರ ಗಣರಾಜ್ಯಗಳಂತಿದ್ದ ಬೇಡವಟ್ಟುಗಳು ಕಾಲಕ್ರಮೇಣ ಸಂಸ್ಥಾನಗಳಾಗಿ ರೂಪಗೊಂಡವು. ಅವುಗಳ ಅಧಿಕಾರಿಗಳನ್ನು ಪಾಳೆಯಗಾರರೆಂದು ಕರೆಯಲಾಯಿತು. ಸುಮಾರು ಹತ್ತನೆಯ ಶತಮಾನದಲ್ಲೀ ಈ ರೀತಿ ಸ್ಥಾಪನೆಯಾಗಿ ಪ್ರಖ್ಯಾತಿ ಹೊಂದಿದ ಪಾಳೆಯಪಟ್ಟಗಳಲ್ಲಿ ಆನೆಗೊಂದಿಯೇ ಮೊದಲನೆಯದು.[೬೦] ಪಾಳೆಯಗಾರರು ವೀರಪುರಷರಾಗಿ ಭಾರತದ ಎಲ್ಲೆಡೆಗಳಲ್ಲಿ ಪ್ರಸಿದ್ಧಿಗೆ ಬಂದವರಾದರೂ ಅವರು ದರೋಡೆಗಾರರು, ಸುಲಿಗೆಕೋರರು ಎಂಬ ಅಪಕೀರ್ತಿಗೆ ಗುರಿಯಾದರು. ಪಾಳೆಯಗಾರರೆಂಬ ಹೆಸರಿನ ಇವರು ತೆಲುಗಿನಲ್ಲಿ 'ಪಾಳೆಗಾಡು', ತಮಿಳುನಲ್ಲಿ 'ಪಾಲೈಕ್ಕಾರನ್', ಮರಾಠಿಯಲ್ಲಿ 'ಪಾಳೇಗಾರ' ಎಂದು ಹೆಸರಾಗಿರುವರು. ಇವರ ಅಧೀನವಾಗಿದ್ದ ಭೂ ಪ್ರದೇಶಕ್ಕೆ ಪೊಲ್ಲಂ ಎಂದು ಹೆಸರಿದ್ದ ಕಾರಣ ಇವರಿಗೆ ಪಾಳೆಯಗಾರ ಎಂಬ ಹೆಸರು ಬಂದಿತೆಂದು ತೋರುವುದು. ಪಾಳೆಯಗಾರರು ಸಾಮಾನ್ಯವಾಗಿ ೨೦ ಹಳ್ಳಿಗಳ

ಒಂದು ಗುಚ್ಚಕ್ಕೆ (ಪೊಲ್ಲಂ ಎಂಬ ರಾಜಕೀಯ ಘಟಕ) ಮುಖ್ಯಸ್ಥರಾಗಿದ್ದರು. ರಾಜಕೀಯ ಹೊರರಚನೆಗೆ ಸ್ಥಳೀಯ ತಳಹದಿ ಈ ಪಾಳೆಯಗಾರ ವ್ಯವಸ್ಥೆಯಾಗಿತ್ತು. ಸ್ಥಳೀಯವಾಗಿ ಅಧಿಕಾರವನ್ನು ಹಿಡಿದುಕೊಂಡಿದ್ದ ಇವರು ದಖಿನ್ ಪ್ರಸ್ಥಭೂಮಿಯಾದ್ಯಂತ ಹರಡಿರುವ ಬೆಟ್ಟಗುಡ್ಡಗಳ ಮೇಲೆ ದುರ್ಗಗಳನ್ನು ಕಟ್ಟಿಕೊಂಡು ನೆಲೆಸಿದ್ದರು. ಅವರು ಸಾಮಂತ ನಾಯಕರಾಗಿದ್ದು, ಸ್ಥಳೀಯ ಆಡಳಿತಗಾರರಾಗಿದ್ದರು. ಸದಾಕಾಲವು ಅವರು ಪರಸ್ಪರ ಕಾದಾಡುತ್ತಿದ್ದರು. ಕೆಲವೊಮ್ಮೆ ತಮಗಿಂತ ಬಲಿಷ್ಠರಾದ ಅರಸರೊಂದಿಗೆ ಯುದ್ಧ ಮಾಡುವಾಗ ಒಂದುಗೂಡುತ್ತಿದ್ದುದೂ ಉಂಟು. ಇವರ ಬೆಂಬಲವನ್ನು ಪಡೆದೇ ವಿಶಾಲವಾದ ಸಾಮ್ರಾಜ್ಯಗಳು ರೂಪಗೊಳ್ಳಬೇಕಾಗಿತ್ತು.[೮೧] ಪಾಳೆಯಗಾರರು ಭಯವರಿಯದ ಕಲಿಪುರುಷರಾಗಿದ್ದರು ಶಸ್ತ್ರಸಜ್ಜಿತರಾಗಿ ಗಹನಾರಣ್ಯಗಳಲ್ಲಿ ಸಂಚರಿಸುತ್ತ ಎಂತಹ ಭೀಕರ ವನ್ಯಜಂತುವನ್ನು ಏಕಾಂಗಿಯಾಗಿ ಹೆದರಿಸಿ ಸಂಹರಿಸುತ್ತಿದ್ದರು.[೮೨] ಪಾಳೆಯಗಾರರು ಸಾಮಂತ ಪದವಿಗೇರಿ ಪೊಗದಿ ಸಲ್ಲಿಸುತ್ತಾ ತಮ್ಮ ತಮ್ಮ ಜಮೀನುಗಳ ಮೇಲೆ ಸ್ವಾಮ್ಯಾಧಿಕಾರ ಪಡೆದುಕೊಂಡರು. ಕಷ್ಟ ಸಹಿಷ್ಣುರಾಗಿದ್ದ ಬೇಡರು ಪಾಳೆಯಗಾರರಾದರು. ಮೈಸೂರು ಪ್ರದೇಶದ ಬಹುತೇಕ ಪಾಳೆಯಗಾರರು ಬೇಡ ಜನಾಂಗಕ್ಕೆ ಸೇರಿದ್ದರು.[೮೩]

ವಿಜಯನಗರದ ಅರಸರ ಕಾಲದಲ್ಲಿ ಬಹಳಷ್ಟು ಮಂದಿ ಪಾಳೆಯಗಾರರು ಹುಟ್ಟಿಕೊಂಡರು. ಈ ಅರಸರು ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿ ಅದಕ್ಕೆ ಸೇರಿದ ನಾನಾ ಭಾಗಗಳ ಮೇಲೆ ತಾವೇ ನೇರವಾಗಿ ಆಳ್ವಿಕೆ ನಡೆಸುವುದು ಕಷ್ಟವೆಂದು ಕಂಡುಬಂದಾಗ ಆಯಾ ಪ್ರದೇಶಗಳ ಆಡಳಿತದ ಉಸ್ತುವಾರಿಯನ್ನು ನೋಡಿಕೊಳ್ಳಲು, ಕಂದಾಯ ವಸೂಲಿ ಮಾಡಲು, ಇವೇ ಮೊದಲಾದ ಉದ್ದೇಶಗಳಿಗಾಗಿ ಕೆಲವು ಬಲಿಷ್ಠ ಹಾಗೂ ಪ್ರಭಾವವುಳ್ಳ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಈ ಸಾಮಂತ ಅಧಿಕಾರಿಗಳೇ ಕ್ರಮೇಣ ಪಾಳೆಯಗಾರರೆನಿಸಿಕೊಂಡರು.[೮೪] ವಿಜಯನಗರ ಸಾಮ್ರಾಜ್ಯದ ಗಟ್ಟಿಯಾದ ತಳಪಾಯವೆಂದರೆ ಈ ಪಾಳೆಯಗಾರರೇ ಆಗಿದ್ದರು. ಇವರ ಮೇಲೆಯೇ ಸಾಮ್ರಾಜ್ಯವು ನಿಂತಿತ್ತು. ವಿಜಯನಗರ ಸಾಮ್ರಾಜ್ಯವು ಪಾಳೆಯಗಾರರ ಒಂದು ಒಕ್ಕೂಟವಾಗಿತ್ತು. ಸುಮಾರು ಇನ್ನೂರಷ್ಟು ಸಾಮಂತರ ಮೂಲಕ ವಿಜಯನಗರವು ಆಡಳಿತ ನಡೆಸುತ್ತಿತ್ತು. ಈ ಸಾಮಂತರಲ್ಲಿ ಬಹುತೇಕವಾಗಿ ಬೇಡರೇ ಅಧಿಕ ಸಂಖ್ಯೆಯಲ್ಲಿದ್ದರು. ಊಳಿಗಮಾನ್ಯ ಪದ್ಧತಿ ಸರಕಾರವನ್ನು ಹೋಲುವ ನಾಯಕರ ಆಡಳಿತ ಪದ್ಧತಿ ಎಂಬ ಆಡಳಿತವನ್ನು ವಿಜಯನಗರ ಅರಸರು ಜಾರಿಗೆ ತಂದರು. ಆಪತ್ಕಾಲದಲ್ಲಿ ರಾಜ್ಯವನ್ನು ರಕ್ಷಿಸುವ ಹಾಗೂ ಆರ್ಥಿಕ ಸಂಕಷ್ಟ ಪರಿಸ್ಥಿತಿಯಲ್ಲಿ ಸಹಾಯ ಮಾಡುವ ಕೆಲಸ ಈ ಪಾಳೆಯಗಾರರದು. ಸ್ಥಳೀಯವಾಗಿ ಪ್ರಬಲವಾದ ಗುಡ್ಡಗಾಡು ಜನಸಮುದಾಯವನ್ನು ಸೈನ್ಯದಲ್ಲಿ, ಆಡಳಿತದಲ್ಲಿ ಸೇರಿಸಿಕೊಂಡರು. ಇವರು ಕ್ರಮೇಣ ಪಾಳೆಯಗಾರರೆನಿಸಿಕೊಂಡರು. ಈ ರೀತಿಯಲ್ಲಿ ಬೆಳೆದ ಇವರಿಗೆ ರಾಜರು ತೊಂದರೆಯನ್ನು ಕೊಡಲಿಲ್ಲ. ಸ್ವಂತ ಸೈನ್ಯವನ್ನು ಅವರು ಹೊಂದಲು ಬಿಟ್ಟು ಅವರಿಂದ ಕಾಣಿಕೆಯನ್ನು ಸ್ವೀಕರಿಸುತ್ತಿದ್ದರು. ಈ ರೀತಿಯ

ವಂಶಾಪರಂಪರೆಯ ಪಾಳೆಯಗಾರಿಕೆ ಆಡಳಿತವನ್ನು ವಿಜಯನಗರ ಅರಸರು ಘೋಷಿಸಿದ್ದರಿಂದ ಅವರು ದೊರೆಗಳೆಂದು, ಸಾಮಂತರೆಂದು ಕರೆಸಿಕೊಂಡರಲ್ಲದೆ ಪ್ರಬಲರಾದರು. ಅಧಿಕಾರಕ್ಕೆ ಬರುಬರುತ್ತಲೇ ಈ ಬೇಡ ಸಾಮಂತರು ತಮ್ಮ ಮೂಲ ಗುಣವಾದ ಕ್ರೌರ್ಯವನ್ನು ತ್ಯಜಿಸಿದವರಾಗಿದ್ದರು.[೬೫] ಈ ಪಾಳೆಯಗಾರ ಅಧಿಕಾರವು ಸಂಪೂರ್ಣವಾಗಿ ಆ ಪ್ರದೇಶದ ಜನಸಮುದಾಯದ ಬೆಂಬಲವನ್ನು ಪಡೆದಿತ್ತು ಮತ್ತು ಸ್ವತಂತ್ರವೂ ಆಗಿತ್ತು. ರಾಜನಿಗಿಂತ ಪಾಳೆಯಗಾರರೇ ಜನರಿಗೆ ಹೊಣೆಗಾರರಾಗಿದ್ದರು. ತಮ್ಮ ಪ್ರದೇಶದಲ್ಲಿ ಪಾಳೆಯಗಾರರು ಕ್ರಮೇಣ ಅರಸು, ದೊರೆ, ರಾಜ ಎಂದೆಲ್ಲ ಕರೆಸಿಕೊಂಡರು. ಪಾಳೆಯಗಾರರು ವಿಜಯನಗರ ಅರಸರಿಗೆ ಅವಿಧೇಯತೆಯನ್ನು ತೋರುವಂತಿರಲಿಲ್ಲ. ಒಂದು ವೇಳೆ ಅವಿಧೇಯತೆಯನ್ನು ತೋರಿದ್ದೇ ಆದಲ್ಲಿ ಚಿತ್ರದುರ್ಗ ಪಾಳೆಯಗಾರರ ಆರಂಭದ ದೊರೆ ಮತ್ತಿತಿಮ್ಮಣ್ಣನಾಯಕ ಹಾಗೂ ಯಲಂಹಕ ನಾಡಪ್ರಭುವಿಗೆ ಆದಂತಹ ಸೆರೆಮನೆ ವಾಸದ ಶಿಕ್ಷೆ ಆಗುತ್ತಿತ್ತು.

ವಿಜಯನಗರದ ಅರಸರು ಪಾಳೆಯಗಾರಿಕೆ ಸ್ಥಾಪನೆಗೆ ಹಾಗೂ ಪಾಳೆಯಗಾರರಿಗೆ ಮುಕ್ತ ಅವಕಾಶ ಕಲ್ಪಿಸಿಕೊಟ್ಟಿದ್ದರಿಂದ ಅನೇಕ ಪಾಳೆಯ ಪಟ್ಟುಗಳು ಅಸ್ತಿತ್ವಕ್ಕೆ ಬಂದವು. ಪಾಳೆಯಪಟ್ಟನ್ನು ಸ್ಥಾಪಿಸಿದವರಲ್ಲಿ ಬಹುತೇಕ ಮಂದಿ ವಿಜಯನಗರ ಸಾಮ್ರಾಜ್ಯದಲ್ಲಿ ಒಂದಿಲ್ಲೊಂದು ಸೇವೆಯಲ್ಲಿದ್ದವರೇ ಆಗಿದ್ದರು. ಹರತಿ ತಿಪ್ಪರಾಜನು ವಿಜಯನಗರದ ಸಂಗಮ ವಂಶದ ಪ್ರಾರಂಭದ ದೊರೆಗಳಾದ ಹಕ್ಕಬುಕ್ಕರ ಸಮಕಾಲೀನನು; ಅವನ ಸೈನ್ಯದಲ್ಲಿ ಪ್ರಮುಖ ದಳಪತಿಯಾಗಿದ್ದನು. ಇವನು ನಿಡಗಲ್ಲು ದುರ್ಗಾಧಿಪತಿ ಚಿಕ್ಕ ಬೊಮ್ಮ ನಾಯಕನನ್ನು ದ್ವಂದ್ವ ಯುದ್ಧದಲ್ಲಿ ಶಿರಶ್ಛೇದನ ಮಾಡಿದನು. ಆದ್ದರಿಂದ ಆತನಿಗೆ ಹರಿಹರನು 'ಹೊಳಕಲ್ಲು ಬೊಂಮನ ಶಿರಶ್ಛೇದನಂ' ಎಂಬ ಬಿರುದನ್ನು ದಯಪಾಲಿಸಿದನು ಮತ್ತು ಹೊಯ್ಸಳರ ಮೂಲ ಸ್ಥಳವಾದ ಸೊಸೆವೂರನ್ನು ಮುತ್ತಿ ಹಾಳುಗೆಡವಿದ್ದರಿಂದ ಬುಕ್ಕರಾಯನು ಇವನಿಗೆ 'ಹೊಯ್ಸಳ ದಳ ವಿಭಾಡಂ' ಎಂಬ ಬಿರುದನ್ನು ನೀಡಿದನು. ತಿಪ್ಪರಾಜನು ಮಲಿಕ್ ಬಹಾದ್ದೂರ್ ಎಂಬ ತುರುಕರ ಜಟ್ಟಿಯನ್ನು ಸೋಲಿಸಿದ್ದರಿಂದ ಇವನ ಸಾಹಸ ಮೆಚ್ಚಿ ಬುಕ್ಕರಾಯನು 'ಭಾದ್ರಮಲು ಕಸತ್ತಾಂಗ ಹರಣಂ' ಮತ್ತು 'ಕಠಾರೀರಾಯಂ' ಎಂಬ ಬಿರುದುಗಳನ್ನು ನೀಡಿ ಗೌರವಿಸಿದನು. ಆ ಕಾಲದಲ್ಲಿ ನಡೆದ ಬಹುಮನಿ ವಿಜಯನಗರ ಯುದ್ಧಗಳಲ್ಲಿ ಅಸಂಖ್ಯಾತವಾಗಿ ಮ್ಲೇಚ್ಛರ ತಲೆಗಳನ್ನು ಕಡಿದುರುಳಿಸಿದುದರಿಂದ ತಿಪ್ಪರಾಜನಿಗೆ "ಮೆಸನತಲೆ ಗುಂಡಗಂಡಂ" ಎಂಬ ಬಿರುದು ಲಭ್ಯವಾಯಿತು. ಇಂತಹ ಅಪ್ರತಿಮ ವೀರನ ಸಾಹಸ ಹೋರಾಟವನ್ನು ಮೆಚ್ಚಿ ಬುಕ್ಕರಾಯನು ವೇದಾವತಿ ತೀರದ ಭೂಭಾಗವನ್ನೆಲ್ಲ ಆತನಿಗೆ ಜಹಗೀರಾಗಿ ಕೊಟ್ಟಿದ್ದನು. ನಡಮಿದೊಡ್ಡಿಯ ಪಾಳೆಯ ಕೈಫಿಯತ್ತು ತಿಳಿಸುವಂತೆ ಮೇಸ ತಿಮ್ಮನಾಯಕ ಎಂಬುವನು ಬುಕ್ಕರಾಯನ ಜೊತೆಗೂಡಿ ಬಹುಮನಿ ಸುಲ್ತಾನನಾದ ಮುಸಮ್ಮದನ ದಾಳಿಯನ್ನು ಎದುರಿಸಿದನು. ಕಾಳಗದಲ್ಲಿ ಗಾಯಗೊಂಡರೂ ಅವನು ಶತ್ರುಗಳ ಸೇನಾನಿ

ಸಹಿತವಾಗಿ ಅನೇಕರನ್ನು ಕೊಂದು ಶತ್ರುಗಳ ತಲೆಬುರಡೆಗಳನ್ನು ರಾಯನಿಗೆ ಕಾಣಿಕೆಯೆಂದು ಸಲ್ಲಿಸಿದನು. ರಾಯನು ಕೂಡಲೇ ಅವುಗಳನ್ನು ಪತಾಕೆಯ ಕೋಲುಗಳಿಗೆ ಕಟ್ಟಿಸಿ ತೂಗು ಹಾಕಿಸಿದನು. ರಾಯನು ಬೆಲೆಬಾಳುವ ವಸ್ತುಗಳನ್ನು ತಿಮ್ಮನಾಯಕನಿಗೆ ಕೊಟ್ಟು ಸನ್ಮಾನಿಸಿ, ಕುಮ್ಮತ್ತನ್ನು ಜಹಗೀರಿಯಾಗಿ ಕೊಟ್ಟನು.[೬೬]

ಇಮ್ಮಡಿ ಹರಿಹರನ ಕಾಲದಲ್ಲಿ ಬೇಡ ಮಾಂಡಲೀಕ ರಾಜರು ವಿರೂಪಾಕ್ಷ ವಸಂತೋತ್ಸವಕ್ಕೆ ಭಾಗವಹಿಸಿದ ಬಗ್ಗೆ ಅಹೋಬಲ ಪಂಡಿತನು ತನ್ನ ವಿರೂಪಾಕ್ಷ ವಸಂತೋತ್ಸವ ಚಂಪೂ ಎಂಬ ಕಾವ್ಯದಲ್ಲಿ ಮಾಹಿತಿ ನೀಡುತ್ತಾನೆ. ರಾಯದುರ್ಗದ ಅರಸನು ವಿಜಯನಗರ ರಾಯನ ಸೇನಾಪತಿಯಾಗಿದ್ದ ನೆಂದು ಹೇಳಿರುವನು. ಅದರಂತೆ ಚಿತ್ರದುರ್ಗ ನಾಯಕನ ಬಗ್ಗೆಯೂ ಹೇಳಿರುವನು. ಅದರ ಸಂಕ್ಷಿಪ್ತ ಅನುವಾದ ಹೀಗಿದೆ. ಈ ಚಿತ್ರಕಲ್‌ದುರ್ಗದ ಅರಸನು ಸಾಮಂತನು ಶಬರ ಭಟರುಗಳಿಂದ ಕೂಡಿದವನಾಗಿ ಹುಲಿ, ಆನೆ, ಚರ್ಮಗಳನ್ನು ಧರಿಸಿಕೊಂಡು, ನವಿಲುಗರಿಗಳ ಪಿಂಛವನ್ನು ಹಿಡಿದರುವ ಶಬರಭಟರ ಪರಿವಾರದಿಂದ ಸುತ್ತಗಟ್ಟಲ್ಪಟ್ಟವನಾಗಿ ಗಂಡಸ್ಥಲದಲ್ಲಿ ರೇಖೆಗಳಿಂದ ಅಲಂಕೃತನಾಗಿ ವಂಶದಿಂದ ಬೇಡರವನಾಗಿದ್ದು ಪಂಪೇಶನ ರಥವನ್ನು ನೋಡಲು ಬಂದಿದ್ದನು ಎಂದು ಹೇಳಿದ್ದಾನೆ.[೬೭] ಪ್ರೊ. ಲಕ್ಷ್ಮಣ್ ತೆಲಗಾವಿಯವರು ಚಿತ್ರದುರ್ಗ ಅರಸನ ಬಗೆಗಿನ ಈ ವರ್ಣನೆ ತುಂಬಾ ಭೀಭತ್ಸವಾಗಿದೆ ಎಂದಿದ್ದಾರೆ. ವನವಾಸಿಗಳಾದ ಸಾಮಾನ್ಯ ಬೇಡರಿಗೆ ಸಹಜವಾದ ವೇಷಭೂಷಣ ಮತ್ತು ಜೀವನ ಶೈಲಿಗಳೇ ವಿನಃ ಅರಸನಿಗೆ ಹೊಂದುವಂಥಾದ್ದು ಖಂಡಿತ ಅಲ್ಲ. ಮಧ್ಯಕಾಲೀನ ಶ್ರೇಣಿಕೃತ ಸಮಾಜ ಮತ್ತು ಆ ನೆಲೆಯ ಅತ್ಯಂತ ಹೀನಾಯವಾದ ಜಾತಿವ್ಯವಸ್ಥೆಯ ಪ್ರಭಾವ ಈ ಗ್ರಂಥ ಕರ್ತೃವಿನ ಮೇಲೂ ಆಗಿದ್ದಲ್ಲಿ ಆಶ್ಚರ್ಯವೇನೂ ಇಲ್ಲ ಎಂದು ಅಭಿಪ್ರಾಯಪಟ್ಟಿರುವುದು ಅರ್ಥಪೂರ್ಣವಾಗಿದೆ.[೬೮] ಮಧ್ಯಕಾಲೀನ ಸಮಾಜ ವ್ಯವಸ್ಥೆಯಲ್ಲಿ ರಾಜಕೀಯವಾಗಿ ಮೇಲ್‌ಸ್ತರಕ್ಕೆ ಬಂದ ಬೇಡರನ್ನು ಬೇಡರಾಗಿ ನೋಡಿದರೇ ವಿನಃ ಅವರು ಬೇಡ ದೊರೆಗಳೆಂದು ಒಪ್ಪಿಕೊಳ್ಳುವ ಗುಣಗಳ ಕಡೆ ಮೇಲ್ವರ್ಗದ ಜನ ಹೋಗಲಿಲ್ಲ ವೆನಿಸುತ್ತದೆ. ಬ್ರಾಹ್ಮಣ ಮತ್ತು ವೀರಶೈವ ಧರ್ಮದವರು ಕೆಲವು ಬೇಡ ದೊರೆಗಳಿಗೆ ಕ್ರಮವಾಗಿ ಜನಿವಾರ ಮತ್ತು ಲಿಂಗಧಾರಣೆ ಮಾಡಿಸಿ ಅವರ ಹತ್ತಿರ ಉಳಿದುಕೊಂಡರೆ ವಿನಃ ಬೇಡ ದೊರೆ ಬೇಡನಾಗಿ ಆಳ್ವಿಕೆ ನಡೆಸಲು ಪ್ರೋತ್ಸಾಹಿಸಲಿಲ್ಲವೆಂದು ವಿಜಯನಗರೋತ್ತರಕಾಲೀನ ಘಟನೆಗಳಲ್ಲಿ ಕಾಣಬಹುದು. ಎರಡನೇ ಹರಿಹರನ ತಾಮ್ರಶಾಸನಗಳಲ್ಲಿ ಗುಮ್ಮನಾಯಕನಹಳ್ಳಿ ಕೆಲವು ಪಾಳೆಯಗಾರರ ಹೆಸರುಗಳು ಕಂಡುಬರುವುದರಿಂದ ಅಷ್ಟೊತ್ತಿಗೆ ಅಲ್ಲಿ ಪಾಳೆಯಗಾರಿಕೆ ಸ್ಥಾಪನೆಯಾಗಿತ್ತೆಂದು ಹೇಳಬಹುದು. ಪಾಳೆಯಗಾರರ ಮತ್ತು ವಿಜಯನಗರ ಅರಸರ ನಡುವೆ ಒಳ್ಳೆಯ ಸಂಬಂಧಗಳು ಮುಂದುವರೆದಿದ್ದವು.

ಬೇಡರು ಈ ಕಾಲದಲ್ಲಿಯೇ ಕೆಲವು ಪ್ರದೇಶಗಳಲ್ಲಿ ರಾಜ್ಯವಾಳುತ್ತಿದ್ದುದು ಗೊತ್ತಾಗುತ್ತದೆ. ಹೊಳಲ್ಕೆರೆ (ತಾ) ದುಮ್ಮಿ (ರಾಮಗಿರಿ ಹೋಬಳಿ) ಯಲ್ಲಿ ಗಂಗೇಯ ನಾಯಕರ ಮಗ ಶ್ರೀರಂಗನಾಥನಾಯಕ ಎಂಬ ಬೇಡನು ಕ್ರಿ.ಶ.೧೪೦೦ರಲ್ಲಿಯೇ ರಾಜ್ಯವಾಳುತ್ತಿದ್ದನು ಎಂದು ತಿಳಿದುಬರುತ್ತದೆ. ಮೈಸೂರು ಒಡೆಯರ ಮನೆತನ ಸ್ಥಾಪಕರಾದ ಯದುರಾಯ ಮತ್ತು ಕೃಷ್ಣರಾಯರು ಸೋಲಿಸಿದ ಮಾರನಾಯಕನು ಬೇಡರವನು. ಇವನ ವಂಶಜರು ಈ ಭಾಗದಲ್ಲಿ ಪರಿವಾರದವರೆಂದು ಕರೆಸಿಕೊಳ್ಳುತ್ತಾರೆ.[೧೯] ಈ ಮಾರನಾಯಕನು ಕಾರುಗನಹಳ್ಳಿ ಪಾಳೆಯಗಾರನಾಗಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡು ಆ ಭಾಗದಲ್ಲಿ ಪ್ರಸಿದ್ಧಿಗೆ ಬಂದಿದ್ದನು. ಚಿತ್ರದುರ್ಗದ ಕಾಮಗೇತಿನಾಯಕನು ಕ್ರಿ.ಶ.೧೩೫೮ರಲ್ಲಿ ಗುಲಬರ್ಗಾದ ಸುಲ್ತಾನನಿಂದ ಹರಿಹರನ ಕಗ್ಗೊಲೆಯಾಗುತ್ತಿದ್ದುದನ್ನು ತಪ್ಪಿಸಿದನು. ಗುಮ್ಮನಾಯಕನಹಳ್ಳಿ ಪಾಳೆಯಗಾರ ಕದಿರಪ್ಪ ನಾಯಕನು ವಿಜಯನಗರದ ಆಪ್ತ ಸೇವಕನಾಗಿದ್ದು ವಿಜಯನಗರದ ದೊರೆಯಾದ ೨ನೇ ಹರಿಹರನು ಪಾಳೆಯಗಾರರ ಮೇಲೆ ಮತ್ತು ನಾಯಕರುಗಳ ಮೇಲೆ ನಿಗದಿ ಮಾಡಿದ್ದ ವಾರ್ಷಿಕ ಪೊಗದಿ (ಕಪ್ಪ ಅಥವಾ ಸುಂಕ)ಯನ್ನು  ವಸೂಲಿ ಮಾಡುವ ಹಿರಿಮೆಯನ್ನು ಪಡೆದಿದ್ದನು. ಹೀಗಿರುವಾಗ ಗುರ್ರಂಕೊಂಡ, ಪೆನಗೊಂಡ, ಪಾತಪಲ್ಲಿ, ಅಮರಕೊಂಡ, ಕೊಂಕ್ಕುಟ್ಟಿ, ಎಲ್ಲುಂಟ್ಲು ಮುಂತಾದ ಪ್ರದೇಶದ ಪಾಳೆಯಗಾರರು ಕಪ್ಪ ಕಾಣಿಕೆಯನ್ನು ನಿಲ್ಲಿಸಿದ್ದರು. ಆಗ ಕದಿರಪ್ಪನಾಯಕನು ವಿಜಯನಗರದ ವೀರದಂಡನಾಯಕ ಪೂಜಾಸಿಂಗನ ಜೊತೆಗೂಡಿ ಮತ್ತು ತಮ್ಮಂದಿರನ್ನು ಜೊತೆ ಸೇರಿಸಿಕೊಂಡು ಇವರ ಮೇಲೆ ದಾಳಿ ಮಾಡಿ ವೈರಿಗಳನ್ನು ಸೋಲಿಸಿ ಕಪ್ಪವನ್ನು ಸಂಗ್ರಹ ಮಾಡಿದನೆಂದು ಶಾಸನಗಳು ತಿಳಿಸುತ್ತವೆ. ಈ ಯುದ್ಧದಲ್ಲಿ ತನ್ನ ತಮ್ಮಂದಿರನ್ನು ಮೋಸದಿಂದ ಕೊಲ್ಲಲ್ಲಾಯಿತು. ಕೋಪಗೊಂಡ ಕದಿರಪ್ಪನಾಯಕ ಶತ್ರುಗಳ ತಲೆಯನ್ನು ಕತ್ತರಿಸಿದನಲ್ಲದೆ, ವಿಜಯನಗರದ ದೊರೆಗಳಿಗೆ ಗುರುತಾಗಿ ಬೆರಳುಗಳನ್ನು ಕಳುಹಿಸಿದನೆಂದು ಹೇಳಲಾಗಿದೆ. ಇದರಿಂದ ಹರ್ಷಗೊಂಡ ೩ನೇ ಹರಿಹರ ಬಾಗೇಪಲ್ಲಿ, ಚೇಳೂರು ಮತ್ತು ಅದಕ್ಕೆ ಸೇರಿದ ೨೩ ಗ್ರಾಮಗಳನ್ನು ಬಳುವಳಿಯಾಗಿ ನೀಡಿ ಮತ್ತು ವಿಜಯನಗರದ ೧೬ ಮಂದಿ ಸೇನಾಪತಿಗಳಲ್ಲಿ ಪ್ರಮುಖ ಸೇನಾಪತಿಯಾಗಿ ಕದಿರಪ್ಪನಾಯಕನನ್ನು ನೇಮಿಸಿದರೆಂಬುದಾಗಿ ತಿಳಿದುಬರುತ್ತದೆ. ಅಷ್ಟೇ ಅಲ್ಲದೆ ೨೦೦೦ ವರಹಗಳನ್ನು ಬೆಳ್ಳಿ ಅಂಬಾರಿ, ನಗಾರಿ, ಕುದುರೆಗಳು, ಛತ್ರಿ ಚಾಮರ, ಪಟ್ಟದ ಕತ್ತಿ, ಮುತ್ತಿನ ಕಂಠಿಯನ್ನು ನೀಡಿ ವಿಜಯದಶಮಿಯ ಹಬ್ಬದಂದು ಗೌರವಿಸಲಾಯಿತೆಂದು ಹೆಮ್ಮೆಯಿಂದ ಶಾಸನದಲ್ಲಿ ಹೇಳಿಕೊಳ್ಳಲಾಗಿದೆ.[೨೦] ರತ್ನಗಿರಿ ನಾಯಕನಾದ ಇರಸಪ್ಪನಾಯಕನ ಮಗ ಹಿರೇಗೌಡ ಕ್ರಿ.ಶ.೧೩೯೯-೧೪೧೮ ಆನೆಗೊಂದಿಯಲ್ಲಿ ಕಂಡುಬಂದ ವಿಲ್ಲಂಚ್ಛರ ಹಾವಳಿಯನ್ನು ಎದುರಿಸುವಲ್ಲಿ ಸಹಾಯ ಮಾಡಿದನು. ಇದರಿಂದ ಸಂತೋಷಗೊಂಡ ಆನೆಗೊಂದಿ ಅರಸು ಈತನಿಗೆ ಅನೇಕ ಬಿರುದು ಬಾವಲಿಗಳನ್ನಿತ್ತು ಸನ್ಮಾನಿಸಿದ ವಿಷಯವನ್ನು ದಾಖಲೆ ಸ್ಪಷ್ಟಪಡಿಸುತ್ತದೆ.[೨೧]

ಒಂದನೆಯ ದೇವರಾಯನು ಕೃಷ್ಣ ಮತ್ತು ತುಂಗಭದ್ರಾನದಿಗಳ ನಡುವಿನ ಭೂಪ್ರದೇಶವನ್ನು ಗೆದ್ದುಕೊಳ್ಳಲು ಬಹುಮನಿ ಸುಲ್ತಾನರು ಮಾಡಿದ ಪ್ರಯತ್ನವನ್ನು ವಿಫಲಗೊಳಿಸಿ ಈ ಪ್ರದೇಶದಲ್ಲಿ ತನ್ನ ಅಧಿಕಾರವನ್ನು ಮತ್ತೆ ಸ್ಥಾಪಿಸಿದನು.[೨೨] ವಿಜಯನಗರದ ಅರಸರ ಅಧೀನರಾಗಿದ್ದ ಕೆಲವು ಪಾಳೆಯಗಾರರು ಕೆಲವೊಮ್ಮೆ ವಿರುದ್ಧವಾಗುತ್ತಿದ್ದುದೂ ಉಂಟು. ಅಂತಹವರನ್ನು ಕಠಿಣವಾಗಿ ಶಿಕ್ಷಿಸಲಾಗುತ್ತಿತ್ತು. ಕೃಷ್ಣ ಗೋದಾವರಿ ನದಿಗಳ ಮಧ್ಯದ ಪ್ರದೇಶದಲ್ಲಿದ್ದ ತೆಲುಗು ಬೇಡ ವಂಶದ ಅಣ್ಣದೇವನು ಒಬ್ಬ ಪ್ರಬಲ ನಾಯಕನಾಗಿದ್ದನು. ರಾಜಮಂತ್ರಿಯ ರೆಡ್ಡಿನಾಯಕ ಕಾಟಯ್ಯವೇಮನ ದೇವರಾಯನ ಬೆಂಬಲದೊಂದಿಗೆ ಈ ಅಣ್ಣದೇವನೊಡನೆ ಹೋರಾಟಕ್ಕಿಳಿದನು. ಈ ಹೋರಾಟದಲ್ಲಿ ಕಾಟಯ್ಯವೇಮನು ಕೊಲ್ಲಲ್ಪಟ್ಟನು. ಅಣ್ಣದೇವನಿಗೆ ಬಹುಮನಿ ಸುಲ್ತಾನರು ಸಹಾಯ ಮಾಡಿದ್ದರು. ಕೆಲವೊಂದು ಸಂದರ್ಭಗಳಲ್ಲಿ ಮಾತ್ರ ಈ ರೀತಿಯ ದಂಗೆಗಳನ್ನು ವಿಜಯನಗರ ಅರಸರು ಎದುರಿಸಬೇಕಾಗಿತ್ತು. ಸಾಮಾನ್ಯವಾಗಿ ಎಲ್ಲಾ ಪಾಳೆಯಗಾರರು ಕಪ್ಪಕಾಣಿಕೆಯನ್ನು ನೀಡುವ ಮೂಲಕ ವಿಜಯನಗರಕ್ಕೆ ವಿಧೇಯರಾಗಿದ್ದರು. ಗುಮ್ಮನಾಯಕನ ಪಾಳೆಯಗಾರ ಶಿಂಗಿರಪ್ಪನಾಯಕ ದೇವರಾಯನ ಸಾಮಂತಿಕೆಯನ್ನು ಪಡೆದು ಕಪ್ಪಕಾಣಿಕೆಯನ್ನು ನೀಡಿದನು.[೨೩]

ಇಮ್ಮಡಿ ಪ್ರೌಢದೇವರಾಯನ ಕಾಲದಲ್ಲಿ ಅನೇಕ ಪಾಳೆಯಪಟ್ಟುಗಳು ಹುಟ್ಟಿಕೊಂಡವು. ಕುಮಾರರಾಮನ ಮತ್ತು ಅವನ ಬೇಡ ಪಡೆಯ ಸಾಹಸಗಳನ್ನು ೨ನೇ ದೇವರಾಯನು ತಿಳಿದುಕೊಂಡಿದ್ದನು. ಹೀಗಾಗಿ ವಿಜಯನಗರ ಸೈನ್ಯದಲ್ಲಿ ಮತ್ತು ರಾಜ್ಯದ ಆಯಕಟ್ಟಿನ ಸ್ಥಳಗಳಲ್ಲಿ ಬೇಡರನ್ನು ನೇಮಕ ಮಾಡಿಕೊಂಡನು. ಇವನ ಸಹಾಯದಿಂದ ಕೆಲವು ಬಲಿಷ್ಠನಾಯಕರು ಸಂಸ್ಥಾನಗಳನ್ನು ಪ್ರಾರಂಭಿಸಿದರು. ಕ್ರಿ.ಶ.೧೪೩೬-೩೭ರಲ್ಲಿ ಪ್ರೌಢದೇವರಾಯನ ಸಹಾಯದಿಂದ ಕನಕಗಿರಿಯಲ್ಲಿ ಪರಸಪ್ಪ ಉಡಿಚನಾಯಕನು ಪಾಳೆಯಗಾರಿಕೆಯನ್ನು ಆರಂಭಿಸಿದನು. ಕನಕಗಿರಿ ಸಂಸ್ಥಾನವು ವಿಜಯನಗರ ಅರಸರ ರಕ್ಷಣೆಯಲ್ಲಿ ಮೊದಲ ಸ್ಥಾನ ಪಡೆಯಿತು. ಸಂಗಮರ ಕಾಲಕ್ಕೆ ಯುದ್ಧದ ಕೇಂದ್ರಬಿಂದುವಾಗಿದ್ದ ಮುದುಗಲ್ಲ ಕೋಟೆಯ ಅಧಿಕಾರಿಯಾಗಿ ವರದಣ್ಣನಾಯಕ ಎಂಬುವನು ಸೇವೆ ಸಲ್ಲಿಸುತ್ತಿದ್ದನು.

ಸಾಳ್ವನರಸಿಂಹನು ಅಧಿಕಾರಕ್ಕೆ ಬರುವ ಮುನ್ನ ಕೆಲವು ಸಮಸ್ಯೆಗಳು ಎದುರಾದವು. ಅಧಿಕಾರಕ್ಕೆ ಬರುವಲ್ಲಿ ಸಹಾಯ ಮಾಡಿದ ಅವನ ಬೆಂಬಲಿಗ ಸೇನಾ ನಾಯಕರು ಮತ್ತು ಸಾಮಂತರು ಅವನ ಪ್ರಭುತ್ವಕ್ಕೆ ಬಾಗಲು ಇಷ್ಟಪಡಲಿಲ್ಲ. ಆದ್ದರಿಂದ ಅವನು ತನ್ನ ಮೊದಲಿನ ಬೆಂಬಲಿಗರು ಮತ್ತು ಸ್ನೇಹಿತರ ವಿರುದ್ಧ ಹೋರಾಡಬೇಕಾಯಿತು. ಅದರಲ್ಲಿ ಗಂಡಿಕೋಟೆ ಸೀಮೆಯಲ್ಲಿನ (ಕಡಪ) ಪೆರನಿಪಾಡಿನ ಸಂಬೇಟರು, ಉಮ್ಮತ್ತೂರಿನ ಹಾಗೂ ತಲಕಾಡಿನ ಪಾಳೆಯಗಾರರು.[೨೪] ಇವನು ನಾಯಕ ಜನಾಂಗದವರನ್ನು ಅಂಗರಕ್ಷಕರನ್ನಾಗಿ ಮಾಡಿಕೊಂಡನು. ಕಾಡಿನಲ್ಲಿದ್ದ ಬೇಡರು, ಶಬರರು, ಕಾಡು ಸಂಚರು, ಬಿಲ್ಲರು,

ಕಿರಾತರು, ವಾಲ್ಮೀಕರು ಇವರುಗಳನ್ನು ತಮ್ಮ ಪಾಳೆಯಪಟ್ಟುಗಳಿಗೆ ಸೇರಿಸಿಕೊಂಡು ಯುದ್ಧದಲ್ಲಿ ಯೋಧರನ್ನಾಗಿ ಮಾಡಿಕೊಂಡನು.[೭೫] ವಿಜಯನಗರದ ಶಾಂತ ಪ್ರಿಯ ರೈತರನ್ನು ಇವನು ಯೋಧರನ್ನಾಗಿ ಮಾಡಿ ರಣರಂಗದಲ್ಲಿ ಮುಸ್ಲಿಮರು ಮತ್ತು ಒರಿಯರೊಡನೆ ಸಮಾನಸ್ಕಂದರಾಗಿ ಹೋರಾಡುವುದನ್ನು ಅವರಿಗೆ ಕಲಿಸಿದನು.[೭೬] ವಿಜಯನಗರ ಸರಕಾರವೂ ಸದಾಕಾಲ ತನ್ನ ನೆರೆಹೊರೆಯ ಸಂಸ್ಥಾನಿಕರೊಡನೆ ಯುದ್ಧದಲ್ಲಿ ತೊಡಗಿರುತ್ತಿದ್ದ ಮಿಲಿಟರಿ ಆಡಳಿತವಾಗಿತ್ತು. ಆದ್ದರಿಂದಲೇ ಅದು ಆಡಳಿತೀಯ ಸಮಗ್ರತೆ ಮತ್ತು ಪ್ರಭುತ್ವಗಳನ್ನು ರಕ್ಷಿಸಿಕೊಳ್ಳಲು ಸದಾ ಜಾಗರೂಕವಾಗಿರಬೇಕಾಗಿತ್ತು. ಎರಡು ಅಂಶಗಳ ಬೆಂಬಲದಿಂದ ಮಾತ್ರ ಅದು ಸಾಧ್ಯವಾಗುತ್ತಿತ್ತು. ಅವೆಂದರೆ, ಸೈನ್ಯ ಮತ್ತು ರೈತರು[೭೭] ಸಾಳ್ವನರಸಿಂಹನು ಶ್ರೀರಂಗಪಟ್ಟಣ, ಬೆಂಗಳೂರನ್ನು ಗೆದ್ದ ಸಮಯದಲ್ಲಿ ಅವನು ಪೆನಗೊಂಡದಲ್ಲಿ ಸೋಲಿಸಿದ ಮತ್ತೊಬ್ಬ ಪ್ರಬಲ ಶತ್ರು ಪಿಕ್ಕಿಳ್ಳು ಎಂಬ ಬಲಿಷ್ಠ ಶಬರನಾಯಕ. ಅವನು ತುರುಕರ ಜೊತೆ ಸೇರಿಕೊಂಡಿದ್ದ. ಪಿಕ್ಕಿಳ್ಳ ಯಾರು ಮತ್ತು ಅವನು ತುರುಕರ ಜೊತೆ ಏಕೆ ಸೇರಿಕೊಂಡಿದ್ದ ಎಂಬುದರ ಬಗ್ಗೆ ಮಾಹಿತಿ ಇಲ್ಲ. ನರಸಿಂಹನ ಸೈನ್ಯದ ಜೊತೆ ಯುದ್ಧದಲ್ಲಿ ಅವರು ಸೋತು ಪಲಾಯನ ಮಾಡಿದರು. ಪಿಕ್ಕಿಳ್ಳು ಜೀವ ಕಳೆದುಕೊಂಡನು.[೭೮] ಸಾಳ್ವನರಸಿಂಹನು ಕನಕಗಿರಿಯ ನವಾಬ ಉಡಿಚನಾಯಕನಿಗೆ ಗೋಡೆನಹಾಳು ಮತ್ತು ಖ್ಯಾಡ ಎಂಬ ಗ್ರಾಮಗಳನ್ನು ದತ್ತಿಯಾಗಿ ಬಿಟ್ಟುಕೊಟ್ಟು ಕನಕಗಿರಿ ಅಭಿವೃದ್ಧಿಗೆ ಕಾರಣನಾದನು. ಹರತಿ ಚಿಕ್ಕ ತಿಪ್ಪರಾಜನು ಸಾಳ್ವನರಸಿಂಹನಿಗೆ ನಿಷ್ಠನಾಗಿದ್ದುದರ ಸಂಕೇತವಾಗಿ ವೈಷ್ಣವ ಪಂಥವನ್ನು ಸ್ವೀಕರಿಸಿದ್ದನು.[೭೯] ವಿಜಯನಗರದ ಅರಸರು ಸಾಮಂತತೆಯ ಸಂಕೇತವಾಗಿ ಅನೇಕ ಕೆರೆ, ಊರುಗಳನ್ನು ಕಟ್ಟಿಸಿದರು. ಅಲ್ಲದೆ ವಿಜಯನಗರ ಅರಸರು ಅನುಸರಿಸುತ್ತಿದ್ದ ಸಂಪ್ರದಾಯಗಳನ್ನು ಸಾಮಂತರೂ ಅನುಸರಿಸಿದರು ಮತ್ತು ಹಂಪಿ ಸ್ಮಾರಕಗಳಂತೆ ತಾವು ತಮ್ಮ ರಾಜಧಾನಿಗಳಲ್ಲಿ ಅನೇಕ ಕಟ್ಟಡಗಳನ್ನು ಕಟ್ಟಿಸಿದರು. ಸಬ್ಬಗಡಿ ಓಬಣ್ಣನಾಯಕ ವಿಜಯನಗರದ ಗಡಿ ಪ್ರದೇಶದಲ್ಲಿ ಸೇನಾನಾಯಕನಾಗಿದ್ದನು. ಈತ ವಿಜಯನಗರದ ಏಳು ಸಾವಿರ ಬೇಡರ ಕಗ್ಗೊಲೆಪಡೆಗೆ ನಾಯಕನಾಗಿದ್ದನು. ಕ್ರಿ.ಶ.೧೪೭೫ರ ಹೊತ್ತಿಗೆ ತಿರುಪತಿ ಕಡೆಯಿಂದ ಚಿತ್ರದುರ್ಗ ಪ್ರದೇಶಕ್ಕೆ ಬಂದ ಮೂರು ಕುಟುಂಬಗಳ ಯಜಮಾನನಾಗಿದ್ದ ತಿಮ್ಮಣ್ಣನಾಯಕನನ್ನು ಕ್ರಿ.ಶ.೧೫೦೮ರಲ್ಲಿ ವಿಜಯನಗರ ಅರಸರು ಹೊಳಲ್ಕೆರೆಯ ನಾಯಕನನ್ನಾಗಿ ನೇಮಿಸಿದರು. ತರುವಾಯ ಹಿರಿಯೂರಿಗೆ ಕೊನೆಗೆ ಚಿತ್ರದುರ್ಗಕ್ಕೆ ಅವನನ್ನು ನಾಯಕನನ್ನಾಗಿ ನಿಯೋಜಿಸಿದರು. ಹರಪನಹಳ್ಳಿ, ನಿಡಗಲ್ಲು ಮತ್ತು ಬಸವಪಟ್ಟಣಗಳ ಪಾಳೆಯಗಾರರು ಒಂದಾಗಿ ಸೇರಿ ವಿಜಯನಗರದಿಂದಲೂ ಒಂದಿಷ್ಟು ಸೈನ್ಯ ತರಸಿ ತಿಮ್ಮಣ್ಣನಾಯಕನ ಮೇಲೆ ದಾಳಿ ಮಾಡಿದರು. ಈ ಸಮಯದಲ್ಲಿ ಮತ್ತಿ ತಿಮ್ಮಣ್ಣನಾಯಕನು ವೀರಾವೇಶದಿಂದ ಹೋರಾಡಿದನು. ವೈರಿ ಸೇನಾನಿ ಸಾಳುವ ನರಸಿಂಗರಾಯನ ಅಶ್ವವನ್ನು ಅತ್ಯಂತ ಕಷ್ಟದ ಸ್ಥಿತಿಯಲ್ಲೂ ಅಪಹರಿಸಿದನು. ಈ ಕಷ್ಟಸಹಿಷ್ಣುಧೀರನ

ಸಾಹಸವನ್ನು ಮೆಚ್ಚಿ ಸಾಳುವ ನರಸಿಂಹರಾಯನು ವಿಜಯನಗರಕ್ಕೆ ಕರೆಸಿ ಮತ್ತಿತಿಮ್ಮಣ್ಣನಾಯಕನ ಸಾಹಸಗಳನ್ನು ಕೊಂಡಾಡಿ ಸನ್ಮಾನಿಸಿದನು. ನಂತರ ಕಲಬುರ್ಗಿಯ ದಂಡೆಯಾತ್ರೆಯಲ್ಲಿ ಮುಸ್ಲಿಮರ ವಿರುದ್ಧವಾಗಿ ವಿಜಯನಗರ ಸೇನೆಯೊಡಗೂಡಿ ವಿಜಯವನ್ನು ತರುವಲ್ಲಿ ಪ್ರಮುಖ ಪಾತ್ರವಹಿಸಿದ್ದನು.[೮೦] ಈ ಸಾಹಸಕ್ಕಾಗಿ ವಿಜಯನಗರ ಅರಸನು "ಹಗಲುಕಗ್ಗೊಲೆ ಮಾನ್ಯ" ಎಂಬ ಬಿರುದನ್ನು ನೀಡಿ ಗೌರವಿಸಿದನು. ಆದರೆ ಕೊನೆಗೆ ಮತ್ತಿತಿಮ್ಮಣ್ಣನು ಸಾಮ್ರಾಟನ ಕ್ರೋಧಕ್ಕೆ ಬಲಿಯಾಗಿ ಬಂಧಿತನಾದನು ವಿಜಯನಗರದ ಸೆರೆಮನೆಯಲ್ಲಿ ಮೃತನಾದನು. ಬಹುಶಃ ತಿಮ್ಮಣ್ಣನಾಯಕನು ವಿಜಯನಗರ ಅರಸರಿಗೆ ಅವಿಧೇಯತೆಯಿಂದ ನಡೆದುಕೊಂಡು ಅವರ ಅಧೀನತೆಯನ್ನು ಧಿಕ್ಕರಿಸಿದ್ದರಿಂದ ಈ ಶಿಕ್ಷೆಗೆ ಗುರಿಯಾಗಿರಬೇಕು. ಹಾಗಲವಾಡಿ ಯೆರಿಮಾದಿನಾಯಕನು ತುಂಮಳ ಸಂಸ್ಥಾನದಲ್ಲಿ ವಿಜಯನಗರ ಸಾಮ್ರಾಜ್ಯದ ಪ್ರಾದೇಶಿಕ ಹಂತದ ಅಧಿಕಾರಿಯಾಗಿದ್ದನು. ವಿಜಯನಗರ ಅರಸರ ಅಧೀನರಾಗಿ ಪಾಳೆಪಟ್ಟನ್ನು ಸ್ಥಾಪಿಸಿಕೊಂಡು ಕ್ರಿ.ಶ.೧೪೯೬-೧೫೧೬ರವರೆಗೆ ಇವನು ಅಧಿಕಾರ ನಡೆಸಿದನು.[೮೧] ಜರಿಮಲೆ ಸಂಸ್ಥಾನದ ಪಾಪಣ್ಣನಾಯಕನು ವಿಜಯನಗರದ ಸಾಳ್ವನರಸಿಂಹನ ಸೇವಕರಲ್ಲಿ ಒಬ್ಬನಾಗಿ ಸೇವೆ ಸಲ್ಲಿಸುತ್ತಿದ್ದನು. ಇವನ ಸ್ವಾಮಿನಿಷ್ಠೆ ಮತ್ತು ಧೈರ್ಯಸಾಹಸ ಮೆಚ್ಚಿ ಕೆಲವು ಗ್ರಾಮಗಳನ್ನು ಪಾಪಣ್ಣನಿಗೆ ಬಳುವಳಿಯಾಗಿ ಕೊಟ್ಟನು. ತುಳುವ ವೀರನರಸಿಂಹನು ಕ್ರಿ.ಶ.೧೫೦೮-೦೯ ಜರಿಮಲೆ ಮನೆತನದ ಪೆನ್ನಪ್ಪನಾಯಕನಿಗೆ ಜರಿಮಲೆ, ಗುಡೇಕೋಟೆ, ಭೂಪಸಮುದ್ರ ಗ್ರಾಮಗಳನ್ನು ಉಡುಗೊರೆಯಾಗಿ ಕೊಟ್ಟನು.

ಕೃಷ್ಣದೇವರಾಯನು ವಿಜಯನಗರ ಅರಸರಲ್ಲಿ ತುಂಬಾ ಪ್ರಸಿದ್ಧಿ ಪಡೆದ ದೊರೆಯಾಗಿರುವನು. ವಿದೇಶಿ ಪ್ರವಾಸಿಗರು ಇವನ ಕಾಲದ ಆಳ್ವಿಕೆಯನ್ನು ಮುಕ್ತಕಂಠಗಳಿಂದ ಬಣ್ಣಿಸಿದ್ದಾರೆ. ವಿಜಯನಗರ ಯಾವ ಉದ್ದೇಶಕ್ಕಾಗಿ ತಲೆ ಎತ್ತಿತ್ತೋ ಆ ಉದ್ದೇಶವು ಇವನ ಕಾಲದಲ್ಲಿ ಈಡೇರಿತು. ಇವನು ಈ ಹಿಂದಿನಿಂದ ವಿಜಯನಗರಕ್ಕಾಗಿ ದುಡಿದವರನ್ನು ಕಡೆಗಣಿಸಲಿಲ್ಲ. ಅವರಿಗೆ ಸರಿಯಾದ ಸೂಕ್ತ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟನು. ತನ್ನ ಸಾಮ್ರಾಜ್ಯದೊಳಗೆ ಇದ್ದ ಪಾಳೆಯಗಾರರನ್ನು ಕರೆಸಿ ಅವರವರ ಸ್ಥಾನಕ್ಕೆ ತಕ್ಕಂತೆ ಗೌರವ ಕಾಣಿಕೆ ನೀಡಿದನು. ಈ ಸಂದರ್ಭದಲ್ಲಿ ಕುಮಾರರಾಮನ ಮೂಲ ವಂಶಸ್ಥರಾದ ಬೊಮ್ಮಂತರಾಜ ಮರುಳನವರು ನಮಗೆ ಪೂರ್ವದಲ್ಲಿ ನಾಡದಳವಾರಿಕೆ ಕಾವಲಿ ಸ್ವಾಸ್ತಿ ಭಾಗದ್ದು ಸದಾ ನಡೆಯುತ್ತಾಯಿತ್ತು. ಅದೇ ಪಾಲಿಸಿದರೆ ಪಾಲಿಸಿಬೇಕೆಂದು ಬಿನ್ನಾಹ ಮಾಡಿಕೊಂಡನು. ರಾಯರು ಸಂತೋಷಪಟ್ಟು ಕುಡಿತಿನಿ, ಸಂಡೂರು, ಜರಿಮಲೆ, ವಡ್ಡು, ದರೋಜಿ, ಗುಡೇಕೋಟೆ, ಬಾಣರಾವಿ, ಉಜ್ಜಯಿನಿ ಈ ಏಳು ತಾಲೂಕುಗಳನ್ನು ಜಾಗೀರು ಕೊಟ್ಟು, ನಾಡದಳವಾರಿಕೆ ಕಾವಲಿ ಸ್ವಾಸ್ತಿ ಸುದ್ಧ ಮಾಡಿಕೊಟ್ಟು, ಕಳುಹಿಸಿದನು.[೮೨] ಮುಂದೆ ಇವರಲ್ಲಿ ಗುಡೇಕೋಟೆ ಮತ್ತು ಜರಿಮಲೆ ಪಾಳೆಯಗಾರರು ತುಂಬಾ ಪ್ರಸಿದ್ಧಿಗೆ ಬಂದರು. ಕುಮ್ಮಟದುರ್ಗದ ವೀರ ಕುಮಾರರಾಮನ ಸಾಹಸ ಮತ್ತು ವ್ಯಕ್ತಿತ್ವವನ್ನು

ಕೃಷ್ಣದೇವರಾಯನು ತಿಳಿದುಕೊಂಡಿದ್ದನು. ಅವನ ನೆನಪಿಗಾಗಿ ಬೈಚಪ್ಪನಾಯಕನು ಕಟ್ಟಿಸಿದ್ದ ಕುಮಾರರಾಮನ ದೇವಸ್ಥಾನವನ್ನು ಶ್ರೀಕೃಷ್ಣದೇವರಾಯನು ದುರಸ್ಥಿ ಮಾಡಿಸಿದನೆಂದು ತಿಳಿದುಬರುತ್ತದೆ.[೮೩] ಶೂದ್ರವರ್ಗದ ಮೇಲೆ ಕೃಷ್ಣದೇವರಾಯನು ತುಂಬಾ ಗೌರವ ಹೊಂದಿರುವುದನ್ನು ಅಮುಕ್ತಮೌಲ್ಯದ ಕೃತಿಯು ತಿಳಿಸುತ್ತದೆ. ವಿಜಯನಗರ ಅರಸರ ಮನ್ನಣೆಯಿಂದ ಅಮರನಾಯಕ ಮನೆತನಗಳು ಅಸ್ತಿತ್ವಕ್ಕೆ ಬಂದವು. ಎಲ್ಲೆಲ್ಲಿ ಕೋಟೆಗಳನ್ನು ಕಟ್ಟಲು ಅನುಕೂಲಗಳಿದ್ದವೋ ಅಲ್ಲಲ್ಲಿ ಇಂತಹ ಮನೆತನಗಳು ಕಾಣಿಸಿಕೊಂಡವು. ಸು.೧೫ನೇ ಶತಮಾನದ ಕೊನೆಯ ದಶಕದಿಂದ ಆರಂಭವಾಗುವ ಇಂತಹ ಮನೆತನಗಳು ಕೃಷ್ಣದೇವರಾಯ ಮತ್ತು ರಾಮರಾಯರ ಕಾಲಕ್ಕೆ ವ್ಯಾಪಕವಾಗಿ ಬೆಳೆದುಬಂದವು.[೮೪] ವಿಜಯನಗರ ಸಾಮ್ರಾಜ್ಯವನ್ನು ಪ್ರಾಂತ್ಯ ಹಾಗೂ ಸೀಮೆಗಳಲ್ಲಿ ವಿಂಗಡಿಸಲಾಗಿತ್ತು. ತಕ್ಷಣ ಸೇವೆಗೆ ಯೋಗ್ಯವಾದ ಸೈನಿಕ ಸಮೂಹಗಳನ್ನು ಇಟ್ಟುಕೊಂಡಿರಲೇಬೇಕಾದ ಪಾಳೆಯಗಾರರು ಅವುಗಳನ್ನು ಆಳುತ್ತಿದ್ದರು. ವಿಜಯನಗರದ ನಿಜವಾದ ರಕ್ಷಕರು ಈ ಪಾಳೆಯಗಾರರಾಗಿದ್ದರು.

ಕೃಷ್ಣದೇವರಾಯನು ಬೇಡ ಜನಾಂಗದ ಗುಣಲಕ್ಷಣಗಳನ್ನು ಚೆನ್ನಾಗಿ ಅರಿತಿದ್ದನು. ಅವರಿಂದ ಸುರಕ್ಷಿತವಾಗಿರುವ ಹಾಗೂ ಸಹಾಯಪಡೆದುಕೊಳ್ಳುವ ಬಗ್ಗೆ ಅಮುಕ್ತಮೌಲ್ಯದ ಕೃತಿಯಲ್ಲಿ ತಿಳಿಸಿರುವನು. ಕಾಡುಗಳಲ್ಲಿ ರಾಜ್ಯಕ್ಕೆ ಪೀಡೆಯನ್ನುಂಟು ಮಾಡುವ ಕಿರಾತರೊಂದಿಗೆ ಈ ವಿದೇಶ ಶೂರರು ಹೊಡೆದಾಡಿದರೂ ರಾಜನಿಗೆ ತೊಂದರೆಯಾಗದು. ಕಾಡಿನ ನಾಯಕರು ಚಿಕ್ಕ ಕಾರಣದಿಂದಲೇ ದುಷ್ಟರಾಗಿಬಿಡುತ್ತಾರೆ. ಆದುದರಿಂದ ರಾಜನಾದವನು ಅವರನ್ನು ಹೇಗಾದರೂ ವಶೀಕರಣ ಮಾಡಿಕೊಳ್ಳಬೇಕು ಅವರಲ್ಲಿಯೇ ಸ್ನೇಹ ಅಥವಾ ದ್ವೇಷ ಹುಟ್ಟಬಹುದು. ಆದುದರಿಂದ ಅವನು ಅಂತಹವರೊಡನೆ ಜಾಗರೂಕತೆಯಿಂದ ವರ್ತಿಸಬೇಕು.[೮೫] ಕಾಡುಗಳ ದುರ್ಗ ಪ್ರದೇಶಗಳಲ್ಲಿ ಕಾಡಿನ ಜನರಾದ ಬೇಡರು, ಚೆಂಚುರು ಮುಂತಾದ ವರಲ್ಲಿ ಬೇಕಾದಷ್ಟು ದುರ್ಗುಣಗಳಿರುತ್ತವೆ. ಮಣ್ಣಿನ ಗೋಡೆಯನ್ನು ಎಷ್ಟು ತೊಳೆದರೂ ಮಣ್ಣಿಲ್ಲದಂತೆ ಮಾಡುವುದು ಶಕ್ಯವಿಲ್ಲವೋ ಹಾಗೆ ಅವರನ್ನು ಎಷ್ಟು ಸಲ ಶಿಕ್ಷಿಸಿದರೂ ಅವರ ದುರ್ಗಣ ಹೋಗು ವುದಿಲ್ಲ. ಆದುದರಿಂದ ಅವರಿಗೆ ವಸ್ತುವಾಹನಾದಿಗಳನ್ನಿತ್ತು ಅವರೊಂದಿಗೆ ಗೆಳೆತನ ಬೆಳೆಸುವುದು ಉತ್ತಮ. ಹಾಗೆ ಮಾಡಿದಾಗ ವೈರಿಗಳೊಂದಿಗೆ ಹೋರಾಡಲು ಅವರೂ ಸಹಾಯಕರಾಗಿ ಧೈರ್ಯದಿಂದ ಸೆಣಸಾಡುವರು. ಜೊತೆಗೆ ಶತ್ರುಗಳಾದ ನೆರೆರಾಜ್ಯದವರನ್ನು ಈ ಬೇಡರಿಂದ ಕೊಳ್ಳೆ ಹೊಡೆಸಲುಬಹುದು.[೮೬] ಕೃಷ್ಣದೇವರಾಯನ ಬೇಡರ ಬಗೆಗಿನ ಈ ನಿಲುವುಗಳು ಕಾಡುವಾಸಿಗಳಾದ ಸಾಮಾನ್ಯ ಬೇಡರಿಗೆ ಒಪ್ಪುವಂತದ್ದು. ಆದರೆ ರಾಜರಿಂದ ಪುರಸ್ಕೃತರಾದ ಹಾಗೂ ಅವರ ಹತ್ತಿರದಲ್ಲಿದ್ದ ಸಂಸ್ಥಾನಿಕರಿಗೆ ಅನ್ವಯವಾಗಲಾರದು. ಬೇಡರಲ್ಲಾದ ಪರಿವರ್ತನೆಯನ್ನು ಕಂಡ ಕೃಷ್ಣದೇವರಾಯನೇ ಮುಂದೆ ಅವರಿಗೆ ಉತ್ತಮ ಸ್ಥಾನಮಾನಗಳನ್ನು ನೀಡಿರುವುದು ಕಂಡುಬರುತ್ತದೆ. ಕ್ರೂರ ಪ್ರಾಣಿಗಳನ್ನು ನಿರ್ಭಯವಾಗಿ

ಬೇಟೆಯಾಡುತ್ತಿದ್ದ ಬೇಡರ ನೆಲೆಗಳು ನಾಗರಿಕ ನೆಲೆಗಳಿಗಿಂತ ಭಿನ್ನವಾಗಿದ್ದವು. ಬೇಡರ ಹಠಮಾರಿತನ, ಕ್ರೂರ ಸ್ವಭಾವ, ಧೈರ್ಯ, ಎದೆಗಾರಿಕೆ ಮುಂತಾದ ಗುಣಗಳಿಗೆ ಅವರು ಬದುಕಿದ್ದ ಪರಿಸರವೇ ಕಾರಣವಾಗಿತ್ತು. ಕಠೋರ ಮನಸ್ಸಿನ ಇಂತಹ ಬೇಡರನ್ನು ಅರಸರು ಎದುರು ಹಾಕಿಕೊಳ್ಳದೆ ಅವರಿಗೆ ಆಸೆ ಆಮಿಷಗಳನ್ನೊಡ್ಡಿ ತಮ್ಮವರನ್ನಾಗಿ ಮಾಡಿಕೊಳ್ಳುತ್ತಿದ್ದರಿಂದ ಅವರ ಬದುಕು ಬದಲಾವಣೆ ಕ್ರಿಯೆಗೆ ಒಳಗಾಯಿತು. ಅವರು ಸೈನ್ಯ ಸೇರಿ ಸೈನಿಕರಾದರು. ಅಧಿಕಾರಿಗಳು ಹಾಗೂ ಪಾಳೆಯಗಾರರು ಅಮರ ನಾಯಕರಾಗಿ ಹಂತ ಹಂತವಾಗಿ ಮೇಲೇರುತ್ತಾ ಉತ್ತಮ ನಾಗರಿಕ ಜೀವನವನ್ನು ನಡೆಸುವಂತಾದರು.

ವಿಜಯನಗರದ ಅರಸರು ಸದಾ ಕಿರುಕುಳವನ್ನು ಕೊಡುತ್ತಾ, ಜನರಿಗೆ ಹಾಗೂ ತಮಗೆ ಕಂಟಕ ಪ್ರಾಯರಾಗಿದ್ದ ಕೆಲವು ಪಾಳೆಯಗಾರರನ್ನು ಜೊತೆಗೆ ಇತರ ಪಾಳೆಯಗಾರರನ್ನು ಅವರದೇ ಆದ ಪ್ರದೇಶಗಳಿಗೆ ಅಧಿಪತಿಗಳನ್ನಾಗಿ ಮಾಡುವುದರ ಮೂಲಕ ರಾಜ್ಯದಲ್ಲಿ ಶಾಂತಿ ಕಾಪಾಡಿದರು. ಕೆಲವು ಬೇಡರ ಉಪಟಳ ಕೈಮೀರಿದಾಗ ಅಲ್ಲಿಯೇ ಹತ್ತಿರದಲ್ಲಿದ್ದಂತಹ ತಮ್ಮ ವಿಧೇಯ ನಾಯಕರಿಗೆ ತಿಳಿಸುತ್ತಿದ್ದರು. ಕೃಷ್ಣದೇವರಾಯನು ಕೆಳದಿಯ ಚೌಡಪ್ಪ ಮತ್ತು ಭದ್ರಪ್ಪನಾಯಕರಿಗೆ ಇಂತಹ ಕೆಲವು ಬೇಡರ ಉಪಟಳವನ್ನು ಎದುರಿಸಲು ತಿಳಿಸಿದನೆಂದು ಲಿಂಗಣ್ಣ ಕವಿಯು ತಿಳಿಸಿರುವನು. ಕೃಷ್ಣದೇವರಾಯನು ಕಳುಹಿಸಿದ ಸೈನ್ಯದಿಂದ ಹೋರಾಟವನ್ನು ಮುಂದುವರೆಸಿದ ಚೌಡಪ್ಪನಾಯಕನು ಎದೆಗುಂದದೇ ಬೇಡರನ್ನು ಎದುರಿಸಿದನು.[೮೭] ಬೇಡರ ದರ್ಪಯುಕ್ತ ಅಧಿಕಾರ ಜನರ ಬದುಕನ್ನು ಅಲ್ಲಾಡಿಸಿದ ಅನೇಕ ಸಂಗತಿಗಳು ಆಗ ಕಂಡು ಬರುತ್ತಿದ್ದವು. ಬೇಡರಲ್ಲಿ ಕೆಲವರು ಕ್ರಮೇಣ ಅಧಿಕಾರಸ್ಥರಾದಂತೆ, ದೊರೆಗಳಾದಂತೆ ತಮ್ಮ ಮೂಲ ಸ್ವಭಾವಗಳಲ್ಲಿ ಬದಲಾವಣೆಯನ್ನು ಕಂಡುಕೊಂಡರು.

ಕೃಷ್ಣದೇವರಾಯನು ತನ್ನ ಆಳ್ವಿಕೆಯಲ್ಲಿ ಅನೇಕ ಬೇಡರನ್ನು ವಿವಿಧ ಹುದ್ದೆಗಳಿಗೆ ನೇಮಕ ಮಾಡಿ ಕೊಂಡಿದ್ದನು. ಕೃಷ್ಣದೇವರಾಯನ ತಾಯಿ ನಾಗಲಾದೇವಿ ಬೇಡ ಜನಾಂಗಕ್ಕೆ ಸೇರಿದ್ದಳು. ತನ್ನ ತಂದೆ ತಾಯಿಯ ಹೆಸರಿನಲ್ಲಿ ದೇವಾಲಯಗಳಿಗೆ ಅನೇಕ ಗ್ರಾಮಗಳನ್ನು ದತ್ತಿಯಾಗಿ ಬಿಟ್ಟುಕೊಟ್ಟನೆಂದು ಶಾಸನಗಳಿಂದ ತಿಳಿದುಬರುತ್ತದೆ. ನಾಗಲಾದೇವಿ ಹೆಸರಿನಲ್ಲಿ ಅನೇಕ ಗ್ರಾಮಗಳು ಸ್ಥಾಪನೆಯಾದವು. ಕೃಷ್ಣದೇವರಾಯನು ತನ್ನ ತಂದೆ ತಾಯಿಗಳ ಬಗ್ಗೆ ಅಪಾರವಾದ ಪ್ರೀತಿಯನ್ನು ಹೊಂದಿದ್ದನೆಂದು ಈ ಘಟನೆಗಳಿಂದ ತಿಳಿದುಬರುತ್ತದೆ. ಆಂಧ್ರದಲ್ಲಿ ಕೃಷ್ಣದೇವರಾಯನಿಗೆ (ಆಂಧ್ರಬೋಜ, ಬೊಯ) ಬೇಡನೆಂದು ಕರೆದಿದ್ದಾರೆ. ಇಂದಿಗೂ ಆಂಧ್ರದವರು ಕೃಷ್ಣದೇವರಾಯ ಮತ್ತು ಆತನ ಪರಿವಾರವನ್ನು ಬೇಡರೆಂದು ಪರಿಗಣಿಸಿದ್ದುದು ಕಂಡುಬರುತ್ತದೆ. ಮುಂತಾದ ವಿಷಯಗಳನ್ನು 'ಶ್ರೀಕೃಷ್ಣದೇವರಾಯನ ತಾಯಿ ನಾಗಲಾದೇವಿ: ಚಾರಿತ್ರಿಕ ಒಸ್ನೋಟ' ಎಂಬ ಲೇಖನದಲ್ಲಿ ಡಾ.ವಿರೂಪಾಕ್ಷಿ ಪೂಜಾರಹಳ್ಳಿಯವರು ಪ್ರಸ್ತಾಪಿಸಿರುವುದರ ಮೂಲಕ ಸಂಶೋಧಕರ ಗಮನ ಸೆಳೆದಿದ್ದಾರೆ.[೮೮] ಅಲ್ಲದೆ ಅವರಿಗೆ ಒಳ್ಳೆಯ

ಸ್ಥಾನಮಾನಗಳನ್ನು ನೀಡಿದ್ದನು. ಬೇಡ ಜನಾಂಗದ ರಾಮಪ್ಪನು ಕೃಷ್ಣದೇವರಾಯನ ಕಾಲದಲ್ಲಿ ಅಮರನಾಯಕನಾಗಿದ್ದನು. ಕೃಷ್ಣದೇವರಾಯನ ಸೈನ್ಯದಲ್ಲಿ ಬೇಡರ ಪಡೆಗೆ ವಿಶೇಷ ಸ್ಥಾನಮಾನಗಳನ್ನು ನೀಡಲಾಗುತ್ತಿತ್ತು. ಅವನ ದಿನಚರಿಯಲ್ಲಿ ಈ ಬೇಡರ ಪಡೆಯ ಉಲ್ಲೇಖವಿದೆ. ಅಲ್ಲದೆ ಶಾಸನಗಳು ಬೇಡಪಡೆ ಇದ್ದುದನ್ನು ಸಮರ್ಥಿಸುತ್ತವೆ.[೮೯] ಕೃಷ್ಣದೇವರಾಯನ ಕಳಿಂಗ ದಂಡಯಾತ್ರೆಯಲ್ಲಿ ಅದರಲ್ಲೂ ಕೃಷ್ಣದೇವರಾಯನಿಗೆ ಪ್ರಬಲ ಸ್ಪರ್ಧೆ ನೀಡಿದ ಕೊಂಡವೀಡು ಕೊಂಡಪಲ್ಲಿ, ಬೆಲ್ಲಮಕೊಂಡ ಮುತ್ತಿಗೆಗಳಲ್ಲಿ ಬೇಡರು ೧೮ ಮಂದಿ ಕಂಪಣದಿಂದ ಬಂದಿದ್ದರು. ಅಲ್ಲದೆ ಗಜಪತಿಯು ದಂಡೆತ್ತಿ ಬರಬಹುದೆಂದು ಶಂಕಿಸಿ ಕೃಷ್ಣದೇವರಾಯನು ನೇಮಿಸಿದ ೧೬ ಮಂದಿ ಷೋಡಶ ಪಾತ್ರರರಲ್ಲಿ ಬೇಡರಿದ್ದರು.[೯೦] ದುರ್ಗಮ ಪ್ರದೇಶವನ್ನು ಮುತ್ತುವಾಗ ಇಲ್ಲವೇ ಮುಸ್ಲಿಮರನ್ನು ಎದುರಿಸಲು ಬೇಡರನ್ನು ಬಳಸಿಕೊಳ್ಳಲಾಗುತ್ತಿತ್ತು. ಕೃಷ್ಣದೇವರಾಯನ ದಿನಚರಿಯಲ್ಲಿ ತುರುಕಾಣ್ಯದ ಮೇಲೆ ದಂಡೆತ್ತುವಾಗ ಬೇಡ ನಾಯಕರನ್ನು ಕರೆಸಿ ೧೮ ಕಂಪಣದವರಿಗೂ ಅರಮನೆಯಲ್ಲಿ ಊಟಕ್ಕೆಯಿಕ್ಕಿ ಹರಿವಾಣದ ಕುಮಾರರು ಕೂಡಿ ಕಾರ್ಯಮುಖಕ್ಕೆ ಕದಲಿ ಬರುತ್ತಾಯಿದ್ದೇವೆ.... ಎಂದು ಹೇಳಲಾಗಿದೆ.[೯೧] ಹದಿನೆಂಟು ಕಂಪಣದಲ್ಲಿ ಬೇಡರು ಪ್ರಬಲರಾಗಿದ್ದುದಲ್ಲದೆ ರಾಜನಿಗೆ ಆಪ್ತರಾಗಿದ್ದುದನ್ನು ದಿನಚರಿಯು ತಿಳಿಸುತ್ತದೆ. ಕೃಷ್ಣದೇವರಾಯನು ವಿಸ್ತರಿಸಲ್ಪಟ್ಟ ಕರ್ನಾಟಕ ಪ್ರದೇಶಕ್ಕೆ ತನ್ನವರೇ ಆದ ನಾಯಕ ಜನಾಂಗವನ್ನು ಅಂದರೆ ದೊರೆಗಳು, ನಾಯಕರು, ಪಾಳೆಯಗಾರರು ಇವರನ್ನು ತನ್ನ ರಾಜ್ಯದ ಸಂರಕ್ಷಣೆಗಾಗಿ ನೇಮಿಸಿದನು. ರಾಜ್ಯದ ಅಂಚಿನಲ್ಲಿ, ಮಧ್ಯದಲ್ಲೂ ಸುಮಾರು ಎಪ್ಪತ್ತೇಳು ಜನ ಪಾಳೆಯಗಾರರು ಜವಾಬ್ದಾರಿ ಹೊತ್ತಿದ್ದರು. ಇವರು ಸಹ ಸ್ವತಂತ್ರರಾಗಿ ಬಾಳುವಂತೆ ಅವಕಾಶ ಕಲ್ಪಿಸಿಕೊಟ್ಟನು. ಈ ಜನಾಂಗಕ್ಕೆ ವಿಜಯನಗರ ಸಾಮ್ರಾಜ್ಯವು ಆಧಾರ ಸ್ತಂಭದಂತೆ ನಿಂತು ಅದರ ರಕ್ಷಣೆಯೇ ನಮ್ಮ ಆದ್ಯಕರ್ತವ್ಯವೆಂದು ವಿಜಯನಗರ ಕರ್ನಾಟಕ ಸಿಂಹಾಸನಾಧಿಪತ್ಯದ ಸಾಮ್ರಾಜ್ಯವು ಬೆಳಗತೊಡಗಿತು.[೯೨] ಮಲ್ಲರ ಮತ್ತು ಬೇಟೆಗಾರರ ಬಗ್ಗೆ ಹೆಚ್ಚಿನ ಕಾಳಜಿಯನ್ನು ದೊರೆಗಳು ತೋರುತ್ತಿದ್ದರು. ಕೃಷ್ಣದೇವರಾಯನು ದಿನದ ಮಧ್ಯದಲ್ಲಿ ಅಂಗಮರ್ಧನ ಮಾಡುವ ಮಲ್ಲರನ್ನು ಬೇಟೆಗಾರರನ್ನು ಮಾತನಾಡಿಸುತ್ತಿದ್ದನು.[೯೩] ಕೃಷ್ಣದೇವರಾಯನು ಗೆದ್ದ ಕೋಟೆಗಳಲ್ಲಿ ರಾಯಚೂರು ಕೋಟೆಯೂ ಒಂದು, ಎರಡು ಸುತ್ತಿನ ಈ ಕೋಟೆಯ ಒಳಸುತ್ತನ್ನು ವಿಠಲಪ್ಪನಾಯಕನು ಕಟ್ಟಿಸಿದನು. ಈ ರಾಯಚೂರು ಜಿಲ್ಲೆಯ ದೇವದುರ್ಗವು ಬೇಡರಿಗಾಗಿ ಹೆಸರಾಗಿತ್ತು.[೯೪] ಪುರಂದರದಾಸರು ಮತ್ತು ಕನಕದಾಸರು ತಳವಾರ, ಬೇಡರ ಕುರಿತಂತೆ ಅನೇಕ ಮಾಹಿತಿ ನೀಡಿದ್ದಾರೆ. ಬೇಡರ(ಬೇಟೆಗಾರರ) ಬಣ್ಣವನ್ನು ಅವರ ವೃತ್ತಿಯನ್ನು, ಗುಣಗಳನ್ನು ಮತ್ತು ತಳವಾರನ ವೃತ್ತಿ ಹಾಗೂ ಸ್ಥಾನಮಾನಗಳ ಬಗ್ಗೆ ವಿವರಣೆಯನ್ನು ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.

ಕೃಷ್ಣದೇವರಾಯನ ನಂತರ ವಿಜಯನಗರವು ಪತನದತ್ತ ನಡೆಯಿತು. ಇವನ ಅಳಿಯ ರಾಮರಾಯನು ವಿಜಯನಗರದ ಅರಸರನ್ನು ಸೆರೆಮನೆಯಲ್ಲಿಟ್ಟು ಸರ್ವಾಧಿಕಾರಿಯಾದನು. ಅಚ್ಯುತರಾಯನ ಕಾಲಕ್ಕೆ

ಭೇಟಿ ನೀಡಿದ ನ್ಯೂನಿಜ್ ರಾಜ್ಯದಲ್ಲಿ ಹಲವಾರು ನಾಯಕರುಗಳಿದ್ದ ಬಗ್ಗೆ ಮಾಹಿತಿಯನ್ನು ನೀಡುವನು. ಈಗಿನ ಮಂತ್ರಿ ಸಾಳುವನಾಯಕ (ಕಾರೋಮೆಂಡಲ್ ನಾಗಪಟ್ಟಣ, ತಾಂಜೂರ್, ದೇವಿಪಟ್ಟಣ ಕಾಯುವ ಅಧಿಪತಿ) ಅಜಪರ್ಕತಿಮ್ಮಪ್ಪ (ಕೃಷ್ಣದೇವರಾಯನ ಕಾಲದ ಮಂತ್ರಿ) ಗೋಪನಾಯಕ (ರಾಯಚೂರು ಪ್ರದೇಶದ ಅಧಿಪತಿ ಬಂಕಾಪುರ ಅಧಿಪತಿ ಲೇಪನಾಯಕ, ಚಿನ್ನಪ್ಪನಾಯಕ ರಾಜನ ಸೇನಾಧಿಕಾರಿ ಕೃಷ್ಣಪ್ಪನಾಯಕ, ಚಿತ್ರದುರ್ಗ ಜಿಲ್ಲೆಯ ಬೂದಿಹಾಳ್‌ಗೆ ಅಧಿಪತಿಯಾದ ಬಜಪ್ಪನಾಯಕ, ಆವತಿ (ಕೋಲಾರ ಜಿ.) ನಾಡಿಗೆ ಅಧಿಪತಿಯಾದ ಮಲ್ಲಪ್ಪನಾಯಕ ಗುತ್ತಿ ಪ್ರಾಂತ್ಯಕ್ಕೆ ಅಧಿಪತಿಯಾದ ಮತ್ತೊಬ್ಬ ಭೋಜಪ್ಪನಾಯಕ ಹೀಗೆ ಇನ್ನೂರಕ್ಕಿಂತಲೂ ಹೆಚ್ಚು ನಾಯಕರುಗಳು, ಪಾಳೆಯಗಾರರೂ ವಿಜಯನಗರದ ರಾಜ್ಯದಲ್ಲಿದ್ದರೆಂದು ಹೇಳಿರುವನು.[೬೫] ಪೆದ್ದನಾಯಕ ಮತ್ತು ಅಜನಾಯಕರ ಎಂಬುವರು ಅಡುಗೆ ಮನೆಯಲ್ಲಿ ಉಸ್ತುವಾರಿ ನೋಡಿಕೊಳ್ಳುವ ನಾಲ್ಕು ಜನರ ಮೇಲೆ ಉಸ್ತುವಾರಿಯನ್ನು ಹೊಂದಿದ್ದರು.[೬೬] ಪಾಳೆಯಗಾರರು, ಅಮರನಾಯಕರು ಈ ಕಾಲಕ್ಕೆ ದುರ್ಬಲಗೊಳ್ಳುತ್ತಿದ್ದ ವಿಜಯನಗರ ಅರಸರನ್ನು ಕ್ರಮೇಣ ಅಲ್ಲಗೆಳೆಯಲಾರಂಭಿಸಿದ ಸೂಚನೆಗಳು ಕಂಡುಬಂದವು. ಸ್ವತಂತ್ರವಾಗಿ ಆಳುವ ಪ್ರಯತ್ನಗಳು ನಡೆದವು. ಇವನ ಕಾಲಕ್ಕಾಗಲೇ ಬೇಡರು ಮತ್ತು ತುರುಕರು ದೊಡ್ಡ ಶತ್ರುಗಳಾದದ್ದು ಮತ್ತು ಅವರನ್ನು ಯುದ್ಧದಲ್ಲಿ ನಾಶಮಾಡಿ ಅತ್ಯಾನಂದದಿಂದ ಭೂಮಂಡಲವನ್ನು ಆಳುವ ವಿಚಾರವನ್ನು 'ಕೆಳದಿ ನೃಪವಿಜಯ'ದಿಂದ ತಿಳಿಯಬಹುದಾಗಿದೆ.[೬೭]

ವಿಜಯನಗರ ಅರಸರು ದುರ್ಬಲವಾದಂತೆ ಪಾಳೆಯಗಾರರು ದಿನದಿಂದ ದಿನಕ್ಕೆ ಪ್ರಬಲಗೊಳ್ಳುತ್ತಲೇ ಬಂದರು. ಅಚ್ಯುತರಾಯನು ಯಾವುದೇ ಪಾಳೆಯಗಾರರನ್ನು ಎದುರು ಹಾಕಿಕೊಳ್ಳುವಷ್ಟು ಬಲಿಷ್ಟನೂ ಆಗಿರಲಿಲ್ಲ. ಪಾಳೆಯಗಾರರ ಸಹಾಯವಿಲ್ಲದೆ ಯಾವ ಯುದ್ಧವನ್ನು ಮಾಡುವಂತಿರಲಿಲ್ಲ. ತನ್ನ ವಿರುದ್ಧ ಬಂಡಾಯವೆದ್ದ ಪಾಳೆಯಗಾರರನ್ನು ಎದುರಿಸಲು ಪಾಳೆಯಗಾರರೇ ಬೇಕಾಗಿತ್ತು. ಜರಿಮಲೆಯ ಪೆನ್ನಪ್ಪನಾಯಕನು ಅಚ್ಯುತರಾಯನ ವಿರುದ್ಧ ಬಂಡೆದ್ದವರನ್ನು ಅಡಗಿಸುವಲ್ಲಿ ಯಶಸ್ವಿಯಾದನು. ಇದರಿಂದ ಸಂತೃಪ್ತನಾದ ರಾಯನು ಜರಿಮಲೆ ಪ್ರದೇಶವನ್ನು ಅವನಿಗೆ ಬಳುವಳಿಯಾಗಿ ನೀಡಿದನು.[೬೮] ಶ್ರೀಶೈಲ ಪರ್ವತಾವಳಿ ಪ್ರದೇಶದಿಂದ ಸ್ಥಳಾಂತರಗೊಂಡ ಕಾಟೇಮಲ್ಲನಾಯಕನು ತನ್ನ ಕಂಪಳ ಮತ್ತು ದೇವರುಗಳನ್ನು ತೆಗೆದುಕೊಂಡು ಶ್ರೀವಿದ್ಯಾನಗರದ ದಕ್ಷಿಣ ಭಾಗಕ್ಕೆ ಬಂದು ಕೊಂದುರ್ಪಗುಡ್ಡದ ಸಮೀಪದಲ್ಲಿ ಹಟ್ಟಿ ಹಾಕಿದ್ದು ಕ್ರಿ.ಶ.೧೫೩೦ರ ನಂತರವೆಂದು ಕಾಣುತ್ತದೆ. ರಾಮರಾಯನ ಕುತಂತ್ರ ನೀತಿಯನ್ನು ಅರಿತ ಷಾಹಿಸುಲ್ತಾನರು ಒಂದಾದರು. ರಕ್ತಸಂಬಂಧದ ಮೂಲಕ ಒಗ್ಗೂಡಿ ವಿಜಯನಗರದ ಮೇಲೆ ಜಿಹಾದ್ ಘೋಷಿಸಿದರು. ಅವರನ್ನು ಎದುರಿಸಲು ರಾಮರಾಯ ತನ್ನ ತಮ್ಮಂದಿರೊಂದಿಗೆ ಒಂದು ಲಕ್ಷ ಕುದುರೆ ಬಲ ಮತ್ತು ಐದು ಲಕ್ಷ ಪದಾತಿಗಳೊಂದಿಗೆ[೬೯] ಬಹುಮನಿ ಸುಲ್ತಾನರನ್ನು ಎದುರಿಸಲು

ಕೃಷ್ಣಾನದಿ ತೀರಕ್ಕೆ ಹೋದನು. ಕ್ರಿ.ಶ.೧೫೬೫ ಜನವರಿ ೨೩ರಂದು ನಡೆದ ತಾಳಿಕೋಟೆ ಯುದ್ಧದಲ್ಲಿ ರಾಮರಾಯನು ಕೊಲ್ಲಲ್ಪಟ್ಟನು. ಅವನ ತಮ್ಮ ತಿರುಮಲನು ರಣರಂಗದಿಂದ ಪಲಾಯನ ಮಾಡಿ ವಿಜಯನಗರಕ್ಕೆ ಬಂದು ಸಿಕ್ಕ ಸಂಪತ್ತನ್ನೆಲ್ಲಾ ಆನೆಗಳ ಮೇಲೆ ಏರಿಕೊಂಡು ತನ್ನೊಂದಿಗೆ ಸದಾಶಿವರಾಯನನ್ನು ಕರೆದುಕೊಂಡು ಪರಿವಾರಗಳ ಸಮೇತವಾಗಿ ಪೆನಗೊಂಡ ದುರ್ಗಕ್ಕೆ ಓಡಿ ಹೋದನು. ವಿಜಯನಗರವು ರಾಜನಿಲ್ಲದ ರಾಜಧಾನಿಯಾಯಿತು. ಅದೊಂದು ನತದೃಷ್ಟ ಸಾಮ್ರಾಜ್ಯವಾಯಿತು. ಗೆದ್ದ ಮುಸ್ಲಿಂ ಸೈನ್ಯ ಹಿಂದೂ ಸೈನ್ಯವನ್ನು ಬೆನ್ನಟ್ಟಿಕೊಂಡು ಬಂದಿತು. ಇಪ್ಪತ್ತು ಮೈಲು ಪ್ರದೇಶವನ್ನೆಲ್ಲ ಹೆಣಮಯ ಮಾಡಿ ನೆಲವೆಲ್ಲ ರಕ್ತಮಯ ಮಾಡಿದರು. ಅಪಾರವಾದ ಹಣ, ನಗ ಮತ್ತು ದಾಸ-ದಾಸಿಯರು ಮುಸ್ಲಿಮರಿಗೆ ಸೆರೆಸಿಕ್ಕರು. ಯುದ್ಧಸ್ಥಳವಾದ 'ಅಲಿಕಂದಿ'ಯಿಂದ ವಿಜಯನಗರದವರಿಗೆ ಬಿದ್ದಿದ್ದ ಹೆಣಗಳನ್ನು ಎಣಿಸಲು ಹನ್ನೆರಡು ದಿನಗಳಾದವು.[೧೦೦] ವಿಜಯನಗರದ ನಿವಾಸಿಗಳು ಗುಹೆಗಳಲ್ಲಿ, ಕಣಜಗಳಲ್ಲಿ ಅವಿತುಕೊಂಡರು. ಕೆಲವರು ಹತ್ತಿರದ ಗುಡ್ಡಗಳಿಗೆ ಓಡಿ ಹೋದರು. ಆರು ತಿಂಗಳ ಕಾಲ ಸುಲ್ತಾನನ ಸೈನ್ಯ ವಿಜಯನಗರದಲ್ಲಿತ್ತು. ವಿಜಯನಗರವನ್ನು ಕೊಳ್ಳೆ ಹೊಡೆದ ಪ್ರತಿಯೊಬ್ಬ ಮುಸ್ಲಿಂ ಸೇನಾನಿಯೂ ಶ್ರೀಮಂತನಾದನು. ಓಡಿ ಹೋದ, ತಪ್ಪಿಸಿಕೊಂಡ, ಅವಿತುಕೊಂಡ ಅನೇಕರು ಬದುಕುವುದು ಕಷ್ಟವಾಯಿತು. ಇಂತಹವರು ಕೊಳ್ಳೆಗಾರರ ಜೊತೆ ಕೈಜೋಡಿಸಬೇಕಾಯಿತು. ಈ ಸಂದರ್ಭದಲ್ಲಿ ವನಚರರಾದ ಬೇಡರು ದುಃಸ್ಥಿತಿಯಿಂದ ಅಸಹಾಯಕವಾಗಿದ್ದ ವಿಜಯನಗರದ ಮೇಲೆ ಆರು ಸಾರಿ ದಾಳಿಗೈದು, ಅಲ್ಲಿನ ಜನರು ಬಿಟ್ಟು ಹೋದ ಎಲ್ಲಾ ಸಂಪತ್ತನ್ನು ದೋಚಿಕೊಂಡು ಹೋದ ಸಂಗತಿಯನ್ನು ಕೂಟೋ ಎಂಬುವನು ಬರೆಯುತ್ತಾನೆ.[೧೦೧] ಆದರೆ ಆರು ತಿಂಗಳ ಕಾಲ ವಿಜಯನಗರದಲ್ಲಿ ಬೇಡರ ಆಳ್ವಿಕೆ ಇತ್ತೆಂದು ಚನ್ನಬಸವಪುರಾಣದಲ್ಲಿ ವಿರೂಪಾಕ್ಷ ಪಂಡಿತನು ಹೇಳುತ್ತಾನೆ. ಅಲ್ಲದೆ ಅಲಿ ಅದಿಲ್‌ಷಾಹಿಯು ತಿರುಮಲರಾಯನ ವಿರುದ್ಧ ಪೆನಗೊಂಡ ಮೇಲೆ ದಾಳಿ ಮಾಡಿದಾಗ ಅಲಿಗೆ ಈ ಬೇಡರು ಸಹಾಯ ಮಾಡಿದರು.[೧೦೨] ಕ್ರಿ.ಶ.೧೫೬೫ರ ಯುದ್ಧದಲ್ಲಿ ತಮ್ಮ ಗಂಡಂದಿರನ್ನು ಕಳೆದುಕೊಂಡ ಬೇಡ ಕುಟುಂಬಗಳು ಬೀದಿಪಾಲಾದವು. ಅಲ್ಲಿಯೇ ಉಳಿದ ಕೆಲವು ಬೇಡ ಕುಟುಂಬಗಳು ಜೀವನ ನಿರ್ವಹಣೆಗಾಗಿ ಕಳ್ಳತನದಲ್ಲಿ ತೊಡಗಿರಬಹುದು. ದಿಕ್ಕುಕಾಣದ ಬೇಡ ಕುಟುಂಬಗಳು ಕೆಲವು ಜೀವನ ನಿರ್ವಹಣೆಗಾಗಿ ವೇಶ್ಯಾವೃತ್ತಿಯನ್ನು ಆರಂಭಿಸಿದರು. ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲ್ಲೂಕುಗಳಲ್ಲಿರುವ ಸೂಳೆಗಾರಿಕೆ ಕುಟುಂಬಗಳು ಹಿಂದೆ ವಿಜಯನಗರ ಪರವಾಗಿ ಹೋರಾಡಿ ಹತರಾದ ಸೈನಿಕರ ಕುಟುಂಬಗಳೇ ಆಗಿವೆ ಎಂಬ ಅಭಿಪ್ರಾಯವಿದೆ. ವಿಜಯನಗರ ಸಾಮ್ರಾಜ್ಯದ ಪತನ ದಕ್ಷಿಣ ಭಾರತದ ರಾಜಕೀಯ ಮೇಲೆ ಅಷ್ಟೇ ಅಲ್ಲದೆ ಇಲ್ಲಿನ ಅನೇಕ ಜನಾಂಗಗಳ ಮೇಲೂ ಪರಿಣಾಮ ಬೀರಿತು.

ವಿಜಯನಗರದ ರಾಮರಾಯನು ಮುಸ್ಲಿಮರ ವಿರುದ್ಧ ಸಂಗ್ರಹಿಸಿದ ಸೈನ್ಯವು ಸ್ಥಳೀಯ ನಾಯಕರ ನಿಯಂತ್ರಣದಲ್ಲಿತ್ತು. ಪ್ರತಿಯೊಂದು ದಳ ರಾಜನು ನೇಮಿಸಿದ್ದ ತಾತ್ಪೂರ್ತಿಕ ಪ್ರಾಂತೀಯ ಮಾಂಡಲಿಕರು

ಕೂಡಿಸಿದ ದಂಡುಗಳ ಭಾಗವಾಗಿತ್ತು.[೧೦೩] ವಿಜಯನಗರದ ಬೆನ್ನೆಲುಬಾಗಿದ್ದ ಪಾಳೆಯಗಾರರು ಸಿಂಹಾಸನಕ್ಕೆ ಸಾಮಂತರಾಗಿದ್ದುಕೊಂಡು ಆಡಳಿತ ನಡೆಸಿ ಸಿಂಹಾಸನದ ಸಲುವಾಗಿ ಒಟ್ಟುಗೂಡಿ ತಾಳಿಕೋಟೆ ಯುದ್ಧದಲ್ಲಿ ಧೈರ್ಯ, ಸಾಹಸಗಳನ್ನು ತೋರಿ ಯುದ್ಧದಲ್ಲಿ ಸರ್ವತ್ಯಾಗ ಮಾಡಿದರು. ಈ ಯುದ್ಧದಲ್ಲಿ ೭೨ ವಂಶದ ನಾಯಕರೂ ಮತ್ತು ಅವರ ಅನುಯಾಯಿಗಳೂ ಕಷ್ಟಕ್ಕೀಡಾದರೆಂದು ಹೇಳಲಾಗಿದೆ.[೧೦೪] ಸೈನಿಕ ವೃತ್ತಿಗೆ ಹೆಚ್ಚು ಅಂಟಿಕೊಂಡಿದ್ದ ಬೇಡರು ಬೇರಾವ ವೃತ್ತಿಗಳ ಕಡೆ ಗಮನ ಹರಿಸಲಿಲ್ಲ. ಕ್ರಿ.ಶ. ೧೫೬೫ರ ಯುದ್ಧದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಬೇಡ ಸೈನಿಕರು ಹತರಾದರು. ಸುಮಾರು ೪೦ ಸಾವಿರ ಬೇಡರ ಪಡೆ ಹತವಾಯಿತೆಂದು ವಿದೇಶಿ ಪ್ರವಾಸಿ ಫಿರಾಸ್ತನು ಹೇಳಿದ್ದಾನೆ.[೧೦೫] ಈ ಯುದ್ಧದಲ್ಲಿ ವಿಜಯನಗರ ಪರವಾಗಿ ಗುಮ್ಮನಾಯಕನಹಳ್ಳಿ ವೀರದಾಸಪ್ಪ ಹದಿನಾಲ್ಕು ಸೈನ್ಯವನ್ನು ತೆಗೆದುಕೊಂಡು ಹೋಗಿದ್ದನು ಎಂದು ಸ್ಥಳಪುರಾಣಗಳು ಹೇಳುತ್ತವೆ.[೧೦೬] ಸಂತೆಬೆನ್ನೂರು ಹನುಮಪ್ಪನಾಯಕನು ವಿಜಯನಗರ ಸೈನ್ಯದ ಸೇನಾನಿಯಾಗಿ ಕ್ರಿ.ಶ.೧೫೬೫ರ ಯುದ್ಧದಲ್ಲಿ ತನ್ನ ಪರಾಕ್ರಮವನ್ನು ಪ್ರದರ್ಶಿಸಿದನು. ಇವನ ಶೌರ್ಯ ಸಾಹಸವನ್ನು ಮೆಚ್ಚಿ ಪುರಸ್ಕಾರ ರೂಪವಾಗಿ ಉಚ್ಚ ಸ್ಥಾನಮಾನವನ್ನು ನೀಡಿ ಸಂತೆಬೆನ್ನೂರನ್ನು ನೀಡಲಾಯಿತು.[೧೦೭] ನಾಯಕನಹಟ್ಟಿ ಮಲ್ಲಪ್ಪನಾಯಕನು ಕ್ರಿ.ಶ.೧೫೬೫ರ ತಾಳಿಕೋಟೆ ಯುದ್ಧದಲ್ಲಿ ಆನೆಗೊಂದಿರಾಯರಿಗೆ ಸಹಾಯ ಮಾಡಿದ್ದರಿಂದ ಇವರಿಗೆ ರಾಯರು ಉಂಬಳಿ ಶಾಸನವನ್ನು ಹಾಕಿಸಿಕೊಡುತ್ತಾರೆ.[೧೦೮] ನಾಯಕನಹಟ್ಟಿ ಬಖೈರು ತಿಳಿಸುವಂತೆ ಕ್ರಿ.ಶ.೧೫೬೫ರ ತಾಳಿಕೋಟೆಯ ಪ್ರಸ್ತಾಪವಿದ್ದು ಈ ಯುದ್ಧದಲ್ಲಿ ಬಂಗಾರಮಲ್ಲಪ್ಪನಾಯಕನೆಂಬ ಮಗನೂ ಮತ್ತು ಮೊಮ್ಮಗನೂ ಇದ್ದು ಇದು ವಿವಾದಕ್ಕೆ ಎಡೆ ಮಾಡಿದೆ ಎಂದು ತಿಳಿಯಬಹುದಾಗಿದೆ.[೧೦೯] ವಿಜಯನಗರ ಅರಸರು ತಮ್ಮ ಸಾಮ್ರಾಜ್ಯ ರಕ್ಷಣೆಗಾಗಿ ಹೋರಾಡಿದ ಪಾಳೆಯಗಾರರ ಸೇವೆಯನ್ನು ಮನ್ನಿಸಿ ಅವರಿಗೆ ಕೆಲವು ಪ್ರದೇಶಗಳನ್ನು ಅಮರಮಾಗಣಿಯಾಗಿ ನೀಡಿದರು. ಕ್ರಿ.ಶ.೧೫೬೬ರಲ್ಲಿ ತಿರುಮಲರಾಜನು ಪೆನಕೊಂಡದಲ್ಲಿದ್ದುಕೊಂಡು ಓರಿಯೂರಿನ ನಾಯಕತನವನ್ನು ಹರತಿ ಮನೆತನದ ಅಂಬಣ್ಣನಾಯಕರ ಮಗ ಕೆಂಚಪ್ಪನಾಯಕನಿಗೆ ಅಮರಮಾಗಣಿಯಾಗಿ ದಯಪಾಲಿಸಿದನು.

ಒಟ್ಟಾರೆ ವಿಜಯನಗರದ ಬಲಹೀನತೆಯು ಪಾಳೆಯಗಾರರಿಗೆ ಸುಸಮಯವೇ ಸರಿ. ಅವರು ಮನಃಪೂರ್ತಿಯಾಗಿ ವಿಜಯನಗರ ಪರ ನಿಲ್ಲಲಿಲ್ಲವೆಂದು ಕಾಣುತ್ತದೆ. ರಾಮರಾಯನು ವಿಜಯನಗರ ಅರಸರನ್ನು ಸೆರೆಮನೆಯಲ್ಲಿಟ್ಟು ಅಧಿಕಾರ ನಡೆಸುವುದನ್ನು ಕೆಲವು ಪಾಳೆಯಗಾರರು ಇಷ್ಟಪಡಲಿಲ್ಲ. ಅತೃಪ್ತ ಮತ್ತು ಸ್ವತಂತ್ರ ಪ್ರವೃತ್ತಿ ಸ್ವಭಾವದವರೇ ಹೆಚ್ಚಾಗಿದ್ದರು. ರಾಮರಾಯನ ಸಹೋದರರು ವಿಶ್ವಾಸಪಾತ್ರರಾಗಿದ್ದ ಹಿಂದಿನ ನೌಕರರನ್ನೆಲ್ಲ ತೆಗೆದುಹಾಕಿ ಯಾರು ನಾಯಕನೊಂದಿಗೆ ಸಹಕರಿಸುತ್ತಿದ್ದರೋ ಅವರನ್ನು ಮಾತ್ರ ನೇಮಿಸುತ್ತಿದ್ದರು. ಅಚ್ಯುತನಿಗೆ ನಿಷ್ಠಾವಂತರಾಗಿದ್ದ ರಾಮಭಟ್ಟ ಹಾಗೂ ರಾಮಮಾತ್ಯರನ್ನು

ಬಗ್ಗುಬಡಿಯಲಾಯಿತು. ವಿಜಯನಗರ ಆಡಳಿತದ ವಿರುದ್ಧವಾಗಿ ಅವಿಧೇಯತೆ, ಪ್ರತಿಭಟನೆ ವ್ಯಾಪಕವಾಗಿತ್ತು. ದಕ್ಷಿಣದ ಪ್ರದೇಶಗಳಲ್ಲಿ ಅದರ ಪ್ರಭುತ್ವವನ್ನು ಅನೇಕ ರಾಜರು ಪ್ರಶ್ನಿಸ ತೊಡಗಿದರು. ವಿಜಯನಗರದ ಪರಮ ಪ್ರಭುತ್ವಕ್ಕೆ ಅಧೀನವಾಗಿರಲು ಅವರು ನಿರಾಕರಿಸಿದರು.[೧೧೦] ಈ ಬೆಳವಣಿಗೆಯನ್ನು ನೋಡಿದಾಗ ವಿಜಯನಗರ ಪತನದ ಸೂಚನೆಯನ್ನು ತನ್ನ ಗರ್ಭದೊಳಗೆಯೇ ಇಟ್ಟುಕೊಂಡಿತ್ತು. ಕೆಲವು ವರದಿಗಳ ಪ್ರಕಾರ ವಿಜಯನಗರದ ಅಸುಪಾಸಿನಲ್ಲಿದ್ದ ಎಲ್ಲೋ ಕೆಲವು ಅಧೀನರಾಜರು ಮಾತ್ರ ಯುದ್ಧದಲ್ಲಿ ಭಾಗವಹಿಸಿದರು ಎಂದು ಹೇಳಲಾಗಿದೆ. ಕೆಳದಿ ನಾಯಕರನ್ನು, ಮೈಸೂರು ಒಡೆಯರನ್ನು ಇಲ್ಲಿ ಹೆಸರಿಸಬಹುದು. ಜಿಂಜಿ, ಮಧುರೈ, ತಂಜಾವೂರುಗಳಲ್ಲಿ ನೆಲೆಸಿದ್ದ ಇತರ ಯಾರೊಬ್ಬರೂ ವಿಜಯನಗರ ಕ್ಕೊದಗಿದ ಗಂಡಾಂತರವನ್ನು ಲಕ್ಷ್ಯಕ್ಕೆ ತಂದುಕೊಂಡಂತೆ ಕಾಣಲಿಲ್ಲ. ಅದು ಪತನಗೊಂಡರೆ ತಾವು ಸ್ವತಂತ್ರವಾಗಿ ಆಳಬಹುದು ಎಂದು ಅವರು ಭಾವಿಸಿದರು.[೧೧೧] ಕ್ರಿ.ಶ. ೧೫೬೫ರ ನಂತರ ಬಹುತೇಕವಾಗಿ ವಿಜಯನಗರ ಅಧೀನರಾಗಿದ್ದ ಪಾಳೆಯಗಾರರೆಲ್ಲರೂ ಸ್ವತಂತ್ರಗೊಂಡರು. ಅರವೀಡು ಸಂತತಿ ದೊರೆಗಳು ಮತ್ತೆ ವಿಜಯಗರದ ಆಳ್ವಿಕೆಯನ್ನು ಸ್ಥಾಪಿಸಲು ಪ್ರಯತ್ನಿಸಿದರಾದರೂ ಪಾಳೆಯಗಾರರ ಸ್ವತಂತ್ರದಾಹದ ಮುಂದೆ ಅದು ವಿಫಲವಾಯಿತು. ಸ್ವತಂತ್ರಗೊಂಡ ಪಾಳೆಯಗಾರರಲ್ಲಿ ಬೇಡರೇ ಅತ್ಯಧಿಕವಾಗಿರುವುದರಿಂದ ವಿಜಯನಗರೋತ್ತರಕಾಲೀನ ಕರ್ನಾಟಕ ಇತಿಹಾಸವನ್ನು ಬೇಡರ ಇತಿಹಾಸವೆಂದು ಹೇಳಬಹುದಾದರೂ ಬೇಡ ಜನಾಂಗದವರ ಜೊತೆ ಇತರೆ ಜನಾಂಗದವರು ಸಹ ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಂಡದ್ದನ್ನು ಮರೆಯುವಂತಿಲ್ಲ.

**ಟಿಪ್ಪಣಿಗಳು**

೧. ಲಕ್ಷ್ಮಣ್ ತೆಲಗಾವಿ (ಸಂ); ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪು.೨೪೮

೨. ಡಾ.ಎಂ.ಚಿದಾನಂದಮೂರ್ತಿ; ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ೧೯೭೯, ಪು.೨೯೬

೩. ಎಚ್.ಎಲ್.ನಾಗೇಗೌಡ(ಅನು); ಪ್ರವಾಸಿಕಂಡ ಇಂಡಿಯಾ, ಸಂಪುಟ ೧, ೧೯೬೬, ಪು.೧೦೨

೪. ಶ್ರೀಕಂಠಶಾಸ್ತ್ರಿ; ಭಾರತೀಯ ಸಂಸ್ಕೃತಿ, ೧೯೭೫, ಪು.೧೯

೫. ಹುಲ್ಲೂರು ಶ್ರೀನಿವಾಸಜೋಯಿಸರ ಐತಿಹಾಸಿಕ ಲೇಖನಗಳು, ಪು.೨೪೮, ೨೪೯.

೬. ಎಲ್.ಕೆ.ಎ.ಅಯ್ಯರ್; ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್ , ೧೯೮೮, ಪು.೨೦೦

೭. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೨೯೬.

೮. ಡಾ.ಎಂ.ಎಂ.ಕಲಬುರ್ಗಿ(ಸಂ); ಕರ್ನಾಟಕದ ಕೈಫಿಯತ್ತುಗಳು, ೧೯೯೪, ಪು.೫೫

೯. *ವಿರೂಪಾಕ್ಷಿ ಪೂಜಾರಹಳ್ಳಿ; ಕರ್ನಾಟಕದಲ್ಲಿ ಬೇಡ ನಾಯಕ ವೀರರ ಆರಾಧನೆಗಳು*(ಸಂ) ಹರ್ತಿಕೋಟೆ ವೀರೇಂದ್ರ ಸಿಂಹ, ಘಟ್ಟಿಹೊಸಹಳ್ಳಿ ಗಟ್ಟಿಗ, ೨೦೦೨, ಪು.೩೬

೧೦. ಎಂ.ವಿ.ಕೃಷ್ಣರಾವ್, ಎಂ.ಕೇಶವಭಟ್ಟ; ಕರ್ನಾಟಕದ ಇತಿಹಾಸ ದರ್ಶನ, ೧೯೭೦, ಪು.೪೯೧.

೧೧. ಘಟ್ಟಿಹೊಸಹಳ್ಳಿ ಗಟ್ಟಿಗ, ಪು.೩೬

೧೨. ಕಪಟರಾಳ್ ಕೃಷ್ಣರಾವ್; ಸುರಪುರ ಸಂಸ್ಥಾನ ಇತಿಹಾಸ, ೧೯೭೭, ಪು.೨೨೪

೧೩. ಎಂ.ಪಿ.ವೀಣಾ, ಮನೆ, ಸಮಾಜ ಮತ್ತು ಸಂಸ್ಕೃತಿ, ೨೦೦೦, ಪು.೧೩

೧೪. ಘಟ್ಟಿಹೊಸಹಳ್ಳಿ ಗಟ್ಟಿಗ, ಪು.೩೬

೧೫. ರಾಜಶೇಖರ ಪಿ.ಕೆ., ಚಂಗಾಳ್ವರು; ಮಲೆಕರ್ನಾಟಕದ ಅರಸು ಮನೆತನಗಳು, ೨೦೦೧, ಪು.೧೯೭

೧೬. ಘಟ್ಟಿಹೊಸಹಳ್ಳಿ ಗಟ್ಟಿಗ, ಪು.೩೬

೧೭. ಕರ್ನಾಟಕದ ಇತಿಹಾಸದರ್ಶನ, ಪು.೯೧೯

೧೮. ಅದೇ, ಪು. ೯೧೩, ೯೧೪.

೧೯. ಮಲೆಕರ್ನಾಟಕದ ಅರಸು ಮನೆತನಗಳು, ಪು.೧೭

೨೦. ಅದೇ, ಮುರಿಗೇಶಿ; ಆಸಂದಿಯ ಅರಸರು, ಪು.೧೫೨

೨೧. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪು.೨೬೮.

೨೨. ವೆಂಕಟರಂಗೋಕಟ್ಟಿ; ಗ್ಯಾಝೆಟಿಯರ್ ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಅಥವಾ ದಕ್ಷಿಣ ಮಹಾರಾಷ್ಟ್ರಗಳ ಸಹಿತ, ೧೮೯೩, ಪು.೧೯೯

೨೩. ಡಾ.ಸಿ.ಮಹದೇವ; *ತಿರುಮಲಾದೇವಿಯರ ಪಟ್ಟಣ, ನಾಗಲಾಪುರ ಹೊಸಪೇಟೆ: ಒಂದು ಪರಿಶೀಲನೆ,* ಇತಿಹಾಸ ದರ್ಶನ, ಸಂಪುಟ. ೧೦, ೧೯೯೫, ಪು.೧೩೬

೨೪. ಲಕ್ಷ್ಮಣ್ ತೆಲಗಾವಿ, ಮತ್ತು ಎಂ.ವಿ.ಶ್ರೀನಿವಾಸ್; ಹುಲ್ಲೂರು ಶ್ರೀನಿವಾಸಜೋಯಿಸರ ಸಂಶೋಧನಾ ಲೇಖನಗಳು, ೧೯೯೫, ಪು.೫೭೫.

೨೫. ಕರ್ನಾಟಕದ ಕೈಫಿಯತ್ತುಗಳು, ಪು.೪೫೭-೪೫೮

೨೬. ಅದೇ, ಪು.೪೯೨

೨೭. ಹುಲ್ಲೂರು ಶ್ರೀನಿವಾಸಜೋಯಿಸರ ಸಂಶೋಧನಾ ಲೇಖನಗಳು, ಪು.೪೬೩-೪೬೪

೨೮. ಅದೇ, ಪು.೪೬೭

೨೯. ಎಂ.ವಿ.ನರಸಿಂಹಮೂರ್ತಿ(ಸಂ, ಅನು); ದೆಹಲಿ ಸುಲ್ತಾನರ ಆಧಿಪತ್ಯ, ೨೦೦೧, ಪು.೯೩

೩೦. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು, ಪು.೫೭೬

೩೧. ದೆಹಲಿ ಸುಲ್ತಾನರ ಆದಿಪತ್ಯ, ಪು.೯೩

೩೨. ಹುಲ್ಲೂರು ಶ್ರೀನಿವಾಸಜೋಯಿಸರ ಸಂಶೋಧನಾಲೇಖನಗಳು, ಪು.೪೭೯

೩೩. ಅದೇ, ಪು.೪೮೧

೩೪. ಕರ್ನಾಟಕದ ಕೈಫಿಯತ್ತುಗಳು, ಪು.೪೯೩

೩೫. ಹುಲ್ಲೂರು ಶ್ರೀನಿವಾಸಜೋಯಿಸರ ಸಂಶೋಧನಾಲೇಖನಗಳು, ಪು.೧೦೮

೩೬. ಕರ್ನಾಟಕದ ಕೈಫಿಯತ್ತುಗಳು, ಪು.೪೬೬

೩೭. ಹುಲ್ಲೂರು ಶ್ರೀನಿವಾಸಜೋಯಿಸರ ಸಂಶೋಧನಾಲೇಖನಗಳು, ಪು.೪೯೪

೩೮. ದೆಹಲಿ ಸುಲ್ತಾನರ ಅಧಿಪತ್ಯ, ಪು.೯೪

೩೯. ಹುಲ್ಲೂರು ಶ್ರೀನಿವಾಸಜೋಯಿಸರ ಸಂಶೋಧನಾಲೇಖನಗಳು, ಪು.೫೦೩

೪೦. ದೆಹಲಿ ಸುಲ್ತಾನರ ಅಧಿಪತ್ಯ, ಪು.೯೪

೪೧. ಆರ್.ರಾಜಣ್ಣ; ನಾಯಕ ಜನಾಂಗದ ಇತಿಹಾಸ, ೧೯೮೨, ಪು.೮

೪೨. ಕರ್ನಾಟಕದ ಕೈಫಿಯತ್ತುಗಳು, ಪು.೪೮೯

೪೩. ಡಾ.ಶೇಷಶಾಸ್ತ್ರೀ, ಕರ್ನಾಟಕದ ವೀರಗಲ್ಲುಗಳು, ೧೯೮೨, ಪು.೨೩

೪೪. ದೆಹಲಿ ಸುಲ್ತಾನರ ಅಧಿಪತ್ಯ, ಪು.೧೧೫

೪೫. ಅದೇ, ಪು.೧೧೬-೧೧೭

೪೬. ಅದೇ, ಪು.೧೧೮

೪೭. ಅದೇ, ಪು.೧೧೯

೪೮. ನೇಗಿನಾಳ ಎಂ.ಬಿ.; *ಕರ್ನಾಟಕ ಸಾಹಿತ್ಯ ಕೃತಿಗಳಲ್ಲಿ ಬೇಡಜನಾಂಗ,* ಘಟ್ಟಿಹೊಸಹಳ್ಳಿ ಗಟ್ಟಿಗ, ಪು.೫೦

೪೯. ನಾಯಕ ಜನಾಂಗದ ಇತಿಹಾಸ, ಪು.೮೪

೫೦. ಶಿವಣ್ಣ ಕೆ.ಎಸ್.; *ವಿಜಯನಗರ ಕಾಲದ ಸಮಾಜ,* ಪ್ರೊ.ಬಿ.ಷೇಕ್ ಅಲಿ (ಸಂ), ಕರ್ನಾಟಕ ಚರಿತ್ರೆ, ಸಂಪುಟ ೩, ೧೯೯೭, ಪು.೨೪೬

೫೧. *ಹರ್ತಿಕೋಟೆ ವೀರೇಂದ್ರಸಿಂಹ, ನಾಯಕ ಜನಾಂಗದ ಪರಂಪರೆ,* (ಸಂ) ಹರ್ತಿಕೋಟೆ ವೀರೇಂದ್ರಸಿಂಹ), ವಾಲ್ಮೀಕಿ ಕಿರಣ, ೧೯೯೮, ಪು.೨೯

೫೨. ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್ ಪು. ೧೯೯

೫೩. ಕರ್ನಾಟಕ ಚರಿತ್ರೆ, ಸಂಪುಟ ೩, ಪು.೨೪೬

೫೪. ಎಂ.ವಿ.ಕೃಷ್ಣರಾವ್, ಜಿ.ಎಸ್.ಹಾಲಪ್ಪ(ಸಂ); ಹಿಸ್ಟರಿ ಆಫ್ ಫ್ರೀಡಂ ಮೂವ್ಮೆಂಟ್ ಇನ್ ಕರ್ನಾಟಕ, ವ್ಯಾಲೂಮ್ ೧

೫೫. ಎಂ.ಜಿ.ಈಶ್ವರಪ್ಪ, ಮ್ಯಾಸಬೇಡರು, ೧೯೮೨, ಪು.೬

೫೬. ಎಂ.ಎಲ್.ಶಿವಶಂಕರ, ಚನ್ನಬಸಪ್ಪ, ಎಸ್.ಪಾಟೀಲ (ಸಂ), ವಿಜಯನಗರ ಅಧ್ಯಯನ, ಸಂಪುಟ ೨, ೧೯೯೬, ಪು.೯೬

೫೭. ಎಂಥೋವಿನ್ ಆರ್.ಇ., ದಿ ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್ ಆಫ್ ಬಾಂಬೆ, ಸಂಪುಟ ೨, ೧೯೭೫, ಪು.೩೫

೫೮. **ಮನೆ, ಸಮಾಜ ಮತ್ತು ಸಂಸ್ಕೃತಿ,** ಪು.೧೧

೫೯. ಅದೇ ಪು.೧೩, ೧೪

೬೦. ಎಚ್.ವಿ.ವೀರನಾಯಕರು, **ಕ್ಷಾತ್ರಾಂಶ ಪ್ರಭೋಧ,** ೧೯೮೭, ಪು.೮

೬೧. ಪದ್ಮಾ ಎಂ.ಬಿ.; *ವಿಜಯನಗರೋತ್ತರ ಕಾಲದ ರಾಜ್ಯಾಡಳಿತ,* (ಸಂ) ಪ್ರೊ.ಬಿ.ಷೇಖ್‌ಅಲಿ, **ಕರ್ನಾಟಕ ಚರಿತ್ರೆ,** ಸಂಪುಟ ೬, ೧೯೯೭, ಪು.೨೯೭

೬೨. **ಕರ್ನಾಟಕದ ಇತಿಹಾಸ ದರ್ಶನ,** ಪು.೪೫೮

೬೩. **ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್,** ಪು.೨೦೧

೬೪. ಮೀರಾಸಾಬಿಹಳ್ಳಿ ಶಿವಣ್ಣ, *ನಾಯಕ ಜನಾಂಗ ಒಂದು ನೋಟ,* (ಸಂ)ಹರ್ತಿಕೋಟೆ ವೀರೇಂದ್ರಸಿಂಹ) **ವಾಲ್ಮೀಕಿ ಜ್ಯೋತಿ,** ೧೯೮೯, ಪು.೬೧

೬೫. **ಕರ್ನಾಟಕದ ಇತಿಹಾಸ ದರ್ಶನ,** ಪು.೪೫೮

೬೬. ಚಿತ್ರಲಿಂಗಯ್ಯ ಎಂ.ವಿ.; *ಹರತಿ ಪಾಳೆಯಗಾರರ ಮೂಲವಂಶಾವಳಿ : ಒಂದು ವ್ಯಾಸಂಗ,* (ಸಂ) ಲಕ್ಷ್ಮಣ್ ತೆಲಗಾವಿ, **ಹರತಿಸಿರಿ,** ಪು.೨೯೦-೨೯೧

೬೭. **ಸುರುಪುರ ಸಂಸ್ಥಾನ ಇತಿಹಾಸ,** ಪು.೨೧-೨೩

೬೮. **ವಾಲ್ಮೀಕಿ ಬಂಧು,** ಆಗಸ್ಟ್ ೨೦೦೨, ಪು.೮

೬೯. ಮಹೇಶ್ ತಿಪ್ಪಶೆಟ್ಟಿ(ಅನು), **ಮೈಸೂರು ಚಾಮುಂಡೇಶ್ವರಿ ದೇವಸ್ಥಾನ ಒಂದು ಸಾಮಾಜಿಕ ಅಧ್ಯಯನ,** ೨೦೦೧, ಪು.೪೬

೭೦. ಶೇಕ್ ಮಸ್ತಾನ್ ಎನ್.; *ಗುಮ್ಮನಾಯಕನಹಳ್ಳಿ ಪಾಳೆಯಗಾರರು,* (ಸಂ : ವಸು.ಎಂ.ವಿ), **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ೨೦೦೧, ಪು.೩೪೨

೭೧. ಅದೇ, ಪದ್ಮಪ್ರಸಾದ್ ಎಸ್.ಪಿ.; **ರತ್ನಗಿರಿ ನಾಯಕರು,** ಪು.೨೬೪

೭೨. **ದೆಹಲಿ ಸುಲ್ತಾನರ ಅಧಿಪತ್ಯ,** ಪು.೪೩೪

೭೩. ಶೇಕ್ ಮಸ್ತಾನ್ ಎನ್.; *ಗುಮ್ಮನಾಯಕನಹಳ್ಳಿ ಪಾಳೆಯಗಾರರು,* **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪು.೩೪೧

೭೪. **ದೆಹಲಿ ಸುಲ್ತಾನರ ಆಧಿಪತ್ಯ,** ಪು.೪೫೫

೭೫. **ನಾಯಕ ಜನಾಂಗದ ಇತಿಹಾಸ,** ಪು.೮೪

೭೬. **ದೆಹಲಿ ಸುಲ್ತಾನರ ಆಧಿಪತ್ಯ,** ಪು.೪೫೬

೭೭. ಪ್ರೊ.ಲಕ್ಷ್ಮಣ್ ತೆಲಗಾವಿ, *ಜಾತಿಗಮಾನ್ಯ ವ್ಯವಸ್ಥೆ : ಒಂದು ಟಿಪ್ಪಣಿ,* **ಘಟ್ಟಿಹೊಸಹಳ್ಳಿ ಗಟ್ಟಿಗ,** ಪು.೪

೭೮. ದೆಹಲಿ ಸುಲ್ತಾನರ ಆಧಿಪತ್ಯ, ಪು.೪೫೩-೪೫೪

೭೯. ಶ್ಯಾಮಲಾ ರತ್ನಕುಮಾರಿ ಬಿ.ಎಸ್.; *ಹರತಿ ಪಾಳೆಯಗಾರರು,* ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.೧೬೧

೮೦. ಕರ್ನಾಟಕದ ಇತಿಹಾಸ ದರ್ಶನ, ಪು.೪೬೭-೪೬೮

೮೧. ಡಾ.ಡಿ.ಎನ್.ಯೋಗೀಶ್ವರಪ್ಪ, ಹಾಗಲವಾಡಿ ನಾಯಕರು, ೧೯೯೯, ಪು.೩೩

೮೨. ಕರ್ನಾಟಕದ ಕೈಫಿಯತ್ತುಗಳು, ಪು.೪೦೯

೮೩. ಎಸ್.ಎಂ.ನಾಗಭೂಷಣ; *ಸಂಡೂರು ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆ,* ಇತಿಹಾಸ ದರ್ಶನ ಸಂಪುಟ ೧೦, ೧೯೯೫, ಪು.೧೭೮

೮೪. ಹಾಗಲವಾಡಿ ನಾಯಕರು, ಪು.೨೮

೮೫. ನಿರುಪಮಾ; ಆಮುಕ್ತ ಮಾಲ್ಯದ, ೧೯೯೯, ಪು.೨೨

೮೬. ಅದೇ, ಪು.೨೫

೮೭. ಕೆಳದಿ ಗುಂಡಾಜೋಯಿಸ್ (ಗದ್ಯಾನುವಾದ); ಲಿಂಗಣ್ಣ ಕವಿಯ ಕೆಳದಿ ನೃಪವಿಜಯ, ೧೯೯೯, ಪು.೩೫

೮೮. ಎಸ್.ವೈ.ಸೋಮಶೇಖರ, ವಿಜಯನಗರ ಕಾಲದ ಸೈನ್ಯವ್ಯವಸ್ಥೆ ಮತ್ತು ಯುದ್ಧನೀತಿ, (ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ) ೨೦೦೦, ಪು.೮೦

೮೯. ಅದೇ, ಪು.೮೦

೯೦. ಸೀತರಾಮಯ್ಯ ಎಂ.ವಿ.(ಸಂ); ಶ್ರೀಕೃಷ್ಣದೇವರಾಯನ ದಿನಚರಿ, ೧೦೮೩, ಪು.೪೨

೯೧. ಅದೇ, ಪು.೩೭

೯೨. ನಾಯಕ ಜನಾಂಗದ ಇತಿಹಾಸ, ಪು.೮೬-೮೭

೯೩. ಆಮುಕ್ತ ಮಾಲ್ಯದ, ಪು.೧೪

೯೪. ಮೈಸೂರು ಸರಕಾರ; ಪ್ರಗತಿ ಚಿತ್ರ; ರಾಯಚೂರು ಜಿಲ್ಲೆ, ೧೯೬೬, ಪು.೭-೮

೯೫. ಎಚ್.ಎಲ್.ನಾಗೇಗೌಡ(ಸಂ); ಪ್ರವಾಸಿ ಕಂಡ ಇಂಡಿಯಾ, ಸಂಪುಟ ೨, ೧೯೬೬, ಪು.೪೨೧-೪೨೨

೯೬. ಅದೇ, ಪು.೪೧೬

೯೭. ಕೆಳದಿ ನೃಪವಿಜಯ, ಪು.೩೨

೯೮. ಬಳ್ಳಾರಿ ಜಿಲ್ಲೆ ಗೆಝೆಟಿಯರ್, ಪು.೮೨

೯೯. ಡಾ.ಎಸ್.ಶ್ರೀಕಂಠಶಾಸ್ತ್ರೀ; ಸಂಶೋಧನಾ ಲೇಖನಗಳು, ೧೯೭೫, ಪು.೧೪೪

೧೦೦. ಅದೇ ಪು.೧೪೬

೧೦೧. **ಸುರಪುರ ಸಂಸ್ಥಾನದ ಇತಿಹಾಸ,** ಪು.೨೩೪

೧೦೨. ಅದೇ, ಪು.೨೩೩

೧೦೩. ಸಿವಿಲ್ ರಾಬರ್ಟ್ಸ್; **ಎಫಾರ್‌ಗಾಟನ್ ಎಂಪೈರ್,** ೧೯೬೨, ಪು.೨೧೮

೧೦೪. **ಕ್ಷಾತ್ರಾಂಶ ಪ್ರಭೋಧ,** ಪು.೧೪

೧೦೫. ವಿರೂಪಾಕ್ಷಿ ಪೂಜಾರಹಳ್ಳಿ; *ಕರ್ನಾಟಕದಲ್ಲಿ ಬೇಡ ನಾಯಕ ವೀರರ ಆರಾಧನಾ ಕ್ಷೇತ್ರಗಳು,* **ಘಟ್ಟಿಹೊಸಳ್ಳಿ ಗಟ್ಟಿಗ,** ೨೦೦೨, ಪು.೩೭

೧೦೬. ಶೇಕ್‌ಮಸ್ತಾನ್ ಎಸ್.; *ಗುಮ್ಮನಾಯಕನಹಳ್ಳಿ ಪಾಳೆಯಗಾರರು,* **ದಕ್ಷಿಣಾ ಕರ್ನಾಟಕದ ಅರಸು ಮನೆತನಗಳು,** ಪು.೩೪೪

೧೦೭. **ಕರ್ನಾಟಕ ಇತಿಹಾಸ ದರ್ಶನ,** ಪು.೪೭೭

೧೦೮. ಡಾ.ಕರಿಶೆಟ್ಟಿರುದ್ರಪ್ಪ; **ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ,** ೧೯೯೫, ಪು.೧೦೨

೧೦೯. ಎಂ.ಎನ್.ಪ್ರಭಾಕರ್; *ನಾಯಕನಹಟ್ಟಿ - ಬಖೈರು* (ಸಂ: ಡಾ.ಎಂ.ವಿ.ಶ್ರೀನಿವಾಸ್, ಲಕ್ಷ್ಮಣ್ ತೆಲಗಾವಿ), **ಚಂದ್ರವಳ್ಳಿ,** ೧೯೭೬, ಪು.೨೪

೧೧೦. ಗೋಪಾಲ ಬಾ.ರಾ., *ವಿಜಯನಗರ ಇತಿಹಾಸ,* **ಕರ್ನಾಟಕ ಚರಿತ್ರೆ** ಸಂಪುಟ ೩, ಪು.೪೯

೧೧೧. ಅದೇ ಪು.೫೪

ಅಧ್ಯಾಯ ೪

# ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು

೪.೧ ರಾಜಕೀಯ ಸ್ಥಿತ್ಯಂತರ

೪.೨ ಸಾಮಾಜಿಕ ಸ್ಥಿತ್ಯಂತರ

೪.೩ ಆರ್ಥಿಕ ಸ್ಥಿತ್ಯಂತರ

೪.೪ ಸಾಂಸ್ಕೃತಿಕ ಸ್ಥಿತ್ಯಂತರ

## ೪.೧. ರಾಜಕೀಯ ಸ್ಥಿತ್ಯಂತರ

ಹದಿನೇಳನೆ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಅಧಿಪತ್ಯವು ಸಂಪೂರ್ಣವಾಗಿ ಕೊನೆಗೊಂಡಿತು. ಸಾಮ್ರಾಜ್ಯಕ್ಕೆ ಅಧೀನರಾಗಿದ್ದ ಪಾಳೇಗಾರರು ಅಲ್ಲಲ್ಲಿ ಸ್ವತಂತ್ರರಾದರು. ಇವರೆಲ್ಲರಿಗೂ ವಿಜಯನಗರದಂತಹ ಸಾಮ್ರಾಜ್ಯವನ್ನು ಮರಳಿ ಕಟ್ಟಿ ಆಳಬೇಕೆಂಬ ಮಹತ್ವಾಕಾಂಕ್ಷೆ. ಎಂತಲೇ ಒಬ್ಬ ಪಾಳೇಗಾರ ಇನ್ನೊಬ್ಬನನ್ನು ತನ್ನ ಅಧೀನಪಡಿಸಿಕೊಳ್ಳಲಿಕ್ಕೆ ಹವಣಿಸುತ್ತಿದ್ದನು.[೧] ವಿಜಯನಗರ ಸಾಮ್ರಾಜ್ಯದ ನಂತರ ಕರ್ನಾಟಕದಲ್ಲಿ ಒಂದು ದೊಡ್ಡ ರಾಜಕೀಯ ಗೊಂದಲವೇ ಉಂಟಾಯಿತು. ರಾಮರಾಯನು ಕ್ರಿ.ಶ.೧೫೬೫ರ ತಾಳಿಕೋಟೆ ಕದನದಲ್ಲಿ ಕೊಲ್ಲಲ್ಪಟ್ಟನು. ಅವನ ತಮ್ಮನಾದ ತಿರುಮಲನು ವಿಜಯನಗರದಿಂದ ಪೆನಗೊಂಡೆಗೆ ಓಡಿ ಹೋದನು. ತನ್ನ ಜೊತೆಯಲ್ಲಿ ಬಂಧನದಲ್ಲಿದ್ದ ವಿಜಯನಗರದ ಅರಸ ಸದಾಶಿವರಾಯನನ್ನೂ, ಅವನ ಕುಟುಂಬವನ್ನೂ ಕರೆದೊಯ್ದು ಮತ್ತೆ ಬಂಧನದಲ್ಲಿಟ್ಟನು. ಕ್ರಿ.ಶ.೧೫೬೯ರಲ್ಲಿ ತಾನೇ ರಾಜನೆಂದು ಘೋಷಿಸಿಕೊಂಡನು. ಕ್ರಿ.ಶ.೧೫೭೦ರಲ್ಲಿ ಸದಾಶಿವರಾಯನು ಮರಣ ಹೊಂದಿದನು. ತಿರುಮಲನು ಪೆನಗೊಂಡದಿಂದಲೇ ವಿಜಯನಗರವನ್ನು ನಿಯಂತ್ರಿಸಲಿಕ್ಕೆ ಪ್ರಯತ್ನಿಸಿದನು. ಆದರೆ ಅದು ಸಫಲವಾಗಲಿಲ್ಲ. ಶತ್ರುಸೈನ್ಯವು ವಿಜಯನಗರವನ್ನು ತಿಂಗಳುಗಟ್ಟಲೇ ಲೂಟಿ ಮಾಡಿತು. ಅಷ್ಟೇ ಅಲ್ಲದೆ ವಿಜಯನಗರದ ಅರಸನನ್ನು ರಾಜಧಾನಿ ಕಡೆಗೆ ಬರದಂತೆ ತಡೆಯಿತು. ಇಂತಹ ಸಂದರ್ಭದಲ್ಲಿ ವಿಜಯನಗರ ಚಕ್ರವರ್ತಿಗೆ ಸಾಮಂತರು ನಿಷ್ಠೆಯನ್ನು ವ್ಯಕ್ತಪಡಿಸಿದರು. ಸಾಮ್ರಾಜ್ಯವು ಇನ್ನೂ ಏಕೀಕೃತವಾಗೇ ಇತ್ತು. ಆದರೆ ವಿಜಯನಗರದ ನಾಲ್ಕನೇ ವಂಶವು ಕ್ರಿ.ಶ.೧೫೪೯ರ ಹೊತ್ತಿಗೆ (ಎರಡನೇ ವೆಂಕಟಪತಿ ಕಾಲ) ಪತನ ಗೊಂಡ ಮೇಲೆ ಶಕ್ತಿಯಿದ್ದ ಅಧೀನ ರಾಜರು ಕ್ರಮೇಣ ಅತಿಕ್ರಮಿಸಿ ಸಾಮ್ರಾಜ್ಯದ ಕಷ್ಟ ಕಾಲವನ್ನು ಉಪಯೋಗಿಸಿಕೊಂಡು ತಮ್ಮ ಸ್ವಾತಂತ್ರ್ಯವನ್ನು ಘೋಷಿಸಿಕೊಂಡರು.[೨] ತಿರುಮಲರಾಯನು ವಿಜಯನಗರ ವನ್ನು ಪುನರ್ವಸತಿಗೊಳಿಸಲು ಮಾಡಿದ ಪ್ರಯತ್ನ ವಿಫಲವಾಯಿತು. ಇಂತಹ ರಾಜಕೀಯ ಸನ್ನಿವೇಶದಲ್ಲಿ ಮೈಸೂರಿನ ಅರಸರು ಮತ್ತು ಪಾಳೆಯಗಾರರು ಬಲಿಷ್ಠಗೊಂಡರು. ನಂತರದಲ್ಲಿ ಆದಿಲ್‌ಷಾಹಿಗಳು, ಮರಾಠರು, ಹೈದರಾಲಿ, ಟಿಪ್ಪೂಸುಲ್ತಾನ್, ನಿಜಾಮ ಮತ್ತು ಬ್ರಿಟೀಷರು ರಾಜಕೀಯದಲ್ಲಿ ಗುರುತಿಸಿ ಕೊಂಡರು.

ಎರಡನೇ ವೆಂಕಟಪತಿ ನಂತರ ಅವನ ಅಣ್ಣನ ಮಗನಾದ ಎರಡನೇ ಶ್ರೀರಂಗನು ಕ್ರಿ.ಶ.೧೬೧೪ರಲ್ಲಿ ಅಧಿಕಾರಕ್ಕೆ ಬಂದನು. ಆದರೆ ಈತನ ಅಧಿಕಾರವನ್ನು ಎರಡನೇ ವೆಂಕಟಪತಿಯ ಪತ್ನಿ ಬಾಯಮ್ಮಳ ಸಹೋದರನಾದ ಗೊಬ್ಬೂರಿ ಜಗರಾಯನು ವಿರೋಧಿಸಿ, ವೆಂಕಟಪತಿಯ ಮಗನೆಂದು ಹೇಳಲಾದ ಚಿಕ್ಕರಾಯನ ಪರವಹಿಸಿ ಶ್ರೀರಂಗನನ್ನು, ಆತನ ಮಕ್ಕಳನ್ನು ಸೆರೆಹಿಡಿದನು. ಆದರೆ ವೇಲುಗೋಡಿನ ಸ್ವಾಮಿನಿಷ್ಠ ಎಚ್ಚಮನಾಯಕನು ವಿಜಯನಗರದ ಅರಸರ ಪರವಾಗಿ ಕಂಕಣಬದ್ಧನಾಗಿ ಜೀವನ ಮರಣಗಳೊಡನೆ ಹೋರಾಡಿ, ಅತ್ಯಂತ ಸಾಹಸ ಹಾಗೂ ಜಾಣತನದಿಂದ ಶ್ರೀರಂಗನ ಮಗನಾದ ರಾಮದೇವನನ್ನು ಸೆರೆಯಿಂದ ಪಾರುಮಾಡಿ, ಜಗರಾಯನ ವಿರುದ್ಧ ಯುದ್ಧಕ್ಕಿಳಿದನು. ಕ್ರಿ.ಶ.೧೬೧೬-೧೭ರಲ್ಲಿ ನಡೆದ ತೋಪೂರು ಕದನದಲ್ಲಿ ತಂಜಾವೂರಿನ ರಘುನಾಥನಾಯಕ ಮತ್ತಿತರ ಪ್ರಾಂತಾಧಿಕಾರಿಗಳ ನೆರವಿನಿಂದ ಎಚ್ಚಮನಾಯಕನು ಜಗರಾಯನನ್ನು ಸೋಲಿಸಿ, ಕೊಂದನು. ರಾಮದೇವನನ್ನು ವಿಜಯನಗರದ ಸಿಂಹಾಸನಾಧಿಪತಿಯನ್ನಾಗಿಸಿದನು. ಎಚ್ಚಮನಾಯಕನ ಬೆಳವಣಿಗೆಯನ್ನು ಸಹಿಸದ ಅವನ ಶತ್ರುಗಳು ರಾಜನ ವಿರುದ್ಧ ದಂಗೆ ಎದ್ದರು ಇಂತಹ ಸಮಯದಲ್ಲಿ ಎಚ್ಚಮನು ತನ್ನ ಚಾಣಾಕ್ಷತನದಿಂದ ಯತಿರಾಜನ ಮಗಳನ್ನು ದೊರೆ ರಾಮದೇವನಿಗೆ ವಿವಾಹ ಮಾಡಿಸಿದನು. ಇದರಿಂದ ರಾಜ್ಯದಲ್ಲಿ ಸ್ವಲ್ಪ ಶಾಂತಿಯುತ ವಾತಾವರಣ ಸೃಷ್ಟಿಯಾದಂತಾಯಿತಾದರೂ ಅಂತಹ ಕಲಹಗಳು ಬೂದಿಮುಚ್ಚಿದ ಕೆಂಡದಂತಿದ್ದವು. ವಿಜಯನಗರದ ಇತಿಹಾಸದಲ್ಲಿ ಎಚ್ಚಮನಾಯಕನ ಸಾಹಸವನ್ನು ಪ್ರಶಂಸಲಾಗಿದೆ. ಜೊತೆಗೆ ವಿಜಯನಗರದ ಮೇಲಿದ್ದ ಅವನ ಅಭಿಮಾನ-ಪ್ರೀತಿ, ವಿಜಯನಗರವನ್ನು ರಕ್ಷಿಸಲು ಆತ ಕೈಗೊಂಡ ನಿವಾರಣೋಪಾಯಗಳು ಕನ್ನಡನಾಡಿನಲ್ಲಿ ಮನೆಮಾತಾಗಿವೆ.

ರಾಮದೇವನ ನಂತರ ವಿಜಯನಗರ ಅವನತಿಗೊಳಗಾಯಿತು. ಬಿಜಾಪುರ ಆದಿಲ್‌ಷಾಹಿಗಳ ದಾಳಿ ತೀವ್ರವಾಯಿತು. ಒಂದು ದೊಡ್ಡ ಸಾಮ್ರಾಜ್ಯದ ಚಕ್ರವರ್ತಿಯಾಗಿದ್ದ ವಿಜಯನಗರದ ಅರಸನು ಬಿಜಾಪುರದ ಸುಲ್ತಾನನಿಗೆ ಸಾಮಂತನಾದನು. ೩ನೇ ಶ್ರೀರಂಗನು ಅಲೆಮಾರಿಯಾದನು. ಕ್ರಿ.ಶ.೧೬೫೮ರಲ್ಲಿ ಚಂದ್ರಗಿರಿಯನ್ನು ಗೋಲ್ಕಂಡ ಸುಲ್ತಾನರು ಕಿತ್ತುಕೊಂಡರು. ಇಕ್ಕೇರಿ ಶಿವಪ್ಪನಾಯಕನು ಈ ದೊರೆಗೆ ಆಶ್ರಯ ನೀಡಿದನು ಎಂದು ಚಿಕ್ಕದೇವರಾಜ ವಂಶಾವಳಿಯಿಂದ ತಿಳಿದುಬರುತ್ತದೆ.[೩] ಕ್ರಿ.ಶ.೧೬೬೭ರಲ್ಲಿ ಮಧುರೆಯಲ್ಲಿ ಸಾಮ್ರಾಜ್ಯದ ಬೇರೆ ಬೇರೆ ನಾಯಕರು ಒಂದಾಗಿ ಶ್ರೀರಂಗನ ರಕ್ಷಣೆಗಾಗಿ ಮೈಸೂರಿನ ಮೇಲೆ ದಾಳಿ ಮಾಡಿದರು. ಆದರೆ ದೇವರಾಜ ಒಡೆಯರ್ ಇವರನ್ನು ಸೋಲಿಸಿದನು.[೪] ನಂತರದ ದಿನಗಳಲ್ಲಿ ವಿಜಯನಗರ ಅರಸರು ಆನೆಗೊಂದಿಗೆ ಹೋಗಿ ನೆಲೆಸಿರಬೇಕು. ಕ್ರಿ.ಶ.೧೭೪೯ರಿಂದ ೧೭೭೫ರವರೆಗೆ ಮರಾಠರಿಗೆ ಕಪ್ಪಕಾಣಿಕೆ ನೀಡಿದರು. ನಂತರ ಹೈದರಾಲಿ, ಟಿಪ್ಪೂಸುಲ್ತಾನರ ಹಿಡಿತಕ್ಕೊಳಪಟ್ಟರು. ಆಮೇಲೆ ಬ್ರಿಟೀಷರು ಈ ಪ್ರದೇಶವನ್ನು ನಿಜಾಮನಿಗೆ ಕೊಟ್ಟರು. ಸ್ವಲ್ಪ ಕಾಲದ ನಂತರ

ಮದ್ರಾಸ್ ಪ್ರಾಂತ್ಯಕ್ಕೆ ಸೇರಿತು. ತಿರುಮಲರಾಜನು ಪಿಂಚಣಿದಾರನಾಗಿ ಕ್ರಿ.ಶ.೧೮೨೪ರಲ್ಲಿ ಮರಣ ಹೊಂದಿದನು.[೫]

ಕ್ರಿ.ಶ.೧೫೬೫ರ ನಂತರದ ರಾಜಕೀಯ ಘಟನೆಗಳ ಅತಿಮುಖ್ಯ ಪ್ರೇರಕಶಕ್ತಿ ರಾಜ್ಯವಿಸ್ತರಣ ನೀತಿ. ಆಗಿನ ರಾಜಕೀಯ ಇತಿಹಾಸದ ಬಹುಭಾಗವು ಯುದ್ಧ ಚಟುವಟಿಕೆಯಿಂದಲೇ ತುಂಬಿದೆ. ಹೆಚ್ಚು ಪ್ರದೇಶವನ್ನು ಹೊಂದಿರಬೇಕೆಂಬ ಆಸೆ. ಅಲ್ಲದೆ ದ್ವೇಷ, ಮಾತ್ಸರ್ಯ, ದೌರ್ಜನ್ಯ, ಪರಸ್ಪರ ಮಾರಕ ವಾದ ಕಾಳಗಗಳು ಇವು ಆಗಿನ ರಾಜಕಾರಣದ ಮುಖ್ಯ ಲಕ್ಷಣವಾಗಿದ್ದವು. ವಿಜಯನಗರ ಪತನವಾದ ಮೇಲೆಯೂ ಮುಸಲ್ಮಾನರಿಗೆ ಮಣಿಯದ ಪ್ರಬಲ ಹಿಂದೂ ರಾಜರಿದ್ದರು. ಅಲಿ ಆದಿಲಷಾಹನು ದಂಡೆತ್ತಿ ಹೋಗಿ, ಅವರಲ್ಲಿ ಕೆಲವರನ್ನು ಜಯಿಸಿದನು. ಈ ಸಂದರ್ಭದಲ್ಲಿ ಪಾಳೆಯಗಾರರಿಗೆ ಹಿಂದೂ ರಾಜರ ಗೆಲುವು ಇಷ್ಟವಾಗಿರಲಿಲ್ಲ. ಆದರೆ, ವಿಜಯಿಗಳಾದವರು ಕೊನೆಗೆ ತಮ್ಮನ್ನು ಕಬಳಿಸಬಹುದೆಂಬ ಭೀತಿಯಿಂದ ಈ ಪಾಳೆಯಗಾರರು ಸಮಯ ಸಾಧಿಸಿ ಪ್ರಬಲರ ಪಕ್ಷವನ್ನೇ ಕೂಡಿಕೊಳ್ಳುತ್ತಿದ್ದರು. ಆದರೆ, ದಕ್ಷಿಣದಲ್ಲಿ ಮುಸಲ್ಮಾನರ ಆಕ್ರಮಣ ನೀತಿಗೆ ಪಾಳೆಯಗಾರರ ಪ್ರಾಬಲ್ಯವು ದೊಡ್ಡದೊಂದು ಪ್ರತಿಬಂಧವಾಗಿದ್ದಿತು. ಕ್ರಿ.ಶ.೧೬೩೯ರಲ್ಲಿ ಬಿಜಾಪುರ ಮತ್ತು ಗೋಲ್ಕಂಡ ಸುಲ್ತಾನರೊಡನೆ ಒಪ್ಪಂದ ಮಾಡಿಕೊಂಡನು. ಈ ಒಪ್ಪಂದದಿಂದ ಬಿಜಾಪುರದ ಸುಲ್ತಾನರಿಗೆ ಉತ್ತರದ ಕಡೆ ರಾಜ್ಯ ವಿಸ್ತಾರವು ಕಠಿಣವಾಯಿತು. ಈ ಸಂದರ್ಭದಲ್ಲಿ ದಕ್ಷಿಣದಲ್ಲಿ ದುರ್ಬಲವಾಗುತ್ತಾ ಬಂದ ವಿಜಯನಗರ ಅರಸರು, ಸದಾ ಕಿರುಕುಳ ಕಾಳಗದಲ್ಲಿ ತೊಡಗಿದ್ದ ಪಾಳೆಯಗಾರರು ಈ ಸನ್ನಿವೇಶವನ್ನು ಬಳಸಿಕೊಂಡು ತಮ್ಮ ದಾಳಿಗಳನ್ನು ದಕ್ಷಿಣದ ಕಡೆ ಆರಂಭಿಸಿದರು. ಬಿಜಾಪುರ ಮತ್ತು ಗೋಲ್ಕಂಡ ಸುಲ್ತಾನರು ಒಪ್ಪಂದ ಮಾಡಿಕೊಂಡು, ಪೂರ್ವದಿಂದ ಗೋಲ್ಕಂಡ ಮತ್ತು ಪಶ್ಚಿಮದಿಂದ ಬಿಜಾಪುರ ಸುಲ್ತಾನರು ದಾಳಿಯನ್ನು ಆರಂಭಿಸಿದರು. ಸ್ವಾತಂತ್ರ್ಯ ಘೋಷಿಸಿಕೊಂಡ ಕೆಲವು ನಾಯಕರು ಸುಲ್ತಾನರನ್ನು ಕರ್ನಾಟಕಕ್ಕೆ ಆಹ್ವಾನಿಸಿ, ಅವನಿಂದ ರಕ್ಷಿತರಾಗಿ ತಮ್ಮ ರಾಜ್ಯ ವಿಸ್ತರಿಸುವ ಪ್ರಯತ್ನ ಮಾಡಿದರು. ಆದರೆ ಇಂತಹ ನಾಯಕರು ಸುಲ್ತಾನರಿಂದ ಯಾವುದೇ ಲಾಭ ಪಡೆದುಕೊಳ್ಳಲಿಲ್ಲ.[೬] ರಣದುಲ್ಲಾಖಾನನು ಮೈಸೂರಿನ ಮೇಲೆ ದಾಳಿ ಮಾಡಿದಾಗ ಹರಪನಹಳ್ಳಿ, ಕನಕಗಿರಿ, ಸಂಡೂರು, ಉಜ್ಜನಿ ಪಾಳೆಯಗಾರರು ಖಾನನಿಗೆ ಸಹಾಯಕರಾಗಿ ಬಂದರು.[೭] ಪ್ರೊ.ಎಂಜರು ಈ ಬಗ್ಗೆ ನೀಡಿದ ಅಭಿಪ್ರಾಯವನ್ನು ಗಮನಿಸುವುದಾದರೆ ಕರ್ನಾಟಕದ ಪಾಳೆಯಗಾರರು ಕುಟಿಲ ಮನೋವೃತ್ತಿವುಳ್ಳವರೂ, ಸ್ವಾರ್ಥಿಗಳೂ, ಸಂಕುಚಿತ ಮನಸ್ಸಿನವರೂ, ಒಬ್ಬನ ಸಂಕಟ ಇನ್ನೊಬ್ಬನ ಸುಖ, ಒಬ್ಬನ ದೌರ್ಬಲ್ಯ ಇನ್ನೊಬ್ಬನ ಸದಾವಕಾಶವಾಗಿತ್ತು. ಅವರ ವೈಯಕ್ತಿಕ ಈರ್ಷ್ಯೆ ಹಾಗೂ ಭೂದಾಹ ಇಡೀ ಕರ್ನಾಟಕವನ್ನೇ ಗೊಂದಲದಲ್ಲಿ ಮುಳುಗಿಸಿತು. ತಮ್ಮ ನೆರೆಯ ರಾಜರನ್ನು ಸೋಲಿಸದೇ ಪಾಳೆಯಗಾರರು ಬಿಜಾಪುರದ ಸುಲ್ತಾನ ಅಥವಾ ಗೋಲ್ಕಂಡ ಸುಲ್ತಾನನ

ಸಹಾಯದಿಂದ ಅವರನ್ನು ಧ್ವಂಸ ಮಾಡಲು ಹವಣಿಸುತ್ತಿದ್ದರು. ಈ ದೇಶದ ಮುದಿದೊರೆಗಳು ತಮ್ಮ ತಮ್ಮ ದ್ವೇಷಾಸೂಯೆ ಮತ್ತು ಮುಂದಾಲೋಚನೆ ಇಲ್ಲದ ಕೆಲಸಗಳಿಂದ ತಮ್ಮ ಇಡೀ ದೇಶವನ್ನೆಲ್ಲಾ ಮುಸ್ಲಿಮರ ಪಾಲಿಗೆ ವಹಿಸಿಕೊಡುವಂತೆ ಕಾಣುತ್ತದೆ ಎಂದಿದ್ದಾರೆ.[೮] ಪಾಳೆಯಗಾರರು ಸೈನಿಕರಾಗಿ ಶೂರತ್ವದಲ್ಲಿ ತುಂಬಾ ಸಮರ್ಥರಿದ್ದರು. ರಾಮರಾಯನ ನಂತರ ಮೊದಲು ಆದಿಲ್‌ಷಾಹನ ಸಾಮಂತರಾಗಿ, ಆತನ ಆಜ್ಞೆಯಂತೆ ನಡೆಯುತ್ತಿದ್ದದಷ್ಟೇ ಅಲ್ಲ ಆತನ ಆದೇಶವನ್ನು ಮೀರುತ್ತಿರಲಿಲ್ಲ. ಆದಿಲ್‌ಷಾಹನ ಸೈನ್ಯದೊಂದಿಗೆ ಬಂದು ಅವರ ಪ್ರತಿಯೊಂದು ಕಾರ್ಯದಲ್ಲೂ ಸಹಾಯವನ್ನು ಮಾಡುತ್ತಿದ್ದರು. ಶತ್ರುಗಳ ಪ್ರದೇಶಗಳನ್ನು ಆಕ್ರಮಿಸಿ ಅದನ್ನು ಹಾಳುಮಾಡಿ ಲೂಟಿ ಮಾಡುತ್ತಿದ್ದರು. ಸುಲಿಗೆಯಲ್ಲಿ ಬಂದ ಆನೆ, ಕುದುರೆ, ಒಂಟೆಗಳಿಂದ ಇತರ ಪದಾರ್ಥಗಳಿಂದ ಅವರು ಸಾಕಷ್ಟು ಸಮರ್ಥರೂ ಆಗಿದ್ದರು. ಈಗ ಆ ಜನರಲ್ಲಿ ಬಹಳಷ್ಟು ದ್ರವ್ಯ ಸಂಪತ್ತು ಕೂಡಿದ್ದರಿಂದ ಸೊಕ್ಕಿನಿಂದ ಮೆರೆಯುತ್ತಿದ್ದರು. ಆದ್ದರಿಂದಾಗಿ ತಮ್ಮ ಒಡೆಯನನ್ನು ಬದಲಿಸುವ ಧೋರಣೆಯಲ್ಲಿದ್ದರು. ಸಾಮಂತರಾಗಿ, ನೌಕರರಾಗಿ ಮೊದಲಿದ್ದ ನಡೆತೆಯನ್ನು ಬಿಟ್ಟು ಗರ್ವದಿಂದ ಹುಂಬತನದ ಮಾರ್ಗವನ್ನು ಹಿಡಿದಿದ್ದರು[೯] ಎಂದು ಅಂದಿನ ಪಾಳೆಯಗಾರರ ಸ್ವಭಾವ ಕುರಿತು ತಮ್ಮ ನಿಲುವನ್ನು ವ್ಯಕ್ತಪಡಿಸಿರುವರು.

ಆದಿಲ್‌ಷಾಹನು ಕರ್ನಾಟಕದ ಮೇಲೆ ದಾಳಿ ಮಾಡಿದಾಗಲೆಲ್ಲಾ ಇಲ್ಲಿನ ಪಾಳೆಯಗಾರರಿಂದ ಧನಕನಕಗಳನ್ನು ವಸೂಲಿ ಮಾಡಿಕೊಂಡು ಮಳೆಗಾಲ ಪ್ರಾರಂಭವಾಗುವ ಮುನ್ನವೇ ರಾಜಧಾನಿಗೆ ಹಿಂದಿರುಗುತ್ತಿದ್ದನು. ಈತ ಕರ್ನಾಟಕದ ಮೇಲಿನ ಸಂಪತ್ತಿನ ಆಸೆಗಾಗಿ ೮ ಬಾರಿ ದಂಡಯಾತ್ರೆಯನ್ನು ಮಾಡಿದನು.[೧೦] ಆದಿಲ್‌ಷಾಹಿಯು ಒಮ್ಮೆ ಒಬ್ಬರ ಸಹಾಯದಿಂದ ಇನ್ನೊಬ್ಬರ ಮೇಲೆ ದಾಳಿ ಮಾಡುವ ಮತ್ತು ಇನ್ನೊಮ್ಮೆ, ಮೊದಲು ಸಹಾಯ ಮಾಡಿದವರ ವಿರುದ್ಧವೇ ಇನ್ನೊಬ್ಬರ ಸಹಾಯ ಪಡೆದು ಯಶಸ್ವಿಯಾದನು. ಇಕ್ಕೇರಿಯ ಮೇಲೆ ದಾಳಿ ಮಾಡಿದಾಗ ಬಸವಾಪಟ್ಟಣದ ನಾಯಕರ ಸಹಾಯವನ್ನು, ಬಸವಾಪಟ್ಟಣದ ಮೇಲೆ ದಾಳಿ ಮಾಡಿದಾಗ ಇಕ್ಕೇರಿ ನಾಯಕರ ಸಹಾಯವನ್ನು ಪಡೆದನು. ಬಸವಪಟ್ಟಣದ ಚಿಕ್ಕ ಕೆಂಗಹನುಮಪ್ಪ ನಾಯಕನು ಆದಿಲ್‌ಷಾಹಿಯ ಚಿತ್ರದುರ್ಗ, ಸಿರಾ, ಹಾಗಲವಾಡಿ, ಬೆಂಗಳೂರು, ಮೈಸೂರು ಮುಂತಾದ ಹಲವಾರು ಯುದ್ಧಗಳಲ್ಲಿ ಭಾಗವಹಿಸಿದ್ದನೆಂದು ತಿಳಿದುಬರುತ್ತದೆ.[೧೧] ಈ ಸ್ಮರಣೆಗಾಗಿ ಹನುಮಪ್ಪನಾಯಕನನ್ನು ಕ್ರಿ.ಶ.೧೬೩೭ರಲ್ಲಿ ಬಸವಪಟ್ಟಣವನ್ನು ಆಳಲು ಆದಿಲ್‌ಷಾಹಿಯು ನೇಮಕ ಮಾಡಿದನು.[೧೨] ಇವನ ಸಹಾಯ ಪಡೆದು ಹರಪನಹಳ್ಳಿ, ಕನಕಗಿರಿ, ಸಂಡೂರು, ರಾಯದುರ್ಗ, ದೊಡ್ಡೇರಿ, ಕುಂದರ್ಪೆ, ಹಿರಿಯೂರು, ಚಿಕ್ಕನಾಯಕನಹಳ್ಳಿ, ಬೇಲೂರು, ಸಿರಾ, ಬೆಂಗಳೂರು, ದೊಡ್ಡಬಳ್ಳಾಪುರ, ಕೋಲಾರ, ಬಿಜ್ಜಾವರ, ಚಿಕ್ಕಬಳ್ಳಾಪುರ, ಹೊಸಕೋಟೆ, ಯಲಹಂಕ, ಹೀಗೆ ಬಿಜಾಪುರದವರು ಗೆದ್ದ ಅನೇಕ ಸ್ಥಳಗಳ ದೀರ್ಘಪಟ್ಟಿಯನ್ನು ಗೋವಿಂದ ವೈದ್ಯನ ಕಾವ್ಯದಲ್ಲಿ

ಕಾಣಬಹುದು.[೧೩] ಮಹಾ ಕ್ರೂರಿಯಾಗಿದ್ದ ರಣದುಲ್ಲಾಖಾನನ ಹೆಸರು ಕೇಳಿದರೆ ಹೆಣ್ಣುಗಳ ಗರ್ಭ ಜರಿದು ಬೀಳುವಷ್ಟು ಜನರಲ್ಲಿ ಭೀತಿ ಸಂಚಾರ; ಅವನ ಅಮಾನುಷ ವ್ಯಕ್ತಿತ್ವ ಜನಮನದ ಮೇಲೆ ಎಂತಹ ಭಯಂಕರ ಪರಿಣಾಮ ಬೀರಿತ್ತೆಂದರೆ "ಕಣ್ಣಿನೊಳಗೆ ಖಾನ ಕನಸಿನೊಳಗೆ ಖಾನ ಬಣ್ಣಿಸೆ ಮನದೊಳು ಖಾನ ತಿಣ್ಣವಡೆದ ಖಾನನ ಸುದ್ದಿ ಜಪವಾಗಿ ಬಣ್ಣಗೆಟ್ಟುದು ಲೋಕವೆಲ್ಲಾ" ಎಂದು ಗೋವಿಂದವೈದ್ಯನ ಕಂಠೀರವ ನರಸರಾಜ ವಿಜಯದಲ್ಲಿ ಉಲ್ಲೇಖವಾಗಿದೆ. ಹೀಗೆ ವಿಜಯನಗರೋತ್ತರ ಕಾಲದಲ್ಲಿ ಕರ್ನಾಟಕದಲ್ಲಿ ಷಾಹಿಗಳ ದಾಳಿಗಳಿಂದಾಗಿ ಅನೇಕ ರಾಜಕೀಯ ಬದಲಾವಣೆಗಳುಂಟಾದವು ಮತ್ತು ಇತರ ರಂಗಗಳ ಮೇಲೆ ಅವು ಪರಿಣಾಮವನ್ನುಂಟು ಮಾಡಿದವು.

ವಿಜಯನಗರ ಅರಸರ ಆರ್ಶೀವಾದದಿಂದಲೇ ಅನೇಕ ಪಾಳೆಯಪಟ್ಟುಗಳು ಹುಟ್ಟಿದವು ಮತ್ತು ಬೆಳೆದವು. ವಿಜಯನಗರ ಅರಸರ ಕಾಲದಲ್ಲಿ ವಿಧೇಯರಾಗಿದ್ದ ಪಾಳೆಯಗಾರರು ವಿಜಯನಗರದ ಅಸಹಾಯಕ ಸ್ಥಿತಿಯಲ್ಲಿ ಸ್ವತಂತ್ರಗೊಳ್ಳುವ ತರಾತುರಿಯಲ್ಲಿದ್ದರು. ವಿಜಯನಗರ ಆಡಳಿತದಲ್ಲಿದ್ದ ಅನೇಕ ಅಧಿಕಾರಿಗಳು, ಸೇನಾಧಿಕಾರಿಗಳು ತಮ್ಮವೇ ಆದಂತ ಪಾಳೆಯಪಟ್ಟುಗಳನ್ನು ಸ್ಥಾಪಿಸಿಕೊಂಡರು. ಇದನ್ನು ತಿಳಿದೋ ತಿಳಿಯದ ಅಧಿರಾಜರು ಅವರೊಂದಿಗೆ ವಿರೋಧ ಕಟ್ಟಿಕೊಳ್ಳಲಿಲ್ಲ. ಕಾರಣ ಅವರನ್ನೆಲ್ಲ ಅಡಗಿಸುವುದಾಗಲೀ, ಅಂಕೆಯಲ್ಲಿಟ್ಟುಕೊಳ್ಳುವುದಾಗಲೀ ಆಗಿನ ಪರಿಸ್ಥಿತಿಯಲ್ಲಿ ಅಷ್ಟು ಸುಲಭದ ಕಾರ್ಯವಾಗಿರಲಿಲ್ಲ. ಆದುದರಿಂದ ಇವರ ನಾಮಮಾತ್ರ ಸಾಮಂತಿಕೆ ಮತ್ತು ಅಧೀನತೆಯನ್ನು ಒಪ್ಪಿ ಅವರು ಆಗಲೋ ಈಗಲೋ ಕೊಡುತ್ತಿದ್ದ ಕಪ್ಪಕಾಣಿಕೆಗಳನ್ನು ಸ್ವೀಕರಿಸುತ್ತಾ ತಾವು ಅವರ ನಾಮಮಾತ್ರವಾದರೂ ಸರಿಯೇ ಅಧಿರಾಜರು ಎನ್ನುವುದರಲ್ಲಿಯೇ ತೃಪ್ತರಾಗಿದ್ದರು.[೧೪] ವಿಜಯನಗರವು ಬೆಳೆಯುತ್ತಾ ಹೋದಂತೆ ಸೈನ್ಯದ, ಹಣದ ಅವಶ್ಯಕತೆಯೂ ಹೆಚ್ಚಾಗುತ್ತಾ ಹೋಯಿತು. ಇವುಗಳನ್ನು ನಿಷ್ಠ ಪಾಳೆಯಗಾರರು ಕೊಡುತ್ತಾ ರಾಜನ ಸರಿ ಸಮನಾಗಿ ತಾವೂ ಬೆಳೆದರು. ಪಾಳೆಯಗಾರರು ಹೆಚ್ಚಾಗುತ್ತಾ ಹೋದಂತೆ ವಿಜಯನಗರ ಅರಸರು ಅವರನ್ನು ಪೋಷಿಸುತ್ತಾ ಬಂದರು. ಕೃಷ್ಣದೇವರಾಯ ಮತ್ತು ಸದಾಶಿವರಾಯರ ಕಾಲದಲ್ಲಿ ಭಾರಿ ಸಂಖ್ಯೆಯಲ್ಲಿ ಅಮರನಾಯಕರನ್ನು ನೇಮಕ ಮಾಡಲಾಗಿತ್ತು.[೧೫]

ವಿಜಯನಗರೋತ್ತರ ಕಾಲದಲ್ಲಿ ತಲೆ ಎತ್ತಿದ ಚಿಕ್ಕಪುಟ್ಟ ಸಂಸ್ಥಾನಿಕರನ್ನು ಮತ್ತು ಅದಕ್ಕಿಂತ ದೊಡ್ಡ ಸಂಸ್ಥಾನಿಕರನ್ನು ಪಾಳೆಯಗಾರರೆಂದು, ಅಮರನಾಯಕರೆಂದು, ದೊರೆಗಳೆಂದು ಕರೆಯಲಾಯಿತು. ಅಮರ ನಾಯಕರಲ್ಲಿ ಅವರ ರಾಜ್ಯ ವಿಸ್ತಾರ ಹಾಗೂ ಆರ್ಥಿಕ ಸ್ಥಿತಿಯನ್ನು ನೋಡಿ ಮೂರು ವರ್ಗಗಳನ್ನಾಗಿ ವಿಭಾಗಿಸಲಾಗಿತ್ತು. ಕೆಳದಿಯ ನಾಯಕರು, ಯಲಹಂಕ ನಾಯಕರು ಮತ್ತು ಚಿತ್ರದುರ್ಗ ನಾಯಕರು ಮೊದಲನೆಯ ವರ್ಗಕ್ಕೆ ಸೇರಿದ್ದರು. ಏಕೆಂದರೆ ಅವರು ಬಹುವಿಶಾಲ ವ್ಯಾಪ್ತಿಯ ಭೂಮಿಯನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು. ಪೇಯಿಸನು ಈ ಬಗ್ಗೆ ಒಂದು ಮಿಲಿಯನ್ ಅಥವಾ ಒಂದೂವರೆ

ಮಿಲಿಯನ್ ಪರ್ಡೋವೋಗಳ ವರಮಾನವುಳ್ಳ ನಾಯಕರಿದ್ದಾರೆ. ಇತರರು ನೂರು, ಸಾವಿರ ಪರ್ಡೊವೋಗಳು, ಇತರರು ಇನ್ನೂರು, ಮೂನ್ನೂರು, ಐನೂರು, ಸಾವಿರ ಪರ್ಡಾವೋಗಳ ವರಮಾನ ಪಡೆದಿದ್ದಾರೆ ಎಂದು ತಿಳಿಸಿರುವನು. ವಿಜಯನಗರದ ಸೇನಾನಾಯಕರ ಹಾಗೂ ಆಡಳಿತದ ಬಗ್ಗೆ ನ್ಯೂನಿಜ್ ಹೀಗೆ ಹೇಳುತ್ತಾನೆ 'ಎಲ್ಲಾ ಭೂಮಿಯು ರಾಜನಿಗೆ ಸೇರಿದೆ ಅವನಿಂದ ಪಡೆದ ಸೇನಾನಾಯಕರು ಅದನ್ನು ಆಳುತ್ತಾರೆ. ಈ ರೀತಿಯಲ್ಲಿ ಬಿಸ್ನಗರ್ ರಾಜ್ಯವು ಇನ್ನೂರಕ್ಕೂ ಹೆಚ್ಚು ಜನ ನಾಯಕರಲ್ಲಿ ವಿಭಾಗಗೊಂಡಿದೆ'.[೬] ಹೀಗೆ ಅನೇಕ ಅಮರನಾಯಕರಿಂದ ಕೂಡಿದ್ದ ವಿಜಯನಗರವು ಕ್ರಿ.ಶ.೧೫೬೫ರ ನಂತರ ಛಿದ್ರವಾಯಿತು. ಅಮರನಾಯಕರಲ್ಲಿನ ಅಧಿಕಾರದಾಹ ವಿಜಯನಗರವನ್ನು ಹರಿದು ಹಂಚಿ ಹಾಕಿತು. ಬಲಿಷ್ಠನಾಯಕರು ದುರ್ಬಲ ನಾಯಕರನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡರು ಮತ್ತು ಅಧಿಕಾರಕ್ಕಾಗಿ, ರಾಜ್ಯ ವಿಸ್ತಾರಕ್ಕಾಗಿ ತಮ್ಮತಮ್ಮೊಳಗೆ ಸದಾ ಕಾದಾಟ ನಡೆಸಿದರು.

ವಿಜಯನಗರೋತ್ತರ ಕಾಲದಲ್ಲಿ ಸ್ವತಂತ್ರಗೊಂಡ ಹಾಗೂ ಹೊಸದಾಗಿ ಸ್ಥಾಪನೆಗೊಂಡ ಪಾಳೇಪಟ್ಟುಗಳಲ್ಲಿ ಬೇಡ ಜನಾಂಗದ ಪಾಳೆಯಪಟ್ಟುಗಳೇ ಅಧಿಕವಾಗಿದ್ದವು. ಅವುಗಳಲ್ಲಿ ಚಿತ್ರದುರ್ಗ, ಸಂತೆಬೆನ್ನೂರು, ಹರಪನಹಳ್ಳಿ, ಕನಕಗಿರಿ, ನಾಯಕನಹಟ್ಟಿ, ಹಾಗಲವಾಡಿ, ಮತ್ತೋಡು, ಹರತಿ ಪ್ರಮುಖವಾದವುಗಳು. ಕರ್ನಾಟಕ ಮತ್ತು ಕರ್ನಾಟಕದ ಹೊರಭಾಗದ ಅನೇಕ ಸ್ಥಳಗಳಲ್ಲಿ ಬೇಡ ಜನಾಂಗದ ನಾಯಕರು ಅಧಿಕಾರ ನಡೆಸಿದ್ದಾರೆ. ಕೆಲವು ಪ್ರದೇಶಗಳಲ್ಲಿ ಪಾಳೆಯಗಾರಿಕೆ ಪ್ರಸಿದ್ಧಿಯನ್ನು ಪಡೆದರೆ ಇನ್ನು ಕೆಲವು ಪಾಳೆಯಗಾರಿಕೆ ಸ್ಥಳಗಳು ಇತಿಹಾಸದಿಂದ ಮರೆಯಾಗಿವೆ. ಒಟ್ಟಿನಲ್ಲಿ ಈ ಕೆಳಗಿನ ಸ್ಥಳಗಳಲ್ಲಿ ಬೇಡರ ಆಳ್ವಿಕೆ ಒಂದು ಕಾಲಕ್ಕೆ ಇತ್ತೆಂದು ಕಂಡುಬರುತ್ತದೆ. ಚಿತ್ರದುರ್ಗ, ಹರಪನಹಳ್ಳಿ, ಸಂತೇಬೆನ್ನೂರು, ಹರ್ತಿಕೋಟೆ, ಕನಕಗಿರಿ, ಜರಿಮಲೆ, ಗುಡೇಕೋಟೆ, ನಿಡಗಲ್ಲು, ನಾಯಕನಹಟ್ಟಿ, ಗುಮ್ಮನಾಯಕನಹಳ್ಳಿ, ಹಾಗಲವಾಡಿ, ಮತ್ತೋಡು, ಶಿರಾ, ಗುಡಗುಂಟಿ, ಸುರಪುರ, ಕೋಡೇಕಲ್ಲು, ಕೋಸಗಿ, ಕರೆಗುಡ್ಡ, ಗುಂತಗೋಳ, ದೇವದುರ್ಗ, ಅರಕೇರಿ, ರೂಡ್ಲಬಂಡಿ, ಗುತ್ತಿ, ಕಪ್ಪಲುದುರ್ಗ, ದೂದಿಕೊಂಡಿ, ಕಪಟರಾಳ, ಸೂಂಡಿ, ಪಾಮನಕಲ್ಲು, ಪ್ಯಾಪಲಿ, ರತ್ನಗಿರಿ, ರಾಯದುರ್ಗ, ತರೀಕೆರೆ, ಪಾಮಡಿ ಕೋಮರಕೊಂಡಿ, ಅಗಳಿ, ಪರಶುರಾಮಪುರ, ತಳುಕು, ದೊಡ್ಡೇರಿ, ಆನೆಗೊಂದಿ, ಮೊಳಕಾಲ್ಮೂರು, ಪೆನಗೊಂಡ, ಮುಂಡಿಕೋಟೆ, ದ್ಯಾವನಹಳ್ಳಿ, ಮುಟ್ಟಿ ಬೆಳಗುತ್ತಿ, ತಲಚೇರಿ, ದೊರೆಮಳ, ನನ್ನಿವಾಳ ಗೋಪಸೂರ ಮಲೆದುರ್ಗ, ಆದವಾನಿ, ಚಂದ್ರಗಿರಿ, ಚಿಕ್ಕನಾಯಕನಹಳ್ಳಿ, ರಾಯಚೂರು, ಉಚ್ಚಂಗಿದುರ್ಗ, ಚಿಕ್ಕಲದಿನ್ನಿ, ಸಂಡೂರು, ಉಜ್ಜನಿ, ಬಾಣರಾವಿ, ವಡ್ಡು, ಕುಡುತಿನಿ, ಹಾವನೂರು, ಮುದಗಲ್ಲು, ಜಡಕಲ್ಲುದುರ್ಗ, ಅನಂತಪುರ, ದುಮ್ಮಿ, ಕುಂದುರ್ಪೆ, ಹೊಸಕೋಟೆ, ಹಿರಿಯೂರು, ಬೂದಿಹಾಳು, ಐಮಂಗಲ, ಕೋಟೆಕೆರೆ, ಬುಕ್ಕಪಟ್ಟಣ, ಕ್ಯಾದಿಗೇರಾ, ರಾಮದುರ್ಗ, ರಾಮಗಿರಿ, ರಾಣಿಬೆನ್ನೂರು,

ಮಧುರೆ ಮತ್ತು ಇತರ ಸ್ಥಳಗಳು. ಬೇಡ ನಾಯಕ ಅರಸರು ಸ್ಥಾಪಿಸಿದ ಪಾಳೇಪಟ್ಟುಗಳು ಒಂದಕ್ಕೊಂದು ಅಂಟಿಕೊಂಡಿದ್ದವು. ಈ ಅರಸರಲ್ಲಿ ಸದಾ ಕಿರುಕುಳ ಕಾಳಗಗಳು ಸಂಭವಿಸುತ್ತಿದ್ದವು. ಒಬ್ಬ ನಾಯಕ ಅರಸನ ಗೆಲುವು ಇನ್ನೊಬ್ಬ ನಾಯಕ ಅರಸನ ಸೋಲಾಗುತ್ತಿತ್ತು. ಇಲ್ಲವೇ ಗೆಲುವಾಗು ತ್ತಿತ್ತು. ಈ ಪಾಳೆಯಗಾರ ದೊರೆಗಳಲ್ಲಿ ರಕ್ತಸಂಬಂಧವಿದ್ದರೂ ಅಧಿಕಾರಕ್ಕಾಗಿ ತಮ್ಮ ರಕ್ತಸಂಬಂಧವನ್ನು ಕಡೆಗಣಿಸಿದ ಉದಾಹರಣೆಗಳು ಕಂಡುಬರುತ್ತವೆ. ಬೇಡ ದೊರೆಗಳಲ್ಲಿ ಜಾತಿಯ ಪ್ರೇಮ ಬಂದು ಅವರಲ್ಲಿ ಕ್ರಿ.ಶ.೧೫೬೫ರ ಕಾಲದಲ್ಲಿ ಷಾಹಿಸುಲ್ತಾನರಲ್ಲಿ ಕಂಡುಬಂದಂತಹ ಹೊಂದಾಣಿಕೆಯೇನಾದರೂ ಕಂಡು ಬಂದಿದ್ದರೆ ಕರ್ನಾಟಕದ ಚರಿತ್ರೆಯಲ್ಲಿ ಬೇಡರ ಚರಿತ್ರೆ ಒಂದು ವಿಶೇಷ ಸ್ಥಾನಮಾನಕ್ಕೆ ಪಾತ್ರವಾಗುತ್ತಿತ್ತು. ಹೀಗಾಗಿದ್ದರೆ ಪಾಳೆಯಗಾರರ ಚರಿತ್ರೆಯನ್ನು ಅಲಕ್ಷಿಸುವ ಪ್ರಮೇಯವೇ ಬರುತ್ತಿರಲಿಲ್ಲ.

### ಚಿತ್ರದುರ್ಗ ನಾಯಕ ಅರಸರು

ಚಿತ್ರದುರ್ಗ ಜಿಲ್ಲೆ ಐತಿಹಾಸಿಕವಾಗಿ ಪ್ರಸಿದ್ಧಿಯನ್ನು ಪಡೆದ ಜಿಲ್ಲೆಯಾಗಿದೆ. ಬೇಡ ಸಂಸ್ಥಾನಗಳಲ್ಲಿ ಚಿತ್ರದುರ್ಗವು ಬಲಿಷ್ಠವಾಗಿತ್ತು. ಈ ಜಿಲ್ಲೆಯಲ್ಲಿ ಒಟ್ಟು ಏಳು ಪಾಳೆಯಗಾರರು ರಾಜಕೀಯ ಪ್ರಭಾವ ಬೀರಿದ್ದರು. ಅವರೆಂದರೆ ರಾಯದುರ್ಗ, ಹರತಿ ಬೇಲೂರು, ಚಿತ್ರದುರ್ಗ, ಸಂತೇಬೆನ್ನೂರು, ನಾಯಕನಹಟ್ಟಿ ಮತ್ತು ಮತ್ತೋಡು. ಆದರೆ ಈ ಜಿಲ್ಲೆಯೊಳಗೆ ರಾಜಧಾನಿಗಳನ್ನು ಸ್ಥಾಪಿಸಿ ಆಳಿದವರೆಂದರೆ ಹರತಿ, ನಾಯಕನಹಟ್ಟಿ, ಮತ್ತೋಡು ಮತ್ತು ಚಿತ್ರದುರ್ಗದ ನಾಯಕ ಅರಸರು ಮಾತ್ರ. ಈ ಎಲ್ಲಾ ಪಾಳೆಯಗಾರರು ಒಂದು ಕಾಲಕ್ಕೆ ಸಂಬಂಧಿಗಳೇ ಆಗಿದ್ದುದು ವಿಶೇಷವಾದ ಸಂಗತಿಯಾಗಿದೆ.

ಚಿತ್ರದುರ್ಗ ನಾಯಕರು ಒಟ್ಟು ೩೧೧ ವರ್ಷಗಳ ಕಾಲ ಆಳಿದರೆಂದು ಇವರನ್ನು ಕುರಿತ ಚರಿತ್ರೆ ಹೇಳುತ್ತದೆ. ಚಿತ್ರದುರ್ಗ ನಾಯಕ ಅರಸರ ಮೂಲ ವ್ಯಕ್ತಿ ಮತ್ತಿತಿಮ್ಮಣ್ಣನಾಯಕ ಆರಂಭದಲ್ಲಿ ಹೊಳಲ್ಕೆರೆ, ಆಮೇಲೆ ಹಿರಿಯೂರು ಕೊನೆಗೆ ಚಿತ್ರದುರ್ಗದ ನಾಯಕನಾಗಿ ವಿಜಯನಗರ ಅರಸರಿಂದ ನೇಮಕಗೊಂಡನು. ವಿಜಯನಗರ ಅರಸರ ಸಹಾಯಕನಾಗಿ ಸೇವೆ ಸಲ್ಲಿಸಿದ ತಿಮ್ಮಣ್ಣನಾಯಕನು ಅವರಿಂದ 'ಹಗಲು ಕಗ್ಗೊಲೆ ಮಾನ್ಯ' ಎಂಬ ಬಿರುದನ್ನು ಪಡೆದನು.[೧೭] ಮತ್ತಿ ತಿಮ್ಮಣ್ಣನಾಯಕನು ಕಾಲಕ್ರಮೇಣ ಸ್ವತಂತ್ರ ಪ್ರವೃತ್ತಿ ಹೊಂದಿರಬೇಕು. ಆದ್ದರಿಂದ ಅವನನ್ನು ವಿಜಯನಗರ ದೊರೆಗಳು ಬಂಧಿಸಿ ಸೆರೆಮನೆಯಲ್ಲಿಟ್ಟರು. ನಾಯಕನು ಅಲ್ಲಿಯೇ ಮರಣ ಹೊಂದಿದನು. ಆದರೆ ಚಿತ್ರದುರ್ಗ ಸಂಸ್ಥಾನಕ್ಕೆ ಅಡಿಗಲ್ಲು ಹಾಕಿದ ಶ್ರೇಯಸ್ಸು ತಿಮ್ಮಣ್ಣನಾಯಕನಿಗೆ ಸಲ್ಲುತ್ತದೆ.

ಹರಪನಹಳ್ಳಿ ನಾಯಕರೊಂದಿಗೆ ತಿಮ್ಮಣ್ಣನಾಯಕನ ಕಾಲದಲ್ಲಿದ್ದ ರಕ್ತ ಸಂಬಂಧ ಅವನ ಮಗ ಓಬಣ್ಣನಾಯಕನ ಕಾಲದಲ್ಲಿ ಮುರಿದು ಬಿದ್ದಿತು. ದುರ್ಗದ ಅಜನ್ಮ ವೈರಿಯಾಗಿ ಹರಪನಹಳ್ಳಿ ಸಂಸ್ಥಾನ

ಬೆಳೆದುಬಂದಿತು. ವಿಜಯನಗರ ಅರಸರ ಅಧೀನದಿಂದ ಹೊರಬಂದ ಓಬಣ್ಣನಾಯಕನು ಸ್ವತಂತ್ರವಾಗಿ ಅಧಿಕಾರ ನಡೆಸಿದನು.[೧೮]

ಓಬಣ್ಣನಾಯಕನ ಮಗನಾದ ೧ನೇ ಕಸ್ತೂರಿ ರಂಗಪ್ಪನಾಯಕನು ಕಾಲದಲ್ಲಿ(ಕ್ರಿ.ಶ.೧೬೦೨-೧೬೫೨) ಚಿತ್ರದುರ್ಗದ ಮೇಲೆ ಕಣ್ಣು ಹಾಕಿದ. ಸುತ್ತಮುತ್ತಲ ಪಾಳೆಯಗಾರರ ಸೊಕ್ಕನ್ನು ಮುರಿದನು. ಕ್ರಿ.ಶ.೧೬೩೫ರಲ್ಲಿ ತರೀಕೆರೆಯ ಹನುಮಪ್ಪನಾಯಕನನ್ನು ಕೈಸೆರೆ ಹಿಡಿದು 'ಗಾದ್ರಿಮಲೆ ಹೆಬ್ಬುಲಿ' ಎಂಬ ಬಿರುದನ್ನು ಧರಿಸಿದನು. ಹರಪನಹಳ್ಳಿ ಇಮ್ಮಡಿ ಬಸವಂತಪ್ಪನಾಯಕನನ್ನು ಸೋಲಿಸಿದನು. ಚಿತ್ರದುರ್ಗದ ಬೆಳವಣಿಗೆಯನ್ನು ಸಹಿಸದ ಕೆಳದಿ ಸಂಸ್ಥಾನವು ಚಿತ್ರದುರ್ಗದ ವಿರುದ್ಧ ಪ್ರಬಲ ಸ್ಪರ್ಧೆಯನ್ನುಂಟು ಮಾಡಿತು. ೧ನೇ ಕಸ್ತೂರಿರಂಗಪ್ಪನಾಯಕನ ಮಗ ಎರಡನೇ ಮದಕರಿನಾಯಕನು ಗಂಡುಗೊಡಲಿಯಿಂದ ದ್ರೋಹಿಗಳನ್ನು ಕಡಿದು ಹಾಕಿ 'ಗಂಡುಗೊಡಲಿನ ಸರ್ಜ' ಎಂಬ ಬಿರುದನ್ನು ಪಡೆದನು.[೧೯] ರಾಜಕೀಯವಾಗಿ ಪ್ರಭಾವಿತನಾದ ಕಸ್ತೂರಿರಂಗಪ್ಪನಾಯಕನು ತನ್ನನ್ನು ಅರಸನೆಂಬ ರೀತಿಯಲ್ಲಿ ಸಂಬೋಧಿಸಿಕೊಂಡು ಪಾಳೆಯಗಾರರಿಗೆ ಪತ್ರಗಳನ್ನು ಬರೆಸಿದನು. ಇವನ ಕಾಲಕ್ಕೆ ಚಿತ್ರದುರ್ಗ ೨೨ ಸೀಮೆಗಳ ಸಂಸ್ಥಾನವಾಗಿ ಬೆಳೆಯಿತಲ್ಲದೆ ಅದರ ವಾರ್ಷಿಕ ಆದಾಯ ೬೫,೦೦೦ ವರಹಗಳನ್ನು ಮುಟ್ಟಿತು.

೧ನೇ ಕಸ್ತೂರಿರಂಗಪ್ಪನಾಯಕನ ನಂತರ ಇಮ್ಮಡಿ ಮದಕರಿನಾಯಕನು ಚಿತ್ರದುರ್ಗದ ದೊರೆಯಾದನು. ತರೀಕೆರೆಯ ಪಾಳೆಯಗಾರರಾದ ಚಿಕ್ಕ ಕೆಂಗಹನುಮಪ್ಪನಾಯಕ ಮತ್ತು ಪಟ್ಟಾಭಿರಾಮಪ್ಪನಾಯಕರನ್ನು ಯುದ್ಧದಲ್ಲಿ ಸೋಲಿಸಿದನು. ಇವನ ನಂತರ ಬಂದ ಇಮ್ಮಡಿ ಓಬಣ್ಣನಾಯಕನು ಬಹಳ ದಿನ ಅಧಿಕಾರ ನಡೆಸಲಿಲ್ಲ. ಇವನ ದಳವಾಯಿಗಳು ಪಟ್ಟದ ಸಂಬಳ ಕೊಡಲಿಲ್ಲವೆಂಬ ಕಾರಣಕ್ಕೆ ಕೋಟೆಯ ಚಿಕ್ಕ ಬಾಗಿಲ ಬಳಿ ಈತನ ತಲೆಯನ್ನು ಹೊಡೆದರು. ನಂತರ ಅಧಿಕಾರಕ್ಕೆ ಬಂದ ಸೂರ್ಯಕಾಂತನಾಯಕನನ್ನು ದಳವಾಯಿಗಳು ಕೊಂದು ಹಾಕಿದರು. ದಳವಾಯಿಗಳ ಅಟ್ಟಹಾಸ ಸ್ವಲ್ಪಕಾಲವಿತ್ತು. ಆದರೆ ಕೆಲವು ಹಿತೈಷಿ ದಳವಾಯಿಗಳ ಪ್ರಯತ್ನದ ಫಲವಾಗಿ ಚಿಕ್ಕಣ್ಣನಾಯಕನು ಚಿತ್ರದುರ್ಗ ದೊರೆಯಾದನು(೧೬೭೫-೮೬). ಹಿಂದಿನ ಅರಸರಿಗಿಂತಲೂ ಚಿಕ್ಕಣ್ಣನಾಯಕನು ಅನೇಕ ಯುದ್ಧಗಳನ್ನು ಮಾಡಿದನು. ನಿಡುಗಲ್ಲು, ಹರಪನಹಳ್ಳಿ, ನಾಯಕರನ್ನು ಸೋಲಿಸಿದನು. ಮೊಗಲರ ಷೇರ್‌ಖಾನ್‌ನು ಹರಿಹರವನ್ನು ಮುತ್ತಿದಾಗ ಚಿಕ್ಕಣ್ಣನಾಯಕನು ಜಾಣತನದ ವ್ಯೂಹದೊಂದಿಗೆ ವೈರಿಯನ್ನು ಸದೆಬಡಿದನು. ರಾಯದುರ್ಗದ ಮೇಲೆ ದಾಳಿ ಮಾಡಿದನು ಹಾಗೂ ಅಲ್ಲಿನ ನಾಯಕರೊಡನೆ ರಕ್ತಸಂಬಂಧ ಬೆಳೆಸಿದನು. ನಾಯಕನಹಟ್ಟಿ ಮಲ್ಲಪ್ಪನಾಯಕನ ಮಗಳು ಮಲ್ಲವ್ವಳನ್ನು ಮದುವೆಯಾದನು. ವೀರಶೈವ ಧರ್ಮದಡಿಯಲ್ಲಿದ್ದ ಹಟ್ಟಿ ನಾಯಕರ ಮಗಳ ಪ್ರಭಾವದಿಂದ ಚಿಕ್ಕನಾಯಕನು ವೀರಶೈವಧರ್ಮವನ್ನು ಸ್ವೀಕರಿಸಿ ಲಿಂಗಧಾರಿಯಾದನು. ರಾಜಪರಿವಾರವೂ ಲಿಂಗಧರಿಸಿತು. ಆದರೆ ಕೆಲವೇ ದಿನಗಳಲ್ಲಿ ಮತ್ತೆ ಮೂಲಧರ್ಮಕ್ಕೆ ಬಂದರು. ಆದರೆ

ಹಟ್ಟಿ ಮಲ್ಲವ್ವ ನಾಗತಿ ಮಾತ್ರ ತಾನು ಧರಿಸಿದ ಲಿಂಗವನ್ನು ತೆಗೆಯದೆ ವೀರಶೈವ ಧರ್ಮದಲ್ಲಿಯೇ ಉಳಿದಳು.[೨೦] ಪೂರ್ವಕಾಲದಿಂದ ನಡೆದುಬಂದ ಆಚಾರದಂತೆ ಚಂದ್ರಾಯುಧವನ್ನು ಕಳುಹಿಸಿ ಮದುವೆ ಮಾಡಿಕೊಂಡನು. ಮಹಮದ್ ಆದಿಲ್‌ಷಾಹಿಯ ದಂಡನಾಯಕ ರಣದುಲ್ಲಾಖಾನನು ದಕ್ಷಿಣ ಕಡೆಗೆ ಮುತ್ತಿಗೆ ಹಾಕಿದಾಗ ಚಿಕ್ಕಣ್ಣನಾಯಕನು ಅವನನ್ನು ಸೋಲಿಸಿದನು.

ಚಿಕ್ಕಣ್ಣನಾಯಕನ ನಂತರ ಚಿತ್ರದುರ್ಗದ ರಾಜಕೀಯದಲ್ಲಿ ದಳವಾಯಿಗಳ ಅಟ್ಟಹಾಸ ಹೆಚ್ಚಾಯಿತು. ಮುಮ್ಮಡಿ ಮದಕರಿನಾಯಕನನ್ನು ದಳವಾಯಿ ಮುದ್ದಣ್ಣನು ಹಿಡಿದು ಮೂಗು ಕೊಯ್ದು ಸೆರೆಯಲ್ಲಿಟ್ಟು ತಾನೇ ಸರ್ವಾಧಿಕಾರಿಯೆಂದು ಕರೆದುಕೊಂಡನು. ಕೆಲವು ದಿನಗಳ ಕಾಲ ದಳವಾಯಿಗಳು ತಾವೇ ಅಧಿಕಾರವನ್ನು ನಡೆಸಿದರು. ದಳವಾಯಿಗಳು ಹೇಳಿದಂತೆ ನಡೆದುಕೊಳ್ಳದ ದೊಣ್ಣೆ ರಂಗಪ್ಪನಾಯಕನನ್ನು ದಳವಾಯಿ ಮುದ್ದಣ್ಣ ಸೆರೆಯಲ್ಲಿಟ್ಟನು. ಅವನ ಸ್ಥಾನದಲ್ಲಿ ಸೂರ್ಯಕಾಂತಿ ರಂಗಪ್ಪನಾಯಕನನ್ನು ತಂದು ತನ್ನ ಕೈಗೊಂಬೆನ್ನಾಗಿ ಮಾಡಿಕೊಂಡನು. ಕೆಲವು ದಿನಗಳ ನಂತರ ದಳವಾಯಿಗಳ ಅಧಿಕಾರದಲ್ಲಿ ಬಿರುಕುಂಟಾಯಿತು. ದಳವಾಯಿ ಭರಮಪ್ಪನು ಮುದ್ದಣ್ಣನನ್ನು ಮತ್ತು ಅವರ ಕಡೆಯವರನ್ನು ಕೊಂದು ಹಾಕಿದನು. ದೊಣ್ಣೆರಂಗಪ್ಪನಾಯಕನೊಂದಿಗೆ ಮತ್ತಿಸಂತತಿ ಕೊನೆಯಾಯಿತು.

ಮತ್ತಿ ಸಂತತಿ ದೊರೆಗಳ ನಂತರ ಚಿತ್ರದುರ್ಗವನ್ನು ಬೀಳಿಚೋಡು ಸಂತತಿ ದೊರೆಗಳು ಆಳಿದರು. ಬಿಳಿಚೋಡು ಮನೆತನಕ್ಕೆ ಸೇರಿದ ಚಿಕ್ಕಣ್ಣನಾಯಕನನ್ನು ಕರೆತಂದು ಕ್ರಿ.ಶ.೧೬೮೯ರಲ್ಲಿ ಪಟ್ಟ ಕಟ್ಟಲಾಯಿತು. ಇವನು ಬಿಚ್ಚುಗತ್ತಿ ಭರಮಣ್ಣನಾಯಕನೆಂದು ಪ್ರಸಿದ್ಧನಾಗಿದ್ದಾನೆ. ಚಿತ್ರದುರ್ಗ ಸಂಸ್ಥಾನವು ಇವನ ಕಾಲದಲ್ಲಿ ಉನ್ನತ ಶಿಖರಕ್ಕೇರಿತು. ಇವನನ್ನು ಕುರಿತು ಭರಮಣ್ಣನಾಯಕನ ಸಮರ ವಿಜಯವು ಮಾಹಿತಿ ನೀಡುತ್ತದೆ. ಅಜನ್ಮ ವೈರಿಗಳೆನಿಸಿದ್ದ ಹರಪನಹಳ್ಳಿ ಮತ್ತು ಬಿದನೂರಿನವರು ಅಣಜಿಯನ್ನು ಮುತ್ತಿದರು. ಭರಮಣ್ಣನಾಯಕನು ಮರುವರ್ಷವೇ ಹಾವನೂರು, ಗುಡೇಕೋಟೆ, ಅನಂತಪುರ, ಜರಿಮಲೆ, ತರೀಕೆರೆ ಸಂಸ್ಥಾನಿಕರ ಸಹಾಯದಿಂದ ಅಣಜಿಯನ್ನು ಮರು ಆಕ್ರಮಿಸಿಕೊಳ್ಳಲಾಯಿತು. ಬಿಜಾಪುರ ಮೊಗಲರ ವಶವಾಗಿ ಶಿರಾ ಅದರ ಕೇಂದ್ರವಾಗಿತ್ತು. ಬಸವಾಪಟ್ಟಣ ಬೂದಿಹಾಳು, ಚಿತ್ರದುರ್ಗ ಹಾಗೂ ಸುತ್ತ ಮುತ್ತಲಿನ ಪಾಳೆಯಪಟ್ಟುಗಳು ಮೊಗಲ ಸಾಮ್ರಾಜ್ಯಕ್ಕೆ ಅಧೀನವಾಗಿದ್ದವು. ಇದು ಭರಮಣ್ಣನಾಯಕನಿಗೆ ಸಹಿಸದಾಗಿತ್ತು. ಕ್ರಿ.ಶ.೧೬೯೭ರಲ್ಲಿ ಮರಾಠ ಸಂತಾಜಿ ಘೋರ್ಪಡೆ ಶಿರಾದ ಮೇಲೆ ದಾಳಿ ಮಾಡಿದನು. ಶಿರಾ ಸುಬೇದಾರ ಖಾಸಿಂಖಾನನ ಮೇಲೆ ಸೇಡು ತೀರಿಸಿಕೊಳ್ಳಲು ನಾಯಕನು ಸಂತಾಜಿಯ ಸಹಾಯಕ್ಕೆ ಸೈನ್ಯವನ್ನು ಕಳುಹಿಸಿದನು. ಖಾಸಿಂಖಾನನು ಯುದ್ಧದಲ್ಲಿ ಮರಣ ಹೊಂದಿದನು.[೨೧] ಹಾವನೂರು, ಗುಡೇಕೋಟೆ, ನಿಡಗಲ್ಲು, ನಾಯಕನಹಟ್ಟಿ, ರತ್ನಗಿರಿ, ಜರಿಮಲೆ ಹಾಗೂ ಶಿರಾದವರನ್ನು ಸೇರಿಸಿಕೊಂಡು ರಾಯದುರ್ಗದವರ ಗೌರಸಮುದ್ರಕೋಟೆಯನ್ನು ಗೆದ್ದುಕೊಂಡನು. ಕ್ರಿ.ಶ.೧೭೧೫-೧೬ರಲ್ಲಿ ನಿಡಗಲ್ಲು

ಮತ್ತು ಹರಪನಹಳ್ಳಿಯವರ ವಿರುದ್ಧ ನಡೆಸಿದ ಯುದ್ಧಗಳಲ್ಲಿ ಹಲವಾರು ಗಡಿಗಳು ದುರ್ಗದವರ ವಶವಾದವು. ಉಚ್ಚಂಗಿದುರ್ಗದಿಂದ ಉತ್ಸವಾಂಬೆ ವಿಗ್ರಹವನ್ನು ಭರಮಣ್ಣನಾಯಕನು ಚಿತ್ರದುರ್ಗಕ್ಕೆ ತಂದು ಸ್ಥಾಪಿಸಿದನು. ಭರಮಣ್ಣನಾಯಕನು ಬೇಡನಾಯಕ ಅರಸರನ್ನು ಒಂದುಗೂಡಿಸುವ ಪ್ರಯತ್ನದಲ್ಲಿ ಯಶಸ್ವಿಯಾದನೆಂದೂ, ಸ್ವಲ್ಪ ದಿನಗಳ ಕಾಲ ಬಿದನೂರಿನವರು, ಹರಪನಹಳ್ಳಿಯವರು ಮತ್ತು ಇತರ ವೈರಿಗಳು ಚಿತ್ರದುರ್ಗದ ಮೇಲೆ ಯೋಚನೆ ಮಾಡಿ ದಾಳಿ ಮಾಡುವಂತಾಯಿತು.

ಭರಮಣ್ಣನಾಯಕನ ನಂತರ ಅಧಿಕಾರಕ್ಕೆ ಬಂದವನು ಅವನ ಮಗ ಹಿರೇಮದಕರಿನಾಯಕ ಇವನು ಕ್ರಿ.ಶ.೧೭೨೧ ರಿಂದ ೧೭೪೮ರವರೆಗೆ ಆಳಿದನು. ಮೈಸೂರಿನ ದೊರೆ ದೊಡ್ಡಕೃಷ್ಣರಾಜ ಒಡೆಯರು ಇವನ ಧೈರ್ಯ, ಸಾಹಸ ಮೆಚ್ಚಿ ಕೊಡುಗೆಯನ್ನು ಕಳುಹಿಸಿದ್ದರು. ಆನೆಗೊಂದಿ, ಕನಕಗಿರಿ ನಾಯಕರ ಜೊತೆ ರಕ್ತಸಂಬಂಧ ಬೆಳೆಸಿದನು. ಕ್ರಿ.ಶ.೧೭೨೮ರಲ್ಲಿ ರತ್ನಗಿರಿ ಸೀಮೆಯ ವೇಣಕಲ್ಲು, ಇಕ್ಕನೂರು, ಕ್ರಿ.ಶ.೧೭೩೩ರಲ್ಲಿ ಗುಡೇಕೋಟೆ, ಕ್ರಿ.ಶ.೧೭೩೬ರಲ್ಲಿ ಕೊಡಗನೂರು, ಕ್ರಿ.ಶ.೧೭೩೭ರಲ್ಲಿ ಹೊಳಲು ಕೋಟೆ, ಕ್ರಿ.ಶ.೧೭೩೮ರಲ್ಲಿ ಮೈಲಾರ ಕೋಟೆಗಳನ್ನು ದುರ್ಗದವರು ವಶಪಡಿಸಿಕೊಂಡರು. ಕ್ರಿ.ಶ.೧೭೪೪-೪೮ರವರೆಗೆ ದುರ್ಗದ ಸೇನೆಯು ರಾಯದುರ್ಗದ ಸೀಮೆಯ ಮೇಲೆ ಜಗಳ ಮಾಡಿ ವಶಪಡಿಸಿಕೊಂಡ ಗ್ರಾಮಗಳಿಗೆ ಪ್ರತಿನಾಮ ಗಳನ್ನು ನೀಡಲಾಯಿತು. ಬಿದನೂರು ಆರ್ಥಿಕವಾಗಿ ಸಬಲತೆಯನ್ನು ಹೊಂದಿದ್ದರೂ ಚಿತ್ರದುರ್ಗದ ನಾಯಕರನ್ನು ಎದುರಿಸುವಷ್ಟು ಸಾಮರ್ಥ್ಯ ಹೊಂದಿರಲಿಲ್ಲ. ಚಿತ್ರದುರ್ಗ ಸೈನಿಕವಾಗಿ ಬಲಿಷ್ಠವಾಗಿತ್ತು. ಈ ಹಿನ್ನೆಲೆಯಲ್ಲಿ ಬಿದನೂರು ದೊರೆಗಳು ಚಿತ್ರದುರ್ಗದ ಮೇಲೆ ಏಕಾಂಗಿಯಾಗಿ ದಾಳಿ ಮಾಡದೇ ದುರ್ಗದ ವೈರಿಗಳನ್ನು ಸೇರಿಸಿಕೊಂಡು ಅವರ ಸಹಾಯದಿಂದ ದಾಳಿ ಮಾಡುತ್ತಿದ್ದರು.

ಹಿರೇಮದಕರಿನಾಯಕನು ಬಿದನೂರು, ಹರಪನಹಳ್ಳಿ, ರಾಯದುರ್ಗ, ಆನೆಗೊಂದಿ ಮತ್ತು ಸವಣೂರು ಸಂಸ್ಥಾನಿಕರ ವಿರುದ್ಧ ಭೀಕರ ಕದನ ನಡೆಸಲು ನಿರ್ಧರಿಸಿದನು. ಗುತ್ತಿಯ ಸಿದ್ದೋಜಿ ಮೊದಲು ನಾಯಕನಿಗೆ ಸಹಾಯ ಮಾಡಲು ಇಚ್ಛಿಸಿ ನಂತರ ವೈರಿಗಳ ಕಡೆ ಹೋದನು. ಚಂದಾಸಾಹೇಬನ ಮಗ ಅಬಿದ್ ಅಲಿಯು ಮದಕರಿನಾಯಕನ ಸಹಾಯಕ್ಕಾಗಿ ಬಂದಿದ್ದನು. ಕ್ರಿ.ಶ.೧೭೪೮ರಲ್ಲಿ ನಡೆದ ಮಾಯ ಕೊಂಡ ಕದನವು ಹಿರೇ ಮದಕರಿನಾಯಕನ ಆಸೆಯನ್ನು ವಿಫಲಗೊಳಿಸಿತು. ಈ ಯುದ್ಧದಲ್ಲಿ ಹರಪನಹಳ್ಳಿ ಸೋಮಶೇಖರನಾಯಕನು ಹಯೋಮುಖವೆಂಬ ಹೊಸಭರ್ಚಿಯಿಂದ ಚಿತ್ರದುರ್ಗ ನಾಯಕನನ್ನು ಕೊಂದನು. ಮಾಯಕೊಂಡದ ಕದನದ ವಿಫಲತೆ ಚಿತ್ರದುರ್ಗದ ಶಕ್ತಿಯನ್ನು ದುರ್ಬಲತೆಗೊಳಿಸಿತು. ಆದರೆ ಇವನ ನಂತರ ಬಂದ ಮಗ ಎರಡನೇ ಕಸ್ತೂರಿರಂಗಪ್ಪನಾಯಕನು ಮಾಯಕೊಂಡವನ್ನು ಶತ್ರುಗಳಿಂದ ಬಿಡಿಸಿಕೊಂಡು ತಂದೆಯ ಸಾವಿಗೆ ಕಾರಣರಾದವರ ಮೇಲೆ ಸೇಡು ತೀರಿಸಿಕೊಂಡನು. ಇವನ ನಂತರ ಗಂಡಿಲ ಓಬವ್ವನಾಗತಿಯು ಹೊಸ ದೊರೆ ಬರುವವರಿಗೆ ಎರಡು ವರ್ಷಗಳ ಕಾಲ ಸರ್ವಾಧಿಕಾರವನ್ನು

ನಡೆಸಿದಳು. ಇವಳ ಕಾಲದಲ್ಲಿ ರಾಜಕೀಯ ಅತಂತ್ರಸ್ಥಿತಿ ನಿರ್ಮಾಣವಾಯಿತು. ನಂತರ ಕ್ರಿ.ಶ.೧೭೫೪ ರಿಂದ ೧೭೭೯ರವರೆಗೆ ರಾಜಾವೀರ ಮದಕರಿನಾಯಕನು ಚಿತ್ರದುರ್ಗವನ್ನು ಆಳಿದನು. ಚಿತ್ರದುರ್ಗ ಚರಿತ್ರೆಯಲ್ಲಿ ಇವನ ಕಾಲ ಅತ್ಯಂತ ಪ್ರಸಿದ್ಧಿಯನ್ನು ಪಡೆದಿದೆ.

ಚಿತ್ರದುರ್ಗದ ಘನತೆ, ಮದಕರಿನಾಯಕನ ಏಳಿಗೆಯನ್ನು ಇಚ್ಛಿಸದವರು ಚಿತ್ರದುರ್ಗದ ಮೇಲೆ ದಾಳಿ ಮಾಡಿದರು. ಹರಪನಹಳ್ಳಿಯವರ ಸಹಾಯ ಪಡೆದು ದುರ್ಗದ ಗಡಿಗಳ ಮೇಲೆ ದಾಳಿ ಮಾಡಿದ. ರಾಯದುರ್ಗದವರನ್ನು ಮದಕರಿನಾಯಕನು ಸಮರ್ಥವಾಗಿ ಎದುರಿಸಿದನು. ಕ್ರಿ.ಶ.೧೭೬೧ರಲ್ಲಿ ಜರಿಮಲೆ ಮತ್ತು ತರೀಕೆರೆಯವರ ಹಾವಳಿಯನ್ನು ಅಡಗಿಸಿದನು. ಈ ಸಮಯದಲ್ಲಿ ಮೈಸೂರು ರಾಜ್ಯವನ್ನು ತನ್ನ ಕೈಯಲ್ಲಿಟ್ಟುಕೊಂಡು, ಸರ್ವಾಧಿಕಾರಿಯಾಗಿ ಅಧಿಕಾರ ನಡೆಸುತ್ತಿದ್ದ ಹೈದರಾಲಿಯು ಮದಕರಿನಾಯಕನ ಜೊತೆ ಸ್ನೇಹ ಬಯಸಿದನು. ಚಿತ್ರದುರ್ಗದ ಬೇಡರ ಪಡೆ ಹಾಗೂ ದೊರೆಗಳ ಸಾಹಸ, ಧೈರ್ಯವನ್ನು ಹೈದರಾಲಿ ಜಾಣತನದಿಂದ ಗ್ರಹಿಸಿದ್ದನು. ಹೈದ್ರಾಬಾದ್‌ನಿಂದ ಸಂಪತ್ತನ್ನು ಲೂಟಿ ಮಾಡಿಕೊಂಡು ಬರುವಲ್ಲಿ ೩೦೦ ಬೇಡ ತರುಣರು[೨೨] ತೋರಿದ ಸಾಹಸವನ್ನು ಹೈದರಾಲಿಯು ಮರೆತಿರಲಿಲ್ಲ. ಅವನು ತನ್ನ ಸೈನ್ಯದಲ್ಲಿ ಅನೇಕ ಬೇಡರನ್ನು ಸೈನಿಕರನ್ನಾಗಿ ನೇಮಕ ಮಾಡಿಕೊಂಡಿದ್ದನು. ಕ್ರಿ.ಶ.೧೭೫೦ರಲ್ಲಿ ಬೇಡ ಸೈನಿಕರಿಂದಲೇ ಜಿಂಜಿಯನ್ನು ಗೆದ್ದನು. ಬೇಡ ಸೈನಿಕ ಪಡೆಯಿಂದ ಬೇಡ ದೊರೆಗಳನ್ನೇ ಗೆದೆಯುತ್ತಿದ್ದನು.[೨೩] ಪಾಳೆಯಗಾರರ ಅಧಿಕಾರ ಮತ್ತು ಆರ್ಥಿಕ ಸಂಪತ್ತನ್ನು ಹೈದರಾಲಿ ಕೊಳ್ಳೆಹೊಡೆದನು. ಪಾಳೆಯಗಾರರಿಂದ ಹೈದರಾಲಿಗೆ ಪೇಷ್ಕಣಿ ಹಣ ೨೦,೦೦,೦೦೦ (ಇಪ್ಪತ್ತು ಲಕ್ಷ) ವರಹಗಳಷ್ಟು ಬರುತ್ತಿತ್ತು.[೨೪] ಹೈದರಾಲಿ ಮತ್ತು ಮದಕರಿನಾಯಕರು ಒಂದು ಕಾಲಕ್ಕೆ ತುಂಬಾ ಆತ್ಮೀಯರಾಗಿದ್ದರು. ಹೈದರಾಲಿ ತನಗೆ ಅಸಾಧ್ಯವಾದ ಯುದ್ಧಗಳನ್ನು ಮದಕರಿನಾಯಕನ ಸಹಾಯದಿಂದ ಗೆದ್ದುಕೊಂಡನು. ಬಂಕಾಪುರ, ನಿಡಗಲ್ಲು ಮತ್ತು ನಿಜಗಲ್ಲುದುರ್ಗಗಳನ್ನು ಗೆಲ್ಲುವುದು ಹೈದರಾಲಿಗೆ ಅಸಾಧ್ಯವಾದಾಗ ಮದಕರಿನಾಯಕನು ಈ ದುರ್ಗಗಳನ್ನು ಗೆದ್ದು ಹೈದರಾಲಿಗೆ ಕೊಟ್ಟನು. ಕ್ರಿ.ಶ.೧೭೬೩ರಲ್ಲಿ ಮದಕರಿನಾಯಕನು ಹೈದರಾಲಿ ಪರವಾಗಿ ಬಿದನೂರಿನ ಮೂರನೇ ಸೋಮಶೇಖರನಾಯಕನ ವಿರುದ್ಧ ಹೋರಾಡಿದನಲ್ಲದೆ ಬಿದನೂರನ್ನು ಗೆದ್ದು ಹೈದರಾಲಿಗೆ ಬಿಟ್ಟುಕೊಟ್ಟನು. ಮದಕರಿನಾಯಕನ ಸಾಹಸ, ಬೆಳವಣಿಗೆಯನ್ನು ನೋಡಿದ ಹೈದರಾಲಿ ಮುಂದೆ ನಾಯಕನೇನಾದರೂ ನನಗೆ ವಿರುದ್ಧವಾಗಿ ನಿಂತರೆ ಎಂಬ ಯೋಚನೆ ಮಾಡಿದನು ಮತ್ತು ಮದಕರಿನಾಯಕನನ್ನು ತನ್ನ ಕೈವಶದಲ್ಲಿಟ್ಟುಕೊಳ್ಳುವ ಹುನ್ನಾರ ಮಾಡಿದನು. ಈ ನಡುವೆ ಮದಕರಿನಾಯಕನ ಬೆಳವಣಿಗೆಯನ್ನು ನೋಡಿದ ಮರಾಠರು ಮದಕರಿಯ ಸ್ನೇಹ ಬಯಸಿ ಬಂದರು. ಆಗ ಕ್ರಿ.ಶ. ೧೭೬೪ರಲ್ಲಿ ಹೈದರಾಲಿ ಮತ್ತು ಪೇಶ್ವೆ ಮಾಧವರಾಯನಿಗೂ ಕದನವೇರ್ಪಟ್ಟಿತು. ಮದಕರಿನಾಯಕನು ಪೇಶ್ವೆ ಮಾಧವರಾಯನಿಗೆ ಸಹಾಯ ಮಾಡಿದನು. ಮಾಧವರಾಯನು ತನ್ನಿಂದ

ಸಾಧಿಸಲು ಅಸಾಧ್ಯವಾದ ಹಾಗೂ ಹೈದರಾಲಿಗೆ ಸೇರಿದ್ದ ಸಾವನದುರ್ಗ, ಹುತ್ತರಿದುರ್ಗಗಳನ್ನು ಮದಕರಿ ನಾಯಕನ ಸಹಾಯದಿಂದ ಗೆದ್ದುಕೊಂಡನು. ಇದರಿಂದಾಗಿ ಹೈದರಾಲಿ ಮತ್ತು ಮದಕರಿನಾಯಕನೊಡನೆ ಸಂಬಂಧ ಕೆಟ್ಟು ಹೋಯಿತು. ಕ್ರಿ.ಶ. ೧೭೬೨ರಲ್ಲಿ ಮೊದಲ ಬಾರಿಗೆ ಹೈದರಾಲಿ ಚಿತ್ರದುರ್ಗದ ಮೇಲೆ ದಂಡೆತ್ತಿ ಬಂದನು. ದುರ್ಗದ ಪ್ರಮುಖ ಗಡಿದುರ್ಗಗಳನ್ನು ತೆಗೆದುಕೊಂಡು ಠಾಣ್ಯ ಹಾಕಿದನು. ಆಗ ಮದಕರಿನಾಯಕನು ಹೈದರಾಲಿಗೆ ಎರಡುವರೆ ಲಕ್ಷ ವರಹಗಳನ್ನು ಕೊಡುವುದರೊಡನೆ ಸಂಧಾನ ಮಾಡಿಕೊಂಡು ಗಡಿದುರ್ಗಗಳನ್ನು ಮತ್ತೆ ಬಿಡಿಸಿಕೊಂಡಿದ್ದನು. ಕ್ರಿ.ಶ.೧೭೭೪ರಲ್ಲಿ ಎರಡನೇ ಬಾರಿಗೆ ಕ್ರಿ.ಶ.೧೭೭೭ರಲ್ಲಿ ಮೂರನೇ ಬಾರಿಗೆ ಮತ್ತು ಕ್ರಿ.ಶ.೧೭೭೯ ಫೆಬ್ರವರಿಯಲ್ಲಿ ನಾಲ್ಕನೇ ಬಾರಿಗೆ ಚಿತ್ರದುರ್ಗದ ಮೇಲೆ ದಾಳಿ ಮಾಡಿದನು. ನಾಲ್ಕು ತಿಂಗಳುಗಳ ಕಾಲ ಸತತ ಹೋರಾಟವನ್ನು ಮುಂದುವರೆಸಿದ ಹೈದರಾಲಿಯ ಸಹಾಯಕ್ಕೆ ರಾಯದುರ್ಗ, ಹರಪನಹಳ್ಳಿ, ಸವಣೂರು, ಕಡಪ, ಕನಕಗಿರಿ ಮೊದಲಾದ ಸಂಸ್ಥಾನಿಕರು ಸೈನ್ಯದೊಂದಿಗೆ ಬಂದಿದ್ದರು. ಕನಕಗಿರಿ, ಆದವಾನಿ ಮತ್ತು ಜರಿಮಲೆ ಪಾಳೆಯಗಾರರು ಮೊದಲೆರಡು ದಾಳಿಗಳ ಸಂದರ್ಭದಲ್ಲಿ ಮದಕರಿನಾಯಕನ ಪರವಾಗಿ ಹೋರಾಡಿದ್ದರು.[೨೫] ಆದರೆ ಹೈದರಾಲಿ ಇವರಿಗೆ ಆಸೆ ಆಮಿಷ ತೋರಿಸಿ ತನ್ನ ಕಡೆಗೆ ಸೆಳೆದುಕೊಂಡನು. ಮರಾಠರು ಮತ್ತು ಮದಕರಿನಾಯಕನ ಸೈನ್ಯದಲ್ಲಿದ್ದ ಮಹಮ್ಮದೀಯ ಸರದಾರರನ್ನು ತನ್ನ ಪಕ್ಷದವರನ್ನಾಗಿ ಮಾಡಿಕೊಂಡನು.[೨೬] ಮದಕರಿನಾಯಕನ ದಾಯಾದಿ, ಚಿತ್ರದುರ್ಗ ಸಿಂಹಾಸನದ ಆಕಾಂಕ್ಷಿ ದೊಡ್ಡ ಮದಕರಿನಾಯಕನು ಹೈದರಾಲಿಗೆ ಬೆಂಬಲ ನೀಡಿದನು. ತಮ್ಮ ಜನಾಂಗದವರು, ತಮ್ಮ ಸಂಬಂಧಿಗಳೇ ಮದಕರಿನಾಯಕನಿಗೆ ದ್ರೋಹ ಬಗೆದಿದ್ದುದರಿಂದ ಮದಕರಿನಾಯಕನು ಸಂದಿಗ್ಧ ಸ್ಥಿತಿಗೆ ಸಿಲುಕಿದನು. ದುರ್ಗದ ಕಳ್ಳಗಿಂಡಿಯ ಮೂಲಕ ಒಳನುಸುಳಿದ ಹೈದರಾಲಿಯ ಸೈನಿಕರ ಜೊತೆ ರಾಯದುರ್ಗದವರೂ ಇದ್ದರು. ಮದಕರಿನಾಯಕನು ಎಷ್ಟೇ ಸಾಹಸ, ಧೈರ್ಯ ತೋರಿ ಹೋರಾಡಿದನಾದರೂ ಅನಿವಾರ್ಯವಾಗಿ ಹೈದರಾಲಿಯ ಸೆರೆಯಾಳು ಆಗಬೇಕಾಯಿತು. ಕ್ರಿ.ಶ.೧೭೭೯ ಮಾರ್ಚ್ ೨೪ರಂದು ಚಿತ್ರದುರ್ಗ ಪತನವಾಯಿತು. ದುರ್ಗವನ್ನು ಗೆದ್ದ ಹೈದರಾಲಿಯು ಮದಕರಿನಾಯಕನನ್ನು ಮತ್ತು ಅವನ ಸಂಬಂಧಿಕರನ್ನು ಸೆರೆಯಾಳುಗಳನ್ನಾಗಿ ಮಾಡಿಕೊಂಡು ಶ್ರೀರಂಗಪಟ್ಟಣಕ್ಕೆ ಕಳುಹಿಸಿಕೊಟ್ಟನು. ನಂತರ ಷೇಕ್ ಆಯಾಜ್ ಚಿತ್ರದುರ್ಗದ ಸುಬೇದಾರನನ್ನಾಗಿ ನೇಮಕ ಮಾಡಿದನು. ಹೈದರಾಲಿಯು ತನ್ನ ಸೈನ್ಯವನ್ನು ಬೆಚ್ಚುಬೆರಗುಗೊಳಿಸಿದ ದುರ್ಗದ ಸೈನ್ಯದಲ್ಲಿನ ೨೦,೦೦೦ ಬೇಡ ತರುಣರನ್ನು ಬಂಧಿಸಿ, ಶ್ರೀರಂಗಪಟ್ಟಣಕ್ಕೆ ಕಳುಹಿಸಿಕೊಟ್ಟನು. ಆಮೇಲೆ ಅವರನ್ನೆಲ್ಲಾ ಮುಸಲ್ಮಾರನ್ನಾಗಿ ಮಾಡಿ ತನ್ನ ಸೈನ್ಯದಲ್ಲಿ ಯೋಧರನ್ನಾಗಿ ಮಾಡಿಕೊಂಡನು. ಈ ಯೋಧ ಪಡೆಯನ್ನು 'ಚೇಲಾಪಡೆ' ಎಂದು ಕರೆಯಲಾಗುತ್ತಿತ್ತು.[೨೭] ಹೈದರಾಲಿ ಸೈನ್ಯದಲ್ಲಿ ೨,೬೦,೦೦೦ ಚೇಲಾಪಡೆ ಇತ್ತು.[೨೮] ಮದಕರಿನಾಯಕನ ಖಜಾನೆಯಲ್ಲಿದ್ದ ೭೦ ಲಕ್ಷಕ್ಕಿಂತ ಹೆಚ್ಚಾಗಿ ಬೆಳ್ಳಿ, ಬಂಗಾರದ ನಾಣ್ಯಗಳು

ಹೈದರಾಲಿಯ ವಶವಾದವು. ಮದಕರಿನಾಯಕನ ತಮ್ಮ ಪರಶುರಾಮನಾಯಕ, ಮಗ ಕುಮಾರ ಭರಮಪ್ಪ ನಾಯಕರನ್ನು ಕಬ್ಬಾಳದುರ್ಗಕ್ಕೆ ಸಾಗಿಸಿ ಅಲ್ಲಿ ಸೆರೆಯಲ್ಲಿಡಲಾಯಿತು. ಇವರು ಒಂದು ರಾತ್ರಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಾಗ ಹೈದರಾಲಿ ಸೈನಿಕರ ಕೈಗೆ ಸಿಕ್ಕಿಬಿದ್ದರು. ಅವರನ್ನು ಬೈರಾಪಟ್ಟಣ ಎಂಬ ಊರಿನ ಬಳಿ ಆಲದ ಮರವೊಂದಕ್ಕೆ ನೇಣು ಹಾಕಿ ಕೊಲ್ಲಲಾಯಿತು. ಹಾಗೂ ಮದಕರಿನಾಯಕನಿಗೆ ವಿಷವನ್ನಿಕ್ಕಿ ಕೊಲ್ಲಲಾಯಿತು.[೫೯] ಚಿತ್ರದುರ್ಗ ಪಾಳೆಯಗಾರರ ಅನರ್ಘ್ಯರತ್ನವೊಂದು ಚರಿತ್ರೆ ಪುಟದಲ್ಲಿ ಸೇರಿ ಹೋಯಿತು.

ವಿಜಯನಗರೋತ್ತರ ಕಾಲದಲ್ಲಿ ಚಿತ್ರದುರ್ಗ ನಾಯಕರು ಸಾಕಷ್ಟು ತೊಂದರೆಗಳನ್ನು ಅನುಭವಿಸಿದರು. ಅದರಲ್ಲೂ ವಿಶೇಷವಾಗಿ ರಕ್ತಸಂಬಂಧಿ ಸಂಸ್ಥಾನಿಕರಿಂದಲೇ ಹೆಚ್ಚಿನ ತೊಂದರೆಗೊಳಗಾದರು. ಚಿತ್ರದುರ್ಗ ನಾಯಕರು ಸೇನಾ ಬಲದಲ್ಲಿ ಬಲಿಷ್ಠರಾಗಿದ್ದರು. ಆದರೆ, ರಾಜಕೀಯ ತಂತ್ರಗಾರಿಕೆಯನ್ನು ಅರಿತಿರಲಿಲ್ಲ. ಅವರು ನ್ಯಾಯಯುತವಾಗಿ ಯುದ್ಧ ಮಾಡುತ್ತಿದ್ದರು. ಮೋಸದಿಂದ ವೈರಿಗಳನ್ನು ಕೊಲ್ಲುವುದು ನಾಯಕರಿಗೆ ಸಲ್ಲದ ವಿಷಯವಾಗಿತ್ತು. ಮಾಡು ಇಲ್ಲವೆ ಮಡಿ ಎಂಬುದು ಅವರ ರಣನೀತಿಯಾಗಿತ್ತು. ದುರ್ಗದ ಪಾಳೆಯಗಾರರು ಕೇವಲ ಪುಂಡ ಪಾಳೆಯಗಾರರಾಗಿರದೇ ಶ್ರೇಷ್ಠ ರಾಜಗುಣಗಳನ್ನು, ಗಾಂಭಿರ್ಯವನ್ನು ಹೊಂದಿದ್ದರು. ಅನೇಕ ಜನಪರ ಕೆಲಸಗಳನ್ನು ಕೈಗೊಂಡಿದ್ದರು. ಕರ್ನಾಟಕದ ಇತಿಹಾಸದಲ್ಲಿ ಸಾಹಸದ ದಿನಗಳನ್ನು, ಹೋರಾಟದ ಕೆಚ್ಚನ್ನು ಕಾಣುವುದಾದರೆ ಅದು ಚಿತ್ರದುರ್ಗದ ನಾಯಕರಲ್ಲಿ ಮಾತ್ರ. ಪ್ರತಿಯೊಂದು ಯುದ್ಧ ಹಾಗೂ ಸಹಾಯಗಳಲ್ಲಿ ಅವರದು ಎತ್ತಿದ ಕೈ. ಗೆರಿಲ್ಲಾ ಯುದ್ಧ ಕಲೆಯಲ್ಲಿ ಪಳಗಿದ ಇವರ ಖಾಸ ಬೇಡರ ಪಡೆಯು ಕರ್ನಾಟಕ ಸೇನಾ ಇತಿಹಾಸದಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಗಂಡುಮೆಟ್ಟಿನ ಚಿತ್ರದುರ್ಗದ ಏಳುಸುತ್ತಿನ ಕೋಟೆ ಪಾಳೆಯಗಾರರ ಬಲಿಷ್ಠತೆ ಹಾಗೂ ಧೈರ್ಯದ ಸಂಕೇತವಾಗಿದೆ.

ಎಲ್ಲಾ ಪಾಳೇಪಟ್ಟುಗಳು ಹೈದರನ ರಾಜ್ಯವಿಸ್ತಾರದ ನೀತಿಗೆ ಬಲಿಯಾದವು. ಹೈದರನ ಆಪ್ತ ಸಚಿವರಾದ ಬರಕೀ ಶ್ರೀನಿವಾಸರಾಯರು, ಮೀರಾಸಾಹೇಬರು, ಪೂರ್ಣಯ್ಯನವರು ನೀಡಿದ ಸಲಹೆಯಂತೆ ಹೈದರನು ಆಶ್ರಿತ ಪಾಳೆಯಗಾರರಿಗೆಲ್ಲ ಪತ್ರ ಬರೆಯಿಸಿ ದುರ್ಗದ ಸುತ್ತಮುತ್ತಲ ಹಳ್ಳಿಗಳನ್ನು ಸುಲಿದು ಸುಡುತ್ತಾ ಪ್ರಜೆಗಳನ್ನು ವಂಚಿಸಿ ತಮ್ಮ ಪಕ್ಷಕ್ಕೆ ಸೇರಿಸಿಕೊಂಡು ತನ್ನ ಪಕ್ಷವಹಿಸಿ ಬಂದವರಿಗೆ ಇನಾಂ ಭೂಮಿ ಕಾಣಿಕೆ ಮೊದಲಾದವುಗಳನ್ನು ಕೊಡುತ್ತಾ ತುಂಗಾಭದ್ರಾ ತೀರದಲ್ಲಿ ಕಾವಲಿಟ್ಟು(ಮರಾಠರು ಬರದಂತೆ) ದುರ್ಗವನ್ನು ಹಿಡಿದುಕೊಂಡಿದ್ದನು.[೬೦] ಚಿತ್ರದುರ್ಗವು ಹೈದರಾಲಿಯ ವಶಕ್ಕೆ ಬಂದ ನಂತರ ಒಂದು ವರ್ಷ ಕಾಲ ಪರಿವಾರ ಸಮೇತ ಚಿತ್ರದುರ್ಗದಲ್ಲಿ ಅರಮನೆಯನ್ನು ಕಟ್ಟಿಸಿಕೊಂಡು ಸುಖವಾಗಿದ್ದನು. ಅಲ್ಲದೆ ಚಿತ್ರದುರ್ಗಕ್ಕೆ 'ಫರ್ರುಕಾಬಾದ್' ಎಂಬ ಹೊಸ ಹೆಸರಿಟ್ಟನು.[೬೧] ಚಿತ್ರದುರ್ಗ ಸೀಮೆಗಳಲ್ಲಿನ

ದೇವರುಗಳಿಗೆ ಕೊಟ್ಟಿದ್ದ ಜಹಗೀರು ಮತ್ತು ಮಾನ್ಯ ಮಾಡಿದ ಗ್ರಾಮಗಳಲ್ಲಿ ಭೂಮಿ ಕಾಣಿಕೆಗಳೂ ಸಂಸ್ಥಾನಕ್ಕೆ ಸೇರಿಸಲ್ಪಟ್ಟವು. ಊರಿನ ಮಧ್ಯಭಾಗದಲ್ಲಿ ಮುಸಲ್ಮಾನರಿಗಾಗಿ ದೊಡ್ಡದಾದ ಜುಮ್ಮಾ ಮಸೀದಿ ನಿರ್ಮಾಣ ಕಾರ್ಯವನ್ನು ಆರಂಭ ಮಾಡಿದನು. ಈ ಮಸೀದಿ ನಿರ್ಮಾಣದಲ್ಲಿ ಉತ್ಸಾವಾಂಬ ದೇವಾಲಯದ ಶಿಲೆಗಳನ್ನು ಬಳಸಿಕೊಂಡನು.

ಹೈದರಾಲಿಯನ್ನು ದ್ವೇಷಿಸುವುದು ವೃಥಾ ವ್ಯರ್ಥವೆಂದು ಭಾವಿಸಿದ ದೊಡ್ಡಮದಕರಿನಾಯಕನು ಹೈದರನ ಸೇನೆಯಲ್ಲಿ ತಿಂಗಳಿಗೆ ಮುನ್ನೂರು ರೂಪಾಯಿ ಸಂಬಳದ ಮೇಲೆ ಸಾವಿರ ಸೇನೆಯ ಸರದಾರನಾಗಿ ನಿಯಮಿತನಾದನು. ಹೈದರಾಲಿಯು ಅರ್ಕಾಟಿನ ಮೇಲೆ ದಂಡೆಯಾತ್ರೆ ಹೊರಟಾಗ ಅವನ ಜೊತೆ ದೊಡ್ಡಮದಕರಿನಾಯಕ ಹೋಗಿ ಕರ್ನಲ್ ಬೇಲಿಯ ಸಂಗಡ ತಿರುಚನಾಪಳ್ಳಿ, ಕಡಪ ಮತ್ತು ವೆಲ್ಲೂರಗಳಲ್ಲಿ ನಡೆದ ಕಾಳಗದಲ್ಲಿ ಧೀರತನದಿಂದ ಹೋರಾಡಿ ಹೈದರಾಲಿಗೆ ಗೆಲುವು ತಂದನು. ಹೈದರಾಲಿಯು ಸಂತೋಷಗೊಂಡು ದೊಡ್ಡಮಧಕರಿನಾಯಕನ ಸಂಬಳವನ್ನು ೩೦೦ ರಿಂದ ೫೦೦ರೂಗಳಿಗೆ ಹೆಚ್ಚಿಸಿದನು. ಕಲ್ಲಿಕೋಟೆ ಸೀಮೆಯಲ್ಲಿ ಮಾಪಿಳ್ಳೆ ದಂಗೆಯನ್ನು ಎದುರಿಸಲು ಹೋದ ಹೈದರಾಲಿ ಮತ್ತು ಮದಕರಿನಾಯಕರ ಜಂಟಿ ಸೈನ್ಯವನ್ನು ಇಂಗ್ಲಿಷ್ ಸೈನ್ಯವು ಅಡ್ಡಗಟ್ಟಿತು. ಅಲ್ಲದೆ ಆಗ ನಡೆದ ಹೋರಾಟದಲ್ಲಿ ಇಬ್ಬರೂ ಗಾಯಗೊಂಡರು. ಈ ಸುದ್ದಿ ತಿಳಿದು ಬಂದ ಟಿಪ್ಪೂ ಸೋತು ರಾಜಧಾನಿಗೆ ಹಿಂದಿರುಗಬೇಕಾಯಿತು. ಆದರೆ ಈ ಸಮಯದಲ್ಲಿ ದೊಡ್ಡಮದಕರಿನಾಯಕನು ತನ್ನ ಧೀರತನವನ್ನು ಪ್ರದರ್ಶಿಸಿ ೫೦೦ ಕಾಲ್ಬಳದೊಡನೆ ರಣರಂಗದಲ್ಲಿಯೇ ನಿಂತು ಹಿಂಬಾಲಿಸುತ್ತಿದ್ದ ಬ್ರಿಟಿಷ್ ಅಪಾರ ಸೈನ್ಯವನ್ನು ಅಡ್ಡಗಟ್ಟಿ ಹೋರಾಡಿ ೨೨ ಬ್ರಿಟೀಷ್ ಸೈನಿಕರನ್ನು ಸೆರೆಹಿಡಿದನು. ೧೬ ಬ್ರಿಟೀಷರ ತಲೆ ಬುರುಡೆಗಳನ್ನು ಹಿರೇಮದಕರಿನಾಯಕ ತೆಗೆದುಕೊಂಡು ಬಂದು ಟಿಪ್ಪುವಿಗೆ ನೀಡಿದನು. ಟಿಪ್ಪು ಸಂತೋಷಗೊಂಡು ತಂದ ತಲೆಯೊಂದಕ್ಕೆ ೨೦ ರೂಪಾಯಿಯಂತೆ ಸೆರೆಯಾಳಿಗೆ ೨೫ ರೂಪಾಯಿಯಂತೆ ಬಹುಮಾನ ಕೊಟ್ಟನು ಹಾಗೂ ಚಿನ್ಮೂಲಾದ್ರಿ ಒಡೆತನವನ್ನು ಮರಳಿ ಕೊಡುವುದಾಗಿ ವಾಗ್ದಾನ ಮಾಡಿದನು.

ಕಂದಚಾರ ಇಲಾಖೆಯಲ್ಲಿ ಮೊದಲು ಭಕ್ಷಿಯಾಗಿ, ನಂತರ ಕಲ್ಲಿಕೋಟೆಯ ಅಧಿಕಾರಿಯಾಗಿ ತಮ್ಮ ಕುಮಾರ ಜಂಪಳನಾಯಕರೊಂದಿಗೆ ಸುಖದಿಂದ ಇದ್ದ ಹಿರೇಮದಕರಿನಾಯಕನ ಏಳಿಗೆಯನ್ನು ಸಹಿಸದ ಕೆಲವು ಜನ ಅಧಿಕಾರಸ್ಥ ಬ್ರಾಹ್ಮಣರು ಟಿಪ್ಪೂವಿಗೆ ಹೇಳಿದ್ದು ಹೀಗೆ ಈತನೇ ದುರ್ಗದಲ್ಲಿ ನಿಂತು ಪಟ್ಟವಾಳಿದವನು ಮತ್ತು ಫವಜಿನ ಮೇಲೆ ಸರದಾರರಾಗಿದ್ದು ಅನೇಕ ವರ್ಷಗಳವರೆಗೆ ನಿಮ್ಮನ್ನು ಸಹಾಯಿಸಿದವನು. ಹಿರಮದಕರಿನಾಯಕನು ಈತನೂ ದಾಯಾದಿಗಳಾಗಬೇಕು ಹೀಗಿರುವಲ್ಲಿ ನೀವು ವಿಶ್ವಾಸವಿಟ್ಟು ದೊಡ್ಡ ಕೆಲಸವನ್ನು ಕೊಟ್ಟು ಸಹಾಯಕ್ಕೆ ಕೈಸಾತಿಗೊ ಆತನ ಸೀಮೆಯವರನ್ನೇ ಹಾಲಿ

ಸರಕಾರಿ ಚೇಲಗಳಾಗಿರುವವರನ್ನು ಕೊಟ್ಟು ಪ್ರಾಬಲ್ಯಕ್ಕೆ ತಂದರೆ ಹಿಂದಿನ ದ್ವೇಷ ಮನಸ್ಸಿನಲ್ಲಿಟ್ಟು ಸಮಯ ನಿರೀಕ್ಷಣೆ ಮಾಡಿ ಪುನಃ ನಿಮ್ಮನ್ನು, ನಿಮ್ಮನ್ನು ಆಶ್ರಯಿಸಿದ ನಮ್ಮನ್ನು ದೇಶವನ್ನು ಹಾಳು ಮಾಡಿ ತನ್ನ ರಾಜ್ಯವನ್ನು ಸಾಧಿಸಿಕೊಳ್ಳುತ್ತಾನೆ. ಹಾವಿನ ಮರಿಗೆ ಹಾಲುಕೊಟ್ಟು ರಕ್ಷಿಸಿದಂತಾಗುವುದು. ಇವನನ್ನು ಉಪಾಯದಿಂದ ಕೊಲ್ಲಿಸಿ ಬಿಟ್ಟಲ್ಲಿ ಮೂಲವನ್ನೇ ಕಡಿದು ಹಾಕಿದಂತಾಗುತ್ತದೆ ಎಂದು ಮುಂತಾಗಿ ಬೋಧಿಸಿದರು. ಇದರಿಂದ ಎಚ್ಚೆತ್ತ ಟಿಪ್ಪುಸುಲ್ತಾನನು ಕಲ್ಲಿಕೋಟೆಯಿಂದ ದೊಡ್ಡಮದಕರಿ ನಾಯಕನನ್ನು ತನ್ನಲ್ಲಿಗೆ ಕರೆಸಿಕೊಂಡು ಅವನ ಸ್ಥಳದಲ್ಲಿ ಮಹಮ್ಮದ್‌ಭಕ್ಷಿಯನ್ನು ನೇಮಕ ಮಾಡುವ ಮೂಲಕ ದೊಡ್ಡಮದಕರಿನಾಯಕನ ಬೆಳವಣಿಗೆಗೆ ಅಡ್ಡಿಯಾದನು.[೩೨]

ಸುಲ್ತಾನನ ಮನೋಗತವನ್ನು ತಿಳಿದ ಹಿರೇಮದಕರಿನಾಯಕನು ತನ್ನ ಮಗನನ್ನು, ಆಪ್ತೇಷ್ಟರನ್ನು ಕೊಚ್ಚಿ ದೇಶಕ್ಕೆ ಕಳುಹಿಸಿ, ತಾನು ತಪ್ಪಿಸಿಕೊಂಡು ತಿರುವಂತಪುರದ ಕಿರೀಟಪತಿರಾಮವರ್ಮ ಮಹಾರಾಜನ ಆಶ್ರಯ ಪಡೆದುಕೊಂಡನು. ನಂತರ ಟಿಪ್ಪುಸುಲ್ತಾನನ್ನು ಒಮ್ಮೆ ಸೋಲಿಸಿ ಅವನಿಂದ ಕಠಾರಿ ಪಲ್ಲಕ್ಕಿ ಮೊದಲಾದವುಗಳನ್ನು ಕಿತ್ತುಕೊಂಡು ಬಂದನು. ಇದರಿಂದ ಸಂತೋಷಗೊಂಡ ಕಿರೀಟಪತಿಗಳು ಮದಕರಿನಾಯಕನಿಗೆ ವಾಸಕ್ಕೆಂದು ಮನೆ, ತಿಂಗಳೊಂದಕ್ಕೆ ಆನಂದರಾಯಿ ವರಹ ೧೭೦ ಸಂಬಳವನ್ನು, ಮುನ್ನೂರು ಜನರಿಗಾಗುವಷ್ಟು ಅವ್ವಲ್ ರಾತೀಪು ಅಂದರೆ ಖಾಸಪತಿಯನ್ನು, ನೌಕರಿ ಉದ್ದೇಶಕ್ಕಾಗಿ ೫೦೦ ಜನ ಕರ್ನಾಟಕದವರನ್ನು, ವಿಶೇಷವಾಗಿ ಅಮೂಲ್ಯವಾದ ಖಿಲ್ಲತ್ತುಗಳನ್ನು ಸಹ ಕೊಟ್ಟು ರಕ್ಷಣೆ ಮಾಡಿದನು. ಈ ನಾಯಕನ ಕುಮಾರನಾದ ಜಂಪಳನಾಯಕನೇ ಚಿತ್ರದುರ್ಗದ ಸಂಸ್ಥಾನಕ್ಕೆ ಭಾವೀ ಪಟ್ಟಾಧಿಕಾರಿ ಎಂದು ಪಟ್ಟಾಭಿಷೇಕ ಮಾಡಿಸಿದನು. ಹೀಗೆ ಹಿರೇಮದಕರಿನಾಯಕನು ಸುಖವಾಗಿ ಮಹಾರಾಜ ಕಿರೀಟರಾಮರಾಜನಲ್ಲಿ ೧೦ ವರ್ಷಗಳ ಕಾಲ ಇದ್ದರು.[೩೩]

ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದ ಸಮಯಕ್ಕಾಗಲೇ ಬ್ರಿಟಿಷರು ಟಿಪ್ಪುಸುಲ್ತಾನನ್ನು ಸೋಲಿಸುವ ಎಲ್ಲಾ ಮಾರ್ಗೋಪಾಯಗಳನ್ನು ಮಾಡಿಕೊಂಡು ಸಂತೋಷದಿಂದ್ದರು ಟಿಪ್ಪುವಿನ ವಿರುದ್ಧವಾಗಿ ಸ್ಥಳೀಯ ಅರಸರ ಒಂದು ಒಕ್ಕೂಟವನ್ನೇ ರಚಿಸಿದರು. ಈ ಸಮಯದಲ್ಲಿ ತಿರುವನಂತಪುರದ ಕಿರೀಟಪತಿ ರಾಜನು ಹಿರೇಮದಕರಿನಾಯಕನನ್ನು ಕುರಿತು ನೀನು ಬ್ರಿಟೀಷರ ಪರವಾಗಿ ಟಿಪ್ಪುವಿನ ವಿರುದ್ಧ ಸಹಾಯ ಮಾಡಿದರೆ ನಿನಗೆ ನಿಮ್ಮ ರಾಜ್ಯವನ್ನು ಬಿಟ್ಟುಕೊಡಲು ಇಂಗ್ಲೀಷ್‌ನವರಿಗೆ ಶಿಫಾರಸ್ಸು ಮಾಡುವುದಾಗಿ ಹೇಳಿದನು. ಆ ಸಂದರ್ಭದಲ್ಲಿ ಆಂಗ್ಲ ಸೇನಾನಿ ಜನರಲ್ ಹ್ಯಾರಿಸ್‌ನು ಅತೃಪ್ತ ಪಾಳೆಯಗಾರರಿಗೆ ಸರದಾರರಿಗೆ, ಇತರ ಮುಖ್ಯಸ್ಥರಿಗೆ ಪತ್ರಗಳನ್ನು ಬರೆಯುವ ಮೂಲಕ ಟಿಪ್ಪೂವಿನ ವಿರುದ್ಧ ಸಂಘಟನೆ ಯನ್ನು ಕೈಗೊಂಡಿದ್ದನು.

ಟಿಪ್ಪೂವಿಗೆ ತನ್ನ ರಾಜ್ಯಕ್ಕೆ ತೊಂದರೆ ಕೊಡುತ್ತಿದ್ದ ಪಾಳೆಯಗಾರರನ್ನುಳಿಸಿಕೊಳ್ಳುವುದು ಇಷ್ಟವಿರಲಿಲ್ಲ. ಅವರು ತಮ್ಮ ಸಂಚುಗಳಿಂದಲೂ ಮತ್ತು ಪರಸ್ಪರ ಕಚ್ಚಾಟದಿಂದಲೂ ರಾಜ್ಯದ ನೆಮ್ಮದಿಗೆ ಭಂಗವನ್ನು ತಂದಿದ್ದರು. ಅವನು ಮೊದಲು ತನಗೆ ನಿಷ್ಠೆಯಿಂದಿರದಿದ್ದ ಪಾಳೆಯಗಾರರ ಪ್ರಾಂತಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಕಪ್ಪಗಳನ್ನು ಕಾಲಕ್ಕೆ ಸರಿಯಾಗಿ ಕೊಟ್ಟವರ ಮತ್ತು ತಮ್ಮ ಪಾಳೆಯಪಟ್ಟುಗಳಿಂದ ನಿಗದಿಯಾದ ಪ್ರಮಾಣದ ಪಡೆಗಳನ್ನು ಕಳುಹಿಸುವವರ ಪಾಳೆಯಗಾರಿಕೆಗಳನ್ನು ಹಾಗೆಯೇ ಅವರಿಗೆ ಉಳಿಯಗೊಟ್ಟನು. ಆದರೆ ಅವನ ಆಡಳಿತದ ಅಂತ್ಯದ ವೇಳೆಗೆ ಬಹುತೇಕ ಎಲ್ಲಾ ಜಮೀನ್ದಾರರ ವಶದಲ್ಲಿದ್ದ ಅನುವಂಶಿಕವಾದ ಭೂಮಿಯನ್ನು ಒಂದಲ್ಲ ಒಂದು ನೆವದಿಂದ ಅವರ ಕೈತಪ್ಪಿಸಿದನು.[೩೪] ಈ ಪಾಳೆಯಗಾರ ವಿರೋಧಿ ನೀತಿಯಿಂದಾಗಿ ಟಿಪ್ಪೂಸುಲ್ತಾನನ ವಿರೋಧಿಗಳಾಗಬೇಕಾಯಿತು. ಹ್ಯಾರಿಸ್‌ನು ಇಂತಹ ಅತೃಪ್ತ ಪಾಳೆಯಗಾರರನ್ನು ಟಿಪ್ಪೂವಿನ ವಿರುದ್ಧ ಎತ್ತಿಕಟ್ಟಲು ಪ್ರಯತ್ನಿಸಿದನು. ಟಿಪ್ಪೂ ಬೇಡರಿಗೆ ಕಡಿಮೆ ಸಂಬಳ ನೀಡುವ ಮೂಲಕ ತನ್ನ ಸೈನ್ಯದಲ್ಲಿಟ್ಟುಕೊಂಡಿದ್ದನು. ವಾರ್ಷಿಕ ೧೨ ಪಗೋಡಗಳನ್ನು ಮಾತ್ರ ಪಡೆಯುವ ಮೂಲಕ ಬೇಡರು ಟಿಪ್ಪೂವಿನ ಸೈನ್ಯದಲ್ಲಿ ಸೇವೆ ಸಲ್ಲಿಸುತ್ತಿದ್ದರು ಎಂದು ಬುಕಾನನು ತಿಳಿಸಿರುವನು. ಈ ಸಂದರ್ಭದಲ್ಲಿ ಟಿಪ್ಪುವಿನ ವಿರುದ್ಧ ಹೋರಾಡಲು ಸಿದ್ಧನಾಗಿದ್ದ ಪರಶುರಾಮಪ್ಪನಾಯಕರಿಗೆ ಗುಪ್ತವಾಗಿ ಪತ್ರವನ್ನು ಹ್ಯಾರಿಸ್‌ನು ೧೭೯೯ ಫೆಬ್ರವರಿ ೧೪ರಂದು ಬರೆದನು.[೩೫] ಟಿಪ್ಪೂಸುಲ್ತಾನನ ವಿರುದ್ಧ ಬ್ರಿಟೀಷರ ಪರವಾಗಿ ಮದಕರಿನಾಯಕನು ಪಿರಿಯಪಟ್ಟಣದವರೆಗೂ ಬಂದು ತನ್ನ ಸಾಹಸವನ್ನು ತೋರಿಸಿದನು. ಬ್ರಿಟೀಷರು ಯುದ್ಧದಲ್ಲಿ ಟಿಪ್ಪೂಸುಲ್ತಾನನ್ನು ಕೊಂದರು. ಶ್ರೀರಂಗಪಟ್ಟಣವು ಕ್ರಿ.ಶ.೧೭೯೯ ಮೇ ೪ ರಂದು ಪತನವಾಯಿತು. ಇದರಿಂದ ಕಿರೀಟಪತಿಗಳು ಸಂತೋಷಗೊಂಡು ಶಿಪಾರಸ್ಸು ಪತ್ರವನ್ನು ಸುಂದರರಾಂಡಂಪಿಳ್ಳೆ ಮತ್ತು ನವರೋಜು ಎಂಬ ಈರ್ವರನ್ನು ದೊಡ್ಡಮದಕರಿನಾಯಕ ಸಂಗಡ ಮದ್ರಾಸಿಗೆ ಅದೇ ವರ್ಷ ಕಳುಹಿಸಿದರು. ಕಂಪಣಿ ಸಾಹೇಬರು ಮದಕರಿನಾಯಕನನ್ನು ಕರೆಸಿಕೊಂಡು ಉಪಚರಿಸಿ ಅವನೊಡನೆ ಬಂದವರಿಗೂ ಸದಾ ದಿನ ಒಂದಕ್ಕೆ ಹತ್ತು ರೂಪಾಯಿಗಳನ್ನು ಖರ್ಚಿಗೆ ಕೊಡುತ್ತಾ ಎರಡು ವರ್ಷಗಳ ಕಾಲ ಅಲ್ಲಿಯೇ ಉಳಿಸಿಕೊಂಡನು. ನಂತರ ಬ್ರಿಟೀಷರು ಶಿಫಾರಸ್ಸು ಪತ್ರದೊಂದಿಗೆ ಚಿತ್ರದುರ್ಗ ನಾಯಕತ್ವವನ್ನು ದೊಡ್ಡ ಮದಕರಿನಾಯಕರಿಗೆ ಕೊಡುವುದು, ತಮ್ಮ ಕಾಗದಕ್ಕೆ ಉತ್ತರ ಬರೆಯುವುದು ಎಂದು ಮದಕರಿ ನಾಯಕನನ್ನು ಮೈಸೂರಿಗೆ ಕಳುಹಿಸಿಕೊಟ್ಟರು. ಆಗ ದಿವಾನರಾದ ಪೂರ್ಣಯ್ಯನವರು ಅವರನ್ನು ಕರೆತಂದು ಖರ್ಚಿಗೆ ಹಣಕೊಡುತ್ತಾ ಇದ್ದರು. ಲೆಕ್ಕಪತ್ರಗಳನ್ನು ನೋಡಿ ದೇಶವನ್ನು ತಹಬಂದಿಗೆ ತಂದು ಆನಂತರ ಇಂಗ್ಲೀಷ್‌ನವರ ಅಪ್ಪಣೆಯಂತೆ ನಿಮ್ಮ ದೇಶವನ್ನು ಕೊಡುತ್ತೇವೆ. ಅಲ್ಲಿಯವರಿಗೆ ನಿಮಗೆ, ನಿಮ್ಮ ಪರಿವಾರದವರಿಗೂ ಖರ್ಚಿಗೆ ಹಣ ಕೊಡಿಸುತ್ತೇವೆ. ಅಲ್ಲದೆ ನಿಮ್ಮಲ್ಲಿ ಹುಟ್ಟಿದ ಮಕ್ಕಳಿಗೆ ಹಾಲು ಬೆಣ್ಣೆ, ಎಣ್ಣೆ ಖರ್ಚು,

ಲಗ್ನ, ಮುಂಜಿ, ಶುಭಕಾರ್ಯ, ಶ್ರದ್ಧ ಮೊದಲಾದ ಕಾರ್ಯಗಳಲ್ಲಿ ಸ್ವಲ್ಪನೂ ಕೊರತೆ ಇಲ್ಲದೆ, ಖರ್ಚಿಗೆ ಹಣ ಕೊಡಿಸುತ್ತೇನೆ ಎಂದು ಸಮಾಧಾನ ಹೇಳಿದರು. ಆಗ ಗೊತ್ತು ಮಾಡಿದ ಹಣದ ವಿವರ ಇಂತಿದೆ

ದೊಡ್ಡ ಮದಕರಿನಾಯಕನಿಗೆ ೧೦೯೦ ವರಹ, ಅವನ ಮಕ್ಕಳಾದ ಜಂಪಣ್ಣನಾಯಕನಿಗೆ ೩೦೯೦ ವರಹ, ಕಾಟಪ್ಪನಾಯಕನಿಗೆ ೧೦೯೦ ವರಹ, ಭೂಮರಾಜನಾಯಕನಿಗೆ ೫೦ ವರಹ, ಮಗ ರಾಮಪ್ಪ ನಾಯಕನಿಗೆ ೫೦ ವರಹ, ಸಾಬರಿ ಭರಮಪ್ಪನಾಯಕನಿಗೆ ೫೦ ವರಹ, ಒಟ್ಟು ೪೪೫೦ ವರಹಗಳನ್ನು ಕೊಡಬೇಕೆಂದು ನಿರ್ಧರಿಸಲಾಯಿತು. ದೊಡ್ಡಮಗರಿನಾಯಕನು ಕೊಚ್ಚಿಯಿಂದ ತನ್ನ ಬಂಧು ಬಳಗದವರೆನ್ನೆಲ್ಲಾ ಕರೆಸಿಕೊಂಡನು. ಅವರಲ್ಲಿ ಗುಡೇಕೋಟೆಯ ಬೊಮ್ಮಂತರಾಜರ ಕುಟುಂಬವೂ ಇತ್ತು. ಈ ಬಳಗದವರೆಲ್ಲರಿಗೂ ವಾಸಕ್ಕೆ ಅನುಕೂಲವಾದ ಎರಡು ಅಂತಸ್ತಿನ ಮನೆಯನ್ನು ಬಿಡದಿ ಮಾಡಿಕೊಟ್ಟರು. ದಿವಾನ್ ಪೂರ್ಣಯ್ಯನವರು ಚಿತ್ರದುರ್ಗ ರಾಜ್ಯವನ್ನು ಬಿಟ್ಟುಕೊಡುವ ವಿಷಯದಲ್ಲಿ ಉದ್ದೇಶಪೂರ್ವಕವಾಗಿ ಜಾಣತನದಿಂದ ಕಾಲಹರಣ ಮಾಡಿದರು. ಆದರೆ ಪೂರ್ಣಯ್ಯನವರು ನಾಯಕರ ವಂಶಸ್ಥರ ಮೇಲೆ ಕನಿಕರ ಹೊಂದಿದ್ದರು. ಅಲ್ಲದೆ ಈ ವಂಶಸ್ಥರ ಸಹಾಯವನ್ನು ಪಡೆದು ಬ್ರಿಟಿಷರೊಂದಿಗೆ ಸಮಾಲೋಚಿಸಿ, ಟಿಪ್ಪೂವಿನ ಅವನತಿಗೆ ಕಾರಣರಾದರು. ಅಲ್ಲದೆ ನಾಯಕರ ವಂಶಸ್ಥರಿಗೆ ಜಹಗೀರು ಕೊಡಿಸಿದರು ಎಂದು ಹೇಳಲಾಗಿದೆ.[೩೧] ಆದರೆ ದೊಡ್ಡ ಮದಕರಿನಾಯಕನು ಬಹಳ ದಿನ ಕಾದರೂ ಚಿತ್ರದುರ್ಗ ರಾಜ್ಯ ಸಿಗುವ ಸೂಚನೆ ಕಾಣಲಿಲ್ಲ. ಕೊನೆಗೆ ಪೂರ್ಣಯ್ಯನವರು ಹರಪನಹಳ್ಳಿ ಪಾಳೆಯಗಾರನಿಗೆ ಕೊಟ್ಟಂತೆ ದೊಡ್ಡಮದಕರಿನಾಯಕನಿಗೂ ೨೫,೦೦೦ ವರಹದ ಸಣ್ಣ ಸೀಮೆಯನ್ನು ಖಂಡಣೆ ಗೊತ್ತು ಮಾಡಿ ಕೊಡುವುದಾಗಿ ತಿಳಿಸಿದನು. ಆದರೆ ಕೆಲವು ಹಳ್ಳಿಗಳ ಒಡೆತನವನ್ನು ನಾಯಕನು ಒಪ್ಪಲಿಲ್ಲ. ಆದರೂ ದೊಡ್ಡಮದಕರಿನಾಯಕನು ಮಾಡಿದ ಸಹಾಯಕ್ಕಾಗಿ ದಿವಾನ ಪೂರ್ಣಯ್ಯನವರು ನಾಯಕನಿಗೆ 'ಪಾಳೇಗಾರ್ ಫ್ಯಾಮಿಲಿ' ಎಂಬ ಹೆಸರಿನ ಮೂಲಕ ಕ್ರಿ.ಶ. ೧೮೦೨ರಲ್ಲಿ ಮಾಸಿಕ ೧೩೪ ರೂ ೯ ಆಣೆ ೯ ಕಾಸು ಪಿಂಚಣಿ ಹಾಕಿಕೊಟ್ಟನಂತೆ.[೩೨] ತಾತ್ಕಾಲಿಕವಾಗಿ ದೊಡ್ಡಮದಕರಿನಾಯಕನು ಹೊಳಲ್ಕೆರೆಯಲ್ಲಿ ವಾಸವಾಗಿರಬೇಕೆಂದು ಮನೆಕಟ್ಟಿಕೊಳ್ಳಲು ೪೦೦ ಚದುರ ಗಜದಷ್ಟು ಭೂಮಿಯನ್ನು ಕೊಟ್ಟು, ಮನೆಗೆ ಬೇಕಾದ ತೇಗದ ಮುಟ್ಟುಗಳನ್ನು ಉಚಿತವಾಗಿ ಮಲೆನಾಡಿನಿಂದ ತರಲು ರಹದಾರಿ ಕೊಟ್ಟರು. ಕೇಳಿಕೊಂಡರೆ ಗೌರವಕ್ಕೆ ತಕ್ಕ ಹುದ್ದೆಯನ್ನು ಕೊಡಲಾಗುವುದೆಂದೂ. ವಿಶ್ರಾಂತಿ ವೇತನ ಸಾಲದಿದ್ದರೆ ಆಗಾಗ ವಿಶೇಷ ಸಂದರ್ಭಗಳಲ್ಲಿ ಸರ್ಕಾರದಿಂದ ಅನುಕೂಲ ಮಾಡಿಕೊಡಲಾಗುವುದೆಂದು ತಿಳಿಸಿದರು. ಕೈನಾತಿಗಾಗಿ ಸರಕಾರದಿಂದ ನಾಲ್ಕು ಮಂದಿ ಬಿಲ್ಲೆ ಜವಾನರನ್ನು ಕೊಟ್ಟು, ಗ್ರಾಮಾಂತರಗಳಿಂದ ನಾಯಕನ ಅರಮನೆಗೆ ಬರತಕ್ಕ ದಿನಸಿ ಸುಂಕವನ್ನು ವಿನಾಯಿತಿ ಮಾಡಿದರು. ಈ ರೀತಿ ನಾಯಕನನ್ನು ಸಮಾಧಾನ ಮಾಡಿ ಅಪ್ಪಣೆ ಕೊಟ್ಟು ಕಳುಹಿಸಲು ಸಂಸಾರ ಸಮೇತ

ಹೊಳಲ್ಕೆರೆಗೆ ಬಂದು ಕೆಲವು ದಿನಗಳವರೆಗೆ ಅಲ್ಲಿದ್ದ ನಂತರ ಚಳ್ಳಕೆರೆ ತಾಲ್ಲೂಕಿಗೆ ಸೇರಿರುವ ದೊಡ್ಡೇರಿ ಗ್ರಾಮಕ್ಕೆ ಬಂದು ನೆಲೆಸಿ ಅಲ್ಲಿಯೇ ಮಡಿದನು.[೩೮]

ದೊಡ್ಡಮದಕರಿನಾಯಕನ ನಂತರ ಆತನ ಹಿರಿಯ ಮಗ ಜಂಪಣ್ಣನಾಯಕನಿಗೆ ತಿಂಗಳು ಒಂದಕ್ಕೆ ೮೧೬೦ ವರಹ ಸುಖವೇತನದ ಜೊತೆಗೆ ಮೈಸೂರಿನಲ್ಲಿರುವಂತೆ ಏರ್ಪಾಡಾಯಿತು. ಜಂಪಣ್ಣನಾಯಕನು ಸುರಪುರದ ರಾಜಕುಮಾರಿ ವೆಂಕಟಮ್ಮಳನ್ನು ಮದುವೆಯಾದನು. ಈ ವಿವಾಹ ಖರ್ಚಿಗಾಗಿ ಮುಮ್ಮಡಿ ಕೃಷ್ಣರಾಜ ಒಡೆಯರು ೫೦೦ ರೂಪಾಯಿಗಳನ್ನು ದಯಪಾಲಿಸಿದ್ದರು. ಶ್ರೀರಂಗಪಟ್ಟಣದಲ್ಲಿ ದಂಗೆ ಎದ್ದು ಐರೋಪ್ಯ ಸೈನಿಕರನ್ನು ಸದೆ ಬಡಿಯಲು ನೇಮಕವಾದವರಲ್ಲಿ ಜಂಪಣ್ಣನಾಯಕನು ಮುಖ್ಯ ಪಾತ್ರವಹಿಸಿದ್ದನು. ಚಿತ್ರದುರ್ಗದಿಂದ ಕಂದಚಾರದ ೪೦೦೦ ಜನರನ್ನು ಕರೆಸಿಕೊಂಡು ಶುಕ್ಲಸಂವತ್ಸರದಲ್ಲಿ ರಣಗಂಭ ಎಂಬ ಕಾಳಗದಲ್ಲಿ ಜಯಪ್ರದನಾದನು. ಪೂರ್ಣಯ್ಯನವರು ನಾಯಕನ ಸಾಹಸ ಮೆಚ್ಚಿ ನಗರಸೀಮೆಯಲ್ಲಿ ಎದ್ದ ದಂಗೆಯನ್ನು ಅಡಗಿಸಲು ಕಳುಹಿಸಿದನು. ಅಲ್ಲಿಯೂ ತನ್ನ ಸಾಹಸವನ್ನು ತೋರಿಸಿ ಕೀರ್ತಿಪಡೆದನು. ಇವನ ಸಾಹಸವನ್ನು ಮೆಚ್ಚಿ ಮೈಸೂರಿನ ನಾಲ್ಕು ಸಾವಿರ ತುಕಡಿಯ ನಾಯಕತನವನ್ನು ನೀಡಲಾಯಿತು. ಈ ನಡುವೆ ನಗರದಂಗೆಯ ಬಿಸಿ ಚಿತ್ರದುರ್ಗದವರೆಗೂ ಹರಡಿತ್ತು. ಅಲ್ಲದೆ ದಂಗೆಯನ್ನು ಇನ್ನಷ್ಟು ತೀವ್ರಗೊಳಿಸಲು ಹಳೆಯ ಪಾಳೆಯಗಾರರ ವಂಶಜರನ್ನು ತಮ್ಮ ಕಡೆಗೆ ಸೆಳೆದುಕೊಳ್ಳುವ ಪ್ರಯತ್ನ ಮಾಡಿದ ದಂಗೆಯ ನೇತಾರರ ಪ್ರಯತ್ನ ಈಡೇರಿಲ್ಲವೆಂದು ಕಾಣುತ್ತದೆ. ಆಗ ರಾಜ್ಯ ಕಳೆದುಕೊಂಡ ಪಾಳೆಯಗಾರರು ಮತ್ತು ಅವರ ಮುಖ್ಯ ಅನುಯಾಯಿಗಳು ದಿವಾನ ಪೂರ್ಣಯ್ಯನವರ ಅಂಕಿತದಲ್ಲಿ ವಾಸಮಾಡಬೇಕೆಂಬ ನಿಯಮವಿತ್ತು. ಹೀಗಿದ್ದಾಗ್ಯೂ ಜಂಪಣ್ಣನಾಯಕನು ಮೈಸೂರು ರಾಜವರ್ಗಕ್ಕೆ, ಬ್ರಿಟೀಷ್ ಚೀಫ್ ಕಮೀಶನರಿಗೂ ಅಚ್ಚುಮೆಚ್ಚಿನ ಬಂಟನಾಗಿ ಎಲ್ಲರ ಗೌರವ ಆದರಗಳಿಗೆ ಪಾತ್ರನಾಗಿದ್ದುಕೊಂಡು ರಹದಾರಿಗಳನ್ನು ಹೊಂದಿದ್ದನು. ಕ್ರಿ.ಶ.೧೮೪೯ರಲ್ಲಿ ಚಿತ್ರದುರ್ಗದ ಅಧಿಕಾರವನ್ನು ಹಿಡಿಯಲು ಪ್ರಯತ್ನಿಸಿದನೆಂದೂ ಆದರೆ ಈ ಪ್ರಯತ್ನಕ್ಕೆ ಸಾರ್ವಜನಿಕರಿಂದಾಗಲೀ ಹಿಂದಿನ ಸೈನಿಕರಿಂದಾಗಲೀ ಬೆಂಬಲ ದೊರಕಲಿಲ್ಲವೆಂದು ಕಂಡುಬರುತ್ತದೆ.[೩೯] ಇವನು ಬೆಂಗಳೂರಿನಲ್ಲಿ ಮರಣ ಹೊಂದಿದನು. ಇವನ ನಂತರ ಇವನ ನಾಲ್ಕು ಮಕ್ಕಳಲ್ಲಿ ಸುಖವೇತನವನ್ನು ಹಂಚಿಕೆ ಮಾಡಲಾಯಿತು. ಈ ಜಂಪಣನಾಯಕನ ಈ ನಾಲ್ಕು ಮಕ್ಕಳ ವಂಶಸ್ಥರೇ ಇಂದು ಚಳ್ಳಕೆರೆ, ಕಾಟಪ್ಪನ ಹಟ್ಟಿ, ಅರೆಹಳ್ಳಿ ಮತ್ತು ಗುಡೇಕೋಟೆಗಳಲ್ಲಿ ನೆಲೆಸಿದ್ದಾರೆ.

ಚಿತ್ರದುರ್ಗ ನಾಯಕ ಅರಸು ವಂಶಸ್ಥರು ಇತ್ತೀಚಿನ ರಾಜಕೀಯದಲ್ಲಿ ಯಾವುದೇ ಉನ್ನತ ಸ್ಥಾನಮಾನಗಳನ್ನು ಹೊಂದಿರುವುದಿಲ್ಲ. ಅವರಿಗೆ ರಾಜಕಾರಣಿಗಳು, ಜನರು, ಮಠಾಧೀಪತಿಗಳು, ಅಧಿಕಾರಿಗಳು ಮಾತ್ರ 'ನಮ್ಮ ದೊರೆಗಳ ವಂಶಸ್ಥರು' ಎಂಬ ಗೌರವವನ್ನು ನೀಡುತ್ತಾ ಬಂದಿದ್ದಾರೆ.

ಈ ರಾಜಮರ್ಯಾದೆಯು ಯಾವುದಾದರೂ ಸಭೆ-ಸಮಾರಂಭ, ಉತ್ಸವ, ಹಬ್ಬಗಳ ಸಂದರ್ಭಕ್ಕೆ ಮಾತ್ರ ಸೀಮಿತವಾಗಿದೆ. ಜನಾಂಗಿಕವಾಗಿಯೂ ಮೊದಲಿನಷ್ಟು ಗೌರವವನ್ನು ನಿರೀಕ್ಷಿಸುವಂತಿಲ್ಲ. ಕೆಲವು ಅರಸು ಮನೆತನದ ವಂಶಸ್ಥರು ರಾಜಕೀಯ ಸಂಪರ್ಕದೊಂದಿಗೆ ಬೆಳೆದುಬಂದರು. ಅಂತಹವರು ಪ್ರಸ್ತುತ ರಾಜಕೀಯದಲ್ಲಿ ಉತ್ತಮ ಸ್ಥಾನಮಾನಗಳನ್ನು ಹೊಂದಿರುವರು. ಆದರೆ ಚಿತ್ರದುರ್ಗ ನಾಯಕ ಅರಸು ಮನೆತನದ ವಂಶಸ್ಥರು ರಾಜಕೀಯ ಕ್ಷೇತ್ರದ ಕಡೆ ಅಲಕ್ಷ್ಯವಹಿಸಿದಂತೆ ಕಾಣುತ್ತದೆ. ಇಲ್ಲಿಯವರೆಗೂ ಯಾರೂ ರಾಜ್ಯದ ರಾಜಕೀಯದಲ್ಲಿ ಗುರುತಿಸುವಷ್ಟು ಬೆಳೆದಿಲ್ಲ. ನಾವು ಪಾಳೆಯಗಾರರ ವಂಶಸ್ಥರು, ದೊರೆಗಳು, ಅರಸರು ಎಂದು ಹೇಳಿಕೊಳ್ಳುವುದಕ್ಕಷ್ಟೇ ಸೀಮಿತರಾಗಿರುವರು. ಇಂದಿನ ರಾಜಕೀಯದಲ್ಲಿ ಧುಮುಕುವ ಎದೆಗಾರಿಕೆಯಿರುವವರು ವಿರಳ. ಯಾವಾಗ ರಾಜ್ಯಗಳನ್ನು ನಮ್ಮ ಹಿರಿಯರಿಂದ ಕಸಿದು ಕೊಂಡರೋ ಆಗಲೇ, ಅದರೊಟ್ಟಿಗೆಯೇ ನಮ್ಮ ರಾಜಕೀಯ ಇಚ್ಛಾಶಕ್ತಿ ಹೋಯಿತೆಂಬ ಮಾತುಗಳು ಕೇಳಿಬಂದಿವೆ. ಬಹುತೇಕ ಬೇಡ ಪಾಳೆಯಗಾರರ ವಂಶಸ್ಥರು ಪ್ರಸ್ತುತ ರಾಜಕೀಯದ ಬಗ್ಗೆ ನಿರುತ್ಸಾಹವನ್ನು ಹೊಂದಿರುವುದು ಕಂಡುಬರುತ್ತದೆ. "ನಾವು ರಾಜ್ಯವನ್ನು ಆಳಿದವರು, ಪಾಳೆಯಗಾರರು, ದೊರೆಗಳು, ನಾವು ಜನರ ಹತ್ತಿರ ಹೋಗಿ ಓಟು ಕೇಳುವುದೆಂದರೆ ಆಗದ ಕೆಲಸ. ಎಲ್ಲಾ ಜನಾಂಗದವರೂ, ಮಠಾಧಿಪತಿಗಳೂ, ನಮ್ಮನ್ನು ದೊರೆಗಳು ಎಂದು ಗೌರವ ನೀಡುವಾಗ ಈ ರಾಜಕೀಯ ಏಕೆ?" ಇತ್ಯಾದಿ ಮಾತುಗಳು ವ್ಯಕ್ತಪಟ್ಟಿವೆ. ಈ ಮನೆತನದ ವಂಶಸ್ಥರಲ್ಲಿ ದಿ.ಸಿ.ಪಿ.ರಾಜಾಪರಶುರಾಮಪ್ಪನಾಯಕರು ಚಳ್ಳಕೆರೆಯ ಪುರಸಭೆಯ ಉಪಾಧ್ಯಕ್ಷರಾಗಿರುವುದನ್ನು ಬಿಟ್ಟರೆ, ಉಳಿದಂತೆ ಇನ್ನೊಬ್ಬರ ಸಹಾಯಕ್ಕಾಗಿ ರಾಜಕಾರಣ ಮಾಡಿದ ಉದಾಹರಣೆಗಳೇ ಕಂಡುಬರುತ್ತವೆ. ಡಾ.ಬಿ.ರಾಜಾಜಯಚಂದ್ರರಾಜು ಅವರು ರಾಜಕೀಯ ಕ್ಷೇತ್ರದಲ್ಲಿ ಮುಂದುವರೆಯಲು ಪ್ರಯತ್ನ ಪಟ್ಟರಾದರೂ ಯಶಸ್ವಿಯಾಗಲಿಲ್ಲ. ಚುನಾವಣಾ ಸಂದರ್ಭದಲ್ಲಿ ರಾಜಕಾರಣಿಗಳು "ನೀವು ನಮ್ಮ ದೊರೆಗಳ ಮನೆತನದವರು, ನೀವು ನಮಗೆ ಬೆಂಬಲ ನೀಡಬೇಕು" ಎಂದು ಸಹಾಯ ಪಡೆಯುವುದು ಇನ್ನೂ ಮುಂದುವರೆದಿದೆ.

## ನಾಯಕನಹಟ್ಟಿ ಪಾಳೆಯಗಾರರು

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿಯು ವಿಜಯನಗರ ಮತ್ತು ವಿಜಯನಗರೋತ್ತರ ಕಾಲದಲ್ಲಿ ಒಂದು ಚಿಕ್ಕ ಸಂಸ್ಥಾನವಾಗಿತ್ತು. ಇಲ್ಲಿ ಆಳಿದ ನಾಯಕರು ಹಟ್ಟಿ ನಾಯಕರೆಂದು ಪ್ರಸಿದ್ಧರಾಗಿದ್ದಾರೆ. ಈ ಹಟ್ಟಿ ಪಾಳೆಯಗಾರ ಮನೆತನದ ಮೂಲಪುರುಷ ಕಾಟೇಮಲ್ಲಪ್ಪ ನಾಯಕ. ಇವನು ವಿಜಯನಗರ ದೊರೆಗಳ ಕೃಪೆಗೆ ಪಾತ್ರನಾಗಿ ಕೆಲವು ಗ್ರಾಮಗಳನ್ನು ಅವರಿಂದ ಪಡೆದುಕೊಂಡನು. ನಂತರದ ದಿನಗಳಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಿಕೊಂಡು ಪ್ರಸಿದ್ಧಿಗೆ ಬಂದನು. ವಿಜಯನಗರ ಸಾಮ್ರಾಜ್ಯ ಪತನ ಹೊಂದಿದ ನಂತರ ಈ ವಂಶದ ನಾಯಕರು ಸ್ವತಂತ್ರರಾಗಲೆತ್ನಿಸಿ, ಆ ವೇಳೆಗಾಗಲೇ ಪ್ರಬಲರಾಗಿದ್ದ

ಚಿತ್ರದುರ್ಗ ಅಮರನಾಯಕರ ಆಡಳಿತಕ್ಕೆ ಒಳಪಟ್ಟು ನಂತರ ಅವರ ರಕ್ತ ಸಂಬಂಧಿಗಳಾದರು. ನಂತರ ಹೈದರಾಲಿ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ಲೀನವಾದರು.

ನಾಯಕನಹಟ್ಟಿ ಪಾಳೆಯಗಾರರ ಬಖೈರು ಇವರ ಇತಿಹಾಸವನ್ನು ತಿಳಿಸುವಲ್ಲಿ ಪ್ರಮುಖವಾದ ದಾಖಲೆಯಾಗಿದೆ. ಕ್ರಿ.ಶ.೧೬೨೦ ರಿಂದ ೧೬೮೫ರವರೆಗಿನ ಶಾಸನಗಳು ಹಟ್ಟಿ ಪಾಳೆಯಗಾರರಿಗೆ ಸಂಬಂಧಿಸಿವೆ.[೪೦] ಈ ಶಾಸನಗಳಿಂದ ಹಟ್ಟಿ ಪಾಳೆಯಗಾರರ ಕುರಿತಂತೆ ಕೆಲವು ಮಾಹಿತಿಗಳನ್ನು ತಿಳಿಯ ಬಹುದು. ಕಾಟೇಮಲ್ಲನಾಯಕನು ಶ್ರೀಶೈಲ ಸಮೀಪದ ಕರ್ರಮಲೆ, ಬಿಳಿಮಲೆಗಳ ಕಾಡಿನಿಂದ ಇಂದಿನ ನಾಯಕನಹಟ್ಟಿ ಪ್ರದೇಶಕ್ಕೆ ಕಂಪಳ ದೇವರು ಮತ್ತು ತನ್ನ ದನಕರು ಹಾಗೂ ೫೦೦ ಜನ ಪರಿವಾರದೊಡನೆ ವಲಸೆ ಬಂದನು. ಇವನು ಬಂದು ನೆಲಸಿದ ಕಾಲಮಾನದ ಬಗ್ಗೆ ಏಕ ಅಭಿಪ್ರಾಯವಿಲ್ಲ. ಕ್ರಿ.ಶ.೧೪ನೇ ಶತಮಾನದ ಮಧ್ಯಭಾಗ ಎನ್ನುವ ತೇದಿಯನ್ನು ಒಪ್ಪದ ಎಂ.ವಿ.ಚಿತ್ರಲಿಂಗಯ್ಯನವರ ಇದು ಕ್ರಿ.ಶ.೧೫೩೯ ಅಚ್ಯುತ ದೇವರಾಯ ಅದೇ ತಾನೆ ಅಧಿಕಾರ ವಹಿಸಿಕೊಂಡ ಕಾಲವೆಂದು ನಾಯಕನಹಟ್ಟಿ ಬಖೈರನ್ನು ವಿಶ್ಲೇಷಣೆ ಮಾಡುವಾಗ ಹೇಳಿದ್ದಾರೆ. ಕಾಟೇ ಮಲ್ಲನಾಯಕನು ವಿಜಯನಗರ ಪ್ರದೇಶಕ್ಕೆ ತನ್ನ ಸಮುದಾಯದೊಡನೆ ಬಂದು ನೆಲೆಸಿದಾಗ, ಕೆಲದಿನಗಳ ಕಾಲ ವಿಜಯನಗರ ಅರಸರೊಡನೆ ಒಳ್ಳೆಯ ಸಂಬಂಧವಿರಲಿಲ್ಲವೆಂದು ಕಾಣಿಸುತ್ತದೆ. ಒಂದು ಹೇಳಿಕೆ ಪ್ರಕಾರ, ವಿಜಯನಗರದ ಅರಸನು ಮಲ್ಲನಾಯಕ ನನ್ನು ಬಂಧಿಸಲು ಎರಡು ಬಾರಿ ಮಾಡಿದ ಪ್ರಯತ್ನ ವಿಫಲವಾಯಿತು. ನಂತರ ಮಲ್ಲನಾಯಕನ ಧೈರ್ಯ ಮೆಚ್ಚಿ ತನ್ನ ಕಂಪಳದೊಡನೆ ನೆಲೆಸಲು ವಿಜಯನಗರದ ಅರಸನು ಅನುಮತಿ ನೀಡಿದನು ಎಂದು ಹೇಳಲಾಗಿದೆ. ಕುಂದುರ್ಪೆ ಗುಡ್ಡದ ಬಳಿ ನೆಲೆಸಲು ಮತ್ತು ಬೇಡ ಕುಲದ ಅವನ ಮುಖಂಡತ್ವವನ್ನು ಬದಲಾಯಿಸದೇ ೫೪ ದೇಶಗಳಲ್ಲಿರುವ ವಾಲ್ಮೀಕಿ ವಂಶಸ್ಥ ಜನರುಗಳ ಮುಖಂಡತ್ವ ವಂಶಪಾರಂಪರ್ಯವಾಗಿ ಅನುಭವಿಸಿಕೊಂಡು ಹೋಗುವುದಕ್ಕೆ ಅಪ್ಪಣೆ ಕೊಟ್ಟನು. ಈ ಅಪ್ಪಣೆ ಕೊಟ್ಟವನು ಅಚ್ಯುತರಾಯನೆಂದು ಹೇಳಲಾಗಿದೆ.[೪೧] ಅಲ್ಲದೆ ಕುಂದುರ್ಪೆ ದುರ್ಗದ ಆಡಳಿತವನ್ನು ಇವನಿಗೆ ವಹಿಸಿಕೊಡುವುದರ ಮೂಲಕ 'ಪಾಳೆಯಗಾರ' ಪದವಿ ನೀಡಿದನೆಂದು ತಿಳಿದು ಬರುತ್ತದೆ.[೪೨] ಇವನ ತಮ್ಮಂದಿರು ಕುಂದರ್ಪೆ ಸೇರಿದಂತೆ ಅದರ ಸುತ್ತಲ ಸೀಮೆಗಳಾದ ರತ್ನಗಿರಿ, ಮಿಡಗೇಶಿ, ಹೊಸಕೋಟೆ, ನಿಡಗಲ್ಲು, ಶಂಕರಕಲ್ಲು ಸ್ಥಳಗಳಲ್ಲಿ ಚದುರಿದಂತೆ ನೆಲೆಸುತ್ತಾರೆ.[೪೩] ಕ್ರಮೇಣ ಈ ನೆಲೆಗಳೇ ಪಾಳೆಯಪಟ್ಟುಗಳಾಗಿ ವಿಕಾಸಗೊಂಡಂತೆ ಕಾಣುತ್ತವೆ. ಕಾಲನಂತರದಲ್ಲಿ ಮಲ್ಲನಾಯಕನು ಹಟ್ಟಿಯನ್ನು ತೊರೆದು ಕುಂದರ್ಪೆಯಿಂದ ಗೋಶಿಕೆರೆಗೆ ಬರುತ್ತಾನೆ.

ಬೇಡಜನಾಂಗದ ಸಾಂಸ್ಕೃತಿಕ ವೀರರಾದ ಜಗಳೂರು ಪಾಪನಾಯಕ ಮತ್ತು ಗಾದರಿ ಪಾಲನಾಯಕರು ಪಟ್ಟಿನಾಯಕತನಕ್ಕೆ ಸೇರಿದವರು[೪೪] ಗಾದ್ರಿಪಾಲನಾಯಕನು ಗೋಶಿಕೆರೆ ಬಳಿ ಪಶುಪಾಲನೆ ಮಾಡುತ್ತಿರುವಾಗ

ತನ್ನ ಜೀವರಾಶಿಯನ್ನು ಮುಟ್ಟದಿರುವಂತೆ ಹುಲಿಯೊಂದಿಗೆ ಒಪ್ಪಂದ ಮಾಡಿಕೊಂಡಿರುತ್ತಾನೆ. ಹೀಗಾಗಿ ಇವನ ದನದ ದೊಡ್ಡಿಯಲ್ಲಿ ಹಸುಕರುಗಳೊಂದಿಗೆ ಹುಲಿ ಮರಿಗಳೂ ಇರುತ್ತವೆ. ಈ ಒಪ್ಪಂದದ ಬಗ್ಗೆ ಏನೂ ಅರಿಯದ ಇವನ ಬಂಧುಗಳು ದೊಡ್ಡಿಯಲ್ಲಿರುವ ಹುಲಿಯ ಮರಿಗಳನ್ನು ಕೊಲ್ಲುತ್ತಾರೆ. ಇದನ್ನು ಅರಿತ ಪಾಲನಾಯಕ ಹುಲಿಯು ಸಿಟ್ಟಿಗೆದ್ದು ತಮ್ಮನ್ನು ಬಿಡುವುದಿಲ್ಲವೆಂದು ತನ್ನ ಪರಿವಾರದೊಡನೆ (ಜಾನುವಾರು, ಪತ್ನಿ ಕೆಂಚವ್ವ, ಕಾಮವ್ವರೊಂದಿಗೆ) ನನ್ನಿವಾಳ ಕಟ್ಟೆ ಮನೆಯ ಮೂಲಕ ಗಾದರಿ ಗುಡ್ಡಕ್ಕೆ ಹೋಗುತ್ತಾರೆ. ಅಲ್ಲಿಗೆ ಬಂದ ಹುಲಿ ಮತ್ತು ಪಾಲನಾಯಕನ ನಡುವೆ ಭೀಕರ ಯುದ್ಧ ಸಂಭವಿಸುತ್ತದೆ. ಈ ಯುದ್ಧದಲ್ಲಿ ಗಾದ್ರಿಪಾಲನಾಯಕನು ಹೋರಾಡುತ್ತಾ ವೀರ ಸ್ವರ್ಗ ಹೊಂದುತ್ತಾನೆ.

ಸೂರ್ಯದೇವು ಪಾಪನಾಯಕನಿಗೂ ಹರತಿ-ನಿಡಗಲ್ಲು ಮನೆತನದ ಚಿಕ್ಕಪ್ಪನಾಯಕನ ಮಗನಾದ ಒಂದನೆಯ ಹೊಟ್ಟಳನಾಯಕನಿಗೂ ನಡೆಯುವ ಜಿದ್ದಿನಲ್ಲಿ ಪಾಪನಾಯಕ ಗೆಲ್ಲುತ್ತಾನೆ. ಪಾಪನಾಯಕನ ಮಗನಾದ ಕಾಕಳನಾಯಕ ಯುದ್ಧದಲ್ಲಿ ಆನೆಗೊಂದಿ ರಾಜರಿಗೆ ಸಹಾಯ ಮಾಡುತ್ತಾನೆ. ಅದಕ್ಕಾಗಿ ಆನೆಗೊಂದಿಯ ರಾಜರು ಮಲ್ಲಪ್ಪನಾಯಕನಿಗೆ ಉಂಬಳಿ ಶಾಸನ ಹಾಕಿಸಿಕೊಟ್ಟಿದ್ದರಿಂದ[೪೫] ಗೋಸಿಕೆರೆಯಿಂದ ತನ್ನ ಕಂಪಳವನ್ನು ಹನ್ನೆರಡು ಪೆಟ್ಟಿಗೆ ದೇವರುಗಳೊಂದಿಗೆ ಈಗಿನ ನಾಯಕನಹಟ್ಟಿ ಇರುವ ಜಾಗಕ್ಕೆ ತಂದು ನೆಲೆಸುತ್ತಾನೆ. ಇವನು ನೆಲೆಸಿದ್ದರಿಂದಲೇ ಆ ಸ್ಥಳವನ್ನು ನಾಯಕನಹಟ್ಟಿ ಎಂದು ಕರೆಯಲಾಯಿತು. ಹೀಗಾಗಿ ಕಾಕಳನಾಯಕನೇ ಹಟ್ಟಿ ಪಾಳೆಯಗಾರರ ಮೂಲ ಪುರುಷ ಎಂಬ ಮಾತಿದೆ. ಈ ಕಾಕಳನಾಯಕನು ನಾಯಕನಹಟ್ಟಿಯಲ್ಲಿ ಕೋಟೆಯನ್ನು ಕಟ್ಟಿಸಿದನು. ಇವನ ಕಾಲದಿಂದಲೇ ಹಟ್ಟಿ ಪಾಳೆಯಪಟ್ಟು ಆಸ್ತಿತ್ವಕ್ಕೆ ಬಂತು ಎಂದು ಎಂ.ಎನ್. ಪ್ರಭಾಕರರು 'ನಾಯಕನಹಟ್ಟಿ ಬಖೈರು' ಪೀಠಿಕೆಯನ್ನು ಹೇಳಿದ್ದಾರೆ.[೪೬]

ಕಾಕಳನಾಯಕನ ನಂತರ ಅವನ ಗಿರಿಮೊಮ್ಮಗ ಜೋಡಿ ಮಲ್ಲಪ್ಪನಾಯಕನು ನಾಯಕನಹಟ್ಟಿ ಪಾಳೆಯಗಾರರಲ್ಲಿ ಪ್ರಮುಖನು. ಇವನ ಕಾಲದಲ್ಲಿ ನಾಯಕನಹಟ್ಟಿ ಸರ್ವೋತೋಮುಖ ಅಭಿವೃದ್ಧಿಯನ್ನು ಕಂಡಿತು. ಈತನು ದುರ್ಗದ ಚಿಕ್ಕಣ್ಣನಾಯಕನ ತಂಗಿ ಸರ್ಜಮ್ಮನಾಗತಿಯನ್ನು ಮದುವೆಯಾದರೆ. ತನ್ನ ತಂಗಿಯನ್ನು(ಮಲ್ಲವ್ವನಾಗತಿ) ಚಿಕ್ಕಣ್ಣನಾಯಕನು ಮದುವೆಯಾದನು.

ಹಟ್ಟಿಯ ಪಾಳೆಯಗಾರರು ಚಿತ್ರದುರ್ಗದೊಡನೆ ಮಾಡಿಕೊಂಡ ಈ ವೈವಾಹಿಕ ಸಂಬಂಧದಿಂದ ರಾಜಕೀಯವಾಗಿ ಪ್ರಬಲರಾದರು. ಜೋಡಿಮಲ್ಲಪ್ಪನಾಯಕನು ಕೆರೆಗಳನ್ನು, ಅನೇಕ ಗ್ರಾಮಗಳನ್ನು, ದೇವಾಲಯಗಳನ್ನು ಕಟ್ಟಿಸಿವನಲ್ಲದೆ ಕಾಶಿಯಿಂದ ಕಾಶಿಬಾಣ ತೆಗೆದುಕೊಂಡು ಬಂದು ನಾಯಕನ ಹಟ್ಟಿಯಲ್ಲಿ ಪ್ರತಿಷ್ಠಾಪಿಸಿದನು. ಇವನ ನಂತರ ಬಂದ ಬಸವಮಲ್ಲಪ್ಪನಾಯಕನು ರಾಯದುರ್ಗದ ಯರ್ರಿ ಬೊಂಮಳನಾಯಕನ ಮಗಳು ಬೊಮ್ಮವ್ವನಾಗತಿಯನ್ನು ಮದುವೆಯಾದನು. ಈ ಸಂದರ್ಭದಲ್ಲಿ ಯರ್ರಿಬೊಂಮಳನಾಯಕ ಹಟ್ಟಿಯವರಿಂದ ೩೦೦ ಕುರಿ ೨೦೦ ಆಕಳು ಪಡೆದು ಮೊಳಕಾಲ್ಮೂರು

ಸೀಮೆಯನ್ನು ಅವರಿಗೆ ಬಿಟ್ಟುಕೊಟ್ಟನು. ಇವನ ನಂತರ ಬಂದ ಹಿರಿಯಮಗ ಮೀಸೆ ಮಲ್ಲಪ್ಪನಾಯಕನು ಚಿತ್ರದುರ್ಗದ ಅರಸು ಕುಮಾರಿ ಲಕ್ಷ್ಮವ್ವನಾಗತಿಯನ್ನು ಮದುವೆಯಾದನು. ಇವನ ಮಗ ಕಸ್ತೂರಿ ಮಲ್ಲಪ್ಪನಾಯಕನು ಶ್ರೀ ಮನ್ಮಹಾನಾಯಕಾಚಾರ್ಯ ಎಂಬ ಬಿರುದನ್ನು ಹೊಂದಿದ್ದನು. ಇವನ ಸಂತತಿ ಬೆಳೆದಿಲ್ಲ. ಬಸವಮಲ್ಲಪ್ಪನಾಯಕನ ಎರಡನೆ ಮಗ ಚಿನ್ನಯರಾಜು ಜರಿಮಲೆಯ ಪಾಳೆಯಗಾರನ ಮಗಳು ಲಿಂಗವ್ವನಾಗತಿಯನ್ನು ಮದುವೆಯಾದನು. ಇವನ ಉಪಪತ್ನಿ ಲಕ್ಷ್ಮವ್ವಳ ಮಗ ಚಿಕ್ಕಮಲ್ಲಪ್ಪ ನಾಯಕನು ಮಹಾ ಪಟಿಂಗನಿದ್ದುದರಿಂದ ಹಟ್ಟಿಯ ಮಾನ ಮಣ್ಣುಪಾಲಾಗುತ್ತದೆ. ಚಿತ್ರದುರ್ಗದ ರಾಜಾಭರಮಪ್ಪನಾಯಕನು ಹಟ್ಟಿಯ ಪಾಳೆಯಗಾರರಿಗೆ ಸೇರಿದ ಮೊಳಕಾಲ್ಮೂರ ಗಡಿಸೀಮೆಯ ಪ್ರದೇಶವನ್ನು ಆಕ್ರಮಿಸುತ್ತಾನೆ. ಇದರ ಬದಲಾಗಿ ಚಿತ್ರದುರ್ಗ ಸೀಮೆಯ ಕೆಲವು ಪ್ರದೇಶಗಳನ್ನು ನೀಡಿದರೂ ಒಳಗೊಳಗೆ ಅಸಹಾಯಕನಾಗಿ ಕುದಿಯುತ್ತಿದ್ದ ಚಿನ್ನಯರಾಜ ಬರಬರುತ್ತಾ ಭರಮಪ್ಪನಾಯಕರ ದೌಲತ್ತು ಹೆಚ್ಚುತ್ತಾ ಬಂದಿರುದರಿಂದ ಇನ್ನು ಇವರ ಕೈಕೆಳಗೆ ಇರಬಾರದೆಂದು ತೀರ್ಮಾನಿಸಿ ತನ್ನ ಐದು ಜನ ಮಕ್ಕಳನ್ನು ಕರೆದುಕೊಂಡು ಆನೆಗೊಂದಿ ಚಿಕ್ಕವೆಂಕಟಪತಿರಾಯರಲ್ಲಿಗೆ ಹೋಗಿ, ಅಲ್ಲಿ ಈ ಹಿಂದೆ ಕೊಟ್ಟಿದ್ದ ಉಂಬಳಿಯನ್ನು ಅನುಭವಿಸಿಕೊಂಡು ಉಳಿದನು. ಆಗ ಫಟಿಂಗನಾದ ಚಿಕ್ಕಮಲ್ಲಪ್ಪನಾಯಕ ಆನೆಗೊಂದಿ ರಾಯರ ಸೂಳೆಯನ್ನು ಹಾರಿಸಿಕೊಂಡು ಹೋಗುವ ದುಸ್ಸಾಹಸ ಮಾಡಿ ತಲೆ ಹೊಯ್ಯಿಸುವ ಶಿಕ್ಷೆಗೆ ಹೆದರಿ ಚಿತ್ರದುರ್ಗಕ್ಕೆ ಬಂದನು. ರಾಜಾ ಭರಮಪ್ಪನಾಯಕರ ಹತ್ತಿರ ಹಟ್ಟಿ ರಾಜವಂಶದವನೆಂದು ಹೇಳಿಕೊಂಡು, ಕುದುರೆ ಹತ್ತುವ ಸ್ಪರ್ಧೆಯಲ್ಲಿ ಗೆದ್ದು ಅವರ ಮಗಳು ದೇಮವ್ವನಾಗತಿಯನ್ನು ಮದುವೆಯಾಗಿ ಹಟ್ಟಿಯನ್ನು ಮರಳಿ ಪಡೆಯಲು ಪ್ರಯತ್ನಿಸಿದನು. ಅಷ್ಟರಲ್ಲಿ ಚಿನ್ನಯರಾಜನ ಪಟ್ಟದ ರಾಣಿ ಜರಿಮಲೆ ಲಿಂಗಮ್ಮನಾಗತಿಯ ಮಕ್ಕಳು ತಾವೇ ನಿಜವಾದ ಹಕ್ಕುದಾರರೆಂದು ನಾಯಕನಹಟ್ಟಿಯನ್ನು ಬಿಡಿಸಿಕೊಂಡು ನಾಲ್ಕು ಜನರು ಸೇರಿ ಏಕಪ್ರಕಾರವಾಗಿ ಆಳ್ವಿಕೆ ನಡೆಸುತ್ತಾರೆ. ಅವರಲ್ಲಿ ಚಿಕ್ಕಮಲ್ಲಪ್ಪನಾಯಕನ ಚಟುವಟಿಕೆಗಳಿಂದ ಬೇಸತ್ತ ದೊಡ್ಡಮದಕರಿನಾಯಕನು ಅವನನ್ನು ಕ್ರಿ.ಶ.೧೭೫೪ರಲ್ಲಿ ದೊಡ್ಡೇರಿ ಸೆರೆಮನೆಯಲ್ಲಿ ಹಾಕಿಸಿ ಕೊಲ್ಲುತ್ತಾನೆ. ಮುಂದೆ ಇವನ ಮಗ ಪೆದ್ದಯ್ಯಾನನ್ನು ಚಿತ್ರದುರ್ಗದವರೇ ಸಾಕಿ ಸಲುಹಿ ಸತ್ತ್ಯವ್ವ ಎಂಬ ಹೆಣ್ಣನ್ನು ಕೊಟ್ಟು ಮದುವೆ ಮಾಡಿ ಅಡಿಕೆ ಎಲೆಗೆಂದು ಗಜ್ಜುಗಾನಹಳ್ಳಿ ಗ್ರಾಮವನ್ನು ಕೊಡುತ್ತಾನೆ. ಚಿತ್ರದುರ್ಗದವರ ಹಿಡಿತದೊಳಗೆ ನಾಯಕನಹಟ್ಟಿ ಪಾಳೆಯಗಾರರು ಮುಂದುವರೆದರು. ಬಹುಶಃ ಚಿತ್ರದುರ್ಗದವರ ವಿರುದ್ಧ ನಿಲ್ಲುವ ಶಕ್ತಿ ಹಟ್ಟಿ ದೊರೆಗಳಿಗಿರಲಿಲ್ಲವೆಂದು ಕಾಣುತ್ತದೆ. ವಂಶಾವಳಿಯಲ್ಲಿ ಬರುವ ಅನೇಕ ಹಟ್ಟಿ ಪಾಳೆಯಗಾರರ ವಿವರ ಕಂಡುಬರುವುದಿಲ್ಲ. ಚಿತ್ರದುರ್ಗ, ರಾಯದುರ್ಗ ಮತ್ತು ಜರಿಮಲೆ ಪಾಳೆಯಗಾರರೊಡನೆ ವೈವಾಹಿಕ ಸಂಬಂಧವು ಇವರು ಮೇಲುಸ್ಥಾನಕ್ಕೆ ಹೋಗಲು ಕಾರಣವಾಯಿತು. ಈ ಸಂಬಂಧಕ್ಕೆ ಸಂಚಕಾರವನ್ನು ತಂದುಕೊಳ್ಳಲು

ಇಷ್ಟಪಡಲಿಲ್ಲ. ಈ ಮನೆತನದ ದೊರೆಗಳು ಚಿತ್ರದುರ್ಗ ದೊರೆಗಳು ಹೇಳಿದಂತೆ ಕೇಳಬೇಕಾಗಿತ್ತು. ದೊಡ್ಡ ಮದಕರಿನಾಯಕನ ಸಹಾಯಕ್ಕಾಗಿ ಬಂಗಾರಮಲ್ಲಪ್ಪನಾಯಕನು ತನ್ನ ದಂಡನ್ನು ತೆಗೆದುಕೊಂಡು ಕಲ್ಲಿಕೋಟೆಗೆ ಹೋಗಿದ್ದನು. ಆ ಯುದ್ಧದಲ್ಲಿ ಇವನು ಮಡಿದನು.[೪೨] ಇವನಿಗೆ ಸಂತಾನವಿರಲಿಲ್ಲ. ನಂತರದ ಹಟ್ಟಿ ದೊರೆಗಳ ಕುರಿತು ದಾಖಲೆಗಳಿಲ್ಲ. ಬಖೈರು ಹಠಾತ್ತನೆ ಇಲ್ಲಿಗೆ ಮುಗಿಯುತ್ತದೆ.

ನಾಯಕನಹಟ್ಟಿ ಪಾಳೆಯಗಾರರ ವಂಶಸ್ಥರ ಮನೆಯೊಂದು ಇಂದು ನಾಯಕನಹಟ್ಟಿಯ ಒಳಮಠದ ಹಿಂಭಾಗದಲ್ಲಿದೆ. ಈ ಮನೆತನದವರನ್ನು 'ಹಿರೇಮನೆಯವರು' ಎಂದು ಈ ಹಟ್ಟಿ ಮನೆತನದ ಇನ್ನೊಂದು ಕವಲಿನ ವಂಶಜರು ಹೇಳುತ್ತಾರೆ. ಈ ಮನೆಗೆ ಸೇರಿದ ವಂಶಸ್ಥರು ನಾಯಕನಹಟ್ಟಿ ಸಮೀಪ ರಾಯದುರ್ಗ(ದೊರೆಗಳ ಹಟ್ಟಿ) (ಒಟ್ಟು ಮೂರು ಕುಟುಂಬಗಳು) ಮತ್ತು ಚಳಕೆರೆಯಲ್ಲಿ(ಒಂದು ಕುಟುಂಬ) ನೆಲೆಸಿರುವರು. ಇವರು ರಾಜಕೀಯ ಕ್ಷೇತ್ರದಲ್ಲಿ ಗುರುತಿಸಿಕೊಂಡಿಲ್ಲ. ಆರ್ಥಿಕವಾಗಿ ಕ್ಷೀಣಿಸುತ್ತಾ ಬಂದ ಈ ಕುಟುಂಬಗಳು ದಿನ ನಿತ್ಯದ ಬದುಕಿನ ಕಡೆ ಹೆಚ್ಚು ಒಲವು ತೋರಿಸುವುದು ಕಂಡುಬರುತ್ತದೆ. ಪ್ರಸ್ತುತ ರಾಜಕೀಯದಲ್ಲಿ ಮಾಡಬೇಕಾದ ಖರ್ಚು ತಂತ್ರಗಾರಿಕೆ ಮುಂತಾದ ಕಸರತ್ತುಗಳು ಈ ಕುಟುಂಬದವರಿಂದ ಅಸಾಧ್ಯವಾಗಿದೆ. ಆದರೆ ರಾಜಕಾರಣಿಗಳು ಚುನಾವಣಾ ಸಂದರ್ಭದಲ್ಲಿ ಮಾತ್ರ ಊರಿಗೆ ಬೇಟಿ ನೀಡಿದಾಗ 'ನೀವು ದೊರೆಗಳು, ನಮ್ಮನ್ನು ಗೆಲ್ಲಿಸಬೇಕೆಂದು' ಕೇಳುವುದು ಮಾತ್ರ ಮುಂದುವರೆದಿದೆ. ಮೊದಮೊದಲು ಚುನಾವಣ ಸಂದರ್ಭದಲ್ಲಿ ರಾಜಕಾರಣಿಗಳು ಪಾಳೆಯಗಾರ ದೊರೆಗಳ ವಂಶಸ್ಥರ ಮನೆಗೇ ಮೊದಲು ಭೇಟಿ ನೀಡುತ್ತಿದ್ದರು ಹಾಗೂ ಮಾತುಕತೆ ಅಲ್ಲಿಯೇ ನಡೆಯುತ್ತಿತ್ತು. ಆಗ ದೊರೆಗಳು ಬೆಂಬಲ ಸೂಚಿಸಿದವರೇ ಚುನಾವಣೆಯಲ್ಲಿ ಆಯ್ಕೆಯಾಗುತ್ತಿದ್ದರು. ಆದರೆ ಈಗ ಹಾಗಿಲ್ಲ. ಜನರ ಮೇಲಿದ್ದ ರಾಜಕೀಯ ಹಿಡಿತವನ್ನು ಸಾಮಾನ್ಯವಾಗಿ ಎಲ್ಲಾ ಪಾಳೆಯಗಾರ ಮನೆತನದ ವಂಶಸ್ಥರು ಕಳೆದುಕೊಳ್ಳುತ್ತಿದ್ದಾರೆ. ಆರ್ಥಿಕವಾಗಿ ದುಸ್ಥಿತಿ ತಲುಪಿರುವ ಈ ನಾಯಕ ವಂಶಸ್ಥರು ಇನ್ನೊಬ್ಬರ ಹೊಲದಲ್ಲಿ ಕೂಲಿ ಮಾಡಬೇಕಾಗಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ ಉತ್ತಮ ಸ್ಥಾನಮಾನಗಳನ್ನು ಹೊಂದಿರುವ ಜನರು ಇವರನ್ನು ಸಾಮಾನ್ಯರಂತೆ ಕಾಣುತ್ತಿದ್ದರೆ, ಕೆಲವೊಂದು ಸಂದರ್ಭಗಳಲ್ಲಿ ಮಾತ್ರ ನಮ್ಮ ಹಿಂದಿನ ನಾಯಕನಹಟ್ಟಿ ದೊರೆಗಳ ವಂಶಸ್ಥರು ಎಂದು ಹೇಳುತ್ತಾರೆ. ರಾಜಕೀಯವಾಗಿ ಯಾವುದೇ ಸಾಮರ್ಥ್ಯವನ್ನು ಇವರಲ್ಲಿ ಕಾಣುವುದಿಲ್ಲ. ಅಲ್ಲದೆ ತಮ್ಮ ಜನಾಂಗದ ಮೇಲೆ ಮೊದಲಿದ್ದ ಹಿಡಿತವನ್ನು ಕಳೆದುಕೊಳ್ಳುತ್ತಿದ್ದಾರೆ. ಚುನಾವಣಾ ಸಂದರ್ಭದಲ್ಲಿ ರಾಜಕೀಯ ಪಕ್ಷಗಳು ಮಾಡುವ ದುಂದುವೆಚ್ಚ, ಅನೈತಿಕ ಚಟುವಟಿಕೆಗಳ ಕಡೆ ಜನರು ಬಲುಬೇಗ ಒಲವು ತೋರುತ್ತಿರುವುದರಿಂದ ಅವರಾರೂ ದೊರೆಗಳ ವಂಶಸ್ಥರ ಮಾತಿಗೆ ಪೂರ್ಣ ಬೆಂಬಲ ನೀಡುವುದಿಲ್ಲ. ಆದರೆ ಗ್ರಾಮೀಣ ಪ್ರದೇಶದ ಹಳೆಯ ತಲೆಮಾರಿನ ಜನರು ತಮ್ಮ ಪೂರ್ವಿಕರ ಕಾಲದಿಂದ ಅವರಿಗೆ

ಗೌರವವನ್ನು ನೀಡುತ್ತಾ ಬಂದಿದ್ದಾರೆ. ಅದನ್ನು ಮುಂದುವರಿಸಬೇಕನ್ನುವ ಮನಸ್ಸು ಅವರಲ್ಲಿದೆ. ಆದರೂ "ನಮ್ಮ ದೊರೆಗಳು ಇಂದಿನ ರಾಜಕೀಯಕ್ಕೆ ಬರಬಾರದು, ಅವರಿಗೆ ಇದು ಸರಿಯಾದುದಲ್ಲ" ಎಂಬ ಗೌರವ ಮಾತುಗಳು ಜನರಲ್ಲಿ ಕೇಳಿಬರುತ್ತವೆ. ನಾಯಕನಹಟ್ಟಿ ಪಾಳೆಯಗಾರರ ವಂಶಸ್ಥರನ್ನು ಚುನಾಯಿತ ಪ್ರತಿನಿಧಿಗಳೂ ನಿರ್ಲಕ್ಷಿಸುತ್ತಾ ಬಂದಿರುವ ಸಂದರ್ಭಗಳು ಕಂಡುಬರುತ್ತವೆ.

## ಮತ್ತೋಡು ಪಾಳೆಯಗಾರರು

ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲೂಕಿನ ವೇದಾವತಿ ನದಿಯ ಬಲದಂಡೆ ಸಮೀಪದಲ್ಲಿರುವ ಮತ್ತೋಡು ಒಂದು ಚಾರಿತ್ರಿಕ ಸ್ಥಳ. ಕ್ರಿ.ಶ.೧೬೦೪ ರಿಂದ ೧೭೭೯ರವರೆಗೆ ೧೭೫ ವರ್ಷಗಳ ಕಾಲ ಈ ಮನೆತನದವರು ಆಳಿರುವುದು ಕಂಡುಬರುತ್ತದಾದರೂ ಅವರ ಇತಿಹಾಸ ಸ್ಪಷ್ಟವಾಗಿಲ್ಲ. ಆಧಾರಗಳ ಕೊರತೆಯಿದ್ದರೂ ಕ್ರಿ.ಶ.೧೬೭೨ ರಿಂದ ೧೭೪೭ರವರೆಗಿನ ಶಾಸನಗಳು ಮತ್ತೋಡು ಪಾಳೆಯಗಾರರ ಬಗ್ಗೆ ತಿಳಿಸುತ್ತವೆ.[೪೮] ಒಟ್ಟು ಆರು ತಲೆಮಾರಿನವರು ಈ ಪಾಳೆಯಪಟ್ಟನ್ನು ಆಳಿದರು.[೪೯] ಗಿರಿಯಪ್ಪನಾಯಕನು ಮತ್ತೋಡು ಪಾಳೇಪಟ್ಟನ್ನು ಸ್ಥಾಪಸಿದನು. ಇವನು ಪ್ರಸಿದ್ಧ ಬೇಟೆಗಾರನೂ, ಶೂರನೂ ಆಗಿದ್ದನು. ಈತನ ಪರಾಕ್ರಮವನ್ನು ಬೂದಿಹಾಳಿನ ಪಾಳೆಯಗಾರರಿಂದ ತಿಳಿದ ಪೆನಗೊಂಡೆಯ ಅರಸ ವೆಂಕಟಪತಿ-ರಾಯನು ಅವನನ್ನು ತನ್ನ ಆಸ್ಥಾನಕ್ಕೆ ಕರೆಸಿಕೊಂಡು ಸತ್ಕರಿಸಿದನು. ಸ್ವಲ್ಪ ಕಾಲ ಅಲ್ಲಿದ್ದ ಗಿರಿಯಪ್ಪ ನಾಯಕನು ಒಮ್ಮೆ ಯಾರಿಂದಲೂ ಎದುರಿಸಲಾಗದ ಮದವೇರಿದ ಆನೆಯೊಂದನ್ನು ನಿಯಂತ್ರಿಸಿದನು. ಇವನ ಸಾಹಸವನ್ನು ಮೆಚ್ಚಿ ವೆಂಕಟಪತಿರಾಯನು ಆನೆ, ಕುದುರೆ, ಪಲ್ಲಕ್ಕಿ, ಛತ್ರಿ ಮೊದಲಾದ ಅಮೂಲ್ಯ ಕಾಣಿಕೆಗಳನ್ನು ಒಂಭತ್ತು ಸಾವಿರ ಪಗೋಡಗಳ ಆದಾಯವುಳ್ಳ ಲಕ್ಕವ್ವನಹಳ್ಳಿ ಮತ್ತು ಅದರ ಸುತ್ತ ಮುತ್ತಲ ಪ್ರದೇಶಗಳನ್ನು ನೀಡಿದನು. ಅಲ್ಲಿಂದ ಈ ಮನೆತನದ ಪಾಳೆಯಪಟ್ಟ ಆರಂಭವಾಯಿತು.[೫೦]

ಗಿರಿಯಪ್ಪನಾಯಕನ ನಂತರ ಅವನ ಮಗ ದೊಡ್ಡಣ್ಣನಾಯಕನು ಮತ್ತೋಡನ್ನು ಆಳಿದನು. ಮತ್ತೋಡಿನಲ್ಲಿ ಒಂದು ಕೋಟೆಯನ್ನು[೫೧] ದೇವಾಲಯ ಮತ್ತು ಅರಮನೆಯನ್ನು ನಿರ್ಮಿಸಿದನು. ಇವನು ಮತ್ತೋಡು ನಿರ್ಮಾಣಕ್ಕೆ ಕಾರಣ ಪುರುಷನಾದನು. ಇವನ ನಂತರ ಬಂದ ಅರಸರಲ್ಲಿ ಸಂಗಪ್ಪನಾಯಕನು ಶೂರನಾಗಿದ್ದನು. ಶ್ರೀರಂಗಪಟ್ಟಣದ ಒಡೆಯರ ಆಸ್ಥಾನಕ್ಕೆ ಹೋಗಿದ್ದಾಗ ಹುಚ್ಚೆದ್ದು ನಿಯಂತ್ರಿಸಲು ಅಸಾಧ್ಯವಾದ ಕುದುರೆಯೊಂದನ್ನು ನಿಯಂತ್ರಿಸಿ, ಸವಾರಿ ಮಾಡಿದನೆಂದೂ, ಆಗ ಅವನ ಸಾಹಸಕ್ಕೆ ಅಸೂಯೆಪಟ್ಟ ಕೆಲವರು ಲವನೆಡೆಗೆ ನಿಂಬೆಹಣ್ಣು ಮುಂತಾದವುಗಳನ್ನು ಎಸೆದಾಗ ಅವನು ಕುದುರೆಯ ಮೇಲೆ ಕುಳಿತುಕೊಂಡೇ ಕತ್ತಿಯನ್ನು ಝಳಪಿಸುತ್ತಲೇ ಚಾತುರ್ಯದಿಂದ ಎಲ್ಲವನ್ನು ತುಂಡುಮಾಡಿದನು.[೫೨] ಎಂದೂ ದಾಖಲೆಗಳು ತಿಳಿಸುತ್ತವೆ.

ಸಂಗಪ್ಪನಾಯಕನ ನಂತರ ಪಟ್ಟಕ್ಕೆ ಬಂದವನು ಅವನ ಮಗ ದೊಡ್ಡ ಹಾಲಪ್ಪನಾಯಕನು. ಇವನು ಧರ್ಮಾಭಿಮಾನಿ, ವಿದ್ಯಾಪ್ರೇಮಿ, ದಕ್ಷ ಆಡಳಿತಗಾರನೂ ಆಗಿದ್ದನು. ಈತನು ಮತ್ತೋಡು ಪಾಳೆಯಗಾರರಲ್ಲಿ ಪ್ರಮುಖ ದೊರೆಯಾಗಿದ್ದಾನೆ. ಈ ಮನೆತನದವರು ಈ ಕಾಲದಲ್ಲಿ ಲಿಂಗದೀಕ್ಷೆಯನ್ನು ಪಡೆದು ವೀರಶೈವರಾದರು. ಮತ್ತೋಡು ದೊಡ್ಡ ಪಟ್ಟಣವನ್ನಾಗಿ ಮಾಡಲು ಪ್ರಯತ್ನಿಸಿದನು. ಒಂದು ಸುಂದರ ರಾಜಧಾನಿಯಾಗಿ ನಿರ್ಮಾಣಗೊಂಡಿತು. ಇವನು ಶಿವಭಕ್ತನಾಗಿದ್ದು ಅಪಾರವಾದ ಶೈವಶಾಸ್ತ್ರ ಜ್ಞಾನವನ್ನು ಹೊಂದಿದ್ದನು. ತನ್ನ ತಂದೆ ತಾಯಿಯರಿಗೆ ಶಿವಸಾನಿಧ್ಯ ಲಭಿಸಲೆಂದು ಕ್ರಿ.ಶ.೧೭೦೭ರಲ್ಲಿ ಮುರಿಗೆಸ್ವಾಮಿಗಳಿಗೆ ಮತ್ತೋಡಿನಲ್ಲಿ ಮಠವೊಂದನ್ನು ಕಟ್ಟಿಸಿ ಅದರ ನಿರ್ವಹಣೆಗಾಗಿ ಅರೆಹಳ್ಳಿ ಎಂಬ ಗ್ರಾಮವನ್ನು ದತ್ತಿಬಿಟ್ಟನು.

ಹಾಲಪ್ಪನಾಯಕನ ನಂತರ ಇವನ ಮಗ ಸಿದ್ಧರಾಮಪ್ಪನಾಯಕನು ಪಟ್ಟಕ್ಕೆ ಬಂದನು. ಇದರಿಂದ ಕೋಪಿಸಿಕೊಂಡ ಇವನ ಸಹೋದರ ದೊಡ್ಡಣ್ಣನಾಯಕನು ಚಿತ್ರದುರ್ಗದ ಪಾಳೆಯಗಾರ ಹಿರೇಮದಕರಿ ನಾಯಕನಲ್ಲಿಗೆ ಹೋಗಿ ಪಟ್ಟಕ್ಕೆ ಬರಲು ಅವರ ನೆರವನ್ನು ಯಾಚಿಸಿದನು. ಚಿತ್ರದುರ್ಗದ ಬಳಿ ಮೂರು ಸಾವಿರ ಪಗೋಡಗಳ ಕಪ್ಪ ಸಲ್ಲಿಸಬೇಕೆಂಬ ಒಪ್ಪಂದದ ಮೇರೆಗೆ ನೆರವು ನೀಡಲು ಒಪ್ಪಿ ಚಿತ್ರದುರ್ಗ ನಾಯಕನು ಮತ್ತೋಡಿನ ಮೇಲೆ ದಾಳಿ ಮಾಡಿದನು ಮತ್ತು ದೊಡ್ಡಣ್ಣ ನಾಯಕನನ್ನು ಮತ್ತೋಡಿನ ಸಿಂಹಾಸನದ ಮೇಲೆ ಕೂರಿಸಿ ಸಿದ್ಧರಾಮಪ್ಪ ನಾಯಕನನ್ನು ಸೆರೆ ಹಿಡಿದು ಚಿತ್ರದುರ್ಗದ ಸೆರೆಮನೆಯಲ್ಲಿಟ್ಟನು. ಸೆರೆಮನೆಯಲ್ಲಿದ್ದ ಸಿದ್ಧರಾಮಪ್ಪನಾಯಕನ ಆಕರ್ಷಣೆಗೆ ಮರುಳಾದ ಹಿರೇಮದಕರಿನಾಯಕನ ಪುತ್ರಿ ದ್ಯಾಮವ್ವ ಅವನನ್ನು ವಿವಾಹವಾಗಬಯಸಿದಳು. ಹಿರೇಮದಕರಿನಾಯಕನು ವೀರಶೈವನಾದ ಅವನಿಗೆ ಆ ಧರ್ಮ ಪ್ರಕಾರ ಮಗಳಿಗೆ ಲಿಂಗಧಾರಣೆ ಮಾಡಿಸಿ ವಿವಾಹ ಮಾಡಿಕೊಟ್ಟನು ಮತ್ತು ದೊಡ್ಡನಾಯಕರನ್ನು ಗದ್ದುಗೆಯಿಂದ ಇಳಿಸಿ ಸಿದ್ದರಾಮನಾಯಕನನ್ನು ಮತ್ತೆ ಮತ್ತೋಡು ಸಿಂಹಾಸನದ ಮೇಲೆ ಕೂಡಿಸಿದನು. ಮುಂದೆ ಚಿತ್ರದುರ್ಗದ ಹಿಡಿತಕ್ಕೆ ಮತ್ತೋಡು ಒಳಗಾಯಿತು.

ಸಿದ್ಧರಾಮಪ್ಪನಾಯಕನ ನಂತರ ಅವನ ಮಗ ಹಾಲಪ್ಪನಾಯಕನು ಪಟ್ಟಕ್ಕೆ ಬಂದನು. ಇವನ ಕಾಲದಲ್ಲಿ ಚಿತ್ರದುರ್ಗದ ಹಿರೇಮದಕರಿನಾಯಕನು ಹಾಲಪ್ಪನಾಯಕನಲ್ಲಿ ತಮಗೆ ಮೊದಲು ಕೊಡುತ್ತಿದ್ದ ಮೂರು ಸಾವಿರ ಪಗೋಡಗಳಿಗೆ ಬದಲಾಗಿ ನಾಲ್ಕು ಸಾವಿರ ಪಗೋಡಗಳನ್ನು ಕೊಡಬೇಕೆಂದು ಕೇಳಲು ಹಾಲಪ್ಪನಾಯಕನು ನಿರಾಕರಿಸಿದನು. ನಂತರ ಮತ್ತೋಡಿನ ಆರ್ಥಿಕ ನಿಜ ಸ್ಥಿತಿಯನ್ನು ನೋಡಿ ಮೊದಲಿನ ಕಪ್ಪದ ಮೊತ್ತವನ್ನೇ ಸ್ವೀಕರಿಸಿದನು. ತರುವಾಯ ಮತ್ತೋಡು ಮತ್ತು ಚಿತ್ರದುರ್ಗ ಸಂಬಂಧ ಕೆಟ್ಟಿತ್ತು. ಕ್ರಿ.ಶ.೧೭೭೯ರಲ್ಲಿ ಹೈದರಾಲಿ ಚಿತ್ರದುರ್ಗ ಪಾಳೆಯಗಾರರ ಮೇಲೆ ದಾಳಿ ಮಾಡಿದಾಗ ಈತ ಹೈದರಾಲಿಯ

ಜೊತೆ ಸೇರಿದನು.[೫೩] ನಂತರ ಚಿತ್ರದುರ್ಗದವರು ಸಿಟ್ಟಿಗೆದ್ದು ಮತ್ತೋಡನ್ನು ಆಕ್ರಮಿಸಿ ಹಾಳುಗೆಡವಿ ಹಾಲಪ್ಪನಾಯಕನನ್ನು ಸೆರೆಹಿಡಿದು ಚಿತ್ರದುರ್ಗದಲ್ಲಿಟ್ಟರು.[೫೪] ಆದರೆ ಕ್ರಿ.ಶ.೧೭೭೯ರಲ್ಲಿ ಹೈದರಾಲಿ ಮತ್ತೆ ದುರ್ಗದ ಮೇಲೆ ದಾಳಿ ಮಾಡಿದಾಗ ಮದಕರಿನಾಯಕನು ಹೈದರಾಲಿಯ ಸೆರೆಯಾದ. ಆಗ ಹಾಲಪ್ಪನಾಯಕನಿಗೆ ಬಿಡುಗಡೆಯಾಯಿತಾದರೂ ಮತ್ತೋಡಿನ ಪಟ್ಟ ಮತ್ತೆ ದೊರೆಯಲಿಲ್ಲ. ಮನೆತನದ ಕಡೆ ದೊರೆಯಾಗಿದ್ದ ಹಾಗೂ ಅಧಿಕಾರ ಭ್ರಷ್ಟನಾಗಿದ್ದ ಹಾಲಪ್ಪನಾಯಕನನ್ನು ಬ್ರಿಟಿಷ್ ಸರ್ವೇಕ್ಷಣಾಧಿಕಾರಿ ಬುಕಾನನ್ ಕ್ರಿ.ಶ.೧೮೦೧ ಮೇ ೬ ರಂದು ಭೇಟಿಯಾಗಿದ್ದನು. ಹಾಲಪ್ಪನಾಯಕನು ತನಗೆ ನ್ಯಾಯಯುತವಾಗಿ ಸಲ್ಲಬೇಕಾಗಿದ್ದ ರಾಜ್ಯಾಧಿಕಾರ ತಪ್ಪಿ ಹೋದುದರಿಂದ ಹಾಗಲವಾಡಿಗೆ ಹೋಗಿ ಅನೇಕ ವರ್ಷಗಳ ಕಾಲ ಅಲ್ಲೆ ಇದ್ದನು. (ಬುಕಾನನು ಭೇಟಿಯಾದ ಕಾಲಕ್ಕೆ ೧೨ ವರ್ಷಗಳ ಹಿಂದೆ) ಅಲ್ಲಿಂದ ಮತ್ತೋಡಿಗೆ ಮರಳಿ ಬಂದು ಒಂದು ಗುಡಿಸಲಿನಲ್ಲಿ ಇದ್ದನೆಂದು ಹೇಳಿದ್ದಾನೆ.[೫೫] ಹಾಗೂ ಹಾಲಪ್ಪನಾಯಕನ ಅರಮನೆ ಬಹುಪಾಲು ಹಾಳಾಗಿ ಹೋಗಿದ್ದು, ಅದರ ಒಂದು ಭಾಗ ಮಾತ್ರ ಒಂದು ಸಾರ್ವಜನಿಕ ಕಛೇರಿಗಾಗಿ ಮತ್ತು ಅಮಲ್ದಾರರ ನಿವಾಸಕ್ಕಾಗಿ ದುರಸ್ತಿ ಮಾಡಿಕೊಂಡು ಬಳಸಲಾಗುತ್ತಿತ್ತೆಂದು ಸಹ ಬರೆದಿರುವನು.[೫೬]

ಮತ್ತೋಡು ಸಮೀಪ ಅರಸಿನತೋಟದಲ್ಲಿ ಈ ಪಾಳೆಯಗಾರ ವಂಶಸ್ಥರ ಕುಟುಂಬಗಳು ಇವೆ. ಏಕೆಂದರೆ ಇತ್ತೀಚಿನವರೆಗೂ ರಾಜಕೀಯದಲ್ಲಿ ಈ ಮನೆತನದವರು ಸ್ಪರ್ಧಿಸಿರುವುದು, ಗೆದ್ದಿರುವುದು ಕಡಿಮೆ. ಈ ಮನೆತನಕ್ಕೆ ಸೇರಿದ ಒಂದು ಸಂತತಿಯವರು ಸರಕಾರಿ ಉನ್ನತ ಹುದ್ದೆಗಳಲ್ಲಿ ಸೇರಿಕೊಂಡಿದ್ದಾರೆ. ಅವರ ಮಕ್ಕಳೂ ಅದೇ ಹಾದಿಯಲ್ಲಿ ಮುನ್ನಡೆದಿದ್ದಾರೆ. ಕೆಲವರು ವಿದೇಶದಲ್ಲಿ ಉನ್ನತ ಹುದ್ದೆಗಳಲ್ಲಿದ್ದಾರೆ. ಇನ್ನೊಂದು ಕವಲು ಸಂತತಿಯವರು ಈಗ ಅರಸಿನತೋಟದಲ್ಲಿ ಕೃಷಿಕರಾಗಿ ಜೀವನವನ್ನು ನಿರ್ವಹಿಸುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ರಾಜಕೀಯವಾಗಿ ಇವರು ಸ್ವಲ್ಪ ಗುರುತಿಸಿಕೊಂಡಿದ್ದಾರೆ. ದೊರೆಗಳು, ಪಾಳೆಯಗಾರರು ಎಂದು ಜನರು ಗೌರವದಿಂದ ಕರೆಯುತ್ತಾರೆ. ವಿದೇಶದಲ್ಲಿರುವವರು ಈ ಭಾಗದ ರಾಜಕಾರಣಿಗಳ ಜೊತೆ ಒಡನಾಟ ಹೊಂದಿದ್ದಾರೆ. ಗ್ರಾಮ, ತಾಲೂಕು, ಜಿಲ್ಲೆ ಮತ್ತು ರಾಜ್ಯಮಟ್ಟದಲ್ಲೂ ಈ ಮನೆತನದವರ ಪ್ರಭಾವ ಇದೆ. ಈಗ ಅರಸಿನತೋಟದಲ್ಲಿ ನೆಲೆಸಿರುವವರಲ್ಲಿ ಒಬ್ಬರಾದ ಪಿ.ಜಿ.ಮಲ್ಲಿಕಾರ್ಜುನ ಎಂಬುವರು ಗ್ರಾಮ ಪಂಚಾಯ್ತಿ ಸದಸ್ಯರಾಗಿರುವುದನ್ನು ಹೊರತುಪಡಿಸಿದರೆ, ಉನ್ನತಮಟ್ಟದ ರಾಜಕೀಯ ಹಂತವನ್ನು ಪ್ರಸ್ತುತ ದಿನಗಳಲ್ಲಿ ಈ ಮನೆತನದವರು ತಲುಪಿಲ್ಲದಿರುವುದು ಕಂಡುಬರುತ್ತದೆ. ಇನ್ನೊಂದು ಅಂಶವೆಂದರೆ, ಮತ್ತೋಡು ಸುತ್ತಮುತ್ತಲಿನ ಬೇಡರೆಲ್ಲರೂ ತಮ್ಮನ್ನು ಪಾಳೆಯಗಾರರೆಂದು ಕರೆದುಕೊಳ್ಳುವುದು ಇಲ್ಲಿ ರೂಢಿಯಲ್ಲಿದೆ. ಅಲ್ಲದೆ, 'ಪಾಳೇಗಾರ' ಎಂಬುದೊಂದು ಜಾತಿ ಎಂಬ ಭಾವನೆಯೂ ಅವರಲ್ಲಿದೆ.

## ಹರತಿ ಪಾಳೆಯಗಾರರು

ಚಿತ್ರದುರ್ಗದಿಂದ ಪೂರ್ವಕ್ಕೆ ಪಾವಗಡದವರೆಗೂ ಹಬ್ಬಿ ವಿಶಾಲವಾದ ರಾಜ್ಯವನ್ನು ಸುಮಾರು೨-೩ ಶತಮಾನಗಳ ಕಾಲ ಹರತಿ ಪಾಳೆಯಗಾರರು ಆಳಿದರು. ಈ ಹರತಿ ವಂಶಜರೇ ನಿಡಗಲ್‌ಗೆ ಹೋಗಿ ನೆಲೆಸಿದರು. ಹೀಗಾಗಿ ಪಾಳೆಯಗಾರರನ್ನು ಶಾಸನಗಳು "ಹರತಿ ಐಮಂಗಲ ನಾಯಕರು", "ಹರತಿ ನಿಡಗಲ್ ನಾಯಕರು" ಎಂದು ಕರೆದಿವೆ.[illegible] ಹರತಿ ಪಾಳೆಯಪಟ್ಟು ಚಿತ್ರದುರ್ಗದಿಂದ ಪಾವಗಡದವರೆಗೆ ಮತ್ತು ಮೊಳಕಾಲ್ಮೂರಿನಿಂದ ಶಿರಾದವರೆಗಿನ ವಿಸ್ತಾರವನ್ನು ಹೊಂದಿತ್ತು. ತಿಪ್ಪರಾಜನು ಹರತಿ ಪಾಳೆಯಪಟ್ಟವನ್ನು ಸ್ಥಾಪಿಸಿದನು. ಹರತಿ ಪಾಳೆಯಗಾರರ ದಾಯಾದಿಗಳು ರಾಯದುರ್ಗ, ದೊಡ್ಡೇರಿ, ನಿಡಗಲ್ಲು, ರತ್ನಗಿರಿ, ಶಿರಾ, ಹಿರಿಯೂರು, ಐಮಂಗಳ ಮುಂತಾದ ಕಡೆಗಳಲ್ಲಿ ಆಳ್ವಿಕೆ ನಡೆಸಿದಂತೆ ಕಂಡುಬರುತ್ತದೆ. ಅಲ್ಲದೆ ಸುಮಾರು ನಲವತ್ತೈದು ನಾಯಕರು ಪ್ರಭುತ್ವ ನಡೆಸಿದಂತೆ ತಿಳಿದುಬರುತ್ತದೆ.[illegible]

ಹರತಿನಾಯಕರ ವಂಶದ ಮೂಲ ಪುರುಷನಾದ ತಿಪ್ಪರಾಜನು ವಾಸ್ತವವಾಗಿ ವಿಜಯನಗರದ ಸಂಗಮ ವಂಶದ ಸ್ಥಾಪಕರಾದ ಹಕ್ಕಬುಕ್ಕರ ಸಮಕಾಲೀನನು. ಅಲ್ಲದೆ ಅವನು ಸೈನ್ಯದಲ್ಲಿ ಪ್ರಮುಖ ದಳಪತಿಯಾಗಿದ್ದನು. ತಿಪ್ಪರಾಜನು ಅಳಿದುಳಿದ ಹೊಯ್ಸಳ ಸಾಮಂತಾಧಿಪತಿಗಳಲ್ಲಿ ಅತಿ ಬಲಿಷ್ಠನಾಗಿದ್ದ ನಿಡಗಲ್ಲಿನ ದುರ್ಗಾಧಿಪತಿ ಚಿಕ್ಕ ಬೊಮ್ಮಯನಾಯಕನನ್ನು ದ್ವಂದ್ವ ಯುದ್ಧದಲ್ಲಿ ಶಿರಶ್ಛೇಧನ ಮಾಡಿದನು. ಆದ್ದರಿಂದ ಆತನಿಗೆ ಹರಿಹರನು "ಹೊಳಕಲ್ಲಬೊಂಮನ ಶಿರಶ್ಛೇದನಂ" ಎಂಬ ಬಿರುದನ್ನು ದಯಪಾಲಿಸಿದನು.[illegible] ಅಲ್ಲದೆ ವಿಜಯನಗರದ ಅರಸರ ಸಹಾಯಕನಾಗಿ ಅನೇಕ ಯುದ್ಧಗಳಲ್ಲಿ ಭಾಗವಹಿಸುತ್ತಾ ಅನೇಕ ಬಿರುದುಗಳನ್ನು ಧರಿಸಿದನು. ಇವನ ಸಾಹಸ ಮೆಚ್ಚಿದ ಬುಕ್ಕರಾಯನು ವೇದಾವತಿ ತೀರದ ಬಹು ಭೂಭಾಗವನ್ನೆಲ್ಲ ಆತನಿಗೆ ಜಾಗಿರಾಗಿ ಕೊಟ್ಟಿದ್ದನು. ಇವನ ನಂತರದಲ್ಲಿ ಇವನ ಮೊಮ್ಮಗ ಅಬ್ಬಯ್ಯನಾಯಕನು ಪ್ರಸಿದ್ಧಿಯನ್ನು ಹೊಂದಿರುವುದನ್ನು ಶಾಸನಗಳು ತಿಳಿಸುತ್ತವೆ. ಅಬ್ಬಯ್ಯನಾಯಕನ ಹಿರಿಯ ಮಗ ಪಾಲನಾಯಕ ಕೋಟೆಕೆರೆ ಮತ್ತು ಹರತಿಯಲ್ಲಿ, ಎರಡನೇ ಮಗ ಐಮಂಗಳ, ಹರತಿ ಮತ್ತು ಸಾರವಾಡ, ಮೂರನೇ ಮಗ ತಳಕು ಮತ್ತು ದೊಡ್ಡೇರಿಯನ್ನು ಸ್ಥಾಪಿಸಿದನು. ಪಾಲನಾಯಕನ ನಂತರದಲ್ಲಿ ಅವನ ಮೊಮ್ಮಗ ಚಿಕ್ಕತಿಪ್ಪರಾಜನು ನಿಡಗಲ್ಲು ದುರ್ಗಾಧಿಪತಿಯಾಗಿ ಪ್ರಸಿದ್ಧಿಗೆ ಬಂದಿದ್ದನು. ನಿಡಗಲ್ಲು ದುರ್ಗಾಧಿಪತ್ಯವನ್ನು ಕಳೆದುಕೊಂಡ ಚಿಕ್ಕತಿಪ್ಪರಾಜನ ಮಕ್ಕಳೂ, ಮೊಮ್ಮಕ್ಕಳು, ಮಡಕಪಲ್ಲೆದ ದಕ್ಷಿಣಕ್ಕೆ ವಲಸೆ ಬಂದು ಅಲ್ಲಿಂದ ಕಾಲಕ್ರಮೇಣ ಹಿರ್ಯದ ಪಾಳೆಪಟ್ಟನ್ನು ಸ್ಥಾಪಿಸಿ ತದನಂತರ ೧೬೦೦ರ ಸುಮಾರಿಗೆ ರತ್ನಗಿರಿ ಮತ್ತು ಮಿಡಿಗೇಶಿಗಳಲ್ಲಿ ನೆಲೆಸಿ ದರೆಂದು ಶಾಸನಗಳ ಬಲದಿಂದ ನಿರ್ಣಯಿಸಬಹುದು.[illegible]

ಲಕ್ಷ್ಮೀಪತಿ ನಾಯಕನು ಕ್ರಿ.ಶ.೧೫೬೦ ರಿಂದ ೧೫೮೦ರವರೆಗೆ ಆಳ್ವಿಕೆ ನಡೆಸಿದನು. ಈತನು ತನ್ನ ಎರಡನೆಯ ಮಗನಾದ ಚಿಕ್ಕರಂಗಪ್ಪನಾಯಕನಿಗೆ ಹರತಿಯ ಸ್ಥಳದ ಆಳ್ವಿಕೆಯನ್ನು ಕೊಟ್ಟು, ತಾನು ಹಿರಿಯಮಗನಾದ ರಂಗಪ್ಪನಿಗೆ ರತ್ನಗಿರಿ ಮತ್ತು ಅಗಳಿಸ್ಥಳಗಳನ್ನೂ ಕೊಟ್ಟಿದ್ದನು. ಒಂದನೇ ರಂಗಪ್ಪ ನಾಯಕ ಎಂಬುವನು ಒಂದನೇ ಶ್ರೀರಂಗರಾಯ ಹಾಗೂ ಎರಡನೇ ವೆಂಕಟಪತಿ ಇಬ್ಬರ ಕಾಲದಲ್ಲಿ ಅಮರನಾಯಕನಾಗಿದ್ದನು. ಈತನು ತನ್ನ ಮೊದಲನೆಯ ಶಾಸನದಲ್ಲಿಯೇ "ಯನುಮಲವಂಶದ ವಾಲ್ಮೀಕಿ ಗೋತ್ರ" ಎಂದು ತನ್ನ ಬೆಡಗನ್ನು ಹೇಳಿಕೊಂಡಿದ್ದಾನೆ. ತನ್ನನ್ನು ಬೇಡರ ಜನಾಂಗದ ನಾಯಕನೆಂದು ಘೋಷಿಸಿಕೊಂಡಿದ್ದಾನೆ. ದಿನಾಂಕ ೧೪-೧೦-೧೫೮೬ರಲ್ಲಿ ಅಗಳಿ ಸೀಮೆಯ ಹರ್ತಿಕೋಟೆಯ ಸೀಮೆಯ ದೊಡ್ಡೇರಿಗೆ ಶ್ರೀ ವೆಂಕಟೇಶ್ವರ ಸಮುದ್ರವೆಂದು ಹೆಸರಿಟ್ಟು, ವೆಂಕಟಪತಿರಾಯನ ಪಟ್ಟವಾದ ಆರು ತಿಂಗಳಿಗೆಲ್ಲ ಅವನನ್ನು ಮೆಚ್ಚಿಸಿಕೊಳ್ಳಲು ಯತ್ನಿಸಿದನು. ೧ನೇ ರಂಗಪ್ಪನಾಯಕನ ನಂತರ ಎರಡನೇ ರಂಗಪ್ಪನಾಯಕ, ಇವನ ಮಗ ಮೂರನೇ ರಂಗಪ್ಪನಾಯಕ ಶೈವಧರ್ಮಕ್ಕೆ ಹೆಚ್ಚಿನ ಆದ್ಯತೆ ನೀಡಿ ಆಳಿದರೆಂದೂ, ಇವನ ನಂತರ ಆಡಳಿತಕ್ಕೆ ಬಂದ ಕೋಟೆ ಕೆರೆಯ ಅಬ್ಬೆ ನಾಯಕನ ಎರಡನೆಯ ಮಗನಾದ ಕಾಮನಾಯಕನ ಆಡಳಿತದೊಂದಿಗೆ ಈ ಸಂತತಿ ಮುಗಿಯಿತೆಂದು ಕಾಣುತ್ತದೆ. ಇವರು ಸುಮಾರು ಕ್ರಿ.ಶ.೧೫೬೦ ರಿಂದ ೧೬೩೦ರವರೆಗೆ ರತ್ನಗಿರಿ, ಅಗಳಿ, ದೇವನಸಿರ್ಯಗಳಲ್ಲಿ ಆಳ್ವಿಕೆ ನಡೆಸಿದರು. ಈ ಕೋಟೆಕೆರೆಯ ಅಜ್ಜೆನಾಯಕನ ಮೂರನೆಯ ಮಗನಾದ ಬೊಮ್ಮನಾಯಕನ ಸಂತತಿಯವರು ಚಳ್ಳಕೆರೆ ತಾಲ್ಲೂಕಿನಲ್ಲಿ ಹಾಗೂ ಚಳ್ಳಕೆರೆ ತಾಲ್ಲೂಕಿನ ಪರಶುರಾಮಪುರ, ತಳುಕು, ದೊಡ್ಡೇರಿ ಮತ್ತು ೧೬೪೦ರ ನಂತರ ನಿಡಗಲ್ಲುಗಳಲ್ಲಿ ರಾಜ್ಯವಾಳಿದರು.

ಸಿರಾ ಪಾಳೆಪಟ್ಟನ್ನು ಹಿರೇ ಒಡೆಯ ಎಂಬವನು ವಿಜಯನಗರ ಕಾಲದಲ್ಲಿ ಸ್ಥಾಪಿಸಿದನು ಎಂದು ಅನಂತಪುರ ಜಿಲ್ಲಾ ಗೆಜೆಟಿಯರ್‌ನಲ್ಲಿ ಹೇಳಲಾಗಿದೆ. ಈ ಹಿರೇ ಒಡೆಯನು ಹರತಿ ಮನೆತನದ ಮೂಲ ಪುರುಷನಾದ ತಿಪ್ಪರಾಜನಿಗೆ ಹನ್ನೊಂದನೇ ತಲೆಮಾರಿನವನೆಂದು ಹರತಿ ವೀರನಾಯಕರಿಂದ ತಿಳಿದು ಬರುತ್ತದೆಯಾದರೂ ಅದು ಇನ್ನೂ ಪ್ರಶ್ನಾರ್ಥಕವಾಗಿದೆ. ಕರಿರಂಗಪ್ಪ ರಾಜನ ಕಾಲದಲ್ಲಿ ಕ್ರಿ.ಶ.೧೫೭೧ರ ಸುಮಾರಿನಲ್ಲಿ ಸದಾ ಕೋಟೆಯನ್ನು ಕಟ್ಟಲಾಯಿತು ಮತ್ತು ಕಾಲಕ್ರಮದಲ್ಲಿ ಸಿರ್ಯವು ಹಿರೇ ಒಡೆಯನ ಸಂತತಿಯವರಿಗೆ ರಾಜಧಾನಿಯಾಯಿತು. ಕ್ರಿ.ಶ.೧೬೩೮ರಲ್ಲಿ ವಿಜಾಪುರದ ಸೇನಾಪತಿಗಳಾದ ರಣದುಲ್ಲಾಖಾನ್ ಮತ್ತು ಅಫ್‌ಜಲ್ಲಾಖಾನ್ ಶಿರಾವನ್ನು ಮುತ್ತಿ, ಸರ್ಜಾರಂಗಪ್ಪನಾಯಕನನ್ನು ಗುಮ್ಮಳಿ ಕದನದಲ್ಲಿ ಕೊಂದರು. ೧೬೩೮ರ ನಂತರ ಸಿರಾ ಪಾಳೆಯಗಾರ ವಂಶವು ಎರಡು ಶಾಖೆಗಳಾಗಿ ಒಂದು ಬಿಡಿಗೇಶಿಯಲ್ಲಿಯೂ ಮತ್ತೊಂದು ರತ್ನಗಿರಿಯಲ್ಲಿಯೂ ನೆಲಸಿದವು.[1] 'ಗುಮ್ಮಳಿಕದನ'ದ ಪ್ರಕಾರ ಪ್ರೂವಲ ಕೆಂಗಣ್ಣನಾಯಕನು ಮತ್ತು ಸೀರಾದ ರಂಗಪ್ಪನಾಯಕನು ಅಳಿಯ ಮಾವ ಆಗಬೇಕು.

ಕೆಂಗಣ್ಣನಿಗೆ ರಂಗಪ್ಪನು ತನ್ನ ತಂಗಿಯಿಂದ ಅವಮಾನ ಮಾಡಿಸಿದನು ಅದರ ಫಲವಾಗಿ ಕೆಂಗಣ್ಣನು ಬಿಜಾಪುರದವರನ್ನು ಕರೆತಂದು, ಶಿರಾ ಕೋಟೆಯನ್ನು ಮುತ್ತಿಸಿ ರಂಗಪ್ಪನ ದುರಂತಕ್ಕೆ ಕಾರಣನಾದನು. ದ್ವೇಷವು ರಕ್ತ ಸಂಬಂಧವನ್ನೇ ಮರೆತು ಹೋರಾಡುವಂತೆ ಮಾಡಿದ ಅನೇಕ ಪ್ರಸಂಗಗಳನ್ನು ಈ ಕಾಲದಲ್ಲಿ ಕಾಣಬಹುದು. ಮಿಡಿಗೇಶಿ ಪಾಳೆಯಗಾರರ ರಾಯರೇಖಾ ದಾಖಲೆಯ ಪ್ರಕಾರ, ಕಸ್ತೂರಿ ರಂಗಪ್ಪರಾಜನು ಮಿಡಿಗೇಶಿಯಲ್ಲಿ ಪಾಳೆಯಗಾರನಾಗಿ ನಂತರ ಇವನ ಮಕ್ಕಳು, ಮೊಮ್ಮಕ್ಕಳು ಅಧಿಕಾರ ನಡೆಸಿದರೆಂದು ಗೊತ್ತಾಗುತ್ತದೆ. ಚಿಕ್ಕದೇವರಾಜ ಒಡೆಯರು ಮಿಡಗೇಶಿ ಮತ್ತು ಗಂಡುಮಲೆದುರ್ಗಗಳ ಮೇಲೆ ದಾಳಿ ಮಾಡಿದ್ದನು. ಕ್ರಿ.ಶ.೧೭೧೧ರಲ್ಲಿ ಕಂಠೀರವ ನರಸರಾಜ ಒಡೆಯರು ರಂಗಪ್ಪನಾಯಕನನ್ನು ಕೊಂದು ಮಿಡಿಗೇಶಿ ರಾಜ್ಯಕ್ಕೆ ಖಂಡಣಿ ಹಣವನ್ನು ನಿಗದಿ ಮಾಡಿದರು. ಕ್ರಿ.ಶ.೧೬೭೫ರಲ್ಲಿ ಹೈದರಾಲಿಯಿಂದ ಜಾಗೀರು ಪಡೆದುಕೊಂಡು ಕಸ್ತೂರಿರಾಯಪ್ಪ ರಾಜನ ಎರಡನೇ ಮೊಮ್ಮಗ ವೆಂಕಟಶಾಮಿರಾಜನು ನಿರಾಳವಾಗಿದ್ದನು.[೯]

ರತ್ನಗಿರಿಯು ಪ್ರಾರಂಭದಲ್ಲಿ ಹರತಿಯ ಹಿರಿಯ ರಂಗಪ್ಪನಾಯಕನಿಗೆ ನಂತರ ಇಮ್ಮಡಿ ಮತ್ತು ಮುಮ್ಮಡಿ ರಂಗಪ್ಪನಾಯಕರ ವಶದಲ್ಲಿತ್ತು. ಕ್ರಿ.ಶ.೧೬೨೮ರ ವೇಳೆಗೆ ಹರತಿ ಸಂಮೇಟ ಎಂಬ ವಿಶಿಷ್ಟ ಮನೆ ಹೆಸರುಳ್ಳ ಕಸ್ತೂರಿ ರಂಗಪ್ಪರಾಜನ ವಶವಾಯಿತು. ನಂತರ ರತ್ನಗಿರಿಯ ಪಾಳೆಯಗಾರರು ತಮ್ಮ ಮೂಲ ಬೆಡಗಾದ 'ಹಾರಿತಿಗೋತ್ರ ಎನುಮುಲವಂಶ' ಎಂಬ ಬೆಡಗನ್ನು ಬಿಟ್ಟುಕೊಟ್ಟು 'ಆತ್ರೇಯಸ ಗೋತ್ರ ಆಪ್ತಸ್ತಂಭ ಸೂತ್ರ ಯಜಶ್ಯಾಖಾಧ್ಯಾಯ ಮಹಾಮಂಡಲೇಶ್ವರ'ರೆಂದು ಕರೆದುಕೊಂಡರು. ಈ ಬದಲಾವಣೆಗೆ ಪ್ರಾಯಶಃ ವಿಜಯನಗರದ ಅಳಿಯ ರಾಮರಾಯನಿಗೆ ನಿಷ್ಠರಾಗಿದ್ದುದರಿಂದ ರಾಮರಾಯನ ಆತ್ರೇಯಸ ಗೋತ್ರವನ್ನು ಅನುಸರಿಸಿದ್ದಾರೆ. ರತ್ನಗಿರಿಯ ಕೃಷ್ಣಪ್ಪರಾಜನ ಆಳ್ವಿಕೆಯಲ್ಲಿ ಶ್ರೀರಂಗಪಟ್ಟಣದ ರಣಧೀರ ಕಂಠೀರವನರಸರಾಜ ಒಡೆಯರ ಆಕ್ರಮಣಕ್ಕೆ ಪುನಃ ದೊಡ್ಡಕೃಷ್ಣರಾಜ ಒಡೆಯರ ದಾಳಿಗೆ ಹಾಗೂ ಕೊನೆಯದಾಗಿ ೧೭೫೮ರಲ್ಲಿ ಪೇಶ್ವೆ ನಾನಾಸಾಹೇಬ ಬಾಲಾಜಿರಾವ್ ರತ್ನಗಿರಿಯ ಸುತ್ತಮುತ್ತಲ ಪ್ರದೇಶವನ್ನು ವಶಪಡಿಸಿಕೊಂಡನು.

ಬಿಜಾಪುರದ ಸೇನೆಯ ದಾಳಿಗಗಳು, ಪ್ರಬಲವಾಗುತ್ತಿದ್ದ ಚಿತ್ರದುರ್ಗ ನಾಯಕರು, ವಿಜಯನಗರ ನಂತರ ಪ್ರಾಬಲ್ಯಕ್ಕೆ ಬಂದ ಮೈಸೂರು ಅರಸರು, ಇವರೆಲ್ಲರ ದಾಳಿಗಳಿಂದ ಸುರಕ್ಷಿತವಾಗಿರಲು ಹರತಿ, ದೊಡ್ಡೇರಿ, ಹಿರಿಯೂರು, ಐಮಂಗಲ ಮೊದಲಾದ ಪಾಳೆಯಪಟ್ಟಗಳನ್ನು ನೆಪಮಾತ್ರಕ್ಕೆ ಉಳಿಸಿಕೊಂಡು ನಿಡಗಲ್ಲುದುರ್ಗವನ್ನೇ ತಮ್ಮ ರಾಜಧಾನಿ ಕೇಂದ್ರವನ್ನಾಗಿ ಮಾಡಿಕೊಂಡು ಆಳಿದರು. ಈ ಹಿನ್ನೆಲೆಯಲ್ಲಿ ಅವರನ್ನು ಇತ್ತೀಚಿನ ಶಾಸನಗಳಲ್ಲಿ 'ನಿಡಗಲ್ಲು ನಾಯಕರೆಂದು' ಕರೆದಿರಬೇಕು. ಕ್ರಿ.ಶ.೧೭೬೧ರಲ್ಲಿ ಹೈದರಾಲಿಯು ದಂಡೆತ್ತಿ ಬಂದಾಗ ತಿಮ್ಮಣ್ಣನಾಯಕ ಎಂಬುವನು ಸೋತು ೭೦೦೦ ಪಗೋಡುಗಳನ್ನು,

೩೦೦ ಜನ ಸೈನಿಕರನ್ನು ಕಾಣಿಕೆಯಾಗಿ ಕೊಡಲು ಒಪ್ಪಿ ಮೈಸೂರಿಗೆ ಅಧೀನನಾಗುತ್ತಾನೆ.[೬೨] ಟಿಪ್ಪುಸುಲ್ತಾನನು ತಿಮ್ಮಣ್ಣನಾಯಕನನ್ನು ಸೋಲಿಸಿ ಅವನ ಮಗ ಹೊಟ್ಟೆಣ್ಣನಾಯಕರನ್ನು ಮತ್ತು ಈತನ ಸಹೋದರರನ್ನು ಶ್ರೀರಂಗಪಟ್ಟಣಕ್ಕೆ ಹೊಯ್ದು ಕೊಲ್ಲಿಸಿದನೆಂದು ತಿಳಿದುಬರುತ್ತದೆ.[೬೩]

ಹಿರಿಯೂರು, ಬುಕ್ಕಪಟ್ಟಣಗಳಲ್ಲಿಯೂ ಹರತಿ ಪಾಳೆಯಗಾರರು ಆಳಿದರು. ಈ ಮನೆತನದ ಕೆಂಚಪ್ಪನಾಯಕ ಮತ್ತು ಇಮ್ಮಡಿ ಕೆಂಚಪ್ಪನಾಯಕ ಚಿತ್ರದುರ್ಗದ ಇತಿಹಾಸದಲ್ಲಿ ಶಾಸನೋಕ್ತರಾಗಿದ್ದಾರೆ. ಕ್ರಿ.ಶ.೧೭೭೯ರಲ್ಲಿ ಇಮ್ಮಡಿ ಮದಕರಿನಾಯಕನು ಹಿರಿಯೂರನ್ನು ಮತ್ತೆ ವಶಪಡಿಸಿಕೊಂಡನೆಂದು ಹೇಳಲಾಗಿದೆ.

ಹೀಗೆ ಹರತಿ ವಂಶದವರು ಮೊದಲು ಸೈನ್ಯಧಿಕಾರಿಗಳಾಗಿ, ಜಾಗೀರುದಾರರಾಗಿ, ಪಾಳೆಯಗಾರರಾಗಿ, ವಿಜಯನಗರದ ಮಹಾನಾಯಚಾರ್ಯರಾಗಿ ನಂತರ ಸ್ವತಂತ್ರರಾಗಿ ಹರತಿ, ಕೋಟಿಕೆರೆ, ಬುಕ್ಕಪಟ್ಟಣ, ಮಡಕಸಿರಾ, ಪರಶುರಾಮಪುರ, ಹೊಸಕೋಟೆ, ರತ್ನಗಿರಿ, ನಿಡಗಲ್ಲು, ಮಿಡಗೇಶಿ ಮುಂತಾದೆಡೆಗಳಲ್ಲಿ ಪಾಳೆಯಪಟ್ಟನ್ನು ಸ್ಥಾಪಿಸಿ ಕ್ರಿ.ಶ.೧೩೪೦ ರಿಂದ ೧೮೦೦ರವರೆಗೆ ಆಳಿದರು.[೬೪] ವಿಜಯನಗರಕ್ಕೆ ನಿಷ್ಠೆಯನ್ನು ಹೊಂದಿದ್ದ ಹರತಿ ಪಾಳೆಯಗಾರರು ವಿಜಯನಗರ ಪತನದ ನಂತರವೂ ನಿಷ್ಠೆಯನ್ನು ಮುಂದುವರೆಸಿದರು. ಹರತಿಯಿಂದ ನಿಡಗಲ್ಲಿಗೆ ರಾಜಧಾನಿಯನ್ನು ಸ್ಥಳಾಂತರ ಮಾಡಿಕೊಂಡು ಅಲ್ಲಿಯೇ ನೆಲೆಯೂರಿದ್ದರಿಂದ ಹಾಗೂ ಇತರ ಕೆಲವು ಸ್ಥಳಗಳಲ್ಲೂ ಆಳಿದ್ದರಿಂದ ಹರತಿ ಪಾಳೆಯಗಾರರ ವಂಶಜರಾರೂ ಹರತಿಯಲ್ಲಿ(ಈಗಿನ ಹರ್ತಿಕೋಟೆಯಲ್ಲಿ) ನೆಲೆಸಿರುವುದಿಲ್ಲ. ತಮ್ಮ ದೊರೆಗಳ ವಂಶಜರು ರತ್ನಗಿರಿಯಲ್ಲಿದ್ದಾರೆ. "ಅವರನ್ನು ಊರಿನ ಪ್ರಮುಖ ಉತ್ಸವಾದಿ ಸಂದರ್ಭಗಳಲ್ಲಿ ಕರೆಸುತ್ತೇವೆ" ಎಂದು ಹರತಿ ಗ್ರಾಮದ ಗಣ್ಯರು ಹೇಳುತ್ತಾರೆ. ಈ ಮನೆತನದವರಾರೂ ಮೂಲಸ್ಥಳದಲ್ಲಿ ಇಲ್ಲವಾದ್ದರಿಂದ ಅವರ ಪ್ರಸ್ತುತ ರಾಜಕೀಯ ಸ್ಥಿತಿಗತಿಯ ವಿವರಗಳು ದೊರೆಯುವುದಿಲ್ಲ.

## ಬಳ್ಳಾರಿ ಜಿಲ್ಲೆಯ ಬೇಡ ಪಾಳೆಯಗಾರರು

ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಹಾಗೂ ಆಳ್ವಿಕೆಯಿಂದಾಗಿ ಬಳ್ಳಾರಿ ಜಿಲ್ಲೆ ಚಾರಿತ್ರಿಕವಾಗಿ ಮಹತ್ವವನ್ನು ಪಡೆದುಕೊಂಡಿದೆ. ವಿಜಯನಗರ ಸಾಮ್ರಾಜ್ಯದ ರಾಜಧಾನಿ ಹಂಪೆ ರಾಮಾಯಣ ಕಾಲದಿಂದಲೂ ಪ್ರಸಿದ್ಧಿಯನ್ನು ಪಡೆದಿದೆ. ವಿಜಯನಗರ ಅರಸರ ಅಧೀನದಲ್ಲಿದ್ದ ಕೆಲವು ಪಾಳೆಯಗಾರರು ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತಾರೆ. ಜರಿಮಲೆ, ಗುಡೇಕೋಟೆ, ಹರಪನಹಳ್ಳಿ ಮತ್ತು ಬಳ್ಳಾರಿ ಪ್ರದೇಶದಲ್ಲಿ ಪಾಳೆಯಪಟ್ಟುಗಳಿದ್ದವು. ಹಂಡೇಕುರಬ ಜನಾಂಗಕ್ಕೆ ಸೇರಿದ ಪಾಳೆಯಗಾರರು ಬಳ್ಳಾರಿ ಪ್ರದೇಶದಲ್ಲಿ ಆಳ್ವಿಕೆ ಮಾಡಿದರು. ಜರಿಮಲೆ, ಗುಡೇಕೋಟೆ ಮತ್ತು ಹರಪನಹಳ್ಳಿ ಸ್ಥಳಗಳಲ್ಲಿ ಬೇಡ

ಜನಾಂಗಕ್ಕೆ ಸೇರಿದ ಪಾಳೆಯಗಾರರು ಅಧಿಕಾರವನ್ನು ನಡೆಸಿದರು. ೧೫ನೇ ಶತಮಾನದಲ್ಲಿ ಅಧಿಕಾರಕ್ಕೆ ಬಂದ ಈ ಪಾಳೆಯಗಾರರು ೧೮ನೇ ಶತಮಾನದವರೆಗೂ ಅಧಿಕಾರದಲ್ಲಿದ್ದರು. ವಿಜಯನಗರೋತ್ತರ ಕಾಲದಲ್ಲಿ ಸ್ವಾತಂತ್ರ್ಯ ಘೋಷಿಸಿಕೊಂಡು ವಿಜಯನಗರ ಕಾಲದ ಸಂಸ್ಕೃತಿಯನ್ನು ರಕ್ಷಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಜರಿಮಲೆ ಮತ್ತು ಗುಡೇಕೋಟೆ ಪಾಳೆಯಗಾರರು ಒಂದೇ ಮೂಲಕ್ಕೆ ಸೇರಿದವರು. ಹರಪನಹಳ್ಳಿ ಪಾಳೆಯಗಾರರು ಇವರ ರಕ್ತಸಂಬಂಧಿಗಳು. ಹರಪನಹಳ್ಳಿ ಪಾಳೆಯಗಾರರು ಬಿದನೂರು ಸಂಸ್ಥಾನದೊಡನೆ ಹಿತಕರ ಸಂಬಂಧವನ್ನು ಇಟ್ಟುಕೊಂಡು ಚಿತ್ರದುರ್ಗದ ನಾಯಕರ ಪರಮ ವೈರಿಗಳಾಗಿ ಮಾರ್ಪಟ್ಟರು. ಜರಿಮಲೆ ಮತ್ತು ಗುಡೇಕೋಟೆ ಪಾಳೆಯಗಾರರು ಕೆಲವೊಮ್ಮೆ ಚಿತ್ರದುರ್ಗ ಅರಸರ ಅಧೀನರಾಗಿ ಇನ್ನೊಮ್ಮೆ ವಿರೋಧಿಗಳಾಗಿ ರಾಜಕೀಯ ಅಸ್ಥಿರತೆಯ ಕರಿನೆರಳಿನಲ್ಲಿ ಬೆಳೆದು ಬಂದರು. ಹರಪನಹಳ್ಳಿ ಪ್ರಸ್ತುತ ಸಂದರ್ಭದಲ್ಲಿ ದಾವಣಗೆರೆ ಜಿಲ್ಲೆಗೆ ಸೇರಿರುವುದರಿಂದ ಅದನ್ನು ಹೊರತುಪಡಿಸಿ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಜರಿಮಲೆ ಮತ್ತು ಗುಡೇಕೋಟೆ ಪಾಳೆಯಗಾರರನ್ನು ಕುರಿತಂತೆ ಇಲ್ಲಿ ಅಧ್ಯಯನ ಮಾಡಲಾಗಿದೆ.

## ಗುಡೇಕೋಟೆ ಪಾಳೆಯಗಾರರು

ವಿಜಯನಗರ ಆಶ್ರಿತ ಸಂಸ್ಥಾನಿಕರಲ್ಲಿ ಗುಡೇಕೋಟೆ(ಕೂಡ್ಲಿಗಿ ತಾಲ್ಲೂಕು) ಪಾಳೆಯಗಾರರು ಸಹ ಪ್ರಮುಖರು. ಆಧಾರಗಳ ಕೊರತೆಯಿಂದ ಇವರ ಚರಿತ್ರೆ ಅಸ್ಪಷ್ಟವಾಗಿದೆ. ಕೈಫಿಯತ್ತು, ಶಾಸನ, ಗೆಝೆಟಿಯರ್ ಹಾಗೂ ಈ ಪಾಳೆಯಗಾರರಿಗೆ ಸಂಬಂಧಿಸಿದ ವಂಶವೃಕ್ಷ, ಕಾಗದ ಪತ್ರಗಳನ್ನು ನೋಡಿದರೆ ಕಾಲದ ದೃಷ್ಟಿಯಲ್ಲಿ ಅನೇಕ ಸಮಸ್ಯೆಗಳು ಎದುರಾಗುತ್ತವೆ.

ಕೈಫಿಯತ್ತುಗಳ ಪ್ರಕಾರ ಕುಮಾರರಾಮನ ಆಪ್ತ ಸ್ನೇಹಿತರೊಲ್ಲಬ್ಬನಾದ ಗುಡಿಕೋಟೆ ಗಡಿಯಾಂಕ ಭೀಮಾ ಗುಡೇಕೋಟೆಯ ಸ್ಥಾಪಕ ಇಲ್ಲವೆ ಆ ಪ್ರದೇಶಕ್ಕೆ ನಾಯಕನಾಗಿರಬೇಕು.[೬೫] ಏಕೆಂದರೆ ಕುಮಾರರಾಮನಂತಹ ದೊರೆಗಳ ಜೊತೆ ಮುತ್ತಿನ ಚೆಂಡಿನಾಟದಲ್ಲಿ ಇವನು ಭಾಗವಹಿಸಿದ್ದನೆಂದರೆ ಆ ಪ್ರದೇಶಕ್ಕೆ ಪ್ರಮುಖನೇ ಇರಬೇಕು. ಚಂದ್ರಗಿರಿ, ಪೆನಗೊಂಡ, ಚಿತ್ರದುರ್ಗ, ರಾಯದುರ್ಗ ಮುಂತಾದ ಪ್ರದೇಶದಿಂದ ಬಂದ ನಾಯಕರು ಈ ಚೆಂಡಿನಾಟದಲ್ಲಿ ಭಾಗವಹಿಸಿದ್ದರು. ಇವನ ನಂತರ ಗಂಡಳನಾಯಕರ ಹೆಸರನ್ನು ದಾಖಲೆಯಲ್ಲಿ ಕ್ರಿ.ಶ.೧೫೦೬ರ ಸುಮಾರಿಗೆ ಗುರುತಿಸುವುದರಿಂದ[೬೬] ಗಡಿಯಾಂಕ ಭೀಮನ ತರುವಾಯ ಕೆಲವರು ಆಳಿರಬಹುದು. ಕೃಷ್ಣದೇವರಾಯನು ಪಟ್ಟಾಭಿಷಿಕ್ತನಾದ ನಂತರ ಕುಮಾರರಾಮನ ವಂಶಜರೆಂದು ಹೇಳಿಕೊಂಡು ಪೂರ್ವದಿಂದಲೂ ಕಾವಲಿ ನಾಡದಳವಾರಿಕೆಯನ್ನು ಮಾಡಿಕೊಂಡ ಬಗ್ಗೆ ಬೊಮ್ಮಂತರಾಜನು ಕೃಷ್ಣದೇವರಾಯನನ್ನು ಅರಿಕೆ ಮಾಡಿಕೊಂಡನು.[೬೭] ಕೃಷ್ಣದೇವರಾಯನು ಸಂತೋಷದಿಂದ

ಹಿರೇಬೊಮ್ಮಂತ ರಾಜನಿಗೆ ಏಳು ಸೀಮೆಗಳನ್ನು ದಯಪಾಲಿಸಿದನು. ಅವುಗಳೆಂದರೆ, ಉಜ್ಜನಿ, ಜರಿಮಲೆ, ಗುಡೇಕೋಟೆ, ಬಾಣಾರಾವಿ, ಸಂಡೂರು, ವಡ್ಡು ಮತ್ತು ಕುಡತಿನಿ ಬೊಮ್ಮಂತರಾಜನು ತನ್ನ ಏಳು ಮಕ್ಕಳಿಗೆ ಈ ಸೀಮೆಗಳನ್ನು ಹಂಚಿಕೊಟ್ಟನು. ಈ ಪ್ರಕಾರ ಗುಡೇಕೋಟೆ ತಾಲೂಕಿಗೆ ನೇಮಕನಾದವನೇ ವೀರಪ್ಪನಾಯಕ.[೧೮] ಬೊಮ್ಮಂತರಾಜನು ಜರಿಮಲೆಗೆ ನೇಮಕವಾದ. ನಡುಮಗ ಮಲ್ಲಿಕಾರ್ಜುನನಾಯಕನ ಹತ್ತಿರವೇ ಉಳಿದುಕೊಂಡನು.

ವಿಜಯನಗರ ಅರಸರ ಜೊತೆಯಲ್ಲಿ ಅನ್ಯೋನ್ಯ ಸಂಬಂಧವನ್ನು ಹೊಂದಿದ್ದ ಗುಡೇಕೋಟೆ ದೊರೆಗಳು ವಿಜಯನಗರದೊಡನೆ ಮೊದಲಿನ ಸಂಬಂಧವನ್ನೇ ಮುಂದುವರೆಸಿದರು. ಬೊಮ್ಮಂತರಾಜ (೧೬೩೭-೭೬) ಮತ್ತು ಚಿನ್ನಯರಾಜರು(೧೬೭೬-೮೭) ಗುಡೇಕೋಟೆ, ಸಂಡೂರು, ಬಾಣರಾವಿ ಸೀಮೆಗಳನ್ನು ಆಳುತ್ತಾ ಆದೋನಿ ನವಾಬನಿಗೆ ಪೊಗದಿಯನ್ನು ಸಲ್ಲಿಸುತ್ತಿದ್ದರು.[೧೯] ನಂತರ ಬಂದ ಜಟ್ಟಂಗಿರಾಜನು (೧೬೮೭-೧೭೩೭) ಸ್ವತಂತ್ರನಾಗಲು ಪ್ರಯತ್ನಿಸಿದನು. ಆಗ ನವಾಬನು ೧೨ ವರ್ಷಗಳ ಕಾಲ ಈ ಪ್ರದೇಶಗಳನ್ನು ಹತೋಟಿಯಲ್ಲಿಟ್ಟುಕೊಂಡನು. ನಂತರ ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕನ ಸಹಾಯ ಪಡೆದು ಜಟ್ಟಂಗಿರಾಜನು ಪುನಃ ಈ ಪ್ರದೇಶಗಳನ್ನು ವಶಪಡಿಸಿಕೊಂಡನು. ಚಿತ್ರದುರ್ಗದ ಪಾಳೆಯಗಾರ ಬಿಚ್ಚುಗತ್ತಿ ಭರಮಣ್ಣನಾಯಕನು ಉಜ್ಜನಿ ಕಾಳಗದ ತರುವಾಯ ಅಕ್ಕಪಕ್ಕದ ಸಂಸ್ಥಾನಗಳೊಡನೆ ಯುದ್ಧ ಮಾಡಿದನು. ೧೬೯೦ರಲ್ಲಿ ಚಿತ್ರದುರ್ಗದ ಆಜನ್ಮ ವೈರಿಗಳೆನಿಸಿದ ಹರಪನಹಳ್ಳಿ, ಬಿದನೂರಿನವರು ಚಿತ್ರದುರ್ಗ ಸೀಮೆಯ ಅಣಜಿಯನ್ನು ಮುತ್ತಿಗೆ ಹಾಕಿ ವಶಪಡಿಸಿಕೊಂಡರು. ಈ ಸೀಮೆಯನ್ನು ಬಿಡಿಸಿಕೊಳ್ಳಲು ಭರಮಣ್ಣನಾಯಕನು ಗುಡೇಕೋಟೆ(ಜಟ್ಟಂಗಿ ರಾಜರು), ಜರಿಮಲೆ, ಅನಂತಪುರ, ತರೀಕೆರೆ, ಹಾವನೂರು, ಪಾಳೆಯಗಾರರನ್ನು ಕರೆಸಿಕೊಂಡು ಒಟ್ಟಾಗಿ ಅಣಜಿಗೆ ದಂಡು ತೆಗೆದುಕೊಂಡು ಹೋಗಿ ಅದನ್ನು ಮರು ಆಕ್ರಮಿಸಿಕೊಂಡನು.[೨೦] ೧೬೯೮ರಲ್ಲಿ ಭರಮಣ್ಣನಾಯಕನು ಗುಡೇಕೋಟೆಯವರಿಗೆ ಸೇರಿದ ನಾಗಸಮುದ್ರವನ್ನು ಮುತ್ತಿಗೆ ಹಾಕಿ ತೆಗೆದುಕೊಂಡನಲ್ಲದೆ ಈ ನಾಯಕ ಕುಟುಂಬದ ಬಂಗಾರವ್ವನಾಗತಿಯನ್ನು ವಿವಾಹವಾದನು. ನಂತರ ಚಿತ್ರದುರ್ಗದ ಅಧೀನರಾಗಿ ಅಧಿಕಾರವನ್ನು ನಡೆಸಿದರು. ಜಟ್ಟಂಗಿ ರಾಜರ ಸಹಾಯದಿಂದ ನಾಯಕನ ಹಟ್ಟಿಗೆ ಲಗ್ಗೆ ಹಾಕಿದ ರಾಯದುರ್ಗದವರನ್ನು ಎದುರಿಸಿದನು.

ಕ್ರಿ.ಶ.೧೭೩೩ರಲ್ಲಿ ಹಿರೇಮದಕರಿನಾಯಕನು ಗುಡೇಕೋಟೆಗೆ ಸೇರಿದ ಕೆಲವು ಊರುಗಳನ್ನು ವಶಪಡಿಸಿಕೊಂಡನು.[೨೧] ನಂತರ ವೆಂಕಟರಾವ್ ಘೋರ್ಪಡೆ ಜಟ್ಟಂಗಿರಾಜರ ಅಧೀನದಲ್ಲಿದ್ದ ಕೆಲವು ಪ್ರದೇಶಗಳನ್ನೂ ಆಕ್ರಮಿಸಿ ಹಿರೇಹಾಳಿನಲ್ಲಿ ಜಟ್ಟಂಗಿರಾಜರನ್ನು ಬಂಧಿಸಿಟ್ಟನು. ಗುಡೇಕೋಟೆಯ ಶಿವಪ್ಪನಾಯಕನು(೧೭೪೨-೫೨) ತನ್ನ ಹಿರಿಯ ಮಗಳಾದ ಭೀಮವ್ವನಾಗತಿಯನ್ನು ದುರ್ಗದ ವೀರ

ಮದಕರಿನಾಯಕನಿಗೆ, ಚಿಕ್ಕಮಗಳಾದ ಪೆದ್ದಕ್ಕಳನ್ನು ಚಿಕ್ಕಮದಕರಿನಾಯಕರಿಗೆ ಕೊಟ್ಟು ಮದುವೆ ಮಾಡಿಸಿದನು. ಹೈದರಾಲಿಯ ದಾಳಿಗಳು ಉತ್ತರದ ಸಂಸ್ಥಾನಿಕರ ಮೇಲೆ ಆರಂಭವಾದ್ದರಿಂದ ಈ ಸಂದರ್ಭದಲ್ಲಿ ಗುಡೇಕೋಟೆಯು ಅವನ ದಾಳಿಗೆ ತುತ್ತಾಯಿತು. ಹೈದರಾಲಿ ಒಟ್ಟು ಎರಡು ಬಾರಿ ಗುಡೇಕೋಟೆಯ ಮೇಲೆ ದಾಳಿ ಮಾಡಿದ್ದಾನೆ. ೨೦೦೦ ಕಾಲ್ದಳ ೬೦೦ ಅಶ್ವಗಳನ್ನು ತೆಗೆದುಕೊಂಡು ಕ್ರಿ.ಶ.೧೭೭೭ರಲ್ಲಿ ಹರಪನಹಳ್ಳಿಗೆ ಮುತ್ತಿಗೆ ಹಾಕಿ ನಂತರ ತನ್ನ ರಾಜಧಾನಿ ಕಡೆ ಹಿಂತಿರುಗುವ ಸಮಯದಲ್ಲಿ ಗುಡೇಕೋಟೆ, ಜರಿಮಲೆ, ಮೊಳಕಾಲ್ಮೂರುಗಳ ಮೇಲೆ ದಾಳಿ ಮಾಡಿದನು. ಹೈದರಾಲಿಯ ನಂತರ ಗುಡೇಕೋಟೆ ಟಿಪ್ಪುಸುಲ್ತಾನನ ದಾಳಿಗೆ ತುತ್ತಾಗಿ ಕೆಲವು ದಿನ ಅವನ ಅಧೀನದೊಳಗೆ ಉಳಿಯಿತು. ೧೭೯೯ರ ನಂತರ ಕೆಲವು ಕಾಲ ನಿಜಾಮನ ಆಳ್ವಿಕೆಗೆ ಒಳಗಾಯಿತು. ಇವನ ನಂತರ ೧೮೦೩ರ ಮೈಸೂರು ಸಪ್ಲಿಮೆಂಟರಿ ಒಪ್ಪಂದದ ಪ್ರಕಾರ ಬ್ರಿಟೀಷರ ಅಧಿಪತ್ಯಕ್ಕೊಳಗಾಯಿತು. ಬ್ರಿಟೀಷರು ಪಾಳೆಯಗಾರರಿಗೆ ವಿಶ್ರಾಂತಿ ವೇತನ ನೀಡಿದ್ದರಿಂದ ಇವರು ವಿಶ್ರಾಂತಿವೇತನ ಪಡೆಯುವಂತಾದರು. ೧೯೨೯ರವರೆಗೆ ಈ ವಿಶ್ರಾಂತಿ ವೇತನವನ್ನು ಪಡೆದ ಬಗ್ಗೆ ದಾಖಲೆಗಳಿಂದ ತಿಳಿದುಬರುತ್ತದೆ. ಕೆಲವು ಪಾಳೆಯಗಾರರನ್ನು ಬ್ರಿಟೀಷರು ಕಂದಾಯ ಸಂಗ್ರಹದಲ್ಲಿ ಬಳಸಿಕೊಂಡರು. ಕ್ರಿ.ಶ.೧೮೨೮ರಲ್ಲಿ ಬರಗಾಲ ಸಂದರ್ಭದಲ್ಲಿ ಬ್ರಿಟೀಷರ ಕಡ್ಡಾಯ ಕಂದಾಯ ಸಂಗ್ರಹ ನೀತಿಯನ್ನು ವಿರೋಧಿಸಿ ಬೊಮ್ಮಂತ ರಾಜರು, ಅವರ ತಮ್ಮ ಲಿಂಗಪ್ಪ(ಸಿದ್ಧರಾಮಯ್ಯ) ಮತ್ತು ಸಂಬಂಧಿಕ ರಾಮಪ್ಪಯ್ಯ ಬ್ರಿಟೀಷರ ವಿರುದ್ಧ ೫೦೦ ಜನರ ಬೇಡ ಸಮುದಾಯವನ್ನು ಸಂಘಟಿಸಿ ದಂಗೆ ಎದ್ದರು. ಈ ದಂಗೆಯನ್ನು ಹತ್ತಿಕ್ಕಲು ಬ್ರಿಟೀಷ್ ಅಧಿಕಾರಿಗಳು ಹರಪನಹಳ್ಳಿ, ಹಡಗಲಿಯಿಂದ ಪೋಲಿಸರ ಸಹಾಯವನ್ನು ಪಡೆದರು.[೭೨]

ಗುಡೇಕೋಟೆ ಪಾಳೆಗಾರ ವಂಶಸ್ಥರು ಗುಡೇಕೋಟೆಯಲ್ಲೇ ನೆಲೆಸಿದ್ದಾರೆ. ಪಿ.ಜಿ.ಕೃಷ್ಣವರ್ಮರಾಜರು ಈಗಿರುವ ಅತ್ಯಂತ ಹಿರಿಯ ವಯಸ್ಸಿನ ಏಕೈಕ ವಂಶಜರು. ಇವರ ತಾತ ತಾತಯ್ಯರಾಜರು ಸಮಾಜದಲ್ಲಿ ರಾಜಮನೆತನದವರೆಂಬ ಗೌರವಕ್ಕೆ ಪಾತ್ರರಾಗಿದ್ದರು. ಈ ಮನೆತನದವರಿಗೆ ಹಿಂದೆ ರಾಜಗೌರವ, ಮರ್ಯಾದೆಗೇನೂ ಕಡಿಮೆ ಇರಲಿಲ್ಲ. ಇವರ ತಂದೆಯವರು ರಾಜಕೀಯದಲ್ಲಿ ಒಲವನ್ನು ತೋರಿದ್ದರಿಂದ ಅವರು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಸಕ್ರಿಯ ಕಾರ್ಯಕರ್ತರಾಗಿದ್ದರು. ಅವರು ಕೂಡ್ಲಿಗಿ ತಾಲೂಕು ಬೋರ್ಡ್ ಅಧ್ಯಕ್ಷರಾಗಿ, ಜಿಲ್ಲಾ ಬೋರ್ಡ್ ಸದಸ್ಯರಾಗಿ ಸೇವೆ ಸಲ್ಲಿಸಿದ್ದರು. ಒಬ್ಬ ರಾಜಕಾರಣಿಯೆನ್ನುವುದಕ್ಕಿಂತ ಒಬ್ಬ ದೊರೆ ಎಂಬ ಹಿನ್ನೆಲೆಯಲ್ಲಿ ಜನರು ಮತ್ತು ರಾಜಕಾರಣಿಗಳು ಗೌರವವನ್ನು ಸೂಚಿಸುತ್ತಿದ್ದರು. ತಂದೆಯವರ ಕಾಲದ ರಾಜಕೀಯ ಸಂಬಂಧ ಕೃಷ್ಣವರ್ಮರಾಜ ಕಾಲದಲ್ಲಿಯೂ ಮುಂದುವರೆಯಿತು. ಕೃಷ್ಣವರ್ಮರಾಜರು ಗುಡೇಕೋಟೆ ಗ್ರಾಮಪಂಚಾಯ್ತಿ ಅಧ್ಯಕ್ಷರಾಗಿ

ಸತತ ಇಪ್ಪತ್ತು ವರ್ಷಗಳ ಕಾಲ ಅಧಿಕಾರ ನಡೆಸಿದ್ದಾರೆ. ಯಾರೂ ಪ್ರತಿಸ್ಪರ್ಧಿಯಿಲ್ಲದೆ ಅವಿರೋಧವಾಗಿ ಆಯ್ಕೆಯಾಗುತ್ತಾ ಜನರ ವಿಶ್ವಾಸಕ್ಕೆ ಪಾತ್ರರಾಗಿದ್ದಾರೆ. ಜಿಲ್ಲಾ ಪಂಚಾಯ್ತಿ ಸದಸ್ಯರಾಗಿಯೂ ಒಮ್ಮೆ ಆಯ್ಕೆಯಾಗಿದ್ದರು. ಹಾಗೂ ಕೊಟ್ಟೂರು ವಿಧಾನಸಭೆ ಕ್ಷೇತ್ರದಿಂದ ಒಮ್ಮೆ ಸ್ಪರ್ಧಿಸಿದ್ದರು. ಕಾಲ ಬದಲಾದಂತೆ ಜನರಲ್ಲಿದ್ದ ರಾಜಗೌರವವೂ ಕಡಿಮೆಯಾಗುತ್ತದೆಂಬುದನ್ನು ಈ ಸ್ಪರ್ಧೆಯಲ್ಲಿ ಇವರು ಕಂಡ ಸೋಲು ದೃಢಪಡಿಸಿತೆನ್ನಬಹುದು.

## ಜರಿಮಲೆ ಪಾಳೆಯಗಾರರು

ವಿಜಯನಗರ ಕಾಲಕ್ಕೆ ತಲೆ ಎತ್ತಿದ ಪಾಳೆಯಪಟ್ಟುಗಳಲ್ಲಿ ಜರಿಮಲೆಯೂ ಒಂದಾಗಿದೆ. ಜರಿಮಲೆಯು ಕೂಡ್ಲಿಗಿಯಿಂದ ೧೫ ಕಿ.ಮೀ. ದೂರದಲ್ಲಿದೆ. ಚಿತ್ರದುರ್ಗ ಮತ್ತು ಹರಪನಹಳ್ಳಿ ಪಾಳೆಯಗಾರರ ಜಗಳಗಳ ನಡುವೆ ಮತ್ತು ಅಂದಿನ ಅಸ್ಥಿರ ರಾಜಕೀಯ ಸನ್ನಿವೇಶದಲ್ಲಿ ತಮ್ಮ ಉಳಿವಿಗಾಗಿ ಪ್ರಯತ್ನಪಟ್ಟು, ಹೈದರಾಲಿ, ಟಿಪ್ಪೂ, ನಿಜಾಮನ ನಿಯಂತ್ರಣಕ್ಕೊಳಪಟ್ಟು ಮತ್ತು ಕೆಲಕಾಲ ಮರಾಠರ ಅಧೀನಕ್ಕೂ ಒಳಗಾಗಿ ಅಧಿಕಾರ ನಡೆಸಿದ ಜರಿಮಲೆ ಪಾಳೆಯಗಾರರು ಕೊನೆಗೆ ಕ್ರಿ.ಶ.೧೮೦೦ರಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಆಡಳಿತಕ್ಕೊಳಪಟ್ಟರು. ಇವರು ಅಧಿಕಾರ ವಂಚಿತರಾದ ನಂತರದ ದಿನಗಳಲ್ಲಿ ದಿನನಿತ್ಯದ ಬದುಕಿಗಾಗಿ ಕಷ್ಟಪಡಬೇಕಾಯಿತು.

ಜರಿಮಲೆಯ ಅರಸರು ಕದ್ರಿಮೂಲ ಪುರುಷರೆಂದು ಕರೆದುಕೊಂಡಿದ್ದಾರೆ.[೨೩] ಕೈಫಿಯತ್ತುಗಳ ಪ್ರಕಾರ ಭೂಮರಾಜನು ಕೃಷ್ಣದೇವರಾಯನಿಂದ ಏಳು ತಾಲೂಕಗಳನ್ನು ಪಡೆದುಕೊಂಡು ಅವುಗಳನ್ನು ತನ್ನ ಏಳು ಮಕ್ಕಳಿಗೆ ಹಂಚಿದ ವಿಷಯದ ಪ್ರಕಾರ ಹಿರೇಬೊಮ್ಮಂತರಾಜನಿಗೆ-ಕುಡಿತಿನಿ ಪ್ರದೇಶವನ್ನು, ಬಸಳನಾಯಕನಿಗೆ-ಸಂಡೂರು, ರಾಜಪ್ಪನಾಯಕನಿಗೆ-ಬಾಣರಾವಿ, ಮಲ್ಲಿಕಾರ್ಜುನನಿಗೆ-ಜರಿಮಲೆ, ಇಮ್ಮಡಿ ನಾಯಕನಿಗೆ ಗುಡೇಕೋಟೆ, ವೀರಪ್ಪನಾಯಕನಿಗೆ-ಉಜ್ಜನಿ, ಚಿನ್ನಯ್ಯರಾಜನಿಗೆ-ವಡ್ಡು ದರೋಜಿಗಳನ್ನು ಹಂಚಿಕೊಟ್ಟನು.[೨೪] ಭೂಮರಾಜರಿಗಿಂತ ಮುನ್ನ ಆಳಿದ ಬಗ್ಗೆ ಇತ್ತೀಚಿನ ಎರಡು ಅಪ್ರಕಟಿತ ಕಂಚಿನಪತ್ರ ಗಳಿಂದ ತಿಳಿಯಬಹುದು.ಕ್ರಿ.ಶ.೧೪೪೯ರ ಕಾಲಕ್ಕೆ ಸೇರಿದ ದಶಮಾಪುರ[೨೫] ಗ್ರಾಮ ಸ್ಥಾಪನೆ ಬಗ್ಗೆ ಇರುವ ಈ ಕಂಚಿನ ಪತ್ರಗಳಲ್ಲಿ ಜರಿಮಲೆ ಪಾಳೆಯಗಾರರ ಉಲ್ಲೇಖ ಬರುತ್ತದೆ. ಜರಿಮಲೆ ವಂಶಿಕನಾದ ಪಾಪಣ್ಣನಾಯಕನು ಸಾಳ್ವವೀರನರಸಿಂಹನ ಸೇವಕರಲ್ಲಿ ಒಬ್ಬನಾಗಿದ್ದನು. ವಿಜಯನಗರದ ಸುತ್ತ ದಂಗೆ ಎದ್ದು ಹಾವಳಿ ಮಾಡುತ್ತಿದ್ದ ಜನರನ್ನು ಪಾಪಣ್ಣನಾಯಕನು ಅಡಗಿಸಿದನು. ಇದರಿಂದ ಸಂಪ್ರೀತನಾದ ವೀರನರಸಿಂಹನು ಪಾಪಣ್ಣನಾಯಕನಿಗೆ ವಡ್ಡು, ದರೋಜಿ ಗ್ರಾಮಗಳನ್ನು ಬಳುವಳಿಯಾಗಿ ನೀಡಿದನೆಂದು ತಿಳಿದುಬರುತ್ತದೆ.

ಆದರೆ ಗೆಝೆಟಿಯರು, ವಿಶ್ವಕೋಶ ಮೊದಲಾದವು ಈ ಮನೆತನವು ಪೆನ್ನಪ್ಪನಾಯಕನಿಂದ ಆರಂಭವಾಯಿತೆಂದು ಹೇಳುತ್ತವೆ. ವಿಜಯನಗರ ಅರಸರ ವಿರುದ್ಧ ಬಂಡೆದ್ದವರನ್ನು ಎದುರಿಸುವಲ್ಲಿ ತೋರಿದ ಸಾಹಸಕ್ಕಾಗಿ ವಿಜಯನಗರದ ಅರಸ ಅಚ್ಚುತರಾಯನು ಈ ಪ್ರದೇಶವನ್ನು ಬಳುವಳಿಯಾಗಿ ಪೆನ್ನಪ್ಪನಾಯಕನಿಗೆ ನೀಡಲಾಯಿತು. ಆದರೆ ಪೆನ್ನಪ್ಪನಾಯಕನ ತಂದೆ ಪಾಪಣ್ಣನಾಯಕನಿಂದ ಈ ಸಂಸ್ಥಾನ ಸ್ಥಾಪನೆಯಾಯಿತೆಂದು ಮೆಕಂಜಿ ಸಂಗ್ರಹದಿಂದ ತಿಳಿಯುತ್ತದೆ.

ಪೆನ್ನಪ್ಪನಾಯಕನಿಗೆ ವೀರನರಸಿಂಹನು ಗುಡೇಕೋಟೆ, ಭೂಪಸಮುದ್ರ ಗ್ರಾಮಗಳನ್ನು ಉಡುಗೊರೆಯಾಗಿ ನೀಡಿದನು. ಅವನು ವಿಜಯನಗರ ಅರಸರ ಜೊತೆ ನಿಷ್ಠೆಯಿಂದ ನಡೆದುಕೊಳ್ಳುತ್ತಿದ್ದನು. ಅಚ್ಚುತರಾಯನ ಕಾಲದಲ್ಲಿ ಪೆನ್ನಪ್ಪನಾಯಕನು ಚಕ್ರವರ್ತಿಯಿಂದ ೧೫,೩೦೦ ಮಹಮ್ಮದ್ ಷಾಹಿ ಪಗೋಡಾ ಆದಾಯವಿರುವ ನಾಲ್ಕು ಮಾರ್ಗಗಳನ್ನು, ಜೊತೆಗೆ ೩೫,೧೫೦ ಮಹಮ್ಮದ್ ಷಾಹಿ ಪಗೋಡಾ ಆದಾಯವಿರುವ ಮತ್ತೆರಡು ಹೆಚ್ಚಗೆ ಮಾಗಣಿಗಳನ್ನು ಪಡೆದುಕೊಂಡನೆಂದು ಹೇಳಲಾಗಿದೆ. ನಂತರ ಪೆನ್ನಪ್ಪನಾಯಕನ ಕೆಲವು ಪ್ರದೇಶಗಳನ್ನು ಸ್ವತಃ ಗೆದ್ದುಕೊಳ್ಳುವ ಮೂಲಕ ಈ ಪ್ರದೇಶದಲ್ಲಿ ಪ್ರಸಿದ್ಧಿಗೆ ಬಂದನು. ಇವನ ನಂತರ ಇವನ ಮಕ್ಕಳಲ್ಲಿ ಭೂಮಿರಾಜ ಎಂಬುವನು ತುಂಬಾ ಪ್ರಸಿದ್ಧಿಗೆ ಬಂದನು. ಇವನು ಬಿಜಾಪುರದ ಬಾದಷಹನ ವಿಶೇಷ ಕುದುರೆಯೊಂದನ್ನು ಪಳಗಿಸಿ, ಸಾಹಸ ತೋರಿ ಬಾದಷಹನಿಂದ "ಜಮೇದಾರ್ ಗುಡ್ಡಯ್ಯ ಜರಿಮಲ್ಲ" ಎಂಬ ಬಿರುದು ಪಡೆದುಕೊಂಡನೆಂದು ಹೇಳಲಾಗಿದೆ.

ಬಿಜಾಪುರ ಆದಿಲ್‌ಷಾಹಿಯು ಜರಿಮಲೆಯ ಕೆಲವು ಪ್ರದೇಶಗಳನ್ನು ಗೆದ್ದುಕೊಂಡನು. ಮತ್ತು ಸಾಕಷ್ಟು ಸಂಪತ್ತನ್ನು ಕೊಳ್ಳೆ ಹೊಡೆದನು. ಜರಿಮಲೆ ನಾಯಕನು ಮಹಮ್ಮದ್ ಆದಿಲ್ ಷಾಹಿಗೆ ವಾರ್ಷಿಕ ೯೩,೭೫೦ ರೂ.ಗಳನ್ನು ಕಾಣಿಕೆಯೆಂದು ಕೊಡುತ್ತಿದ್ದನು.[೬೬] ಈ ಕಾಲದಲ್ಲಿ ಇಮ್ಮಡಿನಾಯಕ ಎಂಬುವನು ಆಳುತ್ತಿದ್ದನು. ವಿಜಾಪುರದ ಸುಲ್ತಾನರ ವಿರುದ್ಧ ಅವಿಧೇಯತೆಯನ್ನು ತೋರಿ ನಗರದವರ ಜೊತೆ ಸೇರಿಕೊಂಡಿದ್ದರಿಂದ ಬಿಜಾಪುರದ ಸುಲ್ತಾನನು ಉಜ್ಜನಿಯನ್ನು ಹಿಡಿದುಕೊಂಡನು. ಅಲ್ಲಿ ಸೈನ್ಯವನ್ನಿಟ್ಟು ನಗರದವರ ವಿರುದ್ಧ ಹೊರಟು ಹೋಗಿ ಅವರನ್ನು ಶಿಕ್ಷಿಸಿದನು. ಮಹಮ್ಮದ ಆದಿಲ್ ಷಾಹಿಯ ನಂತರ ಅಷ್ಟೇನು ಸಾಮರ್ಥ್ಯ ಹೊಂದದ ಸುಲ್ತಾನರು ಅಧಿಕಾರಕ್ಕೆ ಬರಲಿಲ್ಲ. ಇಂತಹ ಸನ್ನಿವೇಶದಲ್ಲಿ ಕ್ರಿ.ಶ.೧೬೭೮ರಲ್ಲಿ(ಸಿಕಂದರ್ ಆದಿಲ್ ಷಾಹಿ ಕಾಲ) ಬಳ್ಳಾರಿ ಸುತ್ತಮುತ್ತ ಪ್ರದೇಶವನ್ನು ಬಿಜಾಪುರದ ಸುಲ್ತಾನನಿಂದ ಶಿವಾಜಿ ವಶಪಡಿಸಿಕೊಂಡನು.[೬೭] ಮರಾಠರ ಹಿಡಿತಕ್ಕೆ ಈ ಪ್ರದೇಶವು ಒಳಗಾಗಿತ್ತು. ಆದರೆ ೧೬೯೨ರ ಹೊತ್ತಿಗೆ ಮತ್ತೆ ನಾಯಕರ ವಶಕ್ಕೆ ಈ ಪ್ರದೇಶ ಬಂದಿತು. ಇಮ್ಮಡಿ ನಾಯಕನು ಹರಪನಹಳ್ಳಿಯವರ ಮೇಲಿನ ಸಿಟ್ಟಿನಿಂದ ಅವರಿಗೆ ಸೇರಿದ್ದ ಕೂಡ್ಲಿಗಿಯನ್ನು ಹಿಡಿದುಕೊಂಡನು. ಈ ಸಮಯದಲ್ಲಿ ಚಿತ್ರದುರ್ಗದ ನಾಯಕನು ಕಣಕುಪ್ಪೆಯನ್ನು ಗೆದ್ದುಕೊಂಡನು. ನಂತರ ಕೂಡ್ಲಿಗಿಯನ್ನು

ಹರಪನಹಳ್ಳಿಯವರು ಕಿತ್ತುಕೊಂಡರು. ತನ್ನ ತಂದೆಯ ಕಾಲದಲ್ಲಿದ್ದ ಪ್ರದೇಶಗಳನ್ನು ಕಳೆದುಕೊಂಡ ಇಮ್ಮಡಿನಾಯಕನು ನೆಲೆಯಿಲ್ಲದೆ ಅಲೆದಾಡುವಂತಾದನು. ತನ್ನ ಸುರಕ್ಷತೆಗಾಗಿ ಜರಿಮಲೆ ಸ್ಥಳದಲ್ಲಿ ನೆಲೆನಿಂತು ದುರ್ಗದವರೊಡನೆ ವೈರತ್ವ ಸಾಧಿಸುವುದು ಅಪಾಯ ಎಂದು ತಿಳಿದು ಅವರೊಡನೆ ವೈವಾಹಿಕ ಸಂಬಂಧ ಬೆಳೆಸಿ ಅವರ ಮನೆತನಕ್ಕೆ ಅಳಿಯನಾದನು.

ಕ್ರಿ.ಶ.೧೬೮೫ರಲ್ಲಿ ಜರಿಮಲೆಗೆ ಸೇರಿದ್ದ ಉಜ್ಜನಿಯ ಮೇಲೆ ಚಿತ್ರದುರ್ಗದವರು ದಾಳಿ ಮಾಡಿದರು. ಆದರೆ ಕೆಲವೇ ತಿಂಗಳಲ್ಲಿ ಹರಪನಹಳ್ಳಿಯವರು ಅದನ್ನು ಆಕ್ರಮಿಸಿಕೊಂಡರು. ದಳವಾಯಿ ಮುದ್ದಣ್ಣನ ಜೊತೆ ಸೈನ್ಯ ಕಳುಹಿಸಿದರೂ ಪ್ರಯೋಜನವಾಗಲಿಲ್ಲ. ದುರ್ಗದ ಸೇನೆ ಸೋತು ಹಿಂದಿರುಗಿತು. ನಂತರ ಉಜ್ಜನಿ ಕೋಟೆಯಲ್ಲಿದ್ದ ಜರಿಮಲೆ ಬೊಮ್ಮಣ್ಣನು ಹರಪನಹಳ್ಳಿಯವರಿಂದ ಸೆರೆಹಿಡಿಯಲ್ಪಟ್ಟು ಬಿದನೂರಿಗೆ ವರ್ಗಾಯಿಸಲ್ಪಟ್ಟನು. ೩-೪ ತಿಂಗಳ ನಂತರ ಇವನನ್ನು ಬಿಡುಗಡೆ ಮಾಡಲಾಯಿತು. ಲಿಂಗಣ್ಣಕವಿಯು ತನ್ನ 'ಕೆಳದಿನೃಪವಿಜಯಂ'ನಲ್ಲಿ ಕೆಳದಿ ಸೋಮಶೇಖರನಾಯಕನ ಪತ್ನಿ ಚೆನ್ನಮ್ಮಾಜಿಯು ಜರಿಮಲೆ ರಾಜನ ಪರಾಕ್ರಮವನ್ನು ಕೇಳಿ ಸುಬ್ಬನೀಸ ಹಾಗೂ ಶರಜಾ ಶಂಕರನಾರಾಯಣಯ್ಯನನ್ನು ಕಳುಹಿಸಿ 'ಮೊಳಕಾಲ ಬಾಸಿಗ'ನೆಂಬ ಬಿರುದನ್ನು ಧರಿಸಿ ಪರಾಕ್ರಮದಿಂದ ಎದುರಾದ ಜರಿಮಲೆ ರಾಜನನ್ನು ಯುದ್ಧದಲ್ಲಿ ಸೆರೆಹಿಡಿದು ಬಾಹುಬಲವನ್ನು ಮೆರೆದಳು. ಅವನ 'ಮೊಳಕಾಲ ಬಾಸಿಗ' ಬಿರುದನ್ನು ತೆಗಿಸಿ ಅವನನ್ನು ಕಳುಹಿಸಿದಳು. ಇಲ್ಲಿಯ ಜರಿಮಲೆ ನಾಯಕ ಈ ಬೊಮ್ಮಣ್ಣನಾಯಕನೇ ಇರಬೇಕೆಂದು ಪ್ರೊ.ಲಕ್ಷ್ಮಣ್ ತೆಲಗಾವಿಯವರ ಅಭಿಮತವಾಗಿದೆ. ಇವನ ಕಾಲದಲ್ಲಿ ನಾಯಕಹಟ್ಟಿ ಪಾಳೆಯಗಾರರ ಜೊತೆ ವೈವಾಹಿಕ ಸಂಬಂಧ ಆರಂಭವಾಯಿತು.[೨೮]

ಕ್ರಿ.ಶ.೧೬೯೦ರಲ್ಲಿ ಬಿಚ್ಚುಗತ್ತಿ ಭರಮಣ್ಣನ ಕಾಲದಲ್ಲಿ ಹರಪನಹಳ್ಳಿ ಮತ್ತು ಬಿದನೂರಿನವರು ಸೇರಿ ಅಣಜಿ ಕೋಟೆಯನ್ನು ಹಿಡಿದುಕೊಂಡರು. ಮರುವರ್ಷ ಭರಮಣ್ಣನು ಹಾವನೂರು, ಗುಡೇಕೋಟೆ, ಅನಂತಪುರ, ಜರಿಮಲೆ ಮತ್ತು ತರೀಕೆರೆ ನಾಯಕರ ಸಹಾಯದಿಂದ ಅಣಜಿಯನ್ನು ಮರು ಆಕ್ರಮಿಸಿ ಕೊಳ್ಳಲಾಯಿತು. ಹರಪನಹಳ್ಳಿಯವರು ಸದಾ ಕಿರಿಕಿರಿಯನ್ನುಂಟು ಮಾಡುತ್ತಿದ್ದರಿಂದ ಜರಿಮಲೆಯವರು ಅವರ ಪರಮ ವೈರಿಗಳಾದ ಚಿತ್ರದುರ್ಗದವರ ಜೊತೆ ಸೇರಿದರೂ ಅವರಿಗೇನು ಉಪಯೋಗವಾಗಲಿಲ್ಲ ಈ ನಡುವೆ ಬೊಮ್ಮಣ್ಣನಾಯಕನ ದುರ್ಬಲತೆಯಿಂದ ಮರಾಠರ ದಂಡನಾಯಕ ಸಿದ್ಧೋಜಿ ಘೋರ್ಪಡೆಯು ಕ್ರಿ.ಶ.೧೭೨೮ರಲ್ಲಿ ಗುತ್ತಿಯಿಂದ ಬಂದು ಸಂಡೂರು ಕುಡತಿನಿ ಮುಂತಾದ ಪ್ರದೇಶಗಳನ್ನು ಗೆದ್ದುಕೊಂಡು ೮ ವರ್ಷಗಳ ಚೌತ್ ನೀಡುವಂತೆ ಒತ್ತಾಯಿಸಿದನೆಂದು ಇದೇ ಸಮಯದಲ್ಲಿ ಹರಪನಹಳ್ಳಿಯವರು ಕೂಡ ೧೭೪೨ರಲ್ಲಿ ಜರಿಮಲೆಯವರ ನಾರಾಯಣದೇವರ ಕೆರೆ, ಡಣನಾಯಕನಕೆರೆ ಪ್ರದೇಶಗಳನ್ನು ವಶಪಡಿಸಿಕೊಂಡರು. ಈ ನಡುವೆ ದುರ್ಗದವರು ಯಾವುದೇ ರೀತಿಯಲ್ಲಿ ಬೊಮ್ಮಣ್ಣನಾಯಕನಿಗೆ

ಸಹಾಯ ಮಾಡಲಿಲ್ಲವೆಂದು ಕಾಣುತ್ತದೆ. ಹಿರೇಮದಕರಿನಾಯಕನು ಗುಡೇಕೋಟೆ ಮತ್ತು ಜರಿಮಲೆಯ ಕೆಲವು ಭಾಗಗಳನ್ನು ೧೭೪೨ರಲ್ಲಿ ಕಿತ್ತುಕೊಂಡನು. ಹೀಗಾಗಿ ಜರಿಮಲೆಯು ಅನೇಕ ಪ್ರದೇಶಗಳನ್ನು ಕಳೆದುಕೊಂಡು ಕೇವಲ ಕೋಟೆಯ ಸುತ್ತಮುತ್ತಲ ಐದು ಹಳ್ಳಿಗಳು ಮಾತ್ರ ಈ ಪಾಳೆಯಗಾರರಿಗೆ ಉಳಿದವು.[೭೯] ನಂತರ ಹತ್ತು ವರ್ಷಗಳ ತರುವಾಯ ಇಮ್ಮಡಿ ಕಸ್ತೂರಿ ರಂಗಪ್ಪನಾಯಕರು ಜರಿಮಲೆ ದೊರೆಯ ವಿಶಿಷ್ಟ ಒಡೆತನವನ್ನೆಲ್ಲಾ ಕಸಿದುಕೊಂಡು ದುರ್ಗದ ಅಧೀನಕ್ಕೊಳಪಡಿಸಿದನು.

ಬೊಮ್ಮಣ್ಣನಾಯಕನ ಎರಡು ಮಕ್ಕಳಲ್ಲಿ ಹಿರಿಯವನಾದ ಇಮ್ಮಡಿನಾಯಕನು ಅಧಿಕಾರಕ್ಕೆ ಬಂದ ನಂತರ ದುರ್ಗದ ಗಡಿಪ್ರದೇಶಗಳಲ್ಲಿ ದಾಂಧಲೆ ಆರಂಭಿಸಿದನು. ಇದರಿಂದ ಕೋಪಗೊಂಡ ರಾಜಾವೀರ ಮದಕರಿನಾಯಕ ಜರಿಮಲೆಯ ಮೇಲೆ ದಂಡೆತ್ತಿ ಬಂದನು.

ಹೈದರಾಲಿ ಚಿತ್ರದುರ್ಗವನ್ನು ಗೆಲ್ಲಬೇಕೆಂಬ ಹಂಬಲದಿಂದ ಮಾಡಿದ ಪ್ರಯತ್ನಗಳೆಲ್ಲವೂ ಆರಂಭದಲ್ಲಿ ವಿಫಲವಾದವು. ನೇರವಾಗಿ ಯುದ್ಧದ ಮೂಲಕ ಚಿತ್ರದುರ್ಗವನ್ನು ಗೆಲ್ಲುವುದು ಕಷ್ಟವೆಂಬುದನ್ನು ಅರಿತಿದ್ದ ಹೈದರಾಲಿಯು ಚಿತ್ರದುರ್ಗದ ಅತೃಪ್ತ ಅರಸರನ್ನು, ಸಾಮಂತರನ್ನು, ಮುಸ್ಲಿಂ ಸೇನಾನಿಗಳನ್ನು ಹಣ, ಅಧಿಕಾರದ ಆಸೆ-ಆಮಿಷವೊಡ್ಡಿ ತನ್ನ ಕಡೆಗೆ ಮಾಡಿಕೊಂಡನು.

ಚಾಣಕ್ಷನಾದ ದಿವಾನ್ ಪೂರ್ಣಯ್ಯನು ಯುದ್ಧದಲ್ಲಿ ಜಯಗಳಿಸಲು ಜರಿಮಲೆಯವರ ಸಹಾಯ ಪಡೆಯಿರಿ ಎಂದು ಸಲಹೆ ಕೊಟ್ಟನಂತೆ. ಹೈದರಾಲಿಗೆ ಈ ಸೂಚನೆ ಸರಿ ಕಂಡಿದ್ದರಿಂದ ಜರಿಮಲೆ ದೊರೆಗಳನ್ನು ಅರೊದಿ ದಿಬ್ಬದಹಳ್ಳಿ ಎಂಬ ಗ್ರಾಮದ ಬಳಿ ಠಾಣ್ಯ ಹಾಕಿದಾಗ ಕರೆಕಳುಹಿಸಿದನು.[೮೦] ಅಷ್ಟೊತ್ತಿಗಾಗಲೇ ಚಿತ್ರದುರ್ಗ ಹರಪನಹಳ್ಳಿ ನಾಯಕರಿಂದ ತುಂಬ ತೊಂದರೆಗೊಳಗಾಗಿ ನೊಂದಿದ್ದ ಜರಿಮಲೆನಾಯಕರು ಹೈದರಾಲಿಯ ಕಡೆಗೆ ಸೇರಿಕೊಂಡರು. ೧೭೭೭ರಲ್ಲಿ ಚಿತ್ರದುರ್ಗದ ಮೇಲೆ ಹೈದರಾಲಿಯು ಮೂರನೇ ಬಾರಿಗೆ ದಾಳಿ ಮಾಡಿದನು. ಆಗ ಜರಿಮಲೆಯ ಪಾಳೆಯಗಾರನು ಚಿತ್ರದುರ್ಗದ ದೊರೆಯಂತೆ ತನ್ನನ್ನು ಕಾಣಬೇಕೆಂದು ಕೇಳಿಕೊಂಡನು. ಹೈದರಾಲಿಯು ಈ ಸಮಯದಲ್ಲಿ ಪ್ರತಿಮಾತನ್ನು ಆಡದೆ ಅವನ ಬೇಡಿಕೆಯನ್ನು ಈಡೇರಿಸಿದನು. ಹೈದರಾಲಿಯ ಈ ಸಹಾಯದಿಂದ ಜರಿಮಲೆ ನಾಯಕನು ಮತ್ತೆ ತನ್ನ ಪೂರ್ವದ ಸ್ಥಿತಿಗೆ ಬಂದನು.[೮೧] ದುರ್ಗದ ಅತೃಪ್ತ ದೊರೆ ದೊಡ್ಡಮದಕರಿನಾಯಕನು ಜರಿಮಲೆ, ಗುಡೇಕೋಟೆಯವರನ್ನು ಮದಕರಿನಾಯಕನ ವಿರುದ್ಧ ಎತ್ತಿಕಟ್ಟಿ ಹೈದರಾಲಿಯ ಪರ ನಿಂತು ಹೋರಾಡುವಂತೆಯೂ ಮಾಡಿದನು.[೮೨] ೧೭೭೯ರಲ್ಲಿ ಹೈದರಾಲಿ ದುರ್ಗವನ್ನು ವಶಪಡಿಸಿಕೊಂಡನು. ಮದಕರಿನಾಯಕನ ಸೋಲಿನಿಂದ ಸಂತೋಷಗೊಂಡ ಜರಿಮಲೆ ನಾಯಕರು ಪುನಃ ತಮ್ಮ ವಿಚಾರಗಳನ್ನು ಹೈದರಾಲಿ ಬಳಿ ಭಿನ್ನವಿಸಿಕೊಂಡರು. ಆ ಪ್ರಕಾರ ಜರಿಮಲೆಯನ್ನು ನಾಯಕನಿಗೆ ಹಿಂತಿರುಗಿಕೊಟ್ಟು,

ವರ್ಷವೊಂದಕ್ಕೆ ೩೦೦೦ ಪಗೋಡ ಕಾಣಿಕೆಯನ್ನು ಒಪ್ಪಿಸುವಂತೆ ಆಜ್ಞಾಪಿಸಿದನು. ಬೊಮ್ಮಣ್ಣನಾಯಕನು ಜರಿಮಲೆಗೆ ಹಿಂತಿರುಗಿ ಅಧಿಕಾರ ನಡೆಸಿದನೆಂದು ತಿಳಿದುಬರುತ್ತದೆ.

ಕ್ರಿ.ಶ.೧೭೮೦ರಲ್ಲಿ ಪಾಲ್ಗಾಟಿನ ಮೇಲೆ ದಾಳಿ ನಡೆದ ಸಂದರ್ಭದಲ್ಲಿ ಜರಿಮಲೆ ಬೊಮ್ಮಣ್ಣನಾಯಕನು ೧೦೦೦೦ ಕಾಲಾಳು ಮತ್ತು ೧೦೦ ಅಶ್ವಗಳೊಂದಿಗೆ ಹೈದರಾಲಿಯ ಸಹಾಯಕ್ಕಾಗಿ ಹೋಗಿದ್ದನು. ಅಲ್ಲದೆ ಹೈದರಾಲಿಯ ಆಪ್ತ ಮಿತ್ರನಾದನು. ಆದರೆ ಹೈದರಾಲಿಯು ಜರಿಮಲೆ ನಾಯಕರ ಸಾಹಸವನ್ನು ಕಂಡು ಅಸೂಯೆ ಪಟ್ಟು ಮುಂದೆ ನಮಗೆ ಮುಳ್ಳಾಗಬಹುದೆಂದು ಜರಿಮಲೆಯ ಏಳುಮಂದಿ ನಾಯಕರನ್ನು ಶ್ರೀರಂಗಪಟ್ಟಣದ ಸೆರೆಮನೆಯಲ್ಲಿಟ್ಟನು.[೮೩] ಆದರೆ ಈ ಏಳು ಮಕ್ಕಳ ಬಗ್ಗೆ ಹೆಚ್ಚಿನ ವಿವರ ತಿಳಿದುಬಂದಿಲ್ಲ.

ಟಿಪ್ಪೂಸುಲ್ತಾನನು ಪಾಳೆಯಪಟ್ಟುಗಳ ಕಡುವಿರೋಧಿಯಾಗಿದ್ದನು. ಹೀಗಾಗಿ ಹರಪನಹಳ್ಳಿ, ರಾಯದುರ್ಗ ಸಿರುಗುಪ್ಪ, ಮುಂತಾದ ಪ್ರದೇಶಗಳನ್ನು ಕೊಳ್ಳೆಹೊಡೆದನು. ನಂತರ ಜರಿಮಲೆ ಮೇಲೆ ಆಕ್ರಮಣ ಮಾಡಿ ಅಲ್ಲಿಯೇ ಕೆಲಕಾಲ ತಂಗಿದ್ದನು. ಮರಾಠರ ದಾಳಿಯನ್ನು ಎದುರಿಸಲು ಇದು ಗಡಿಯಾಗಿಟ್ಟುಕೊಳ್ಳಲು ಸೂಕ್ತ ಸ್ಥಳವೆಂದು ಭಾವಿಸಿ ಅಲ್ಲಿ ರಕ್ಷಣ ಪಡೆಯನ್ನಿಡಲು ನಿರ್ಧರಿಸಿ ಜರಿಮಲೆ ನಾಯಕರನ್ನು ಮೋಸದಿಂದ ಶ್ರೀರಂಗಪಟ್ಟಣಕ್ಕೆ ಕರೆಸಿಕೊಂಡನು. ಹರಪನಹಳ್ಳಿ ಮತ್ತು ಯೆಡೆತೊರೆ ಗ್ರಾಮಗಳನ್ನು ದತ್ತಿಯಾಗಿ ಈ ನಾಯಕರಿಗೆ ನೀಡಿ ನಂತರ ಕಿತ್ತುಕೊಂಡು ೧೭೮೭ರಲ್ಲಿ ತನ್ನ ಭಕ್ಷಿಯನ್ನಾಗಿ ತಿಂಗಳಿಗೆ ೩೦೦ ರೂ.ಗಳ ವೇತನದ ಮೇಲೆ ನೇಮಕ ಮಾಡಿಕೊಂಡನು. ಆಮೇಲೆ ಇಸ್ಲಾಂ ಧರ್ಮವನ್ನು ಸ್ವೀಕರಿಸುವಂತೆ ಒತ್ತಾಯಿಸಿದನು. ಇಲ್ಲದಿದ್ದರೆ ಕೊಲ್ಲುವುದಾಗಿ ಬೆದರಿಸಿದನು. ಆಗ ನಾಯಕರು ತಮ್ಮವರೊಂದಿಗೆ ತಪ್ಪಿಸಿಕೊಂಡು ಸುರಪುರಕ್ಕೆ ಪಲಾಯನ ಮಾಡಿದರು.

೧೭೯೯ರಲ್ಲಿ ಬ್ರಿಟೀಷರು, ನಿಜಾಮ ಮತ್ತು ಮರಾಠರ ಸಹಾಯದಿಂದ ಟಿಪ್ಪೂಸುಲ್ತಾನನನ್ನು ಸೋಲಿಸಿದರು. ಈ ಸಂದರ್ಭದಲ್ಲಿ ಜರಿಮಲೆ ನಾಯಕರು ಮರಾಠರಿಗೆ ೨೦,೦೦೦ರೂಗಳ ಖಂಡಣೆಯ ಹಣವನ್ನು ನೀಡಿ ಜರಿಮಲೆಯನ್ನು ವಾಪಸ್ಸು ಪಡೆದುಕೊಂಡರೆಂದು ತಿಳಿಯುತ್ತದೆ. ಜರಿಮಲೆ ಪಾಳೆಯಗಾರರ ವಶದಲ್ಲಿದ್ದ ಸಂಡೂರು ೧೭೯೨ರ ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿ ಒಪ್ಪಂದದ ಪ್ರಕಾರ ಸಿದ್ದೋಜಿರಾವ್ ಘೋರ್ಪಡೆಗೆ ನೀಡಲಾಯಿತು.[೮೪] ೧೭೯೯ರಲ್ಲಿ ಟಿಪ್ಪೂ ಸುಲ್ತಾನನು ನಾಲ್ಕನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಸೋತು ನಂತರ ಜರಿಮಲೆ ಸಂಸ್ಥಾನವು ಹೈದರಾಬಾದ್ ನಿಜಾಮನಿಗೆ ಸೇರಿತು. ಈ ಸಂಸ್ಥಾನಕ್ಕೆ ನಿಜಾಮನು ಚೆನ್ನೋಡುಖಾನನ್ನೂ ಅಧಿಕಾರಿಯನ್ನಾಗಿ ನೇಮಿಸಿದನು. ನಿಜಾಮನು ಜರಿಮಲೆ ಪ್ರಾಂತ್ಯವನ್ನು ೧೮೦೦ಂಗಳಿಗೆ ನಿಗದಿ ಮಾಡಿ ಜರಿಮಲೆ ನಾಯಕರಿಗೆ ಬಿಟ್ಟುಕೊಟ್ಟನು ಮತ್ತು ಮೀರ್ ಆಲಸ್ ಬಹಾದ್ದೂರ್ ಎಂಬುವನನ್ನು ಅಧಿಕಾರಿಯಾಗಿ ನೇಮಿಸಿದನು. ಖಂಡಣೆ ಹಣದ

ವಸೂಲಿಗೆ ಜರಿಮಲೆಗೆ ತನ್ನ ಅಧಿಕಾರಿ ಪೇಷ್ಕರ್ ನಾಗಣ್ಣರಾವ್‌ನನ್ನು ಕಳುಹಿಸಿದನು. ನಾಯಕರು ಆತಿಥ್ಯ ನೀಡಿ, ನಿಗದಿ ಪಡಿಸಿದ ಹಣವನ್ನು ನೀಡಿದಾಗ ಆ ಅಧಿಕಾರಿ ಅದನ್ನು ತಿರಸ್ಕರಿಸಿ ೩೦೦೦ ರೂಗಳನ್ನು ಕೊಡುವಂತೆ ಒತ್ತಾಯಿಸಿದನು. ಅಲ್ಲದೆ ಹಣ ವಸೂಲಿಗಾಗಿ ೧೦೦ ಜನ ಸೈನಿಕರನ್ನು ಕೂಡ ಕರೆತಂದನು. ನಾಯಕನು ಮತ್ತೆ ಸಮಸ್ಯೆಗಳಿಗೆ ಗುರಿಯಾದನು. ಕ್ರಿ.ಶ.೧೮೦೦ರಲ್ಲಿ ಬಳ್ಳಾರಿ, ಕಡಪ, ಅನಂತಪುರ, ಕರ್ನೂಲ್‌ನ ಒಂದು ಭಾಗ ಬ್ರಿಟೀಷರಿಗೆ ಹಸ್ತಾಂತರವಾದವು. ಮನ್ರೋನು ಈ ಜಿಲ್ಲೆಗಳಿಗೆ ಕಲೆಕ್ಟರ್ ಆಗಿಬಂದನು. ಮನ್ರೋ ಈ ಪ್ರಾಂತ್ಯಗಳ ಉಸ್ತುವಾರಿ ನೋಡಿಕೊಳ್ಳಲು ರಾಯದುರ್ಗದ ಅಮಲ್ದಾರನಾಗಿದ್ದ ಶಾಮರಾವನನ್ನು ನೇಮಕ ಮಾಡಿ ಆದೇಶ ಹೊರಡಿಸಿದನು. ಶಾಮರಾವ್ ಜರಿಮಲೆ ನಾಯಕನಿಗೆ ಸರಿಯಾದ ಲೆಕ್ಕಪತ್ರಗಳ ಸಮೇತ ಜರಿಮಲೆಯನ್ನು ಇಂಗ್ಲೀಷರಿಗೆ ಒಪ್ಪಿಸಬೇಕೆಂದು ಅಮೀಲ್‌ನ ಸಂಗಡ ಪತ್ರವೊಂದನ್ನು ಕಳುಹಿಸಿದನು. ಈ ಆದೇಶದಿಂದ ಧೃತಿಗೆಟ್ಟ ನಾಯಕನು ಲೆಕ್ಕಪತ್ರಗಳನ್ನು ನೀಡದೆ ಜರಿಮಲೆಯನ್ನು ಕಂಪನಿಗೆ ಹಸ್ತಾಂತರಿಸಿ ವಿಶ್ರಾಂತಿವೇತನ ಕೋರಿದನು. ಜರಿಮಲೆ ಕೂಡ್ಲಿಗಿಗೆ ಸೇರಿದ ಮೇಲೆ ವೆಂಕಟರಾವ್ ಆ ತಾಲ್ಲೂಕಿನ ಅಮಲ್ದಾರರಾದರು.ಈ ಅಧಿಕಾರಿಯು ಜರಿಮಲೆಯ ನಾಯಕರು ಪಟೇಲ, ಶ್ಯಾನಭೋಗ, ನಾಡಗೌಡರಿಗೆ ಸಂಸ್ಥಾನದ ಲೆಕ್ಕಪತ್ರಗಳ ವರದಿಯನ್ನು ಧರ್ಮಾವರಂಗೆ ಬಂದು ಆದಷ್ಟು ಬೇಗ ಒಪ್ಪಿಸುವಂತೆ ನಿರ್ದೇಶಿಸಿದನು. ಅವನು ತನ್ನ ಅಧಿಕಾರಿಗಳೊಂದಿಗೆ ತೆರಳಿ ಲೆಕ್ಕಪತ್ರವನ್ನು ಕಂಪನಿಗೆ ನೀಡಿದರೂ ಕೂಡಾ ನಾಯಕರ ವಿಶ್ರಾಂತಿವೇತನ ನಿಗದಿಯಾಗದೆ ಹಾಗೇ ಉಳಿಯಿತು. ೧೮೦೦ರಲ್ಲಿ ಜರಿಮಲೆ ಈಸ್ಟ್ ಇಂಡಿಯಾ ಕಂಪನಿಗೆ ಸೇರಿತು. ನಂತರ ೧೮೦೧ರಲ್ಲಿ ಈ ಮನೆತನದವರಿಗೆ ಮಾಸಾಶನ ಮುಂಜೂರು ಮಾಡಲಾಯಿತು.[೮೫]

ಜರಿಮಲೆಯಲ್ಲಿ ಈ ಮನೆತನದ ವಂಶಸ್ಥರ ಪೈಕಿ ಒಟ್ಟು ಮೂರು ಕುಟುಂಬಗಳು ಇವೆ. ಈ ಮನೆತನದ ಪಂಪಾಪತಿನಾಯಕರ ಪ್ರಕಾರ ಅವರ ತಂದೆಯವರ ಕಾಲದವರಿಗೆ ಮಾಸಾಶನ ಬರುತ್ತಿತ್ತು. ಮೊದಲಿಗೆ ೪೨ ರೂ. ೧೨ ಆಣೆ ಪಡೆದುಕೊಳ್ಳುತ್ತಿದ್ದರು. ನಂತರ ೨೫೦ ರೂ ಪಡೆದುಕೊಳ್ಳುತ್ತಿದ್ದರು. ಅನಂತರ ಮಾಸಾಶಾನ ರದ್ದಾಯಿತು. ಈ ಮನೆತನದವರು ಈಗ ಸರಕಾರದ ಸಹಾಯವನ್ನು ನಿರೀಕ್ಷಿಸುತ್ತಿರುವರು. ಆರ್ಥಿಕವಾಗಿ ಕೆಳಮಟ್ಟ ತಲುಪಿರುವ ಇವರಿಗೆ ಜನರು ದೊರೆಗಳೆಂದು ಕರೆದು ನೀಡುವ ಗೌರವಕ್ಕೇನೂ ಕೊರತೆ ಇಲ್ಲ. ಅವರನ್ನು ಎಲ್ಲಾ ಜನಾಂಗದವರೂ ಪ್ರೀತಿಯಿಂದ 'ನಮ್ಮ ದೊರೆ ಮನೆತನದವರು' ಎಂದು ಕರೆಯುವುದುಂಟು. ಅಧಿಕಾರ ಕೈತಪ್ಪಿದ ನಂತರ ಈ ಮನೆತನದವರಾರೂ ರಾಜಕೀಯ ಕ್ಷೇತ್ರದಲ್ಲಿ ಪ್ರವೇಶಿಸಿಲ್ಲ. ರಾಜವಂಶಸ್ಥರಾಗಿದ್ದು, ಜನರು ಸಹ ದೊರೆಗಳೆಂದು ಕರೆದು ರಾಜಮರ್ಯಾದೆ ನೀಡುವಾಗ, ರಾಜಕೀಯ ಕ್ಷೇತ್ರಕ್ಕೆ ಹೋಗುವುದು ತರವಲ್ಲವೆಂಬ ಭಾವನೆ ಇವರಲ್ಲಿದೆ. ಈ ಭಾಗದ ರಾಜಕಾರಣಿಗಳು ಈ ಮನೆತನದವರನ್ನು ಚುನಾವಣೆ ಸಂದರ್ಭದಲ್ಲಿ ಬಳಸಿಕೊಂಡು ಬೇಡ

ಜನಾಂಗದ ಓಟುಗಳನ್ನು ಪಡೆಯುತ್ತಾರೆ. ಏಕೆಂದರೆ 'ನಮ್ಮ ದೊರೆಗಳ ಮನೆತನದವರು' ಎಂಬ ಭಾವನೆ ಹೆಚ್ಚಾಗಿ ಕಂಡುಬರುವುದು ಬೇಡ ಜನಾಂಗದಲ್ಲಿ ಮಾತ್ರ. ದೊರೆಗಳು ಹೇಳಿದ ಮಾತಿಗೆ ಇನ್ನೂ ಸ್ವಲ್ಪ ಬೆಲೆಯಿದೆ ಎಂಬುದು ಚುನಾವಣೆಯಲ್ಲಿ ಗೆಲುವು ಸಾಧಿಸಿದ ಕೆಲವು ರಾಜಕಾರಣಿಗಳ ಅಭಿಪ್ರಾಯವಾಗಿದೆ.

## ಕೊಪ್ಪಳ ಜಿಲ್ಲೆಯ ನಾಯಕ ಅರಸರು

### ಕನಕಗಿರಿ ನಾಯಕರು

ಕೊಪ್ಪಳ ಜಿಲ್ಲೆ ಐತಿಹಾಸಿಕ ಪ್ರಸಿದ್ಧ ಸ್ಥಳ. ಅಶೋಕನ ಎರಡು ಶಾಸನಗಳು ಕೊಪ್ಪಳದ ಗವಿಮಠ ಮತ್ತು ಪಾಲ್ಕಿಗುಂಡುಗಳಲ್ಲಿ ದೊರತಿವೆ. ಕೊಪ್ಪಳ ಜಿಲ್ಲೆಯ ಕನಕಗಿರಿ, ಇಟಗಿ, ಯಲಬುರ್ಗಾ, ಕುಕನೂರು ಮುಂತಾದ ಸ್ಥಳಗಳು ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದಿವೆ. ಇಂದಿನ ಕನಕಗಿರಿ ಅಶೋಕನ ಕಾಲದ ದಕ್ಷಿಣ ಪ್ರಾಂತ್ಯ 'ಸುವರ್ಣಗಿರಿ'ಯೇ ಆಗಿದ್ದಿರಬೇಕು.

ಕ್ರಿ.ಶ.೧೪೩೬ರಲ್ಲಿ ಪರಸಪ್ಪಉಡಿಚನಾಯಕ ಎಂಬುವನು ಕನಕಗಿರಿ ಸಂಸ್ಥಾನವನ್ನು ಸ್ಥಾಪಿಸಿದನು. ಇವನು ಶ್ರೀಶೈಲ ಪ್ರದೇಶದಿಂದ ಬಂದವನು ಎಂದು ಹೇಳಲಾಗುವುದು. ಶೂರ ಹಾಗೂ ಮಹಾದೈವಭಕ್ತನಾಗಿದ್ದ ಪರಸಪ್ಪನಾಯಕನಿಗೆ ಪ್ರೌಢದೇವರಾಯನು ಹನ್ನೆರಡು ಗ್ರಾಮಗಳನ್ನು ಉಂಬಳಿಯಾಗಿ ನೀಡಿದನು.[೮೬] ಕನಕಗಿರಿಯ ಲಕ್ಷ್ಮೀನರಸಿಂಹ ದೇವಾಲಯ ಇವನ ಕಾಲದಲ್ಲಿ ನಿರ್ಮಾಣಗೊಂಡು ನಂತರ ಬಂದ ದೊರೆಗಳಿಂದ ಜೀರ್ಣೋದ್ಧಾರಗೊಂಡಿತು. ವಿಜಯನಗರ ದೊರೆಗಳು ಕನಕಗಿರಿ ನಾಯಕರಿಗೆ ಮೊದಲ ಪ್ರಾಶಸ್ತ್ಯ ನೀಡಿದ್ದರು. ಕ್ರಿ.ಶ.೧೪೮೮ರಲ್ಲಿ ಸಾಳ್ವ ನರಸಿಂಹದೇವರಾಯನು ಕನಕಗಿರಿ ನಾಡದೇವರ ಅಮೃತಪಡಿಗೆಂದು ಮತ್ತೇರಡು ಗ್ರಾಮಗಳನ್ನು ಉಂಬಳಿಯಾಗಿ ನೀಡಿದನು.[೮೭] ವಿಜಯನಗರ ದೊರೆಗಳ ಬೆಂಬಲದಿಂದ ಕನಕಗಿರಿ ಸಂಸ್ಥಾನವು ಬಲಿಷ್ಠವಾಯಿತು. ಇದು ಬೆಳೆಯುತ್ತಾ ೪೦ ಲಕ್ಷ ವರಹಗಳ ಉತ್ಪನ್ನದ ಪ್ರಾಂತ್ಯವಾಯಿತು. ಕನಕಗಿರಿ ನಾಯಕರು ಶ್ರೀಮನ್‌ಮಹಾನಾಯಕಾಚಾರ್ಯ, ನಾಯಕ ಶಿರೋಮಣಿ, ಗುಜ್ಜಲ ವಂಶೋದ್ಧಾರಕ, ಹೀಗೆ ಅನೇಕ ಬಿರುದುಗಳನ್ನು ಧರಿಸಿಕೊಂಡಿದ್ದರು. ಕನಕಗಿರಿಯು ರಾಜಧಾನಿಯಾಗಿ ರೂಪುಗೊಂಡಿತು.

ಪರಸಪ್ಪನಾಯಕನ ನಂತರ ಅವನ ಮಗ ಉಡಿಚಪ್ಪನಾಯಕನ ಕಾಲದಲ್ಲಿ ಕನಕಗಿರಿ ಒಂದು ಸಮೃದ್ಧ ಸಂಸ್ಥಾನವಾಗಿ ರೂಪುಗೊಂಡಿತು. ಕೃಷ್ಣದೇವರಾಯನು ೨೬.೬.೧೫೧೨ರಲ್ಲಿ ಕನಕಗಿರಿ ಪೇಟೆಯ ಸುಂಕ, ತಳವರಿಕೆ ಸುಂಕ ಚಿನ್ನಾಪುರ, ತೊರೆಗಲ್ಲು ಸೀಮೆಯ ಯಡಿಗಲ್ಲ ಕಳಸಗ್ರಾಮ, ಸವಲಿ ಸೀಮೆಯ ಜಾರಾಪುರ ಒಟ್ಟು ಮೂರು ಗ್ರಾಮಗಳನ್ನು ನೀಡಿದನು.[೮೮] ಕೃಷ್ಣದೇವರಾಯನ ನಂತರದಲ್ಲಿ ಅಚ್ಯುತರಾಯನು ಸಹ ೨೧-೧-೧೫೩೪ರಲ್ಲಿ ಕೆಲವು ಗ್ರಾಮಗಳನ್ನು ಕನಕಗಿರಿನಾಥಸ್ವಾಮಿಗೆ ಉಂಬಳಿಯಾಗಿ ನೀಡಿದನು.

ಹೀಗಾಗಿ ಧಾರ್ಮಿಕವಾಗಿ ಕನಕಗಿರಿ ಪ್ರಸಿದ್ಧ ಕ್ಷೇತ್ರವಾಯಿತು. ಹಂಪಿ ವಿರೂಪಾಕ್ಷ ದೇವಾಲಯದ ಉತ್ತರ ಗೋಪುರವನ್ನು ಇವನು ಕಟ್ಟಿಸಿದನು. ಈಗಲೂ ಆ ಗೋಪುರವನ್ನು ಕನಕಗಿರಿ ಗೋಪುರ ಎನ್ನಲಾಗುತ್ತಿದೆ. ಈ ಬೆಳವಣಿಗೆಯಿಂದಾಗಿ ಉಡಿಚನಾಯಕನು ವಿಜಯನಗರದ ಮಾಂಡಲಿಕನಾಗಿ ಗುರುತಿಸಿಕೊಂಡನು.[೮೯]

ನವಾಬಉಡಿಚನಾಯಕನ ನಂತರ ಕೆಲವಡಿಉಡಿಚನಾಯಕನು ಅಧಿಕಾರಕ್ಕೆ ಬಂದನು. ಆಗ ರಾಮರಾಯನ ಆಳ್ವಿಕೆಯಿಂದ ಬೇಸತ್ತ ಮುಸ್ಲಿಂಷಾಹಿಗಳು ಒಂದುಗೂಡಿದರು. ೧೫೬೫ರಲ್ಲಿ ನಡೆದ ತಾಳಿಕೋಟೆ ಕದನದಲ್ಲಿ ವಿಜಯನಗರ ದೊರೆಗಳ ಪರವಾಗಿ ಅನೇಕ ಪಾಳೆಯಗಾರರು ಭಾಗವಹಿಸಿದ್ದರು. ಆದರೆ ವಿಜಯನಗರ ಸೈನ್ಯ ಈ ಯುದ್ಧದಲ್ಲಿ ಸೋಲುಂಡಿತು. ರಾಮರಾಯ ಕೊಲ್ಲಲ್ಪಟ್ಟನು. ಆಗ ವಿಜಯನಗರ ರಾಜಧಾನಿ ಕಡೆ ದಾಳಿ ಮಾಡಿದ ಷಾಹಿಮುಸ್ಲಿಂ ಸೈನ್ಯದ ಹೊಡೆತಕ್ಕೆ ತುತ್ತಾದ ಮೊದಲ ಸಂಸ್ಥಾನ ಕನಕಗಿರಿಯಾಗಿದೆ. ಕೆಲವಡಿಉಡಿಚನಾಯಕನ ನಂತರ ಕನಕಯ್ಯಉಡಿಚನಾಯಕ ಅಧಿಕಾರಕ್ಕೆ ಬಂದನು. ಇವನು ತಮ್ಮ ವೆಂಕಟಪ್ಪನಾಯಕನು ಕಲಾತ್ಮಕ ಬಾವಿಯೊಂದನ್ನು ಕನಕಗಿರಿಯಲ್ಲಿ ಕಟ್ಟಿಸಿದನು. ಚಿತ್ರದುರ್ಗದೊಡನೆ ರಕ್ತಸಂಬಂಧವು ಈತನ ಕಾಲದಲ್ಲಿ ಆರಂಭವಾಯಿತು. ನಂತರ ಬಂದ ಇಮ್ಮಡಿ ಉಡಿಚನಾಯಕನ ಕಾಲದಲ್ಲಿ ಷಹಜಿ ಮತ್ತು ರಣದುಲ್ಲಾಖಾನರು ದಕ್ಷಿಣ ಸಂಸ್ಥಾನಗಳ ಮೇಲೆ ದಾಳಿ ಪ್ರಾರಂಭಿಸಿದರು. ೧೬೫೩ರಲ್ಲಿ ಅಫಜಲ್‌ಖಾನನು ಕನಕಗಿರಿ ಮೇಲೆ ದಾಳಿ ಮಾಡಿದನು. ಈ ದಾಳಿಯನ್ನು ಕನಕಗಿರಿ ನಾಯಕನು ಸಮರ್ಥವಾಗಿ ಎದುರಿಸಿದನು. ೧೬೫೭ರಲ್ಲಿ ಕನಕಗಿರಿ ನಾಯಕನು ವಿಜಾಪುರದ ಷಹಜಿ ದಾಳಿಯಿಂದ ತತ್ತರಿಸಿ ಕಪ್ಪಕಾಣಿಕೆಯನ್ನು ೨ನೇ ಅಲಿ ಆದಿಲಷಾಹಿಗೆ ನೀಡಲು ಒಪ್ಪಿಕೊಂಡನು.[೯೦] ೧೬೭೪ರಲ್ಲಿ ದೇವದುರ್ಗದ ಕಿಲ್ಲೆ ಕೆಳಗಿನ ಕೆಲವು ಹಳ್ಳಿಗಳನ್ನು ಕೆಲವು ದಿನಗಳ ಕಾಲ ವಶದಲ್ಲಿಟ್ಟುಕೊಂಡಿದ್ದನು. ಬಿಜಾಪುರದ ಸುಲ್ತಾನನು ಈ ಹಳ್ಳಿಗಳನ್ನು ಗೆದ್ದು ಹಸರಂಗಿ ಪಾಮನಾಯಕನಿಗೆ ಇನಾಮು ಕೊಡಲಾಯಿತು. ಔರಂಗಜೇಬನ ದಾಳಿಗೆ ಅಂಜಿ ಆಶ್ರಯಕೋರಿ ಬಂದ ಪಿಡ್ಡನಾಯಕನಿಗೆ ಆಶ್ರಯ ನೀಡಿದ್ದುದು ಇವನ ಧೈರ್ಯವೇ ಸರಿ. ಒಂದು ವರ್ಷ ಆತನನ್ನು ಎಮ್ಮಿಗುಡ್ಡದಲ್ಲಿ ಸುರಕ್ಷಿತವಾಗಿಟ್ಟನು.[೯೧] ಇವನ ರಾಣಿ ಚಿನ್ನಮ್ಮ ಕನಕರಾಯನಕೆರೆ,[೯೨] ಪೇಟೆಬಸವಣ್ಣ ದೇವಾಲಯ ಕಟ್ಟಿಸಿದಳು. ಅಲ್ಲದೆ ಲಕ್ಷ್ಮೀದೇವಿ ಗುಡ್ಡದಲ್ಲಿ ಒಂದು ಬಾವಿಯನ್ನು[೯೩] ಕಟ್ಟಿಸಿದಳು. ಮಹಾವಿಷ್ಣು ಭಕ್ತನಾಗಿದ್ದ ಇವನು ವಿಷ್ಣುವೇ ಶ್ರೇಷ್ಠವೆಂದು ಶಾಸನ ಹಾಕಿಸಿದನು. ಇವನ ಕಾಲದಲ್ಲಿ ಕನಕಗಿರಿಯ ೩.೨ ಲಕ್ಷ ಆದಾಯವನ್ನು ಹೊಂದಿತ್ತು.[೯೪] ಕನಕಗಿರಿ ಸಂಸ್ಥಾನದ ಕೀರ್ತಿಯು ಸುತ್ತಮುತ್ತ ಪ್ರದೇಶದಲ್ಲೆಲ್ಲಾ ಹರಡಿತು.

ಇಮ್ಮಡಿ ಉಡಿಚನಾಯಕನ ನಂತರ ಬಂದ ಇಮ್ಮಡಿ ಕನಕಪ್ಪಉಡಿಚನಾಯಕ ಧಾರ್ಮಿಕ ಸ್ವಭಾವದವನಾಗಿದ್ದನು. ಶೃಂಗೇರಿ ಮಠಕ್ಕೆ ತೊಂಡೇಹಾಳ ಗ್ರಾಮವನ್ನು ದಾನ ನೀಡಿದನು. ಚಿದಾನಂದ

ಅವಧೂತರಿಗೆ ಕನಕಗಿರಿಯಲ್ಲಿ ಮಠವೊಂದನ್ನು ಕಟ್ಟಿಸಿದನು. ಇವನ ನಂತರ ರಂಗಪ್ಪನಾಯಕನು ಅಧಿಕಾರಕ್ಕೆ ಬಂದನು. ಸುರಪುರ ಸಂಸ್ಥಾನದೊಡನೆ ರಕ್ತಸಂಬಂಧ ಏರ್ಪಟ್ಟಿತು.[೬೫] ಇವನು ಚಿತ್ರದುರ್ಗದ ವೀರಮದಕರಿನಾಯಕನ ಸಹಾಯಕ್ಕೆ ಸೈನ್ಯವನ್ನು ಕಳುಹಿಸಿದ್ದನು. ನಂತರದಲ್ಲಿ ಬಂದ ದೊರೆಗಳಲ್ಲಿ ಹಿರೇನಾಯಕ(೧೭೮೮-೧೮೩೩) ಕನಕಗಿರಿಯಿಂದ ಅಧಿಕಾರ ಚಲಾಯಿಸಿದ ಕೊನೆ ದೊರೆ. ಇವನ ಕಾಲದಲ್ಲಿ ಕುಷ್ಟಗಿ, ಸಿಂಧನೂರು, ಗಂಗಾವತಿ, ಹರಿಹರ ಮತ್ತು ದಾವಣಗೆರೆವರೆಗಿನ ಪ್ರದೇಶ ಇವನ ಅಧೀನದಲ್ಲಿತ್ತು. ಈ ಎಲ್ಲಾ ಪ್ರದೇಶಗಳಿಂದ ಬರುತ್ತಿದ್ದ ರಾಜ್ಯದ ಒಟ್ಟು ಆದಾಯ ಒಂಭತ್ತು ಲಕ್ಷ. ೧೭೯೩ರಲ್ಲಿ ಟಿಪ್ಪುಸುಲ್ತಾನನ ದಾಳಿಗೆ ಅಂಜಿ ಅವನ ಅಧೀನನಾಗಿರಲು ಒಪ್ಪಿಕೊಂಡು ಕನಕಗಿರಿಯನ್ನು ತನ್ನ ಹತೋಟಿಯಲ್ಲಿಟ್ಟುಕೊಂಡನು. ಈ ದೊರೆಯ ವೈಯಕ್ತಿಕ ನಡತೆ ಸರಿಯಿರಲಿಲ್ಲ. ಮುಂಡರಗಿಯ ದೇಸಾಯಿಯ ಮಗಳು ಹಾಗೂ ಬಾದರಬಂಡಿಯ ದೇಸಾಯಿಯ ಹೆಂಡತಿಯರನ್ನು ಬಲತ್ಕಾರದಿಂದ ಅಪಹರಿಸಿದ್ದನು. ಈ ದೇಸಾಯಿಗಳು ನಿಜಾಮನಲ್ಲಿ ದೂರಿಕೊಂಡರು. ನಿಜಾಮನ ಆದೇಶದಂತೆ ಸುರಪುರದ ಇಮ್ಮಡಿ ಪಾಮನಾಯಕನು ಕನಕಗಿರಿ ಮೇಲೆ ದಾಳಿ ಮಾಡಿದನು. ಯುದ್ಧ ಮಾಡುತ್ತಲೇ ಹಿರೇನಾಯಕನು ಎಮ್ಮಿಗುಡ್ಡ ಸೇರಿದನು. ಅಲ್ಲಿ ಪಾಮನಾಯಕನು ಇವನನ್ನು ಸೋಲಿಸುವುದು ಕಷ್ಟವಾಯಿತು. ನಿಜಾಮನಿಂದ ಸೈನ್ಯ ಸಹಾಯವನ್ನು ತರಿಸಿಕೊಂಡು ಹಿರೇನಾಯಕನು ಕುಡಿದು ಮಲಗಿದಾಗ ರಾತ್ರಿ ವೇಳೆಯಲ್ಲಿ ಮೋಸದಿಂದ ಕೈಕಾಲು ಕಟ್ಟಿ ಹಿಡಿದು ತಂದನು. ನಿಜಾಮನು ಎಲ್ಲಾ ಜಾಗೀರುಗಳನ್ನು ಜಪ್ತಿ ಮಾಡಿದನು. ನಿಜಾಮನ ಫೌಜು ಕನಕಗಿರಿಯಲ್ಲಿಡುವಂತೆ ಅಪ್ಪಣೆಯಾಯಿತು. ಪಾಮನಾಯಕನ ಕನಕಗಿರಿಯಲ್ಲಿ ಲೂಟಿ ಮಾಡಿದನು. ಹಿರೇನಾಯಕನನ್ನು ಸೆರೆಯಾಳಾಗಿ ಹೈದರಾಬಾದಿಗೆ ಕಳುಹಿಸಿದರು. ಅಲ್ಲಿ ಅವನನ್ನು ತೋಫಿನ ಬಾಯಿಗೆ ಕಟ್ಟಿ ಉಡಾಯಿಸಲಾಯಿತು. ಪಾಮನಾಯಕನು ಹೈದರಾಬಾದಿಗೆ ಬಂದರೆ ಹೋಗಿ ಬರುವ ನಿತ್ಯದ ಖರ್ಚನ್ನು ನಿಜಾಮ ಸರಕಾರದಿಂದ ಕೊಡಲೇಬೇಕೆಂದು ನಿರ್ಣಯವಾಯಿತು. ಕೆಲಭಾಗದ ರೂಸೂಮ ಕೊಡಬೇಕೆಂದು ಗೊತ್ತಾಯಿತು.[೬೬] ಗುಜ್ಜಲ ವಂಶದ ನಾಯಕರ ಕನಕಗಿರಿ ಆಳ್ವಿಕೆ ಹಿರೇನಾಯಕನಿಂದ ಮುಕ್ತವಾಯಿತು.

ಹಿರೇನಾಯಕನ ಎರಡನೇ ಮಗನಾದ ರಂಗನಾಥಪ್ಪನಾಯಕನು ನಿಜಾಮನ ವಿರುದ್ಧ ಬಂಡಾಯವೆದ್ದನು. ಇದರಿಂದಾಗಿ ನಿಜಾಮನು ಕನಕಗಿರಿಯನ್ನು ಹೊರತುಪಡಿಸಿ ೧೭ ಹಳ್ಳಿಗಳನ್ನು ಜಾಗೀರು ನೀಡಿದನು.[೬೭] ರಾಜದರ್ಬಾರನ್ನು ಕನಕಗಿರಿ ಸಮೀಪ ಹುಲಿಹೈದರ್‌ದಲ್ಲಿ ಕಟ್ಟಿಸಿಕೊಂಡು ಇರಲು ಅನುಕೂಲ ಮಾಡಿಕೊಟ್ಟನು. ನಂತರ ಕನಕಗಿರಿ ಸಂಸ್ಥಾನ ಹುಲಿಹೈದರ್ ಸಂಸ್ಥಾನವೆಂದು ಹೆಸರಾಯಿತು. ಹುಲಿ ಹೈದರ್‌ನಿಂದ ರಂಗನಾಥಪ್ಪನಾಯಕ ಅಧಿಕಾರ ನಡೆಸಿದನು. ಇವನ ತಮ್ಮನಾದ ಹನುಮಪ್ಪನಾಯಕನು ಗೋದಿನಾಳ ಗ್ರಾಮವನ್ನು ಪಡೆದು ಪ್ರತ್ಯೇಕ ಜೀವನವನ್ನು ನಡೆಸಿದನು. ಇವನ ಮನೆತನದವರನ್ನು

ಗೋಡಿನಾಳ ದೊರೆಗಳೆಂದು ಇಂದಿಗೂ ಕರೆಯುವರು. ಕನಕಗಿರಿ ಕನಕಚಲಪತಿ ದೇವರ ಜಾತ್ರೆ ನಡೆಸಲು ನಿಜಾಮನು ಕೊಡುತ್ತಿದ್ದ ೩ ಸಾವಿರ ರೂ.ಗಳನ್ನು ನಿಲ್ಲಿಸಿದರೂ, ರಂಗನಾಥಪ್ಪನಾಯಕರು ಸ್ವಂತ ಖರ್ಚಿನಿಂದ ಜಾತ್ರೆಯ ಸಂದರ್ಭದಲ್ಲಿ ನಡೆಯುವ ಉತ್ಸವಗಳನ್ನು ನಡೆಯುವಂತೆ ಮಾಡಿದರು. ಇವನ ನಂತರದಲ್ಲಿ ರಂಗಪ್ಪನಾಯಕ, ಉಡಿಚನಾಯಕ, ರಾಜಾರಂಗಪ್ಪನಾಯಕ, ರಾಣಿಗೌರಮ್ಮ ಹುಲಿಹೈದರ ಸಂಸ್ಥಾನವನ್ನಾಳಿದರು. ರಂಗಪ್ಪನಾಯಕರ ಕಾಲದಲ್ಲಿ ಇವರ ಸಹೋದರರಾದ ಕನಕಪ್ಪನಾಯಕ ಮತ್ತು ಜುಮ್ಮಳ ನಾಯಕ, ಸೋಮಸಾಗರ ಹಾಗೂ ಗುಂತಮಡುವಿನ ಗ್ರಾಮಗಳನ್ನು ತೆಗೆದುಕೊಂಡು ಪ್ರತ್ಯೇಕರಾದರು.[೯೮] ಆದರೆ ಇವರ ವಂಶ ಮುಂದುವರೆಯಲಿಲ್ಲವೆಂದು ಕಂಡುಬರುತ್ತದೆ. ರಾಣಿಗೌರಮ್ಮ ರಂಗಪ್ಪನಾಯಕನನ್ನು ದತ್ತು ತೆಗೆದುಕೊಂಡಳು. ಇವನು ಚಿಕ್ಕವನಿದ್ದುದರಿಂದ ನಿಜಾಮನ ಮನೆಯಲ್ಲಿ ಬೆಳೆಯಲು ಬಿಟ್ಟಳು. ರಾಣಿಗೌರಮ್ಮಳ ಆಡಳಿತವನ್ನು ಮುಜುಂದಾರರು, ಸುಭೇದಾರರು ಇತರ ಕೆಲವು ಅಧಿಕಾರವರ್ಗವು ದುರಪಯೋಗಪಡಿಸಿಕೊಂಡರು. ನಿಜಾಮನು ಆಗ ಸಂಸ್ಥಾನದ ಆಡಳಿತ ಸರಿಯಾಗಿ ನಡೆಯುತ್ತಿಲ್ಲವೆಂದು ಕೆಲಕಾಲ ಸಂಸ್ಥಾನವನ್ನು ತನ್ನ ಹತೋಟಿಯಲ್ಲಿಟ್ಟು ಕೊಂಡನು. ಗೌರಮ್ಮಗೆ ಮತ್ತು ರಂಗಪ್ಪನಾಯಕರಿಗೆ ಮಾಸಾಶನ ನೀಡಿದರು. ರಂಪ್ಪನಾಯಕನು ಪ್ರಾಪ್ತವಯಸ್ಸಿಗೆ ಬಂದ ನಂತರ ಹುಲಿಹೈದರ್‌ಗೆ ಬಂದು ನೆಲೆಸಿದನು. ನಿಜಾಮನು ೧೯೪೮ರಲ್ಲಿ ಭಾರತದೊಳಗೆ ತನ್ನ ಸಂಸ್ಥಾನ ವಿಲೀನೀಕರಣಕ್ಕೆ ಒಪ್ಪಿದ ನ[illegible] ಈ ಸಂಸ್ಥಾನವು ತನ್ನ ಅಧಿಕಾರವನ್ನು ಕಳೆದುಕೊಂಡಿತು. ೧೯೫೭ರಲ್ಲಿ ಜಾಹಗೀರುಗಳು ರದ್ದಾದ್ದರಿಂದ ಈ ನಾಯಕರು ಸಂಪೂರ್ಣವಾಗಿ ತಮ್ಮ ಅಧಿಕಾರವನ್ನು ಕಳೆದುಕೊಂಡರು.

ಕನಕಗಿರಿ ನಾಯಕರ ಹಾಲಿ ವಂಶಸ್ಥರು ಹುಲಿಹೈದರ್‌ನಲ್ಲಿದ್ದಾರೆ. ರಾಜಕೀಯವಾಗಿ ರಂಗಪ್ಪನಾಯಕರ ಕಾಲದವರೆಗೆ ಒಳ್ಳೆಯ ಸ್ಥಿತಿಯಲ್ಲಿದ್ದರು. ರಾಜಾರಂಗಪ್ಪನಾಯಕರು ಹತ್ತು ವರ್ಷಗಳ ಕಾಲ ಹುಲಿಹೈದರ ಪಂಚಾಯ್ತಿ ಚೇರಮನ್ ಆಗಿದ್ದರು; ಒಮ್ಮೆ ೧೯೭೭ರಲ್ಲಿ ಗಂಗಾವತಿ ಟಿ.ಎ.ಪಿ.ಎಂ.ಸಿ.ಸಮಿತಿಯ ಅಧ್ಯಕ್ಷರಾಗಿದ್ದರು. ಇವರ ನಂತರ ಇವರ ಹಿರಿಯಮಗ ಉಡಿಚಪ್ಪನಾಯಕನು ಮಂಡಲ ಪಂಚಾಯ್ತಿ ಪ್ರಧಾನರಾಗಿದ್ದರು. ಅವರ ಅಕಾಲಿಕ ಮರಣದ ನಂತರ ಈ ಮನೆತನದಲ್ಲಿ ರಾಜಾ ಉಡೆಚೇಂದ್ರನಾಯಕರು ಇತ್ತೀಚೆಗೆ ರಾಜಕೀಯವಾಗಿ ಗುರುತಿಸಿಕೊಂಡಿದ್ದಾರೆ. ಅವರು ಕಳೆದ ಚುನಾವಣೆಯಲ್ಲಿ ಕನಕಗಿರಿ ಜಿಲ್ಲಾ ಪಂಚಾಯ್ತಿ ಕ್ಷೇತ್ರದಿಂದ ಸ್ಪರ್ಧಿಸಿ ಸೋಲನ್ನು ಅನುಭವಿಸಿದರು. ಈ ಮನೆತನದ ಇನ್ನೊಂದು ಕವಲಿನ ಕುಟುಂಬದಲ್ಲಿ ರಾಜಾ ಚಚ್ಚಪ್ಪನಾಯಕರು ಪ್ರಸ್ತುತ ಗಂಗಾವತಿಯ ಎ.ಪಿ.ಎಂ.ಸಿ.ಯ ಡೈರಕ್ಟರ್ ಆಗಿದ್ದಾರೆ. ಈ ಭಾಗದ ರಾಜಕೀಯದಲ್ಲಿ ಗುರುತಿಸಲ್ಪಟ್ಟ ಇವರು ತಾಲೂಕು ಪಂಚಾಯ್ತಿ ಚುನಾವಣೆಯಲ್ಲಿ ಒಮ್ಮೆ ಸ್ಪರ್ಧಿಸಿ ಸೋಲನ್ನು ಅನುಭವಿಸಿದರು. ರಾಜಕೀಯವಾಗಿ ಜನಬೆಂಬಲವಿಲ್ಲವೆನ್ನುವುದು ಈ ಚುನಾವಣೆ ಗಳಲ್ಲಿನ ಸೋಲು ಹೇಳುತ್ತದೆಯಾದರೂ ಈ ಮನೆತನದವರನ್ನು ದೊರೆಗಳೆಂದು, ಗುರುಗಳೆಂದು ಎಲ್ಲಾ ಸಮುದಾಯದ ಜನರು ಇಂದಿಗೂ ಗೌರವದಿಂದ ಕರೆಯುವುದುಂಟು.

## ರಾಯಚೂರು ಜಿಲ್ಲೆಯ ನಾಯಕ ಅರಸರು

ರಾಯಚೂರು ಜಿಲ್ಲೆಯು ಚಾರಿತ್ರಿಕವಾಗಿ ಪ್ರಸಿದ್ಧಿ ಹೊಂದಿದ್ದು, ಅಶೋಕನ ಬಿರುದು ಮತ್ತು ಹೆಸರನ್ನು ಸೂಚಿಸುವ ಒಂದು ವಿಶಿಷ್ಟ ಶಿಲಾಶಾಸನ ಈ ಜಿಲ್ಲೆಯ ಮಸ್ಕಿಯಲ್ಲಿದೆ. ವಿಜಯನಗರ ಮತ್ತು ಬಹುಮನಿ ದೊರೆಗಳ ನಡುವೆ ಸ್ಪರ್ಧಾ ಕಣವಾಗಿದ್ದ ದೋಆಬ್ ಪ್ರದೇಶವೇ ಈ ಜಿಲ್ಲೆ. ವಿಜಯನಗರೋತ್ತರ ಕಾಲದಲ್ಲಿ ಬೇಡ ದೊರೆಗಳು ಈ ಜಿಲ್ಲೆಯ ಗುಡಗುಂಟೆ, ದೇವದುರ್ಗ, ಗುಂತುಗೋಳ ಮತ್ತು ಕ್ಯಾದಿಗೇರಾ ಮತ್ತಿತರ ಸ್ಥಳಗಳಲ್ಲಿ ಆಳಿದರು. ಈ ಮನೆತನದ ವಂಶಸ್ಥರು ಮೂಲಸ್ಥಳಗಳಲ್ಲಿಯೇ ನೆಲೆಸಿದ್ದಾರೆ. ಆದರೆ ಕ್ಯಾದಿಗೇರಾ ದೊರೆಗಳ ವಂಶೀಕರು ಈಗ ಇರುವುದಿಲ್ಲ. ಈ ಹಿಂದೆ ಈ ಸಂಸ್ಥಾನವನ್ನು ಅಲಕೋಡಿನ ಒಕ್ಕಲಿಗ ಲಿಂಗಾಯತರಾದ ಬಸವನಗೌಡ ಪೋಲಿಸ್‌ಪಾಟೀಲ ಎಂಬುವರ ಮನೆತನದವರಿಗೆ ಬಿಟ್ಟುಕೊಟ್ಟ ಬಗ್ಗೆ ಕ್ಯಾದಿಗೇರಾ ಊರಿನ ಹಿರಿಯರು ಹೇಳುವುದುಂಟು. ಈ ಸಂಸ್ಥಾನವನ್ನು ಮಾರಿಕೊಳ್ಳಲಾಗಿದೆಯೆಂತಲೂ ಹೇಳಲಾಗುತ್ತದೆ. ಈ ಊರಿನ ಜನರು ದೊರೆಗಳೆಂದು ಆ ಊರಿನಿಂದಲೇ ಕರೆಸುತ್ತಾರೆ ಹಾಗೂ ಹಬ್ಬ ಹರಿದಿನಗಳಲ್ಲಿ ಹಿಂದೆ ದೊರೆಗಳಿಗೆ ನೀಡುತ್ತಿದಂತಹ ಕಾಣಿಕೆಗಳನ್ನು ನೀಡುತ್ತಾರೆ. ಕ್ರಿ.ಶ.೧೯೪೮ರವರೆಗೆ ಅಧಿಕಾರದಲ್ಲಿದ್ದ ಈ ಸಂಸ್ಥಾನಿಕರು ರಾಜಕೀಯವಾಗಿ, ಆರ್ಥಿಕವಾಗಿ ಉಳಿದ ಪ್ರದೇಶದ ಬೇಡ ಪಾಳೆಯಗಾರರಿಗೆ ಹೋಲಿಸಿದರೆ ಉತ್ತಮ ಸ್ಥಿತಿಯಲ್ಲಿದ್ದಾರೆಂದು ಕಂಡುಬರುತ್ತದೆ. ಆದರೆ ಮೈಸೂರು ಪ್ರದೇಶ ಹಾಗೂ ಮದ್ರಾಸ್ ಪ್ರಾಂತ್ಯದ ಪ್ರದೇಶದಲ್ಲಿದ್ದ ಪಾಳೆಯಗಾರರು ೧೭೯೯ರಲ್ಲಿಯೇ ಅಧಿಕಾರ ವಂಚಿತರಾದರು.

## ಗುಡಗುಂಟಿಯ ನಾಯಕ ಅರಸರು

ರಾಯಚೂರು ಜಿಲ್ಲೆ ಲಿಂಗಸೂಗೂರು ತಾಲ್ಲೂಕು ಗುಡಗುಂಟಿಯು ಬೇಡರ ಸಂಸ್ಥಾನವಾಗಿತ್ತು. ಸುರಪುರ ಮತ್ತು ಗುಡಗುಂಟಿ ದೊರೆಗಳು ಒಂದೇ ಮೂಲಕ್ಕೆ ಸೇರಿದವರು. ಕಕ್ಕೇರಿ ಪ್ರದೇಶದಲ್ಲಿ ದೇಸಾಯಿಗಳಾಗಿ ಗುರುತಿಸಿಕೊಂಡಿದ್ದ ಜಕ್ಕಪ್ಪ ದೇಸಾಯಿಯ ಇಬ್ಬರು ಮಕ್ಕಳಲ್ಲಿ ಹಿರಿಯವನಾದ ಗಡ್ಡಿಲಿಂಗನಾಯಕನು ಗುಡಗುಂಟಿ ಸಂಸ್ಥಾನದ ಮೂಲ ಪುರುಷನಾಗಿದ್ದಾನೆ. ಎರಡನೇ ಮಗನಾದ ಗಡ್ಡಿಪಿಡ್ಡನಾಯಕನು ಸುರಪುರ ಸಂಸ್ಥಾನದ ಸ್ಥಾಪಕನು. ಗುಡಗುಂಟಿ ಸಂಸ್ಥಾನವು ಮೂವತ್ತು ಹಳ್ಳಿಗಳ ಚಿಕ್ಕ ಸಂಸ್ಥಾನವಾಗಿದ್ದು, ೧೯೪೯ರವರೆಗೆ ಅಧಿಕಾರದಲ್ಲಿತ್ತು.

ಗುಡಗುಂಟಿ ಸಂಸ್ಥಾನವು ಒಂದು ಪರಗಣೆ ಎಂದರೆ ಸಣ್ಣ ತಾಲೂಕದಷ್ಟಿತ್ತು. ಇದರ ಉತ್ಪನ್ನವು ಅಂದಾಜು ರೂ.೫೦,೦೦೦ದಷ್ಟಾಗಿತ್ತು. ಗುಡಗುಂಟಿ ದೊರೆಗಳು ನಿಜಾಮನ ಕೈಕೆಳಗೆ ಅಧಿಕಾರವನ್ನು ನಡೆಸಿದರು. ನಿಜಾಮನ ಸರಕಾರಕ್ಕೆ ೨೦೦೦ ರೂಗಳ ಕಪ್ಪಕಾಣಿಕೆಯನ್ನು ಕೊಡುತ್ತಿದ್ದರು. ಲಿಂಗನಾಯಕನು

ಕಕ್ಕೇರಿಯ ಹಳ್ಳಿಗಳ ಮತ್ತು ಸಮತಬೈಚಬಾಳದ ದೇಸಾಯಿಯಾಗಿದ್ದನಲ್ಲದೆ ಈ ಪರಗಣೆಯ ದೇಸಾಯಿಯೂ ಆಗಿದ್ದನು. ಇವನು ಬಿಜಾಪುರದಲ್ಲಿ ಷೇಖ್‌ಮಿನ್ಹಾಜ್ ಎಂಬ ಸರದಾರನಿಂದ ಕೊಲ್ಲಲ್ಪಟ್ಟನು.[೯೯] ಇದರಿಂದಾಗಿ ಬಿಜಾಪುರದ ಸುಲ್ತಾನರು ಗುಡಗುಂಟಿ ದೊರೆಗಳ ವೈರಿಗಳಾದರು.

ಗಡ್ಡಿಲಿಂಗನಾಯಕನ ನಂತರ ಅಧಿಕಾರಕ್ಕೆ ಬಂದ ಮಗ ಜಡಿಸೋಮನಾಯಕನು ಬಿಜಾಪುರದ ಸುಲ್ತಾನರನ್ನು ಎದುರಿಸಿದನು. ಇವನ ಶೌರ್ಯ ಸಾಹಸಗಳನ್ನು ಮೆಚ್ಚಿದ ಸುಲ್ತಾನನು ನಾಯಕನಿಗೆ "ಸರ್ಜಾಬಹದ್ದೂರ" ಎಂಬ ಬಿರುದನ್ನು ನೀಡಿದನು.[೧೦೦] ಹಾಗೂ ಕಕ್ಕೇರಿಯ ಹಳ್ಳಿಗಳು ಮತ್ತು ಸಮತ ಬೈಚಬಾಳನ್ನು ಜಡಿಸೋಮಪ್ಪನಾಯಕನಿಗೆ ಇನಾಮು ಕೊಡಲಾಯಿತೆಂದು ೧೬೬೯ರಲ್ಲಿ ಇಮ್ಮಡಿ ಅದಿಲ್ ಷಾಹಿಯಿಂದ ನೀಡಲ್ಪಟ್ಟ ಫಾರಸಿ ಸನದು ತಿಳಿಸುತ್ತದೆ.[೧೦೧] ಹೀಗಾಗಿ ಕ್ರಿ.ಶ.೧೬೬೯ರಲ್ಲಿ ಗುಡಗುಂಟಿ ಸಂಸ್ಥಾನವು ಪ್ರಾರಂಭವಾಯಿತೆಂದು ತಿಳಿದುಬರುತ್ತದೆ. ದಾಖಲೆಗಳ ಕೊರತೆಯಿಂದಾಗಿ ಗುಡಗುಂಟಿಯ ಮುಂದಿನ ಚರಿತ್ರೆ ಅಸ್ಪಷ್ಟವಾಗಿದೆ.

ಔರಂಗಜೇಬನ ದಾಳಿಯಿಂದ ಹೆದರಿದ ಪಿತಾಂಬರಿ ಪಿಡ್ಡನಾಯಕನು ಆಶ್ರಯಕೋರಿ ಗುಡಗುಂಟಿಗೆ ಬಂದನು. ಸೋಮಪ್ಪನಾಯಕನು ಅವನನ್ನು ರಕ್ಷಿಸಿ, ಕನಕಗಿರಿ ನಾಯಕರ ಎಮ್ಮೆಗುಡ್ಡದ ಕೋಟೆಯ ಕಡೆ ಕರೆದುಕೊಂಡು ಹೋದರು. ಈ ನಡುವೆ ದೇವದುರ್ಗದ ವಾಸುದೇವನಾಯಕನು ಅಡ್ಡಿಪಡಿಸಿದಾಗ ಅವನನ್ನು ಪಿಡ್ಡನಾಯಕನು ಸೋಲಿಸಿದನು. ಒಂದು ವರ್ಷ ಕಾಲ ಕನಕಗಿರಿಯ ಉಡಿಚನಾಯಕನ ರಕ್ಷಣೆ ಯಿಂದ ಎಮ್ಮೆಗುಡ್ಡದಲ್ಲಿದ್ದರು. ನಂತರ ಬಿಜಾಪುರದ ಸುಲ್ತಾನರು ಗುಡಗುಂಟಿಯನ್ನು ಮೊಗಲ ರಾಜ್ಯದ ಒಂದು ಸುಭೆಯನ್ನಾಗಿ ಮಾಡಿದರು. ಚೀನಕುಲಿಚಖಾನನು ಅದರ ಸುಭೇದಾರನಾದನು. ನಂತರ ಈ ಸುಬೆಯು ಅಸಫ್‌ಜಾನನ ವಶಕ್ಕೆ ಹೋಯಿತು. ಅವನು ಗುಡಗುಂಟಿಯ ಆಡಳಿತವನ್ನು ನೋಡಿಕೊಳ್ಳಲು ಹಿಮ್ಮತಯಾರಖಾನ ಎಂಬುವವನನ್ನು ನೇಮಿಸಿದನು. ಪಿತಾಂಬರಿ ಪಿಡ್ಡನಾಯಕನು ತನಗೆ ಅಪತ್ಕಾಲದಲ್ಲಿ ಸಹಾಯ ಮಾಡಿದ ಗುಡಗುಂಟಿ ದೊರೆಗಳ ಸಹಾಯಕ್ಕೆ ಬಂದನು. ಈ ಹಿಮ್ಮತ ಯಾರಖಾನನ್ನು ಹೊಡೆದೊಡಿಸಿ ಗುಡಗುಂಟಿ ಸಂಸ್ಥಾನವನ್ನು ಅವನಿಂದ ಕಸಿದುಕೊಂಡು ಸೋಮಷಾರ್ಜನಾಯಕನಿಗೆ ಕೊಟ್ಟನು.

ಸೋಮಷಾರ್ಜನನು ಗುಡಗುಂಟಿಯನ್ನು ಆಳುತ್ತಿರುವಾಗ ಸುರಪುರದಲ್ಲಿ ಕೆಲವು ಮೂರುಕೇರಿಬೇಡರು ಸುರಪುರದ ಮೊಂಡಗೈ ವೆಂಕಟಪ್ಪನಾಯಕನ ವಿರುದ್ಧ ಬಂಡೆದ್ದು ಅಧಿಕಾರದಿಂದ ಕೆಳಗಿಳಿಸಿ ಗುಡಗುಂಟಿಯ ಸೋಮಷಾರ್ಜನನ್ನು ಕರೆತಂದು ಸುರಪುರದ ಅರಸನನ್ನಾಗಿ ಮಾಡಿದರು. ಅವನು ಒಂಭತ್ತು ತಿಂಗಳು ಆಳಿದನೆಂದು ತಿಳಿಯುತ್ತದೆ. ಆದರೆ ದೇವದುರ್ಗದ ಕಿಲಿಚನಾಯಕ ಈ ಬೇಡರ ಬಂಡಾಯವನ್ನು ಅಡಗಿಸಿ, ಸೋಮಷಾರ್ಜನನ್ನು ಪಲಾಸಗೈಯುವಂತೆ ಮಾಡಿದನು. ಈ ಘಟನೆಯಿಂದ ದೇವದುರ್ಗ ಮತ್ತು

ಸುರಪುರದ ನಾಯಕರು ಗುಡಗುಂಟಿ ದೊರೆಗಳ ವಿರೋಧಿಗಳಾದರು. ಸುರಪುರದ ಮುಮ್ಮಡಿ ಪಾಮನಾಯಕನ ಕಾಲದಲ್ಲಿ(೧೭೫೨-೭೪) ಇಂತಹದೇ ಒಂದು ಬಂಡಾಯ ಕಾಣಿಸಿಕೊಂಡಿತು. ಹದಿನಾಲ್ಕು ಓಣಿಗಳ ಬೇಡರು ಒಂದಾಗಿ ರಾಜನ ವಿರುದ್ಧ ಬಂಡೆದ್ದರು, ಬಂಡಾಯದಲ್ಲಿ ತೊಡಗಿದ ಕೆಲವು ಬೇಡರಿಗೆ ಗುಡಗುಂಟಿಯ ದೊರೆಯು ಆಶ್ರಯನೀಡಿದನು ಮತ್ತು ಪಾಮನಾಯಕನು ಕಳುಹಿಸಿದ ಪತ್ರವನ್ನೂ ಕಡೆಗಾಣಿಸಿದನು. ಇದರಿಂದ ಸಿಟ್ಟಿಗೆದ್ದ ಪಾಮನಾಯಕನು ಗುಡಗುಂಟಿಯ ಮೇಲೆ ದಾಳಿ ಮಾಡಿದನು. ಬೆದರಿದ ಗುಡಗುಂಟಿ ದೊರೆಯು ಹತ್ತು ಜನ ಬಂಡಾಯಗಾರರನ್ನು ಪಾಮನಾಯಕನಿಗೆ ಒಪ್ಪಿಸಿದನು.

ಕ್ರಿ.ಶ.೧೭೭೭ರ ನಂತರ ಗುಡಗುಂಟಿ ಸಂಸ್ಥಾನದ ಮೇಲೆ ಗಜೇಂದ್ರಗಡದವರು ದಾಳಿ ಮಾಡಿದರು. ಆಗ ಸುರಪುರದ ದೊರೆ ವೆಂಕಟಪ್ಪನಾಯಕನಿಂದ ಬಡ್ಡಿಯಂತೆ ೩೦,೦೦೦ ಸಾಲ ಪಡೆದನು. ದಾಳಿಯನ್ನು ಎದುರಿಸಲು ಸೈನ್ಯಸಿದ್ಧತೆಯ ಖರ್ಚಿಗಾಗಿ ಸಾಲ ಮಾಡಿರಬಹುದು. ಈ ಸಾಲವನ್ನು ತೀರಿಸುವಲ್ಲಿ ಇಬ್ಬರು ನಾಯಕರಲ್ಲಿ ಕಲಹವುಂಟಾಯಿತು. ಗುಡಗುಂಟಿ ದೊರೆಯು(ಸುರಪುರದವರಿಗೆ ಸೇರಿದ) ಅರಕೇರಿಯ ಐದು ಗ್ರಾಮಗಳನ್ನು ಲೂಟಿ ಮಾಡಿದನು. ಇದರಿಂದ ಸಿಟ್ಟಿಗೆದ್ದ ವೆಂಕಟಪ್ಪನಾಯಕನು ಗುಡಗುಂಟಿಯವರ ಮೇಲೆ ದಾಳಿ ಮಾಡಿದನು. ಗುಡಗುಂಟಿ ದೊರೆಯು ದಾಳಿಯನ್ನು ಎದುರಿಸಲಾಗದೇ ಕನಕಗಿರಿಗೆ ಹೋದನು. ಸುರಪುರದ ಸೈನ್ಯ ಗುಡಗುಂಟಿಯನ್ನು ಲೂಟಿ ಮಾಡಿತು. ನಂತರ ಕನಕಗಿರಿ ನಾಯಕರ ಮಧ್ಯಸ್ಥಿಕೆಯಿಂದ ಇವರಿಬ್ಬರ ನಡುವೆ ಒಪ್ಪಂದವಾಯಿತು. ಆ ಪ್ರಕಾರ ಗುಡಗುಂಟಿ ನಾಯಕರು ಹುಣಸಗಿ ಮತ್ತು ಇತರ ಕೆಲವು ಗ್ರಾಮಗಳನ್ನು ಸಾಲದ ಬದಲಾಗಿ ಗುಡಗುಂಟಿ ನಾಯಕರು ಕೊಡಬೇಕೆಂದಾಯಿತು.[೧೦೨] ಮುಂದೊಮ್ಮೆ ಗುಡಗುಂಟಿಯವರು ಸುರಪುರದ ದೊರೆಗಳ ಮದುವೆ ಸಂದರ್ಭದಲ್ಲಿ ನಮಗೆ ಮೊದಲು ಮಾನ ಮರ್ಯಾದೆಗಳು ಸಲ್ಲಬೇಕೆಂದು ಜಗಳ ತೆಗೆದರು. ಆಗ ಸುರಪುರದ ಸೈನ್ಯವು ಗುಡಗುಂಟಿಯನ್ನು ಆಕ್ರಮಿಸಿತೆಂದು ತಿಳಿದುಬರುತ್ತದೆ.

ಗುಡಗುಂಟಿ ದೊರೆಗಳ ಹನ್ನೊಂದನೇ ತಲೆಮಾರಿನ ರಾಜಾ ಜಡಿಸೋಮಪ್ಪನಾಯಕ ಸರ್ಜಾಬಹಾದ್ದೂರರು ೧೮೯೦ರಲ್ಲಿ ಮರಣಹೊಂದಿದರು. ಇವರಿಗೆ ಗಂಡು ಸಂತಾನವಿರಲಿಲ್ಲ. ಆದ್ದರಿಂದ ಅವರ ಧರ್ಮಪತ್ನಿ ಶ್ರೀಮತಿ ರಾಣಿಗೌರಮ್ಮಾಜಿಯು ಕೆಲವು ದಿನಗಳ ಕಾಲ ಗುಡಗುಂಟಿ ಸಂಸ್ಥಾನದ ರಾಜ್ಯಭಾರವನ್ನು ಮಾಡಿದಳು. ನಂತರ ಮಗಳ ಮಗನಾದ ಜಡಿಸೋಮಪ್ಪನಾಯಕ ಅಧಿಕಾರವನ್ನು ನಡೆಸಿದನು. ಈತನೇ ಸಂಸ್ಥಾನವನ್ನು ಆಳಿದ ಕೊನೆಯ ದೊರೆ. ಈ ೧೯೩೩ರಲ್ಲಿ ಗುಡಗುಂಟಿ ಸಂಸ್ಥಾನದ ಅಧಿಪತಿಗಳಾದ ನಂತರ ಸುರಪುರದ ದೊರೆಗಳ ಜೊತೆಗೂಡಿ ಬ್ರಿಟಿಷರ ಆಡಳಿತದ ವಿರುದ್ಧ ಹೋರಾಟಕ್ಕಿಳಿದನು. ದಾನ ಧರ್ಮದಲ್ಲಿ ಪ್ರಸಿದ್ಧನಾಗಿದ್ದ ಈತ ೨೦೦ ಎಕರೆ ಭೂಮಿಯನ್ನು ದಾನ ಮಾಡಿದನು. ನಾಟಕ ಪ್ರಿಯನಾಗಿದ್ದ ಇವನು ತಾನೇ ಬೆಳಗಿನವರೆಗೆ ಕುಳಿತು ನಾಟಕವನ್ನು ನೋಡುತ್ತಿದ್ದನಂತೆ.

ಗುಡಗುಂಟಿ ಸಂಸ್ಥಾನದ ವಂಶಸ್ಥರು ಗುಡಗುಂಟಿಯಲ್ಲಿಯೇ ನೆಲೆಸಿರುವರು. ಸದ್ಯದಲ್ಲಿ ರಾಜ ಅಮರಪ್ಪನಾಯಕರು ಹಿಂದೆ ಕಟ್ಟಿಸಿದ ರಾಜದರ್ಬಾರದಲ್ಲಿ ವಾಸವಾಗಿದ್ದಾರೆ. ಪ್ರಜೆಗಳು, ರಾಜಕಾರಣಿಗಳು, ಮಠಾಧಿಪತಿಗಳು, ಅಧಿಕಾರಿಗಳು ಈ ಮನೆತನದವರಿಗೆ ಹಿಂದಿನಂತೆ ರಾಜಮರ್ಯಾದೆಯನ್ನು ನೀಡುತ್ತಿದ್ದಾರೆ. ಹಿಂದಿನಿಂದಲೂ ರಾಜಕೀಯವಾಗಿ ಉತ್ತಮ ಸ್ಥಿತಿಯನ್ನು ಕಾಪಾಡಿಕೊಂಡು ಬಂದ ಈ ಮನೆತನದವರು ಇಂದಿಗೂ ರಾಜಕೀಯ ಕ್ಷೇತ್ರದಲ್ಲಿ ತಮ್ಮದೇ ಆದಂತಹ ವರ್ಚಸ್ಸು ಹೊಂದಿದ್ದಾರೆ. ಅಮರಪ್ಪನಾಯಕರು ೧೯೭೮ರಲ್ಲಿ ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿದರು. ೧೯೮೩ರಲ್ಲಿ ಮಾನ್ವಿ ಕ್ಷೇತ್ರದಿಂದ, ೧೯೮೫ರಲ್ಲಿ ಲಿಂಗಸುಗೂರು ಕ್ಷೇತ್ರದಿಂದ ಚುನಾವಣೆಯಲ್ಲಿ ಸ್ಪರ್ಧಿಸಿ ವಿಧಾನಸಭಾ ಸದಸ್ಯರಾಗಿ ಆಯ್ಕೆಯಾಗಿ ರಾಜ್ಯದ ರಾಜಕೀಯ ಕ್ಷೇತ್ರದಲ್ಲಿ ಗುರುತಿಸಿಕೊಂಡಿದ್ದಾರೆ. ಮೊದಲು ಜನತಾದಳ ಪಕ್ಷದ ಮೂಲಕ ಗುರುತಿಸಿಕೊಂಡ ಇವರು ರಾಮಕೃಷ್ಣ ಹೆಗಡೆಯವರಂಥ ರಾಜಕಾರಣಿಗಳ ಆಪ್ತರಲ್ಲಿ ಒಬ್ಬರಾಗಿದ್ದರು. ಒಮ್ಮೆ ರಾಯಚೂರು ಲೋಕಸಭಾ ಕ್ಷೇತ್ರದಿಂದ ಚುನಾವಣೆಯಲ್ಲಿ ಸ್ಪರ್ಧಿಸಿ ಸ್ವಲ್ಪ ಮತಗಳ ಅಂತರದಲ್ಲಿ ಸೋತರು. ಈ ಭಾಗದ ಜನರು ಇವರನ್ನು "ರಾಜಕೀಯ ಗುರು" ಎಂದು ಕರೆಯುತ್ತಾರೆ. ಅಮರಪ್ಪನಾಯಕರು ತಾವು ರಾಜಕೀಯ ಕ್ಷೇತ್ರಕ್ಕೆ ಬರಲು ದಿವಂಗದ ಹೊ.ಚಿ. ಬೋರಯ್ಯನವರು ಕಾರಣರು ಎಂದು ಅವರನ್ನು ನೆನೆಯುತ್ತಾರೆ. ಹಟ್ಟಿಚಿನ್ನದ ಗಣಿಯ ನಿರ್ದೇಶಕರಾಗಿಯೂ ಇವರು ಕೆಲಸ ಮಾಡಿದ್ದಾರೆ.

## ದೇವದುರ್ಗದ ನಾಯಕ ಅರಸರು

ದೇವದುರ್ಗ ಸಂಸ್ಥಾನದ ಮೂಲ ಪುರುಷ ಭೂಮಿಪತಿ ರಂಗಪ್ಪನಾಯಕ. ಇವನ ನಂತರ ನಲವತ್ತೈದಕ್ಕೂ ಹೆಚ್ಚು ದೊರೆಗಳು ಆಳಿದರೆಂದು ತಿಳಿದುಬರುತ್ತದೆ.[೧೦೩] ವಾಸುದೇವನಾಯಕನು ದೇವದುರ್ಗ ಸಂಸ್ಥಾನದ ಸ್ಥಾಪಕನು. ವಾಸುದೇವನಾಯಕನನ್ನು ಚಂದನಕೇರಿ ಅಥವಾ ದೇವದುರ್ಗದ ದೊರೆಯೆಂದು ಕರೆಯಲಾಗುತ್ತಿತ್ತು. ಇವನು ಮೊಗಲರ ಆಪ್ತನಾಗಿದ್ದನು. ಸುರಪುರದ ದೊರೆ ಪಿಡ್ಡನಾಯಕನ ವಿರುದ್ಧ ಮೊಗಲರಿಗೆ ಸಹಾಯ ಮಾಡಿದ್ದನು. ಈ ಸಹಾಯದ ಪ್ರತಿಫಲವಾಗಿ ಶಾಹ ಆಲಮನಿಂದ ರಾಯಚೂರು ಪ್ರಾಂತ್ಯದ ಜಮೀನದಾರಿಕೆಯನ್ನು ಪಡೆದುಕೊಂಡನು.[೧೦೪] ಸುರಪುರದ ದೊರೆಗಳು ಮತ್ತು ದೇವದುರ್ಗದ ದೊರೆಗಳು ರಕ್ತಸಂಬಂಧಿಗಳು. ಸುರಪುರದ ಇಮ್ಮಡಿ ಪಾಮನಾಯಕನ ರಾಣಿಯರಲ್ಲಿ ಮೊದಲನೆಯವಳಾದ ರುಕುಮವ್ವ ದೇವದುರ್ಗದವಳು.

ವಾಸುದೇವನಾಯಕನ ನಂತರ ಕಿಲಿಚನಾಯಕನು ದೇವದುರ್ಗದ ಸಂಸ್ಥಾನದಲ್ಲಿ ಪ್ರಸಿದ್ಧಿಗೆ ಬಂದನು. ಇವನು ಸುರಪುರದ ದೊರೆ ಮೊಂಡಗ್ಗೆ ವೆಂಕಟಪ್ಪನಾಯಕನ ಕಾಲದಲ್ಲಿ ಕಂಡುಬಂದ ಮೂರುಕೇರಿ ಬೇಡರ ಬಂಡಾಯವನ್ನು ಅಡಗಿಸಿ, ಅರಸನನ್ನು ರಕ್ಷಿಸಿದನು. ಮತ್ತು ಬಂಡಾಯಗಾರರು ಸುರಪುರದ ಸಿಂಹಾಸನದ ಮೇಲೆ ಕೂಡಿಸಿದ್ದ ಗುಡಗುಂಟಿಯ ದೊರೆ ಸೋಮಾರ್ಜುನನ್ನು ಫಲಾಯನಗೈಯುವಂತೆ ಮಾಡಿ

ವೆಂಕಟಪ್ಪನಾಯಕನನ್ನು ಸುರಪುರದ ಸಿಂಹಾಸನದ ಮೇಲೆ ಕೂಡಿಸಿದನು. ಆದರೆ ಸುರಪುರದ ದೊರೆಗಳು ನಂತರದ ದೇವದುರ್ಗ ದೊರೆಗಳೊಡನೆ ಒಳ್ಳೆಯ ಸಂಬಂಧವನ್ನು ಹೊಂದಿರಲಿಲ್ಲವೆಂದು ಕಾಣುತ್ತದೆ.

ಕಿಲಿಚನಾಯಕನು ಕ್ಯಾದಿಗೆರಾ ಸಂಸ್ಥಾನದ ಮೇಲೆ ದಾಳಿಮಾಡಿದಾಗ ಸುರಪುರದ ದೊರೆ ಮುಮ್ಮಡಿ ಪಾಮನಾಯಕನು ಕ್ಯಾದಿಗೆರಾ ಸಂಸ್ಥಾನಿಕರಿಗೆ ಸಹಾಯ ಮಾಡಿದನು. ಆದರೆ ಮತ್ತೆ ಸುರಪುರ ಮತ್ತು ದೇವದುರ್ಗದ ದೊರೆಗಳು ಹಿತೈಷಿಗಳಾದರು. ಕಿಲಿಚನಾಯಕ ತನ್ನ ಮಗಳಾದ ತಿಮ್ಮವ್ವಳನ್ನು ಪಾಮನಾಯಕನಿಗೆ ಕೊಟ್ಟು ಮದುವೆ ಮಾಡಿದನು. ಕಿಲಿಚನಾಯಕನ ಮಗ ರಂಗಪ್ಪನಾಯಕನು ಚಂದನಕೆರೆಯ ಪಾಳೆಯಗಾರನಾಗಿದ್ದನು. ಈ ಭಾಗದಲ್ಲಿ ಮೊದಲಿಂದಲೂ ದೇವದುರ್ಗದ ದೊರೆಗಳ ಅಧಿಕಾರವಿದ್ದಿತು. ಆದರೆ ಬಿಜಾಪುರದ ಎರಡನೇ ಅಲಿಆದಿಲ್ ಷಾಹನ ಮರಣದ(೧೬೭೨) ನಂತರ ಈ ಕಿಲ್ಲೆಯ ಸುತ್ತಮುತ್ತಲಿನ ಪ್ರದೇಶವು ಶತ್ರುಗಳಿಂದ ರಕ್ಷಿಸಲು ಸುರಪುರದ ದೊರೆ ಹಸರಂಗಿ ಪಾಮ ನಾಯಕನಿಗೆ ಕೊಡಲ್ಪಟ್ಟಿತು. ಆದುದರಿಂದ ಸುರಪುರ ಮತ್ತು ದೇವದುರ್ಗದವರಿಗೆ ನಿಕಟ ಸಂಬಂಧವಿದ್ದಾಗ್ಯೂ ಆಗಾಗ ಕಲಹಗಳು ನಡೆಯುತ್ತಿದ್ದವು. ದೇವದುರ್ಗದ ಪ್ರದೇಶವು ದೇವದುರ್ಗದ ದೊರೆಗಳ ವಶದಲ್ಲಿದ್ದರೂ ಸುರಪುರದ ದೊರೆಗಳ ಹಿಡಿತ ತಪ್ಪಿರಲಿಲ್ಲ. ಅವರಿಗೆ ಕೊಡಬೇಕಾದ ತೆರಿಗೆ, ಕಾಣಿಕೆಗಳನ್ನು ನೀಡಬೇಕಿತ್ತೆಂಬ ಸಂಗತಿಗಳು ಕಾಣುತ್ತವೆ.

ಸುರಪುರದ ಇಮ್ಮಡಿ ವೆಂಕಟಪ್ಪನಾಯಕನು ತನ್ನ ಮಗನಾದ ಶ್ರೀನಿವಾಸನಾಯಕನ ಜವಳ ಪ್ರಸಂಗಕ್ಕೆ ತನ್ನ ಸೋದರ ಮಾವನಾದ ದೇವದುರ್ಗದ ಕೊಳ್ಳಿರಂಗಪ್ಪನಾಯಕನನ್ನು ತನ್ನ ಇತರ ಬಂಧು ಬಳಗವನ್ನು ಕರೆಕಳುಹಿಸಿದನು. ಆದರೆ ವೆಂಕಟಪ್ಪನಾಯಕನು ಮುಸಲ್ಮಾನ ಸ್ತ್ರೀಯಳನ್ನು ತನ್ನ ಕುಲದಲ್ಲಿ ಸೇರಿಸಿಕೊಂಡು ತಾಳಿಕಟ್ಟಿಕೊಂಡಿದ್ದನು. ಇದು ಬಂಧುಗಳೆಲ್ಲಾ ಒಂದೆಡೆ ಸೇರಿ ಊಟ ಮಾಡುವುದಕ್ಕೆ ಅಡ್ಡಿಯಾಗಿತ್ತೆಂದೆಂಬ ಕಾರಣದಿಂದ ಜವಳ ಕಾರ್ಯಕ್ರಮಕ್ಕೆ ಯಾರೂ ಬರಲಿಲ್ಲ. ಇದಕ್ಕೆಲ್ಲಾ ರಂಗಪ್ಪನಾಯಕನೇ ಕಾರಣವೆಂದು ಅವನನ್ನು ಜೀವಂತವಾಗಿ ಹಿಡಿದು ತರಲು ತನ್ನ ಸೈನಿಕರನ್ನು ಕಳುಹಿಸಿದನು. ಸುರಪುರದ ಸೈನಿಕರ ಹೊಡೆತ ತಾಳಲಾರದೆ ದೇವದುರ್ಗದ ಸೈನಿಕರು ದಿಕ್ಕುಪಾಲಾದರು. ದೇವದುರ್ಗವನ್ನು ಲೂಟಿ ಮಾಡಿದ ಸೈನಿಕರು ಗುಡ್ಡದ ಮೇಲಿನ ಮದ್ದಿನ ಮಹಲಿನಲ್ಲಿ ಅಡಗಿಕೊಂಡಿದ್ದ ರಂಗಪ್ಪನಾಯಕನನ್ನು ಹಿಡಿಯಲು ಮುಂದಾದರು. ಆದರೆ ರಂಗಪ್ಪನಾಯಕನು ಕೈವಶವಾಗಲಿಲ್ಲ. ಕೊನೆಗೆ ಸುರಪುರದ ಸೈನಿಕರು ಮದ್ದಿನ ಮಹಲಿನ ಸಮೀಪಕ್ಕೆ ಬರುತ್ತಿರುವುದನ್ನು ಕಂಡ ರಂಗಪ್ಪನಾಯಕನು ಸಿಡಿಮದ್ದಿಗೆ ಬೆಂಕಿ ಹಚ್ಚಿದನು. ಒಳಗಿದ್ದ ತಾನು ತನ್ನ ರಾಣಿಯರು ಮತ್ತು ಮಕ್ಕಳು ಸುಟ್ಟು ಭಸ್ಮವಾದರು. ಇವನಿಗೆ ಕೊಳ್ಳಿರಂಗಪ್ಪನಾಯಕ ಎಂದು ಹೆಸರು ಬಂದಿತು. ಇವನ ಹೆಂಡತಿಯಲ್ಲಿ ಒಬ್ಬರಾದ ಪಂದಿಕೋವಿ ಲಕ್ಷ್ಮಮ್ಮ ಹೆರಿಗೆಗೆ ಹೋಗಿದ್ದಳು. ಅವಳ ಮಗ ಕೃಷ್ಣಪ್ಪನಾಯಕನೇ ಮುಂದೆ ದೇವದುರ್ಗದ ದೊರೆಯೆಂದು ಕರೆಸಿಕೊಂಡನು. ದೇವದುರ್ಗ,

ಅರಕೇರಿ, ಕ್ಯಾದಿಗೇರಿ, ಜಾಲಿಬೆಂಚಿ, ಗೋನವಟ್ಲ, ಐದು ಬಾವಿ ಈ ಪರಗಣೆಗಳನ್ನು ವೆಂಕಟಪ್ಪನಾಯಕನ ಅಧೀನಕ್ಕೊಳಪಟ್ಟವು. ನಿಜಾಮನೂ ಸಹ ಈ ಪ್ರದೇಶಗಳನ್ನು ವೆಂಕಟಪ್ಪನಾಯಕನಿಗೆ ಕೊಟ್ಟು ಸನದು ಬರೆದುಕೊಟ್ಟನು.[೧೦೫]

ಕ್ರಿ.ಶ.೧೮೫೩ ಮೇ ೨೧ರಂದು ನಿಜಾಮನು ಬೀರಾರ್ ಒಪ್ಪಂದಕ್ಕೆ ಸಹಿ ಹಾಕಿದನು. ಆ ಪ್ರಕಾರ ಬೀರಾರ್ ಪ್ರಾಂತ್ಯವನ್ನು ಉಸ್ಮಾನಾಬಾದ್ ಹಾಗೂ ರಾಯಚೂರು ಜಿಲ್ಲೆಗಳನ್ನು ಈಸ್ಟ್ ಇಂಡಿಯಾ ಕಂಪನಿಗೆ ಬಿಟ್ಟುಕೊಡಲಾಯಿತು. ಆಗಿನಿಂದ ಈ ಸಂಸ್ಥಾನವು ಬ್ರಿಟೀಷರ ಅಧೀನಕ್ಕೆ ಒಳಪಟ್ಟಿತ್ತು.[೧೦೬]

ಸದ್ಯದಲ್ಲಿ ದೇವದುರ್ಗದ ನಾಯಕ ಅರಸು ವಂಶಸ್ಥರ ಕುಟುಂಬಗಳು ಅಲ್ಲಿಯೇ ನೆಲೆಸಿವೆ. ಅವರ ರಾಜಕೀಯ ಸ್ಥಾನಮಾನಗಳು ಹೇಳಿಕೊಳ್ಳುವಂತಹವೇನಲ್ಲ. ಆದರೆ ದೊರೆಗಳು ಎಂಬ ಭಾವನೆಯು ಮಾತ್ರ ಜನರಿಂದ ದೂರವಾಗಿಲ್ಲ. ಈ ಮನೆತನದ ವಂಶಸ್ಥರಲ್ಲೊಬ್ಬರಾದ ರಾಜಾ ಕಿಲಿಚನಾಯಕ ಎಂಬುವರು ವಕೀಲ ವೃತ್ತಿ ಮಾಡುತ್ತಿದ್ದಾರೆ. ಇವರು ರಾಜ್ಯದ ರಾಜಕೀಯ ಆಗು-ಹೋಗುಗಳನ್ನು ಗಮನಿಸುತ್ತಾರೆ. ಅಲ್ಲದೆ ಈ ಭಾಗದ ರಾಜ್ಯದ ಹಿರಿಯ ರಾಜಕಾರಣಿಗಳ ಜೊತೆ ಒಡನಾಟವನ್ನು ಹೊಂದಿದ್ದಾರೆ. ಇವರು ೧೯೬೨ರಲ್ಲಿ ಲಿಂಗಸೂಗುರು ಕ್ಷೇತ್ರದಿಂದ ನಿಜಲಿಂಗಪ್ಪನವರ ಕಾಂಗ್ರೆಸ್‌ನಿಂದ ವಿಧಾನಸಭೆ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ಆದರೆ ದುರದೃಷ್ಟವಶಾತ್ ಅವರು ಗೆಲ್ಲಲಿಲ್ಲ. ''ಜನರ ಹತ್ತಿರ, ಇಲ್ಲವೆ ರಾಜಕಾರಣಿಗಳ ಹತ್ತಿರಕ್ಕೆ ನಾವು ಹೋಗುವುದಿಲ್ಲ, ಅವರೇ ದೊರೆಗಳೆಂದು ನಮ್ಮಲ್ಲಿಗೆ ಬರುತ್ತಾರೆಂದು'' ಇವರು ಹೇಳುತ್ತಾರೆ.

**ಗುಂತಗೋಳ ನಾಯಕ ಅರಸರು**

ಆಧಾರಗಳ ಕೊರತೆಯಿಂದ ಗುಂತಗೋಳ ಸಂಸ್ಥಾನದ ರಾಜಕೀಯ ಚರಿತ್ರೆಯ ಚಿತ್ರಣವನ್ನು ಇಲ್ಲಿ ಕೊಡಲಾಗಿಲ್ಲ. ಈ ಮನೆತನದ ವಂಶಸ್ಥರ ಪ್ರಕಾರ ರಾಜಾಸರ್ಜಾರಂಗಪ್ಪರಾಜ ಎಂಬುವರು ಗುಂತಗೋಳ ಸಂಸ್ಥಾನವನ್ನು ಆರಂಭಿಸಿದ್ದರ ಹಾಗೂ ಗುಂತಗೋಳದಲ್ಲಿ ನಾಯಕ ಅರಸರು ಆಳಿದ್ದರ ಬಗ್ಗೆ ಮಾತ್ರ ಕುರುಹುಗಳಿವೆ.

ಸದ್ಯದ ರಾಜಕೀಯ ಕ್ಷೇತ್ರದಲ್ಲಿ ಈ ಮನೆತನದವರು ಮುಂಚೂಣಿಯಲ್ಲಿದ್ದಾರೆ. ಹಾಲಿ ಬಂಧಿಖಾನೆ, ಗೃಹರಕ್ಷಕದಳ ಮತ್ತು ಕಾನೂನುಮಾಪನ ರಾಜ್ಯಖಾತೆ ಸಚಿವರಾಗಿರುವ ಶ್ರೀ ರಾಜಾ ಅಮರೇಶ್ವರ ನಾಯಕರು ಗುಂತಗೋಳ ಸಂಸ್ಥಾನಿಕ ವಂಶಸ್ಥರಲ್ಲಿ ಒಬ್ಬರು. ಇವರು ಈ ಹಿಂದೆ ೧೯೮೯ರಲ್ಲಿ ಲಿಂಗಸಗೂರು ಕ್ಷೇತ್ರದಿಂದ ವಿಧಾನಸಭಾ ಸದಸ್ಯರಾಗಿ ಆಯ್ಕೆಯಾಗಿದ್ದರು. ೧೯೯೪ರಲ್ಲಿ ಇದೇ ಕ್ಷೇತ್ರ ದಿಂದ ಸ್ಪರ್ಧಿಸಿ ನಂತರ ನಡೆದ ಚುನಾವಣೆಯಲ್ಲಿ ಕಲ್ಮಲಾ ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾಗಿ

ಈಗ ಮಂತ್ರಿಯಾಗಿರುವ ಇವರು ತೋಟಗಾರಿಕೆ ರಾಜ್ಯಸಚಿವರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ರಾಜಾ ಅಮರೇಶ್ವರ ನಾಯಕರ ಅಣ್ಣನವರಾದ ರಾಜಾ ರಾಯಪ್ಪನಾಯಕರೂ ರಾಜಕೀಯದಲ್ಲಿ ಗುರುತಿಸಲ್ಪಟ್ಟಿದ್ದಾರೆ. ಅವರು ದೇವರಭೂಪರದ ಮಂಡಲ ಪ್ರಧಾನರಾಗಿ ಸೇವೆಯನ್ನು ಸಲ್ಲಿಸಿದ್ದಾರೆ. ರಾಜಾ ಅಮರೇಶ್ವರ ನಾಯಕರ ತಮ್ಮನವರಾದ ರಾಜಾ ಶ್ರೀನಿವಾಸನಾಯಕರು ಜಿಲ್ಲಾ ಯುವ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿಯಾಗಿ, ಉಪಾಧ್ಯಕ್ಷರಾಗಿ ಮತ್ತು ಗುಂತಗೋಳ ಗ್ರಾಮಪಂಚಾಯ್ತಿ ಅಧ್ಯಕ್ಷರಾಗಿಯೂ ಸೇವೆಸಲ್ಲಿಸಿರುವ ಇವರು ಸಕ್ರಿಯ ರಾಜಕಾರಣಿಯೆಂದು ಗುರುತಿಸಲ್ಪಟ್ಟಿದ್ದಾರೆ.

### ೪.೨. ಸಾಮಾಜಿಕ ಸ್ಥಿತ್ಯಂತರ

ಸಮಾಜ ಚಲನಶೀಲವಾದುದು. ಕಾಲ ಪ್ರವಾಹದ ಜೊತೆ ಅದರ ಬದಲಾವಣೆ ಸಹಜ. ಈ ಬದಲಾವಣೆಯ ಹಿನ್ನೆಲೆಯಲ್ಲಿ ಬುಡಕಟ್ಟು ಸಮಾಜ ಹಾಗೂ ಬುಡಕಟ್ಟೇತರ ಸಮಾಜಗಳೆಂದು ವಿಭಾಗಿಸಬಹುದು. ಬುಡಕಟ್ಟು ಸಾಮಾಜಿಕ ವ್ಯವಸ್ಥೆಯಲ್ಲಿ ಬದಲಾವಣೆಯ ಕ್ರಿಯೆ ನಿಧಾನಗತಿಯಾಗಿರುತ್ತದೆ. ಬುಡಕಟ್ಟೇತರ ಸಮಾಜದಲ್ಲಿ ಈ ಕ್ರಿಯೆ ತ್ವರಿತವಾಗಿರುತ್ತದೆ. ಬುಡಕಟ್ಟು ಸಮುದಾಯದ ಜನರು ತಮ್ಮ ಮೂಲ ಸಂಸ್ಕೃತಿ ಆಚಾರ-ವಿಚಾರ, ನಂಬಿಕೆ, ರೂಢಿ-ಸಂಪ್ರದಾಯ ಮುಂತಾದವುಗಳನ್ನು ಮುಂದುವರೆಸಿಕೊಂಡು ಬರುವಲ್ಲಿ ತೋರಿದ ಕಾಳಜಿಯೇ ಇದಕ್ಕೆ ಕಾರಣವಾಗಿರಬಹುದು. ಕರ್ನಾಟಕದ ಅನೇಕ ಬುಡಕಟ್ಟು ಜನಾಂಗಗಳಲ್ಲಿ ಒಂದಾಗಿರುವ ಬೇಡ ಜನಾಂಗದ ಆರಂಭಿಕ ಸಾಮಾಜಿಕ ಸ್ಥಿತಿ-ಗತಿಯನ್ನು ಪ್ರಸ್ತುತ ದಿನಗಳಲ್ಲಿ ಯಥಾಸ್ಥಿತಿಯಲ್ಲಿ ಕಾಣಲಾಗದು. ಬೇಡರು ಅನೇಕ ಸ್ಥಿತ್ಯಂತರಗಳಿಗೆ ಒಳಪಡುತ್ತಾ ಬಂದಿರುವುದೇ ಇದಕ್ಕೆ ಕಾರಣ.

ಅನಾದಿಕಾಲದಿಂದಲೂ ಮಾನವನ ಸಮಾಜವು ಪರಿವರ್ತನೆಗೊಳಗಾಗಿದೆ. ಇದ್ದ ಸ್ಥಿತಿಯಿಂದ ಇಲ್ಲದ ಸ್ಥಿತಿಯ ಕಡೆ ಚಲಿಸುವ ಮನಸ್ಸು ಮಾನವನಲ್ಲಿ ಸದಾ ಕಾಣುತ್ತಿರುತ್ತದೆ. ಆದರೆ ಅವನ ಯೋಚನೆಯ ವೇಗದಷ್ಟು ಸಮಾಜವೊಂದು ಬದಲಾವಣೆಗೊಳ್ಳುವುದು ಕಷ್ಟಸಾಧ್ಯ. ಆದ್ದರಿಂದ ಸಮಾಜದ ಬದಲಾವಣೆ ನಿಧಾನಗತಿಯದು. ಆರಂಭಿಕ ಮಾನವನ ಸಮಾಜದ ಪ್ರಗತಿ ಅಥವಾ ಅವನತಿ ಅಲ್ಲಿನ ಜನಸಮುದಾಯವನ್ನು ಅವಲಂಬಿಸಿತ್ತು. ಆದರೆ ರಾಜ್ಯಗಳ ಉಗಮ, ರಾಜಕೀಯ ಬೆಳವಣಿಗೆಯಿಂದ ಸಮಾಜದ ಮೇಲಿದ್ದ ಜನರ ಹಿಡಿತ ಕೈತಪ್ಪಿತು. ರಾಜಕೀಯವೇ ಒಂದು ಸಮಾಜದ ಪ್ರಗತಿ ಅಥವಾ ಅವನತಿಗೆ ಕಾರಣವಾಯಿತು. ರಾಜಕೀಯ ಬದಲಾವಣೆಗಳಿಂದಾಗಿ ಮಾನವನ ಅನೇಕ ರಂಗಗಳಲ್ಲಿ ಸ್ಥಿತ್ಯಂತರಗಳು ಕಂಡುಬಂದವು. ಅಲೆಮಾರಿಗಳಾಗಿದ್ದ ಜನ ಸಮುದಾಯವನ್ನು ನಿರ್ದಿಷ್ಟ ಪ್ರದೇಶದಲ್ಲಿ ನೆಲೆಯೂರುವಂತೆ ಮಾಡುವಲ್ಲಿ ಭೌಗೋಳಿಕ ಅಂಶಗಳು ಕಾರಣವಾದವು. ಕ್ರಮೇಣ ರಾಜಕೀಯ ಅಂಶವೂ ಕಾರಣಗಳಲ್ಲೊಂದಾಯಿತು. ಅಲೆಮಾರಿ, ಅನಾಗರೀಕ ಸಮುದಾಯಗಳು ನಾಗರೀಕ ಜೀವನಕ್ಕೆ ಹೊಂದಿಕೊಂಡವು. ಬೇಡರು ಒಂದು

ಕಾಲಕ್ಕೆ ಅಲೆಮಾರಿಗಳಾಗಿದ್ದವರು. ಅನಾಗರೀಕ ಜೀವನವನ್ನು ನಡೆಸಿದವರು. ಸಮಾಜದ ಬದಲಾವಣೆಯಲ್ಲಿ ಆರ್ಥಿಕ ಅಂಶಗಳು ಮುಖ್ಯ ಪಾತ್ರವಹಿಸುತ್ತವೆ. ರಾಜರು, ಸಾಮಂತದೊರೆಗಳು, ಪಾಳೆಯಗಾರರು, ಅಲೆಮಾರಿಗಳಾಗಿದ್ದ ಹಾಗೂ ಕಾಡು ಸಮಾಜದಲ್ಲಿ ಜೀವನವನ್ನು ನಡೆಸುತ್ತಿದ್ದ ಅನೇಕ ಜನಸಮುದಾಯ ದವರನ್ನು ಸೈನ್ಯದಲ್ಲಿ ಸೇರಿಸಿಕೊಂಡು ನಾಗರಿಕ ಜೀವನದ ಅನುಭವವನ್ನು ನೀಡಿದರು. ಇಂತಹ ನಾಗರೀಕ ಬದುಕಿಗೆ ಹೊಂದಿಕೊಂಡು ಪ್ರಗತಿಯ ಹಾದಿಯನ್ನು ತುಳಿದ ಜನಾಂಗಗಳಲ್ಲಿ ಬೇಡ ಜನಾಂಗವೂ ಒಂದು.

ಚಾತುರ್ವರ್ಣ ಹಿಂದೂ ಸಮಾಜವು ಕಾಲ ಕ್ರಮೇಣ ಜಾತಿ ಆಧಾರಿತ ಸಮಾಜವಾಯಿತು. ವೃತ್ತಿಗನು ಗುಣವಾಗಿ ಜಾತಿಗಳು ಹುಟ್ಟಿಕೊಂಡವು. ಪ್ರಮುಖ ನಾಲ್ಕು ಜಾತಿಗಳಲ್ಲಿ ಅನೇಕ ಉಪಜಾತಿಗಳು ಕಂಡುಬಂದವು. ಶೂದ್ರ ಜನಾಂಗಕ್ಕೆ ಸೇರಿದ ಬೇಡ ಜನಾಂಗವು ಯೋಧ, ಹಾಗೂ ಸೇವಾ ಜನಾಂಗವೆಂದು ಹೆಸರಾಯಿತು. ಕಾಡು ಸಂಸ್ಕೃತಿಯ ಗುರುತಿಸಲ್ಪಟ್ಟ ಬೇಡರನು ನಾಡಸಂಸ್ಕೃತಿಗೆ ತಂದವರು ಆಳರಸರು. ಅವರು ಬೇಡರನ್ನು ಸೈನಿಕರನ್ನಾಗಿ, ಅಧಿಕಾರಿಗಳನ್ನಾಗಿ, ಸಾಮಂತರನ್ನಾಗಿ ಮಾಡಿಕೊಂಡರು. ಬಲಯುತರಾಗಿ ಬೆಳೆದ ಕೆಲವು ಮುಖಂಡರು ಪಾಳೆಯಗಾರಶಾಹಿಯ ಅಂಗವಾದರು. ಈ ಬದಲಾವಣೆಗಳಿಂದ ಹಂತಹಂತವಾಗಿ ಮೇಲೇರುತ್ತಾ ಬಂದ ಬೇಡರು ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಗಳಿಸಿದರು. ವಿಜಯನಗರ ಕಾಲದ ಸಾಮಾಜಿಕ ವ್ಯವಸ್ಥೆಯು ಹಿಂದೂ ಧರ್ಮದ ವರ್ಣಸಂಪ್ರದಾಯಕ್ಕನುಗುಣವಾಗಿತ್ತು. ವಿಜಯನಗರ ನಂತರ ಬಂದ ಪಾಳೆಯಗಾರರ ಕಾಲದಲ್ಲೂ ಇದೇ ಸಂಪ್ರದಾಯ ಮುಂದುವರೆಯಿತು. ಹಿಂದೂ ಧರ್ಮದ ಸಾಮಾಜಿಕ ಆಚಾರ-ವಿಚಾರಗಳು ಜನರಲ್ಲಿ ಮುಂದುವರೆದುಕೊಂಡು ಬಂದವು. ದಕ್ಷಿಣ ಭಾರತದ ಇಲ್ಲವೆ ಕರ್ನಾಟಕದ ಚರಿತ್ರೆಯಲ್ಲಿ ಕಂಡುಬರುವ ಸಾಮಾಜಿಕ ವ್ಯವಸ್ಥೆ ವರ್ಣಾಶ್ರಮ ಧರ್ಮವನ್ನೇ ಅನುಸರಿಸಿದ್ದರೂ ವಾಸ್ತವವಾಗಿ ಅದು ಜಾತಿ ವ್ಯವಸ್ಥೆಯಾಗಿತ್ತು.[೧೦೭] ಹಿಂದೂ ಧರ್ಮದ ಸಾಮಾಜಿಕ ವ್ಯವಸ್ಥೆಯ ಮೇಲೆ ಇತರ ಧರ್ಮಗಳು ಪ್ರಭಾವ ಬೀರಿರುವುದನ್ನು ಕಾಣಬಹುದು.

ವಿಜಯನಗರ ಕಾಲಕ್ಕೆ ಸೈನಿಕರಾಗಿ, ಅಧಿಕಾರಿಗಳಾಗಿ, ಅಮರ ನಾಯಕರಾಗಿ ಗುರುತಿಸಿಕೊಂಡ ಬೇಡಜನಾಂಗದ ಕೆಲವು ನಾಯಕರು ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಗಳಿಸಿಕೊಂಡರು. ಆರಂಭಿಕ ಬೇಡ ಜನಾಂಗದ ಸಾಮಾಜಿಕ ವ್ಯವಸ್ಥೆಯಲ್ಲಿ ಅಂತಸ್ತುಗಳ ಬಗ್ಗೆ ಅಷ್ಟೊಂದು ತಿಳಿದುಬರುವುದಿಲ್ಲ. ಆಗ ಎಲ್ಲಾ ಬೇಡರು ಒಂದೇ ಎಂಬ ಭಾವನೆ ಇತ್ತಾದರೂ, ಆ ಜನಾಂಗದ ಮುಖಂಡನು ತಕ್ಕಮಟ್ಟಿಗೆ ಇತರರಿಗಿಂತ ಉನ್ನತ ಸ್ಥಾನಮಾನಗಳನ್ನು ಅನುಭವಿಸುತ್ತಿದ್ದನು. ರಾಜಕೀಯವಾಗಿ ಬೆಳೆಯುತ್ತಾ ಬಂದಂತಹ ಕೆಲವು ಬೇಡ ಕುಟುಂಬಗಳಲ್ಲಿ ಆದ ಸಾಮಾಜಿಕ ಪರಿವರ್ತನೆಗಳನ್ನು ಕಾಣಬಹುದು. ಈ ಮೊದಲು ಹಿಂದೂ ಸಮಾಜದಲ್ಲಿ ಅತ್ಯಂತ ಕೆಳವರ್ಗದಲ್ಲಿ ಗುರುತಿಸಿಕೊಂಡ ಬೇಡರು, ಪಾಳೆಯಗಾರರು ದೊರೆ ಗಳೆನಿಸಿಕೊಂಡ ನಂತರ ಉನ್ನತ ವರ್ಗದೊಡನೆ ವ್ಯವಹರಿಸುವ, ಜೀವಿಸುವ ಅವಕಾಶಗಳು ದಕ್ಕಿದವು.

ಬೇಡ ಅರಸರು, ಅಧಿಕಾರಿಗಳು ಮೊದಲಿದ್ದ ತಮ್ಮ ಜೀವನದ ರೀತಿ-ನೀತಿಗಳನ್ನು ಕೈಬಿಟ್ಟು ಮೇಲ್ವರ್ಗಗಳ ಜೀವನ ವಿಧಾನಗಳನ್ನು ಅನುಕರಿಸಲಾರಂಭಿಸಿದರು. ಸಂಸ್ಕೃತೀಕರಣಕ್ಕೆ ಒಳಗಾದವರಲ್ಲಿ ಈ ತರಹದ ಅಧಿಕಾರಸ್ಥ ಶೂದ್ರವರ್ಗದ ನಾಯಕರು ಮೊದಲಿಗರು. ತಮ್ಮ ಜನಾಂಗಕ್ಕೆ ನಾಯಕರಾದ ಕೆಲವರು ಕ್ರಮೇಣ ಕೆಲವು ಹಳ್ಳಿಗಳಿಗೆ, ಅನಂತರ ಇಡೀ ಆ ಪ್ರದೇಶಕ್ಕೆ ನಾಯಕರಾದರು. ಕ್ರಮೇಣ ತಮ್ಮದೇ ಆದಂಥ ಆಳ್ವಿಕೆಯನ್ನು ಆರಂಭಿಸಿ ಪಾಳೆಯಗಾರರೆನಿಸಿಕೊಂಡರು; ತಮ್ಮವೇ ಆದಂತ ಪಾಳೆಯಪಟ್ಟುಗಳನ್ನು ಮಾಡಿಕೊಂಡರು. ಪಾಳೆಯಗಾರರಲ್ಲಿ ಹೆಚ್ಚಿನವರು ಬೇಡ ಜನಾಂಗಕ್ಕೆ ಸೇರಿದವರೇ. ಅರಸು ವರ್ಗದ ಸಹವಾಸದ ಜೊತೆಗೆ ಆ ವರ್ಗದವರ ಬದುಕಿನ ರೀತಿ-ನೀತಿಗಳನ್ನು ಆಚಾರ-ವಿಚಾರಗಳನ್ನು ಅನುಸರಿಸಿದರು. ಪುರೋಹಿತ ಮತ್ತು ಅಧಿಕಾರಿ ವರ್ಗವನ್ನು ತಮ್ಮ ಬಳಿಯಿಟ್ಟುಕೊಂಡರಲ್ಲದೆ ರಾಜಾದರ್ಬಾರಗಳನ್ನು ಕಟ್ಟಿಸಿಕೊಂಡು ದೊರೆಗಳಂತೆ ಬದುಕಿದರು. ಬೇಡ ಜನಾಂಗದ ಪಾಳೆಯಗಾರರು ತಮ್ಮ ಮೂಲ ಬದುಕಿನ ಆಚಾರ-ವಿಚಾರಗಳ ಕಡೆ ಯೋಚಿಸಲಿಲ್ಲ. ಅವರಲ್ಲಿ ಬೇಡ ಸಮಾಜಕ್ಕಿಂತ ಭಿನ್ನವಾದ ಅನೇಕ ಬದಲಾವಣೆಗಳು ಕಂಡುಬಂದವು ಮತ್ತು ಅವೇ ಮುಂದುವರೆದವು. ಸಾಮಾನ್ಯ ಬೇಡರ ಜೀವನ ವಿಧಾನ ಹಾಗೂ ಅಧಿಕಾರಸ್ಥ ಬೇಡ ನಾಯಕರ ಜೀವನ ವಿಧಾನಗಳು ತುಂಬಾ ಅಂತರವನ್ನು ಪಡೆದುಕೊಂಡವು. ಪಾಳೆಯಗಾರರು ತಾವೇ ಬೇರೆ, ತಮ್ಮ ಸಂಸ್ಕೃತಿಯೇ ಬೇರೆ ತಮ್ಮ ಸಮಾಜವೇ ಬೇರೆ ಎನ್ನುವಷ್ಟು ಬದಲಾದರು.

ಪಿತೃ ಪ್ರಧಾನ ಕೌಟುಂಬಿಕ ವ್ಯವಸ್ಥೆಯನ್ನು ಬೇಡ ಅರಸರು ಅನುಸರಿಸುತ್ತಿದ್ದರೂ, ಮಾತೃವಿಗೆ ಕುಟುಂಬದಲ್ಲಿ ಉನ್ನತ ಸ್ಥಾನಮಾನಗಳಿದ್ದವು. ತಂದೆ-ತಾಯಿಗಳಿಗೆ ತುಂಬಾ ಗೌರವವನ್ನು ನೀಡಲಾಗುತ್ತಿತ್ತು. ಹಿರಿಯರನ್ನು, ವಿದ್ವಾಂಸರನ್ನು, ಶಿಕ್ಷಕರನ್ನು ಗೌರವಿಸುವ ಸಂಪ್ರದಾಯವಿತ್ತು. ಅರಸು ಕುಟುಂಬದವರೆಲ್ಲರೂ ಅನ್ಯೋನ್ಯವಾಗಿ ಜೀವನವನ್ನು ಸಾಗಿಸುತ್ತಿದ್ದರು. ಅವಿಭಕ್ತ ಕುಟುಂಬ ಪದ್ಧತಿಯನ್ನು ಸ್ವತಃ ದೊರೆಗಳು ಒಪ್ಪಿಕೊಂಡಿದ್ದರು. ಬೃಹತ್ ದರ್ಬಾರುಗಳನ್ನೂ, ಅರಮನೆಗಳನ್ನು ಕಟ್ಟಿಸಿಕೊಂಡು, ಸಾಂಪ್ರದಾಯಿಕ ಆಚಾರ-ವಿಚಾರಗಳಿಗೆ ಬದ್ಧರಾಗಿ ತಮ್ಮ ಹಿರಿಯರ ಕಾಲದ ಗೌರವಗಳನ್ನು ಕಾಯ್ದುಕೊಂಡು ಜೀವನ ನಡೆಸುತ್ತಿದ್ದರು. ರಾಜ ಪರಿವಾರವೆಲ್ಲಾ ಒಂದೇ ಅರಮನೆಯಲ್ಲಿ ವಾಸಿಸುವುದು ಸಾಮಾನ್ಯ ಸಂಗತಿಯಾಗಿತ್ತು. ಕಾಲ ಕ್ರಮೇಣ ಅಧಿಕಾರ ಹಂಚಿಕೆಯ ಹಿನ್ನೆಲೆಯಲ್ಲಿ ಅರಸು ಕುಟುಂಬದಲ್ಲಿ ಒಡಕುಂಟಾದುದು, ಆ ಪ್ರದೇಶಗಳಿಗೆ ಅರಸರ ಕುಟುಂಬಗಳು ವರ್ಗವಾಗಿ ಅಲ್ಲಿಯೇ ನೆಲೆಸಿರುವ ಉದಾಹರಣೆಗಳು ಕಂಡುಬರುತ್ತವೆ. ಅರಸು ಕುಟುಂಬದ ಶಿಸ್ತು, ವಿಧಿವಿಧಾನಗಳು ಸಮಾಜದಲ್ಲಿ ಗೌರವಯುತ ಸ್ಥಾನವನ್ನು ಪಡೆದಿದ್ದವು. ಆರಂಭದಲ್ಲಿ ಬೇಡ ಅರಸರು ಸಾಂಪ್ರದಾಯಿಕ ಬುಡಕಟ್ಟು, ಕೌಟುಂಬಿಕ ಜೀವನವನ್ನು ನಡೆಸುತ್ತಿದ್ದರು. ಆಗ ಸಮಾಜದ ಅತ್ಯಂತ ಕೆಳವರ್ಗವೆಂದು ಬೇಡ ಜನಾಂಗವನ್ನು ಕರೆಯಲಾಗುತ್ತಿತ್ತು. ಸಮಾಜದಲ್ಲಿ

ಯಾವುದೇ ಉನ್ನತ ಸ್ಥಾನಮಾನಗಳು ಅವರಿಗಿರಲಿಲ್ಲ. ಸೈನಿಕರಾಗಿ, ಅಧಿಕಾರಿಗಳಾಗಿ, ದೊರೆಗಳಾಗಿ, ಹಂತ ಹಂತವಾಗಿ ಬೆಳೆದುಕೊಂಡು ಬಂದ ನಂತರ ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಸಂಪಾದಿಸುತ್ತಾ ಬಂದರು. ಸಮಾಜದಲ್ಲಿ ಅವರ ಕುಟುಂಬವೂ ಅಷ್ಟೇ ಮಹತ್ವವನ್ನು ಪಡೆದುಕೊಂಡಿತ್ತು. ಅನೇಕ ಪಾಳೆಯಗಾರರು ವಿಜಯನಗರ ಅರಸರ ಪೋಷಣೆಯಲ್ಲಿ ಬೆಳೆದರು. ವಿಜಯನಗರ ಸಂಸ್ಕೃತಿಯನ್ನು ಅವರು ಕಾಪಾಡಿಕೊಂಡು ಬಂದರು. ವಿಜಯನಗರೋತ್ತರ ಕಾಲದಲ್ಲಿ ಕಂಡುಬಂದ ಈ ಪಾಳೆಯಗಾರರು ವಿಜಯನಗರ ವೈಭವವನ್ನು ಆರಂಭಿಸಿದರು. ವೈಭವದ ಜೀವನವನ್ನು ಅಪೇಕ್ಷಿಸಿ ತಮ್ಮ ಪ್ರದೇಶದಲ್ಲಿ ಕೋಟೆ, ಅರಮನೆ ಇತ್ಯಾದಿಗಳನ್ನು ನಿರ್ಮಿಸಿಕೊಂಡು ರಾಜರಂತೆ ನಡೆದುಕೊಂಡರು. ರಾಜ್ಯವಿಸ್ತಾರದ ವಿಷಯದಲ್ಲಿ ಅತಿಯಾದ ಆಸೆ-ಆಕಾಂಕ್ಷೆಗಳನ್ನು ಹೊಂದಿದ್ದರು. ಈ ರಾಜ್ಯದಾಹದಿಂದಾಗಿ ವಿಜಯನಗರೋತ್ತರ ಕಾಲದಲ್ಲಿ ವಿಸ್ತಾರವಾದ ರಾಜ್ಯವೊಂದು ಕಂಡುಬರಲಿಲ್ಲ.

ರಾಜಮಹಾರಾಜರ ಕಾಲದಲ್ಲಿ ರಾಜಶ್ರಯದಲ್ಲಿದ್ದ ಪುರೋಹಿತವರ್ಗವು ವಿಜಯನಗರೋತ್ತರ ಕಾಲದಲ್ಲಿ ಪಾಳೆಯಗಾರರನ್ನು ಆಶ್ರಯಿಸಿತು. ಅವರು ಪಾಳೆಯಗಾರರ ಧೈರ್ಯ, ಸಾಹಸ, ಅವರ ಆಳ್ವಿಕೆ ಮುಂತಾದವುಗಳನ್ನು ಗುಣಗಾನ ಮಾಡಿ ಮೇಲಕ್ಕೇರಿಸಿದನ್ನು ಸಾಂದರ್ಭಿಕವಾಗಿ ಇಂತಹ ಅರಸರಿಂದ ಸಾಕಷ್ಟು ಕಾಣಿಕೆಗಳನ್ನು ಸ್ವೀಕರಿಸಿದರು. (ಇಂಥಾ ದಾನ-ದತ್ತಿ ವಿವರಗಳಿರುವ ನೂರಾರು ಶಾಸನಗಳಿವೆ.) ಹಾಗೂ ರಾಜ್ಯಾಡಳಿತದಲ್ಲಿ ಪ್ರಮುಖ ಪಾತ್ರವಹಿಸಿದರು. ರಾಜಕೀಯ ಬೆಳವಣಿಗೆಯಲ್ಲಿ ಕೆಲವು ಬೇಡರು, ನಾಯಕರು, ಪಾಳೆಯಗಾರರು, ಅಮರನಾಯಕರು, ಸುಬೇದಾರರು, ಗುರಿಕಾರರು, ದೇಸಾಯಿಗಳು, ಪಾಟೀಲರು ಎಂದೆಲ್ಲಾ ಕರೆದುಕೊಂಡರು. ಬುಡಕಟ್ಟು ಸಮಾಜದಲ್ಲಿದ್ದಂತ ಬೇಡರು ಇಂತಹ ಹುದ್ದೆಗಳನ್ನು ಹೊಂದಿದ ನಂತರ ನಾಗರಿಕ ಸಮಾಜದ ಪ್ರಭಾವಕ್ಕೆ ಒಳಗಾದರು. ಹಿಂದೂ ಧರ್ಮದ ಮೇಲ್ಜಾತಿಗಳ ಸಂಪರ್ಕ ತೀರ ಹತ್ತಿರವಾಯಿತು. ವೀರಶೈವ ಮತ್ತು ವೈಷ್ಣವ ಧರ್ಮಪಂಥಗಳ ಪ್ರಭಾವ ಇಂತಹ ಅಧಿಕಾರಸ್ಥ ಬೇಡನಾಯಕರಲ್ಲಿ ಕಂಡುಬಂದಿತು. ಈ ಧರ್ಮಗಳ ಏಳ್ಗೆಗಾಗಿ ಪಾಳೆಯಗಾರರು ಶ್ರಮಿಸಿದರು. ದಾನದತ್ತಿಗಳನ್ನು ನೀಡಿದರು. ವೈಷ್ಣವ ಮತ್ತು ಶೈವ ಸಂಪ್ರದಾಯಗಳನ್ನು ಹಾಗೂ ಆ ಧರ್ಮದವರ ಬದುಕಿನ ರೀತಿನೀತಿಗಳನ್ನು ಅನುಸರಿಸಲಾರಂಭಿಸಿದರು.

ಧೈರ್ಯ, ಸಾಹಸ, ಸಾಧನೆಗಳಿಗನುಗುಣವಾಗಿ ಬೇಡನಾಯಕರು ಅಥವಾ ಅರಸರು ಬಿರುದುಗಳನ್ನು ಧರಿಸುತ್ತಿದ್ದರಲ್ಲದೆ ತಮ್ಮ ಜನಾಂಗ ಮತ್ತು ಬೆಡಗುಗಳಿಗನುಗುಣವಾಗಿ ಬಿರುದುಗಳನ್ನು ಹೊಂದಿರುವುದು ಕಂಡುಬರುತ್ತದೆ. ಉದಾಹರಣೆಗೆ 'ನಾಯಕ ಶಿರೋಮಣಿ', 'ಶ್ರೀಮನ್ ಮಹಾನಾಯಕಾಚಾರ್ಯ', 'ನಾಯಕ ಮಹಾಚಾರ್ಯ', 'ಗುಜ್ಜಲ ವಂಶೋದ್ಧಾರಕ', 'ರಾಜಾ ರಾಜರ ಗಂಡ ಗುಜ್ಜಲ ಭೂಪತಿ', ಇತ್ಯಾದಿ. ಈ ರೀತಿಯ ಬಿರುದುಗಳನ್ನು ಧರಿಸಿದ ಬೇಡನಾಯಕರು ತಮ್ಮ ಜನಾಂಗಕ್ಕೆ ಧರ್ಮಗುರುಗಳಾಗಿ

ಹಾಗೂ ತಮ್ಮ ಪ್ರದೇಶದ ಸಮಸ್ತ ಜನರಿಗೆ ದೊರೆಯಾಗಿ ನಡೆದುಕೊಳ್ಳುತ್ತಿದ್ದರು. ಬೇಡ ಪಾಳೆಯಗಾರರಿಗೆ ಬ್ರಾಹ್ಮಣರು ಗುರುಗಳಾಗಿದ್ದರು. ಗುರು ಮತ್ತು ದೊರೆ ಮನೆ ರಾಜಧಾನಿಯಾಗಿತ್ತು. ಕೆಲವು ದೊರೆಗಳು ಗುರುಗಳಂತೆಯೂ ನಡೆದುಕೊಂಡಿದ್ದರಲ್ಲದೆ ಸಾಮಾನ್ಯ ಬೇಡರನ್ನು ತಮ್ಮ ಮಕ್ಕಳೆಂತಲೂ ಭಾವಿಸಿದರು. ಹೀಗಾಗಿ ಇವರ ಜೀವನ ವಿಧಾನಗಳಲ್ಲೆ ಅಂತರ ಹೆಚ್ಚಾಗುತ್ತಾ ಬಂದಿತು. ಮೇಲಿನ ಸಂಗತಿಗಳನ್ನು ಗಮನಿಸಿದರೆ, ಕೆಲವು ಬೇಡ ನಾಯಕರು ತಮ್ಮ ಧೈರ್ಯ ಸಾಹಸಗಳಿಂದ ಹಂತ ಹಂತವಾಗಿ ರಾಜಕೀಯದಲ್ಲಿ ಪರಮಾಧಿಕಾರವನ್ನು ಪಡೆದುಕೊಳ್ಳುವ ಆ ಜನಾಂಗದಲ್ಲಿ ಅಂತಸ್ತು, ವರ್ಗಗಳಿಗೆ ಕಾರಣರಾದರೆಂದು ತಿಳಿದುಬರುತ್ತದೆ.

ಪಾಳೆಯಗಾರರಾದ ನಂತರ ಬೇಡ ನಾಯಕರ ದಿನಚರಿಯೇ ಬದಲಾಯಿತು. ಈ ಬಗ್ಗೆ ಚಿತ್ರದುರ್ಗದ ಕೊನೆಯ ಮದಕರಿನಾಯಕನ ದಿನಚರಿಯನ್ನು ಅತ್ಯಂತ ಮನೋಜ್ಞವಾಗಿ ಅವನ ಆಸ್ಥಾನಕವಿ ಚಂದ್ರಭೀಮನು 'ಮದಕರಿ ರಾಜೇಂದ್ರ ದಂಡಕ'ದಲ್ಲಿ ಚಿತ್ರಿಸಿರುವನು. ಅರಸನು ಉದಯಕಾಲದಲ್ಲಿ ಎದ್ದು ಚಂದ್ರಮೌಳೀಶ್ವರನ ಧ್ಯಾನ ಪಂಚಾಂಗ ಕೇಳಿ, ಸುಗಂಧ ಪರಿಮಳದ ನೀರಿನಿಂದ ಮುಖ ತೊಳೆದು, ಹಣೆಯಲ್ಲಿ ಭಂಡಾರವನ್ನಿಟ್ಟು, ವಸ್ತ್ರಾಲಂಕೃತನಾಗಿ, ಮಂದಿಗಳು ಪರಾಕು ಹೇಳುತ್ತಿರಲು, ಗರಡಿ ಮನೆಯನ್ನು ಹೊಕ್ಕು ಶ್ರೀ ಕೃಷ್ಣನ ಸಂದರ್ಶನದಿಂದ ಆನಂದಿತನಾಗಿ ದಂಡೆಯನ್ನು ಮಾಡಿ, ಮಲ್ಲರೊಡನೆ ಕುಸ್ತಿಯನ್ನು ಮಾಡಿ, ಅವರನ್ನು ತಲ್ಲಣಗೊಳಿಸಿ ಅರಮನೆಗೆ ಹಿಂತಿರುಗಿ, ಸತ್ಸಂಪ್ರದಾಯಗಳಿಂದ ಮಂಗಳಸ್ನಾನ ಮಾಡಿ, ಚಂದ್ರಮೌಳೀಶ್ವರನನ್ನು ಧ್ಯಾನಿಸಿ ಶೇಷಗಂಧ, ಪ್ರಸಾದಗಳನ್ನು ಧರಿಸಿ, ಸನ್ಮಿತ್ರರ ಪಂಕ್ತಿಯಲ್ಲಿ ಭೋಜನ ಮಾಡಿ, ಚಿನ್ನದ ತಟ್ಟೆಯಲ್ಲಿ ಕೈತೊಳೆದು, ವಿಶೇಷಭೂಷಣಗಳನ್ನು ಧರಿಸಿ, ಕರ್ಪೂರ ತಾಂಬೂಲವನ್ನು ಸವಿದು, ಧನುರ್ಬಾಣಗಳನ್ನು, ಗಂಡುಗೊಡಲಿ ಮೊದಲಾದ ಆಯುಧಗಳನ್ನು ಧರಿಸಿ ಹೊರಟು, ಬಾರಿ ಹಜಾರವನ್ನು ಸೇರಿ, ಸಿಂಹಾಸನಾರೂಢನಾಗಿ, ಪೂರ್ಣಚಂದರನಂತೆ ರಾಜಿಸುತ್ತಿದ್ದನು. ಆಗ ಆಶ್ರಿತರು ಕಪ್ಪವನ್ನು ಒಪ್ಪಿಸುತ್ತಿದ್ದರು. ನಂತರದ ಕೆಲವು ಕಾರ್ಯಗಳಲ್ಲಿ ಭಾಗವಹಿಸಿ ಸಭೆಯಿಂದ ಹೊರಬರುವ ಹಾಗೂ ಇತರ ವಿಷಯಗಳನ್ನು ತುಂಬಾ ಸೊಗಸಾಗಿ ಚಿತ್ರಿಸಿದ್ದಾನೆ.[೧೦೮]

ಸುರಪುರದ ದೊರೆ ಇಮ್ಮಡಿ ವೆಂಕಟಪ್ಪನಾಯಕನ ದಿನಚರಿಯು ಸಹ ಇದೇ ತರಹವಾಗಿ 'ಸುರಪುರ ಸಂಸ್ಥಾನ ಇತಿಹಾಸ' ಕೃತಿಯಲ್ಲಿ ಚಿತ್ರಿಸಲ್ಪಟ್ಟಿದ್ದಾರೆ.[೧೦೯] ಬಹುಶಃ ಎಲ್ಲಾ ಬೇಡ ಜನಾಂಗದ ಪಾಳೆಯಗಾರರು ಈ ತರಹ ದಿನಚರಿಯನ್ನು ಹೊಂದಿರಬೇಕೆನಿಸುತ್ತದೆ. ಹಿಂದಿನ ರಾಜ ಮಹಾರಾಜರ ದಿನಚರಿಗಳು ಹೀಗೇ ಇದ್ದವು. ರಾಜಕೀಯದಲ್ಲಿ ಬಲಿಷ್ಠರಾಗುತ್ತಾ ಹೋದಂತೆ ಕ್ಷಾತ್ರ ಪರಂಪರೆಯ ಜೀವನ ಸಂಸ್ಕೃತಿ ಕಂಡುಬಂದಿತು. ಹಿಂದೂ ಧರ್ಮದ ಪ್ರಕಾರ ವೇಳೆಗನುಗುಣವಾಗಿ ಯಾವ ಯಾವ ಸಮಯದಲ್ಲಿ ಯಾವ ಯಾವ ಕೆಲಸಗಳನ್ನು ಪೂರೈಸಬೇಕಾಗಿತ್ತೋ ಆ ಕೆಲಸಗಳನ್ನು ಪಾಳೆಯಗಾರರು ಪೂರೈಸುತ್ತಿದ್ದರು.

ಹೀಗಾಗಿ ಶಿಸ್ತುಬದ್ಧ ಜೀವನ ವಿಧಾನ ಪಾಳೆಯಗಾರರಲ್ಲಿ ಮತ್ತು ಅವರ ಪರಿವಾರದಲ್ಲಿ ಕಂಡುಬಂದಿತು. ಸಮಾಜದಲ್ಲಿ ಭಿನ್ನವಾದಂತ, ಆದಷ್ಟು ವಿಲಾಸಿಯಾಗಿ ಜೀವನವನ್ನು ನಿರ್ವಹಿಸುವುದರ ಕಡೆಗೆ ರಾಜಪರಿವಾರ ಇಚ್ಛಿಸುತ್ತಿತ್ತು. ದೊರೆಗಳ ಜೀವನ ಅವರ ಅಂತಸ್ತು, ಅಧಿಕಾರದ ಸಂಕೇತವಾಗಿತ್ತು ಹಾಗೂ ಹಿಂದೂ ಸಂಪ್ರದಾಯಕ್ಕನುಗುಣವಾಗಿತ್ತು. ವೀರಶೈವ ಧರ್ಮವನ್ನು ಕೆಲವು ಪಾಳೆಯಗಾರರು ಅನುಸರಿಸಿಕೊಂಡು ಬಂದರು. ಇನ್ನೂ ಕೆಲವರು, ತಾವು ಸ್ವೀಕರಿಸಿದ ಧರ್ಮವನ್ನು ಮಧ್ಯದಲ್ಲಿಯೇ ತೊರೆದರು. ಮಠಗಳ ಮತ್ತು ಬ್ರಾಹ್ಮಣರ ಪ್ರಭಾವದಿಂದ ಸಾಮಾಜಿಕವಾಗಿ ಅತ್ಯಂತ ಕೆಳಸ್ತರದಲ್ಲಿದ್ದ ಬೇಡಜನಾಂಗದ ನಾಯಕರು ನಾಗರಿಕ ಸಮಾಜದಲ್ಲಿ ಮೇಲಿನ ಸ್ಥಾನಕ್ಕೇರಿದರು.

ತಮ್ಮ ಇಚ್ಛೆಗನುಗುಣವಾಗಿ ಸ್ಥಳೀಯ ನಾಯಕರಾದ ಬೇಡರು ತಮ್ಮದು ಕ್ಷತ್ರಿಯ ಸ್ಥಾನಮಾನವೆಂದು ಹೇಳಿಕೊಂಡರು. ಪುರೋಹಿತರು ಮತ್ತು ವಂಶಾವಳಿ ಹೇಳುವವರು ಅವರ ಬೇಡಿಕೆಯನ್ನು ಶಾಸನಬದ್ಧಗೊಳಿಸಿದರು. ಅವರ ವಂಶದ ಮೂಲವನ್ನು ಸೂರ್ಯನಿಂದಲೋ, ಚಂದ್ರನಿಂದಲೋ, ರಾಮ ಅಥವಾ ಕೃಷ್ಣನಂತಹ ಪೌರಾಣಿಕ ನಾಯಕನಿಂದಲೋ ಗುರುತಿಸಿ ಅದಕ್ಕೆ ಮಾನ್ಯತೆ ತಂದು ಕೊಟ್ಟರು. ಹೀಗೆ ರಾಜಕೀಯ ಅಧಿಕಾರವು ಶಾಸನಬದ್ಧಗೊಂಡು ಅವರು ಕ್ರಮೇಣ ಬಲಗೊಂಡರು, ಹಾಗೂ ಕಾಲದ ಸ್ತರೀಕೃತ ಸಮಾಜ ವ್ಯವಸ್ಥೆಯ ಮೌಲ್ಯಗಳನ್ನು ರಕ್ಷಿಸುವ ಮೂಲಪುರುಷರಾದರು.[೧೧೦] ವೈಷ್ಣವರು (ಬ್ರಾಹ್ಮಣರು) ಬೇಡ ಜನಾಂಗದ ಕೆಲವು ಪಾಳೆಯಗಾರರಿಗೆ ಕ್ಷಾತ್ರತ್ವದ ಹೆಸರಿನಲ್ಲಿ ಜನಿವಾರಧಾರಣೆ ಮಾಡಿಸಿ, ನೀವು ಕ್ಷತ್ರಿಯರು, ಜನಿವಾರ ಕ್ಷಾತ್ರತ್ವದ ಸಂಕೇತ ಎಂದು ಸಲಹೆ ಮಾಡಿದರು. ರಾಮಾನುಜಾಚಾರ್ಯರು ಪ್ರಸಿದ್ಧಿಗೆ ತಂದ ಶ್ರೀವೈಷ್ಣವ ಪಂಥ ಕರ್ನಾಟಕದಲ್ಲಿ ತುಂಬಾ ಜನಪ್ರಿಯವಾಯಿತು. ಸಂಸ್ಕೃತೀಕರಣದ ಕಡೆ ಜನರಲ್ಲಿ ಒಲವುಂಟಾಯಿತು. ಬ್ರಾಹ್ಮಣ ಸಮಾಜದ ಮಾದರಿಯನ್ನು ವೀರಶೈವ ಹೊರತಾಗಿ ಇತರ ಅನೇಕ ಕೆಳಜಾತಿಗಳವರು ಹೆಚ್ಚು ಕಡಿಮೆ ಅನುಸರಿಸುತ್ತಿದ್ದರು.[೧೧೧] ಕೆಲವು ಮಠಗಳು, ಮಠಾಧಿಪತಿಗಳು ಬೇಡಜನಾಂಗದ ಕೆಲವು ದೊರೆಗಳಿಗೆ ಲಿಂಗಧಾರಣೆ ಮಾಡಿದರು. ರಾಜಕೀಯದ ಉಳಿವಿಗಾಗಿಯೋ ಅಥವಾ ಇನ್ನಾವುದೋ ಕಾರಣಗಳಿಗಾಗಿ ಈ ರೀತಿಯ ಧರ್ಮಾಂತರ ಕ್ರಿಯಗೆ ಪಾಳೆಯ ಗಾರರು ಒಳಗಾದರು. ಚಿತ್ರದುರ್ಗ, ಸುರಪುರ, ಗುಡಗುಂಟಿ, ಗುಡೇಕೋಟೆ, ಜರಿಮಲೆ ಮುಂತಾದ ದೊರೆಗಳು ಬ್ರಾಹ್ಮಣರಿಂದ ಜನಿವಾರ ಧಾರಣೆಯನ್ನು ಮಾಡಿಸಿಕೊಳ್ಳುತ್ತಿದ್ದರು. ಮತ್ತೋಡು, ಹಾಗಲವಾಡಿ, ಹರಪನಹಳ್ಳಿ ಪಾಳೆಯಗಾರರು ಲಿಂಗಧಾರಿಗಳಾಗಿದ್ದರು. ೧೨ನೇ ಶತಮಾನದಲ್ಲಿ ಸ್ಪರ್ಶ, ಸಹಭೋಜನ, ರಕ್ತಸಂಬಂಧಗಳೆಂಬ ಲೌಕಿಕ ನಡತೆಗಳ ಜೊತೆ ಶರಣರು ಅಸ್ಪೃಶ್ಯರನ್ನು ಗೌರವಿಸುವ ವಿಷಯದಲ್ಲಿ ಮಾನವೀಯವಾಗಿ ನಡೆದುಕೊಂಡಿದ್ದರಿಂದ ಕೆಳವರ್ಗಗಳು ವೀರಶೈವಧರ್ಮದ ಕಡೆ ಒಲವನ್ನು ಹೊಂದಿರಬೇಕು. ಜನಿವಾರಧಾರಣೆ ಮಾಡಿಕೊಂಡ ಕೆಲವು ದೊರೆಗಳು ಶೈವ ಸಂಪ್ರದಾಯವನ್ನು ಆಚರಿಸುತ್ತಿದ್ದರು.

ಹೀಗೆ ಧರ್ಮ, ಸಂಸ್ಕೃತಿ, ಸಾಮಾಜಿಕ ಜೀವನ ವಿಧಾನಗಳಲ್ಲಿ ಜನಸಾಮಾನ್ಯ ಬೇಡರಿಗಿಂತ ಭಿನ್ನವಾದ ಜೀವನವನ್ನು ಪಾಳೆಯಗಾರರು ಕಳೆಯುತ್ತಾ, ಬೇಡ ಸಮಾಜದಲ್ಲಿ ಪ್ರತ್ಯೇಕವಾಗಿಯೇ ಗುರುತಿಸಲ್ಪಟ್ಟರು. ಸಾಮಾಜಿಕವಾಗಿ ಪಾಳೆಯಗಾರರಿಗೆ ಮತ್ತು ಜನಸಾಮಾನ್ಯರ ನಡುವೆ ಅಂತರ ಬೆಳೆದುಕೊಂಡು ಬಂದಿತು. ಕ್ರಮೇಣ ನಾವು ಕ್ಷತ್ರಿಯ ಸಮಾಜದವರು ಎಂಬ ಭಾವನೆ ಪಾಳೆಯಗಾರರಲ್ಲಿ ಬಂದಿತು. ಪ್ರಸ್ತುತ ದಿನಗಳಲ್ಲಿ ಕೆಲವು ಪಾಳೆಯಗಾರರ ಮನೆತನದವರು ತಮ್ಮನ್ನು ಬೇಡರೆಂದು ಹೇಳಿಕೊಳ್ಳದೆ ತಾವು ಕ್ಷತ್ರಿಯರು ಎಂದು ಹೇಳುವುದು ರೂಢಿಯಾಗಿದೆ. ಬೇಡರೇ ಬೇರೆ, ದೊರೆಗಳೇ ಬೇರೆ; ಅವರವರ ಸ್ಥಾನಮಾನಗಳೇ ಬೇರೆ, ಬೇಡ ದೊರೆಗಳ ಸಂಬಂಧಗಳು ಜನಸಾಮಾನ್ಯ ಬೇಡರೊಡನೆ ನಡೆಯದೆ ಬೇಡ ದೊರೆಗಳ ಮನೆತನದೊಡನೆಯೇ ಎಂದು ಹೇಳುವುದುಂಟು. ಹೀಗೆ ಅಧಿಕಾರವಂತ ಬೇಡ ನಾಯಕರು ರಾಜಕೀಯದಲ್ಲಿ ಅವರು ಹೊಂದಿದ್ದ ಅಧಿಕಾರದ ಪರಿಣಾಮವಾಗಿ ಅವರದೇ ಆದಂತಹ ಸಾಮಾಜಿಕ ಜೀವನವೊಂದು ಬೇಡ ಜನಾಂಗದಲ್ಲಿ ಕಂಡುಬಂದಿದೆ.

ಬೇಡ ಅರಸು ವಂಶಸ್ಥರಲ್ಲಿನ ಕೆಲವರು ತಮ್ಮನ್ನು ಗುರುಗಳು ಮತ್ತು ದೊರೆಗಳೆಂದು ಕರೆದುಕೊಳ್ಳುವರು. ತಾವು ಬೇಡಜನಾಂಗಕ್ಕೆ ಗುರುಗಳು. ಈ ಜನಾಂಗದವರು ನಮ್ಮ ಮಕ್ಕಳು, ಶಿಷ್ಯಂದಿರು ಇತ್ಯಾದಿಯಾಗಿ ಹೇಳಿಕೊಳ್ಳುವುದು ಹಾಗೂ ಸಾಮಾನ್ಯ ಬೇಡ ಕುಟುಂಬಗಳೊಡನೆ ಅವರು ವಿವಾಹ ಸಂಬಂಧ, ಸಹಭೋಜನ, ಮಾಡದಿರುವುದು ಕಂಡುಬರುತ್ತದೆ. ಈಗಲೂ ಆರ್ಥಿಕ ಹಾಗೂ ರಾಜಕೀಯ ದುಸ್ಥಿತಿಯಿಂದ ಹಾಗೂ ಅಲ್ಪ ಸಂಖ್ಯಾತರಾಗಿ ಉಳಿಯುವ ಭಯದಿಂದ ಈಗ ಬೇಡ ಜನಾಂಗದ ಜೊತೆ ಗುರುತಿಸಿಕೊಳ್ಳುವ ಪ್ರಯತ್ನ ಕಂಡುಬರುತ್ತದೆ. ತಮ್ಮ ಅಂತಸ್ತನ್ನು ಕಾಪಾಡಿಕೊಳ್ಳಲು ಬೇಡ ಪಾಳೆಯಗಾರರು ಮಾಡಿದ ಈ ಪದ್ಧತಿಯು ಇತ್ತೀಚಿಗೆ ಸಡಿಲಗೊಳ್ಳುತ್ತಿದೆ. ಪಾಳೆಯಗಾರ ಎನ್ನುವುದು ಒಂದು ಹುದ್ದೆಯಾಗಿತ್ತು. ಕಾಲನಂತರದಲ್ಲಿ ಅದು ಜಾತಿಯಾಗಿ ಗುರುತಿಸಲ್ಪಟ್ಟಿತು. ಮತ್ತೊಂದು ಭಾಗದಲ್ಲಿ ಬೇಡ ಜನಾಂಗವನ್ನು ಪಾಳೆಯಗಾರರೆಂದೇ ಕರೆಯುವುದು ಕಂಡುಬಂದಿತು. ನಾಯಕ, ತಳವಾರ, ಪರಿವಾರ ಎಂಬ ಹುದ್ದೆಗಳು ಜಾತಿಯ ರೂಪಾಂತರವಾದಂತೆ ಈಗ ಪಾಳೆಯಗಾರ ಹುದ್ದೆಯೂ ಜಾತಿಯಾಗಿ ಗುರುತಿಸಲ್ಪಡುತ್ತಿದೆ.

ಬೇಡ ಸಮಾಜದಲ್ಲಿ ಪಾಳೆಯಗಾರರು(ಸಂಸ್ಥಾನಿಕರು) ಮೊದಲನೇ ವರ್ಗಕ್ಕೆ ಸೇರಿದ್ದರು. ಗುರಿಕಾರರು, ಸುಬೇದಾರರು, ಸೈನಿಕರು, ತುಬಾಕಿಯವರು, ಪೋಲಿಸ್ ಪಾಟೀಲ, ಕಟ್ಟೆಮನೆಯವರು, ಮಾಲಿ ಪಾಟೀಲ, ತಳವಾರ ಮುಂತಾದ ಹುದ್ದೆಗಳಲ್ಲಿದ್ದ ಬೇಡ ಜನಾಂಗದವರು ಎರಡನೇ ಸ್ಥಾನದಲ್ಲಿದ್ದರು. ಬ್ರಾಹ್ಮಣ ಪುರೋಹಿತ ಇಲ್ಲವೇ ವೀರಶೈವ ಜಂಗಮರ ಕೈಕೆಳಗೆ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದ ಬೇಡ ಜನಾಂಗದವರೇ ಆದ ದಾಸಯ್ಯ, ಸಮರಾಯ, ಪೂಜಾರಿಗಳು ಮೂರನೇ ವರ್ಗಕ್ಕೆ ಸೇರಿದ್ದರು. ಯಾವುದೇ ಹುದ್ದೆ, ವೃತ್ತಿಯನ್ನು ನಿರ್ದಿಷ್ಟವಾಗಿ ಹೊಂದದೆ ಬೇಟೆ, ಕೃಷಿ, ಪಶುಪಾಲನೆಯಲ್ಲಿ ತೊಡಗಿ, ಬುಡಕಟ್ಟು

ಜೀವನ ನಡೆಸುತ್ತಿದ್ದವರನ್ನು ನಾಲ್ಕನೇ ವರ್ಗದಲ್ಲಿ ನೋಡಲಾಗುತ್ತಿತ್ತು. ಈ ವರ್ಗಗಳ ಅಂತರ ಸಮಾಜದಲ್ಲಿ ಬಾಹ್ಯವಾಗಿ ಹೆಚ್ಚಾಗಿ ಕಾಣುತ್ತಿರಲಿಲ್ಲ. ಇದು ಸಮಾಜದ ಆಂತರಿಕ ವಿಷಯವಾಗಿತ್ತು. ಸಮಯ, ಸಂದರ್ಭಕ್ಕನುಗುಣವಾಗಿ ಇವುಗಳನ್ನು ತೋರ್ಪಡಿಸುತ್ತಿದ್ದರು. ಬಹುತೇಕವಾಗಿ ಬೇಡ ಜನಾಂಗವು ಒಂದೇ ಎಂಬ ಭಾವನೆ ಇದ್ದರೂ ಪಾಳೆಯಗಾರರು ಮಾತ್ರ ತಮ್ಮದೇ ಆದಂಥ ಮೇಲಸ್ಥಾನವನ್ನು ಸಮಾಜದಲ್ಲಿ ಹೊಂದಿದ್ದರು.

ಎಲ್ಲರೂ ಒಂದು ಎಂಬ ಭಾವನೆ ಬೇಡರಲ್ಲಿದ್ದರೂ ಜಮೀನ್ದಾರರು ಮತ್ತು ದೊರೆಗಳು ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿದ್ದರು.[೧೨] ಪಾಳೆಯಗಾರರು ವಿವಾಹ ಸಂಬಂಧ, ಸಹಭೋಜನ, ಮನೋರಂಜನೆ ಕಾರ್ಯಕ್ರಮ ಮುಂತಾದವುಗಳು ಪಾಳೆಯಗಾರ ಮನೆತನದೊಡನೆ ಮಾತ್ರ ತೊಡಗಿರುತ್ತಿದ್ದು, ಜನಸಾಮಾನ್ಯ ರಲ್ಲಿ ಬೆರೆಯುತ್ತಿರಲಿಲ್ಲ. ಆಡಳಿತಾತ್ಮಕ ವಿಷಯಗಳಲ್ಲಿ ಕೆಲವೊಮ್ಮೆ ಮಾತ್ರ ಪಾಳೆಯಗಾರರು ಜನರೊಡನೆ ಮುಕ್ತವಾಗಿ ಸೇರುತ್ತಿದ್ದರು. ಸಮಾಜದಲ್ಲಿ ಅಂತಸ್ತು ಕಾಪಾಡಿಕೊಳ್ಳುವ ದೃಷ್ಟಿಯಿಂದ ಅಧಿಕಾರಸ್ಥ ಪಾಳೆಯಗಾರರು ಈ ರೀತಿಯ ವಿವಾಹ ನಿಷೇಧವನ್ನು ವಿಧಿಸಿ ಕೊಂಡಿರುವುದು ಸಹಜವಾಗಿರ ಬಹುದು. ಬೇಡ ಜನಾಂಗಕ್ಕೆ ಮಠವಾಗಲೀ, ಗುರುಗಳಾಗಲೀ ಇರಲಿಲ್ಲ ಹೀಗಾಗಿ ಬೇಡಜನಾಂಗದ ದೊರೆಗಳೇ ಬೇಡ ಜನಾಂಗಕ್ಕೆ ಗುರುಗಳಾದರು. ರಾಜರ ಕೇಂದ್ರಸ್ಥಾನ ಅವರ ಗುರುಕೇಂದ್ರವಾಯಿತು. ಇಂತಹ ವಿಶಿಷ್ಟ ಪರಂಪರೆಯನ್ನು ಕನಕಗಿರಿ, ಗುಡಗುಂಟಿ, ದೇವದುರ್ಗ, ಗುಂತಗೋಳ ಮುಂತಾದ ಸಂಸ್ಥಾನಗಳಲ್ಲಿ ಕಾಣಬಹುದು. ಈ ಸಂಸ್ಥಾನಿಕರನ್ನು ಬೇಡರು ನಮ್ಮ ದೊರೆಗಳು ಎನ್ನುವುದಕ್ಕಿಂತ ಗುರುಗಳು ಎಂದು ಕರೆಯುವ ಮೂಲಕ ಕಾಣಿಕೆಗಳನ್ನು ಸಲ್ಲಿಸುತ್ತಾರೆ. ಪ್ರತಿಯೊಂದು ಜನಾಂಗವು ದೊರೆಗಳೆಂದು ಗೌರವದಿಂದ ಕರೆಯುವರು. ತಮ್ಮ ಸಮಸ್ಯೆಗಳೇನಾದರೂ ಇದ್ದರೆ ಈ ದೊರೆಗಳ ಹತ್ತಿರ ಬಂದು ಬಗೆಹರಿಸಿಕೊಳ್ಳುತ್ತಾರೆ. ಎಲ್ಲಾ ವರ್ಗದ ಬೇಡ ಜನಾಂಗವು ಅನ್ಯೋನ್ಯವಾಗಿಯೆ ಇತ್ತು. ಕೆಲವು ಕಾರ್ಯಕ್ರಮಗಳಲ್ಲಿ, ಧಾರ್ಮಿಕ ಉತ್ಸವ ಆಚರಣೆಯ ಸಂದರ್ಭದಲ್ಲಿ ಮಾತ್ರ ಮೇಲು ಕೀಳು ಎಂಬುದು ಅತ್ಯಂತ ಗೌರವಯುತವಾಗಿ ಕಂಡುಬರುತ್ತಿತ್ತು. ಧೈರ್ಯ, ಸಾಹಸ, ದಿಟ್ಟತನಗಳಿಗೆ ಹೆಸರಾದ ಈ ಪಾಳೆಯಗಾರರ ಅಧಿಕಾರವನ್ನು ಕಿತ್ತುಕೊಂಡವರು ಹೈದರಾಲಿ, ಟಿಪ್ಪುಸುಲ್ತಾನರು. ಅಧಿಕಾರವನ್ನು ಕಳೆದು ಕೊಂಡ ಪಾಳೆಯಗಾರರು ತಮ್ಮ ಸ್ಥಾನವನ್ನು ಮತ್ತೆ ಭದ್ರಪಡಿಸಿಕೊಳ್ಳಲು ಸಾಕಷ್ಟು ಪ್ರಯತ್ನಪಡ ಬೇಕಾಯಿತು. ಆದರೆ ಅವರ ಪ್ರಯತ್ನ ಯಶಸ್ವಿಯಾಗಲಿಲ್ಲ. ಅಧಿಕಾರ, ಹಣ, ಗೌರವದಿಂದ ದಿನದಿಂದ ದಿನಕ್ಕೆ ಕುಸಿಯುತ್ತಾ ಬಂದ ಪಾಳೆಯಗಾರರು ಮತ್ತು ಅವರ ವಂಶಜರು ಜನಸಾಮಾನ್ಯರೊಳಗೆ ಬೆರೆತು ಜೀವನ ಮಾಡುವುದು ಅನಿವಾರ್ಯವಾಯಿತು. ಆದರೆ ಇಂದೂ ಸಹ ಜನಸಾಮಾನ್ಯರು ಇವರು ನಮ್ಮ ಪಾಳೆಯಗಾರ ವಂಶಜರು, ದೊರೆಗಳು ಎಂಬ ಗೌರವವನ್ನು ಉಳಿಸಿಕೊಂಡು ಬಂದಿರುವುದನ್ನು ನೋಡಬಹುದು.

ಅಧಿಕಾರದಲ್ಲಿದ್ದ ಬೇಡ ಪಾಳೆಯಗಾರರು ಸುಖದ ಜೀವನವನ್ನು ನಡೆಸಿದರು. ತಮ್ಮ ರಾಜಕೀಯ ಅಧಿಕಾರ ಉಳಿವಿಗಾಗಿ ಹೋರಾಡುವುದನ್ನು ಬಿಟ್ಟರೆ ಉಳಿದಂತೆ ಅವರು ವಿಲಾಸಿಯಾಗಿಯೇ ಬದುಕಿದರು. ಹಿಂದಿನ ರಾಜಮಹಾರಾಜರಂತೆ ವೇಷಭೂಷಣಗಳನ್ನು ಧರಿಸುತ್ತಿದ್ದರು. ಸುಗಂಧ ದ್ರವ್ಯವನ್ನು ಲೇಪಿಸಿಕೊಳ್ಳು ತ್ತಿದ್ದರು. ಅನೇಕ ಸೇವಕರನ್ನು ಅರಮನೆಯಲ್ಲಿಟ್ಟುಕೊಂಡಿದ್ದರು. ತಮ್ಮ ಮನಸ್ಸಿಗೆ ಬಂದಂತಹ ಉಡುಗೆ-ತೊಡುಗೆಗಳನ್ನು ತರಿಸಿಕೊಳ್ಳುತ್ತಿದ್ದರು. ಹಿಂದಿನ ದೊರೆಗಳಂತೆ ಅನೇಕ ಹೆಂಡಂದಿರನ್ನು ಹೊಂದಿದ್ದರು. ಬಹುಪತ್ನಿತ್ವ ಆಳುವ ವರ್ಗದಲ್ಲಿ ಸಾಮಾನ್ಯವಾಗಿತ್ತು. ಬಹುತೇಕವಾಗಿ ಜನಸಾಮಾನ್ಯರು ಏಕಪತ್ನಿ ವ್ರತಸ್ಥರಾಗಿದ್ದರು. ರಾಜಕೀಯ ಅಧಿಕಾರದ ದರ್ಪದ ಸಂಕೇತವೋ, ಪೌರುಷದ ಸಂಕೇತವೋ ಅಥವಾ ಹೆಣ್ಣಿನ ವ್ಯಾಮೋಹವೋ ಒಟ್ಟಿನಲ್ಲಿ ಪಾಳೆಯಗಾರರು ಅನೇಕ ಹೆಂಡಂದಿರನ್ನು ಹೊಂದಿದರು. ಕಂಪಿಲರಾಯನು ಏಳು ಸ್ತ್ರೀಯರನ್ನು ಮದುವೆಯಾಗಿದ್ದನು.[೧೧೩] ಚಿತ್ರದುರ್ಗದ ದೊರೆಗಳು ಅನೇಕ ಹೆಂಡಂದಿರ ಒಡೆಯರಾಗಿದ್ದರು. ಬಿಚ್ಚುಗತ್ತಿ ಭರಮಣ್ಣನಾಯಕನು ೩೩ ಪತ್ನಿಯರನ್ನು ಹೊಂದಿದ್ದನು. ಇಮ್ಮಡಿ ಮದಕರಿನಾಯಕನು ೨೯ ಹೆಂಡಂದಿರ ದೊರೆಯಾಗಿದ್ದನು.[೧೧೪] ಯಾವುದೇ ಸಂಸ್ಥಾನಿಕರನ್ನು ನೋಡಿದಾಗ ಸಾಮಾನ್ಯವಾಗಿ ಬಹುಪತ್ನಿಯರನ್ನು ಹೊಂದಿರುವ ಬಗ್ಗೆ ಗೊತ್ತಾಗುತ್ತದೆ. ಸ್ವಜಾತಿಯ ವಿವಾಹಕ್ಕೆ ಹೆಚ್ಚಿನ ಮಹತ್ವವಿತ್ತು ಮತ್ತು ಆ ವಿವಾಹವು ಅದ್ದೂರಿಯಾಗಿ ಸರ್ವಸಮ್ಮುಖರ ನಡುವೆ ನಡೆಯುತ್ತಿತ್ತು. ರಾಜರ ಹಿರಿಯ ಹೆಂಡತಿಯನ್ನು ಪಟ್ಟದ ರಾಣಿಯೆಂದು ಕರೆಯಲಾಗುತ್ತಿತ್ತು. ಇಂತಹ ರಾಣಿಯರ ಗರ್ಭದಲ್ಲಿ ಜನಿಸಿದವರೇ ರಾಜ್ಯದ ಉತ್ತರಾಧಿಕಾರಕ್ಕೆ ಅರ್ಹರಾಗುತ್ತಿದ್ದರು. ಪಟ್ಟದ ರಾಣಿಯರನ್ನು 'ನಾಗತಿ' ಎಂದು ಕರೆಯಲಾಗುತ್ತಿತ್ತು. ಉಳಿದ ಹೆಂಡಂದಿರನ್ನು ನಾಗತಿ ಎಂದು ಕರೆಯದೇ ಬಂಗಾರ ನಾಗತಿ, ಬಂಗಾರ ಸ್ತ್ರೀಯರೆಂದು ಕರೆಯಲಾಗುತ್ತಿತ್ತು. ಬಂಗಾರ ಸ್ತ್ರೀಯರ ಮಕ್ಕಳಿಗೆ ರಾಜ್ಯದ ಹಕ್ಕು ದಕ್ಕುತ್ತಿರಲಿಲ್ಲ. ಪುತ್ರರು ಜನಿಸದಿದ್ದರೆ ತಮಗೆ ಇಷ್ಟಬಂದ ಮಗುವನ್ನು (ರಾಜ ಕುಟುಂಬಕ್ಕೆ ಸಂಬಂಧಪಟ್ಟವರಿಂದ) ದತ್ತು ಸ್ವೀಕರಿಸುತ್ತಿದ್ದರು. ಬೇರೆ ಜಾತಿಯ ಹೆಂಗಸರನ್ನು ಮದುವೆ ಮಾಡಿಕೊಂಡ ದೊರೆಗಳು ಸಮಾಜದಲ್ಲಿ, ಅರಸುವರ್ಗದಲ್ಲಿ ಕೆಳಸ್ಥಾನವನ್ನು ಪಡೆದುಕೊಳ್ಳುತ್ತಿದ್ದನು. ಸುರಪುರದ ಪಿಡ್ಡನಾಯಕನು, ಜಕ್ಕಪ್ಪನಾಯಕನ, ಪಾಮನಾಯಕನ ಚಿಕ್ಕಮಗ ಮರಾಠ ಸ್ತ್ರೀಯರಿಗೆ ಜನಿಸಿದವನು ಎಂಬ ಕಾರಣಕ್ಕೆ ಅವನಿಗೆ ಪಟ್ಟಸಿಗದಂತೆ ನೋಡಿಕೊಂಡನಲ್ಲದೆ, ಅವನನ್ನು ಓಡಿಸಿದನು.[೧೧೫] ಕನಕಗಿರಿ(ಹುಲಿಹೈದರ್ ) ಸಂಸ್ಥಾನಿಕರು ತಮ್ಮ ದಾಯಾದಿಗಳಾದ ಗೋಡಿನಾಳ ದೊರೆಗಳು, ದೊರೆಗಳಿಗಿಂತ ಕಡಿಮೆ ಸ್ಥಾನದಲ್ಲಿರುವ ಕಟ್ಟೇಮನೆವರ ಸಂಗಡ ರಕ್ತ ಸಂಬಂಧ ಆರಂಭಿಸಿದ್ದರಿಂದ ಅವರನ್ನು, ಅವರ ಒಡನಾಟವನ್ನು ಸಂಪೂರ್ಣವಾಗಿ ತ್ಯಜಿಸಿರುವರು. ಈಗಲೂ ಕನಕಗಿರಿಯವರಿಗೆ ಮತ್ತು ಗೋಡಿವಾಳ ದೊರೆಗಳಿಗೆ ಒಡನಾಟವಿರುವುದಿಲ್ಲ. ಅಧಿಕಾರಸ್ಥ ಬೇಡ ನಾಯಕರು ತಮ್ಮ ಅಂತಸ್ತನ್ನು ಸದಾ ಕಾಯ್ದು

ಕೊಂಡು ಬರುತ್ತಿದ್ದರು. ಸಮಾಜದಲ್ಲಿ ಅದು ಅವಶ್ಯವಾಗಿತ್ತು. ಜನ ಸಾಮಾನ್ಯರೊಡನೆ ಸಂಬಂಧ ಬೆಳೆಸಿದರೆ ದೊರೆಗಳ ಗೌರವ ಸ್ಥಾನಮಾನಕ್ಕೆ ಧಕ್ಕೆಬರುತ್ತಿತ್ತು. ಮನೆತನದ ಗೌರವವನ್ನು ಕಾಯ್ದುಕೊಳ್ಳುವುದು ಮುಖ್ಯವಾಗಿತ್ತು. ಪಾಳೆಯಗಾರ ಮನೆತನದವರಲ್ಲಿ ತಮ್ಮ ಅಂತಸ್ತನ್ನು ಕಾಪಾಡಿಕೊಂಡು ಬರುವುದನ್ನು ಅವರಲ್ಲಿ ಈಗಲೂ ನೋಡಬಹುದು. ಒಂದು ಸಂಸ್ಥಾನದವರು ಇನ್ನೊಂದು ಸಂಸ್ಥಾನದ ಮೇಲೆ ದಾಳಿ ಮಾಡಿ ಗೆಲುವನ್ನು ಸಾಧಿಸಿದಾಗ ಸೋತ ಸಂಸ್ಥಾನಿಕರು ತಮ್ಮ ಮಗಳು ಇಲ್ಲವೆ ತಂಗಿಯನ್ನು ಗೆದ್ದ ದೊರೆಗೆ ಕೊಟ್ಟು ಮದುವೆ ಮಾಡುತ್ತಿದ್ದರು. ಆಗ ಈ ವಿಧದ ವಿವಾಹ ಸಂಬಂಧಗಳೇ ಹೆಚ್ಚಾಗಿದ್ದವು.

ಸ್ವಜಾತಿಯ ವಿವಾಹಕ್ಕೆ ದೊರೆಗಳು ಸಾಕಷ್ಟು ಮಹತ್ವವನ್ನು ಕೊಟ್ಟಿದ್ದರು. ಸುರಪುರದ ದೊರೆ ಇಮ್ಮಡಿ ವೆಂಕಟಪ್ಪನಾಯಕನ ಮಗನಾದ ಶ್ರೀನಿವಾಸನಾಯಕನ ಜಾವಳ ಪ್ರಸಂಗಕ್ಕೆ ತನ್ನ ಸೋದರ ಮಾವನಾದ ದೇವದುರ್ಗದ ಕೋಳ್ಳಿರಂಗಪ್ಪನಾಯಕನನ್ನು, ತನ್ನ ಇತರ ಅಪ್ತೇಷ್ಟರನ್ನು ಕರೆಕಳುಹಿಸಿದನು. ಆದರೆ ಒಬ್ಬರೂ ಬರಲಿಲ್ಲ. ಕಾರಣವೆಂದರೆ ವೆಂಕಟಪ್ಪನಾಯಕನು ಮುಸಲ್ಮಾನ ಸ್ತ್ರೀಯಳನ್ನು ತನ್ನ ಕುಲದಲ್ಲಿ ಸೇರಿಸಿಕೊಂಡು ತಾಳಿಕಟ್ಟಿಕೊಂಡಿದ್ದನು. ಶುಭ ಸಮಾರಂಭದಲ್ಲಿ ಎಲ್ಲಾ ಬಂಧುಗಳು ಒಟ್ಟುಗೂಡಿ ಒಂದೇ ಭಾಜನದಲ್ಲಿ ಊಟಮಾಡುವ ಪದ್ಧತಿ ಈ ದೊರೆಗಳ ಮನೆತನದಲ್ಲಿ ಇತ್ತು. ಹೀಗೆ ಮುಸಲ್ಮಾನ್ ಸ್ತ್ರೀಯ ಸಂಗಡ ಊಟವ್ಯವಹಾರ ಮಾಡಬೇಕಾಗುತ್ತದೆಂದು ಬಂಧುಗಳಾರೂ ಬರಲಿಲ್ಲ.[೧೧೬] ನಾಯಕನಹಟ್ಟಿಯವರು ಭರ್ಬಿ ಮನೆಗಳಲ್ಲಿ ಬಂಧುತ್ವ ಮಾಡಿರುತ್ತಾರೆಂದು ವಾರ್ತೆ ಕೇಳಿ ಅವರನ್ನು ಗುಡೇಕೋಟೆಯವರು, ಹೊಸಕೋಟೆಯವರು, ಜರಿಮಲೆಯವರು ವಿಸರ್ಜನೆ ಮಾಡಿರುವುದನ್ನು ಕಾಣಬಹುದು.[೧೧೭] ಹೀಗೆ ಸ್ವಜಾತಿಯ ಮತ್ತು ಅಂತಸ್ತಕ್ಕನುಗುಣವಾಗಿ ದೊರೆಗಳ ಮನೆತನಗಳೊಡನೆಯೇ ವಿವಾಹ ಮಾಡಿಕೊಳ್ಳುವುದು ಕಡ್ಡಾಯವಾಗಿತ್ತು. ಅಷ್ಟೇ ಅಲ್ಲ ಆಗಿನ್ನೂ ಅಂತರ ಜಾತಿ ವಿವಾಹವನ್ನು ಒಪ್ಪಿಕೊಳ್ಳಲು ಸಮಾಜ ಸಿದ್ಧವಾಗಿರಲಿಲ್ಲ.[೧೧೮]

ಪಾಳೆಯಗಾರರ ವಿವಾಹ ಹಿಂದೂ ಧರ್ಮದ ಪ್ರಕಾರವೇ ವೈಭವವಾಗಿ ಜರುಗುತ್ತಿತ್ತು. ಅಗ್ನಿಕುಂಡ ರಚನೆ, ಹಸೆಕಟ್ಟೆ, ಯಜ್ಞೋಪವೀತಧಾರಣೆ ಮುಂತಾದ ಧಾರ್ಮಿಕ ವಿಧಿವಿಧಾನಗಳು ಮೊದಲು ಆಗಬೇಕು. ಆನಂತರ ಮಾಂಗಲ್ಯಧಾರಣೆ. ಚಿತ್ರದುರ್ಗ ಪಾಳೆಯಗಾರರ ವಂಶಜರು ಹೇಳುವಂತೆ ವಿವಾಹಕ್ಕೆ ಮುನ್ನ 'ನಾಂದಿ' ಎನ್ನುವ ಜನಿವಾರಧಾರಣೆ ಕಾರ್ಯಕ್ರಮ ಆಗಲೇಬೇಕು. ಈ ಕಾರ್ಯಕ್ರಮ ಆಗದ ಹೊರತು ಮದುವೆ ಆಗುವಂತಿಲ್ಲ. ಕೆಲವು ಪಾಳೆಯಗಾರರು ಶೈವ ಸಂಪ್ರದಾಯಕ್ಕನುಗುಣವಾಗಿ ವಿವಾಹವಾಗುತ್ತಿದ್ದರು. ಮದುವೆ ಸಂದರ್ಭದಲ್ಲಿ ಅಯ್ಯಗಳನ್ನು ಕರೆಸುತ್ತಿದ್ದರು. ವೈಷ್ಣವ ಸಂಪ್ರದಾಯಸ್ಥ ದೊರೆಗಳು ಬ್ರಾಹ್ಮಣರನ್ನು ಕರೆಸುತ್ತಿದ್ದರು. ಅಧಿಕಾರಸ್ಥ ಬೇಡ ದೊರೆಗಳು ಶೈವ ಇಲ್ಲವೆ ವೈಷ್ಣವ ಸಂಸ್ಕಾರಗಳನ್ನು ಅನುಸರಿಸುವುದನ್ನು ಕಲಿತುಕೊಂಡರು. ಮಧ್ಯಕಾಲೀನ ಮುಸ್ಲಿಂ ಸಾಮಾಜಿಕ ವ್ಯವಸ್ಥೆಯ

ಪ್ರಭಾವವೂ ಬೇಡ ಸಮಾಜದಲ್ಲಿ ಕಂಡುಬಂದಿದೆ. ಮುಸ್ಲಿಂ ಸ್ತ್ರೀಯರಂತೆ ಪಾಳೆಯಗಾರರ ಮನೆತನದಲ್ಲಿ ಘೋಷಾವನ್ನು ಧರಿಸುತ್ತಿದ್ದರು. ಬೇಡ ಕುಟುಂಬದ ಸ್ತ್ರೀಯರು ಸಾರ್ವಜನಿಕವಾಗಿ ಕಾಣಿಸಿಕೊಳ್ಳುತ್ತಿರಲಿಲ್ಲ. ವಧುವನ್ನು ವರನು ಮದುವೆ ಮುನ್ನ ನೋಡುವಂತಿರಲಿಲ್ಲ. ಆ ಸಂಸ್ಥಾನದ ಗುರುಹಿರಿಯರು ವಧುವನ್ನು ನೋಡುತ್ತಿದ್ದರು. ಈಗಲೂ ಕೆಲವು ಸಂಸ್ಥಾನಿಕ ವಂಶಸ್ಥರು ತಮ್ಮ ಮಗಳನ್ನು ವರನಿಗೆ ತೋರಿಸುವುದಿಲ್ಲ. ರಕ್ತಸಂಬಂಧ ವಿವಾಹಕ್ಕೆ ಹೆಚ್ಚಿನ ಆದ್ಯತೆಯನ್ನು ಪಾಳೆಯಗಾರರು ನೀಡಿದ್ದರು. ಹೆಣ್ಣನ್ನು ಒಂದು ಸಂಸ್ಥಾನದಿಂದ ತಂದರೆ ಮತ್ತೆ ಅದೇ ಸಂಸ್ಥಾನಕ್ಕೆ ಹೆಣ್ಣೊಂದನ್ನು ಕೊಡುತ್ತಿದ್ದರು. ಬೇಡಪಾಳೆಯಗಾರರ ವಿವಾಹವು ಗೋತ್ರಕ್ಕನುಗುಣವಾಗಿ ನಿಶ್ಚಯವಾಗುತ್ತಿತ್ತು. ಸ್ವಗೋತ್ರ ವಿವಾಹಕ್ಕೆ ಅವಕಾಶವಿರಲಿಲ್ಲ. ಒಂದೇ ಗೋತ್ರದವರು ಅಣ್ಣತಮ್ಮಂದಿರೆಂಬ ಭಾವನೆಯಿತ್ತು. ಸುರಪುರ, ಗುಡಗುಂಟಿಯ ಸಂಸ್ಥಾನಿಕರು ಗೋಸಲ ವಂಶದವರು. ಚಿತ್ರದುರ್ಗದವರು ಕಾಶ್ಯಪ, ಜರಿಮಲೆ, ಗುಡೇಕೋಟೆಯವರು ಸೂರ್ಯ, ದೇವದುರ್ಗದವರು ಜಂಪಲ ಮತ್ತು ಗುಂತಗೋಳದವರು ಭಾರದ್ವಾಜ ಗೋತ್ರ. ಹೀಗೆ ಬೇರೆ ಬೇರೆ ಗೋತ್ರ ಹೊಂದಿದ ಈ ಸಂಸ್ಥಾನಿಕರು ರಕ್ತ ಸಂಬಂಧಿಗಳಾಗಿದ್ದರು. ಗೋತ್ರ ಬದಲಾದರೆ ಅಂತಹ ಮನೆತನದವರು ಬೀಗರು ಎಂಬ ವಾಡಿಕೆ ಈಗಲೂ ಇದೆ. ಆದರೆ ವೀರಶೈವ ಧರ್ಮ ಸ್ವೀಕರಿಸಿದ ಮತ್ತೋಡು, ಹಾಗಲವಾಡಿ, ಹರಪನಹಳ್ಳಿ ಪಾಳೆಯಗಾರ ವಂಶಸ್ಥರು ಲಿಂಗಾಯತ ಮನೆತನದೊಡನೆ ವಿವಾಹ ಸಂಬಂಧ ಬೆಳೆಸುತ್ತಾರೆ. ಅವರಲ್ಲಿ ಅರಸುಮನೆತನದವರೆ ಆಗಬೇಕೆಂಬ ನಿಯಮವಿಲ್ಲ. ಒಟ್ಟಿನಲ್ಲಿ ಯಾವುದೇ ಪಂಗಡದ ಲಿಂಗಾಯಿತರಾಗಿದ್ದರೆ ಆಯಿತ್ತು. ವರದಕ್ಷಿಣೆ, ವಧುದಕ್ಷಿಣೆ ಪದ್ಧತಿಗಳು ಮೊದಲಿಂದಲೂ ರೂಢಿಯಲ್ಲಿದ್ದವು. ಈ ಪದ್ಧತಿಗಳ ಆಚರಣೆಯ ವಿಧಾನಗಳು ಬೇರೆ ಬೇರೆಯಾಗಿದ್ದವು. ಪಾಳೆಯಗಾರರು ತಮ್ಮ ಹೆಣ್ಣು ಮಕ್ಕಳನ್ನು ವಿವಾಹ ಮಾಡಿಕೊಡುವಾಗ, ವಸ್ತುಗಳ ರೂಪದಲ್ಲಿ, ಭೂಮಿಯ ರೂಪದಲ್ಲಿ, ಹಣದ ರೂಪದಲ್ಲಿ, ಗ್ರಾಮಗಳ ರೂಪದಲ್ಲಿ, ಒಟ್ಟಿನಲ್ಲಿ ತಮ್ಮ ಅಂತಸ್ತಿಗೆ ತಕ್ಕಷ್ಟು ಉಡುಗೊರೆಯನ್ನು ಕೊಡುತ್ತಿದ್ದರು. ವಧುದಕ್ಷಿಣೆ ಪದ್ಧತಿ ಹೆಚ್ಚಾಗಿ ಸಾಮಾನ್ಯ ಬೇಡರಲ್ಲಿ ಕಂಡುಬರುತ್ತಿತ್ತು. ವಧುದಕ್ಷಿಣೆ ಕಾಲಕ್ರಮೇಣ ವರದಕ್ಷಿಣೆ ರೂಪ ಪಡೆದುಕೊಂಡಿತು. ಪಟ್ಟದ ಕತ್ತಿಗೆ ವಿವಾಹ ಮಾಡುವ ವಿಶಿಷ್ಟ ವೀರಪರಂಪರೆ ಬೇಡಜನಾಂಗದಲ್ಲಿದೆ. ಚಿತ್ರದುರ್ಗದ ಚಿಕ್ಕಣ್ಣನಾಯಕನು ಮದುವೆಯಾಗಲು ಪಟ್ಟದ ಕತ್ತಿಯನ್ನು ತರೀಕೆರೆಗೆ ಕಳುಹಿಸಿದ್ದನು.[೧೧೯] ಇಂದಿಗೂ ಬೇಡ ಜನಾಂಗದವರ ವಿವಾಹ ಸಂದರ್ಭದಲ್ಲಿ ಮದುಮಗನು ಕತ್ತಿಯನ್ನು ಹಿಡಿದುಕೊಂಡಿರುತ್ತಾನೆ. ಕೆಲವೊಮ್ಮೆ ಅನಿವಾರ್ಯ ಸಂದರ್ಭಗಳಲ್ಲಿ ಬಾಲ್ಯವಿವಾಹ ನಡೆಯುತ್ತಿತ್ತು. ಕೊನೆಯ ಮದಕರಿನಾಯಕನಿಗೆ ಚಿಕ್ಕವಯಸ್ಸಿನಲ್ಲಿ ವಿವಾಹ ಮಾಡಲಾಗಿತ್ತು. ವಿವಾಹ ವಿಚ್ಛೇದನ ಮತ್ತು ವಿಧವಾ ವಿವಾಹ ಆಳುವ ವರ್ಗಗಳಲ್ಲಿ ಕಂಡುಬರುತ್ತಿರಲಿಲ್ಲ. ದೊರೆ ಸತ್ತನಂತರ ರಾಣಿಯ ವರ್ಗವು ಪ್ರಾಣತ್ಯಾಗಕ್ಕೆ ಸಿದ್ಧಗೊಳ್ಳುತ್ತಿತ್ತು. ಕೆಲವರು

ಸಾಯದೆ ಉಳಿದುಕೊಂಡುದ್ದುಂಟು ವಿಧವಾ ವಿವಾಹದ ಬಗ್ಗೆ ಯೋಚನೆಯನ್ನು ಮಾಡುತ್ತಿರಲಿಲ್ಲ. ಸಾಮಾನ್ಯ ಬೇಡ ಕುಟುಂಬಗಳಲ್ಲಿ ವಿಧವಾವಿವಾಹ ಪದ್ಧತಿ ಇತ್ತು. ಈ ವಿವಾಹವನ್ನು 'ಕೂಡಿಕೆ ಲಗ್ನ' ಅಥವಾ 'ಸೀರುಡಿಕೆ ಲಗ್ನ' ಎಂದು ಕರೆಯುತ್ತಿದ್ದರು. ವಿಧವೆಯರಿಂದ ಕನ್ನಯ್ಯನ ಕಾಣಿಕೆ ಪಡೆಯುವ ಮೂಲಕ ಕಟ್ಟೇಮನೆ ಯಜಮಾನನು ಈ ವಿವಾಹಕ್ಕೆ ಅನುಮತಿಯನ್ನು ಸೂಚಿಸುತ್ತಿದ್ದನು. ನಂತರ ಈ ಲಗ್ನ ನಡೆಯುತ್ತಿತ್ತು.[೧೨೦] ವಿವಾಹವು ಒಂದು ಪವಿತ್ರ ಬಂಧನ ಎಂಬ ನಂಬಿಕೆ ದೊರೆಗಳಲ್ಲಿತ್ತು. ನಾಯಕ ಅರಸರು ಆಸ್ತಿ, ಅಧಿಕಾರಕ್ಕೆ ತಕ್ಕಂತಹ ಅರಸು ಕುಟುಂಬಗಳೊಡನೆ ವಿವಾಹ ಸಂಬಂಧವನ್ನು ಬೆಳಸುತ್ತಿದ್ದರು. ಬೇಡ ಅರಸು ಮನೆತನದವರೊಡನೆ ಮಾತ್ರ ವಿವಾಹಸಂಬಂಧ ಏರ್ಪಡುತ್ತಿತ್ತು. ಜನಸಾಮಾನ್ಯ ಬೇಡ ಕುಟುಂಬಗಳೊಡನೆ ವಿವಾಹ ಸಂಬಂಧ ಬೆಳೆಸುತ್ತಿರಲಿಲ್ಲ. ಕುಲಾಚಾರ, ಜಾತಿಗೆ ಹೆಚ್ಚಿನ ಮಹತ್ವಕೊಟ್ಟಿದ್ದರು. ಸ್ವಗೋತ್ರ ವಿವಾಹವನ್ನು ಸಂಪೂರ್ಣವಾಗಿ ನಿಷೇಧಿಸಲಾಗಿತ್ತು. ಅಂತರಜಾತಿ ವಿವಾಹವಂತೂ ಸಮಾಜ ಮನ್ನಣೆಯನ್ನು ಪಡೆದಿರಲಿಲ್ಲ. ಬೇಡನಾಯಕ ಅರಸರ ರಾಜ್ಯಗಳು ಒಂದಕ್ಕೊಂದು ಅಂಟಿಕೊಂಡಿದ್ದವು. ಅವರ ವಿವಾಹ ಸಂಬಂಧಗಳು ರಾಜಕೀಯ ಸ್ಥಿರತೆಗನುಗುಣವಾಗಿ ಏರ್ಪಡುತ್ತಿದ್ದವು. ಒಬ್ಬ ನಾಯಕನು ಇನ್ನೊಬ್ಬ ನಾಯಕನನ್ನು ಸೋಲಿಸಿದ ನಂತರ ಏರ್ಪಡುತ್ತಿದ್ದ ಒಪ್ಪಂದ, ರಕ್ತಸಂಬಂಧವೇ ಆಗಿತ್ತು. ಬೇಡ ಅರಸು ವಂಶಸ್ಥರು ಕಾಲಕ್ರಮೇಣ ಆರ್ಥಿಕವಾಗಿ ದುರ್ಬಲವಾಗುತ್ತಾ ಬಂದಂತೆ ಸಮಾಜದಲ್ಲಿ ಈ ಹಿಂದಿದ್ದ ಕಟ್ಟುಪಾಡುಗಳನ್ನು ಸಡಿಲಗೊಳಿಸಿದರು. ಬಡವರಿರಲಿ, ಶ್ರೀಮಂತರಿರಲಿ ಒಟ್ಟಾರೆ ಬೇಡ ಅರಸು ಮನೆತನಕ್ಕೆ ಸೇರಿದವರಾಗಿದ್ದರೆ ಹಾಗೂ ಗೋತ್ರಗಳು ಬೇರೆಯಾದರೆ ಸಾಕು ಎಂಬುದನ್ನು ಕಾಣುತ್ತೇವೆ. ಇತ್ತೀಚಿಗೆ ಅರಸು ವಂಶಸ್ಥರಲ್ಲಿನ ಹೆಣ್ಣುಗಳಿಗೆ ವರನನ್ನು ಹುಡುಕುವುದೇ ಕಷ್ಟವಾಗಿದೆಯೆಂದು ತಿಳಿದುಬರುತ್ತದೆ.

ಪಾಳೆಯಗಾರರು ಭವ್ಯವಾದ ಅರಮನೆಗಳಲ್ಲಿ ವಿಲಾಸೀ ಜೀವನವನ್ನು ನಡೆಸುತ್ತಿದ್ದರು. ಬೇಡ ನಾಯಕರು ಆಳಿದ ಪ್ರದೇಶಗಳಲ್ಲಿ ಅನೇಕ ಸ್ಮಾರಕಗಳಿವೆ. ಅವುಗಳಲ್ಲಿ ಅರಮನೆಗಳೂ ಸೇರಿವೆ. ಬೇಡನಾಯಕರ ಅರಮನೆಗಳು ಅನೇಕ ಕೋಣೆಗಳಿಂದ, ಮಹಲುಗಳಿಂದ ಕೂಡಿದ್ದವು. ಬೆಲೆಬಾಳುವ ಶಿಲೆಗಳನ್ನು ಬಳಸಿರುವುದು ವಿರಳ. ಹೈದ್ರಾಬಾದ್ ನಿಜಾಮನು ತನ್ನ ಪ್ರದೇಶದಲ್ಲಿ ಬರುವ ನಾಯಕ ಅರಸರಿಗೆ ಬೃಹತ್ ದರ್ಬಾರಗಳನ್ನು ನಿರ್ಮಿಸಿಕೊಳ್ಳಲು ಅನುಮತಿ ನೀಡಿದನು. ಹೀಗಾಗಿ ದೇವದುರ್ಗ, ಗುಡಗುಂಟಿ, ಕನಕಗಿರಿ(ಹುಲಿಹೈದರ) ನಾಯಕರ ಬೃಹತ್ ಅರಮನೆಗಳನ್ನು(ದರ್ಬಾರು) ನೋಡಬಹುದು. ಗುಡಗುಂಟಿ ನಾಯಕರ ದರ್ಬಾರವು ಮಾತ್ರ ಉತ್ತಮ ಸ್ಥಿತಿಯಲ್ಲಿದೆ. ಉಳಿದವುಗಳು ಹಾಳಾಗುವ ಸ್ಥಿತಿಯಲ್ಲಿವೆ. ಮೈಸೂರು ಪ್ರದೇಶದಲ್ಲಿದ್ದ ಪಾಳೆಯಗಾರರು ನಿರ್ಮಿಸಿದ ಅರಮನೆಗಳನ್ನು ಕಾಣುವುದು ಕಷ್ಟಸಾಧ್ಯ. ಏಕೆಂದರೆ ಕ್ರಿ.ಶ.೧೮-೧೯ನೇ ಶತಮಾನದಿಂದಲೂ ಈ ಪ್ರದೇಶದಲ್ಲಿ ಪಾಳೆಯಗಾರರು

ಕಂಡುಬರುತ್ತಾರೆ. ಸಾಕಷ್ಟು ಕಾಲದ ಹಿಂದೆಯೆ ನಿರ್ಮಾಣಗೊಂಡ ಅರಮನೆಗಳು, ಇತರ ಕೆಲವು ಕಟ್ಟಡಗಳೂ ಅವಸಾನಗೊಂಡಿರಬಹುದು. ವಿಜಯನಗರ ಅರಸರು ಸ್ಥಳೀಯ ನಾಯಕರಿಗೆ ಎಷ್ಟೇ ಸ್ವಾತಂತ್ರ್ಯವನ್ನು ನೀಡಿದ್ದರೂ ಅವರಿಗೆ ಬೃಹತ್ ಕಲ್ಲಿನಕೋಟೆಗಳನ್ನು ಕಟ್ಟಿಕೊಳ್ಳಲು ಅವಕಾಶ ನೀಡಿರಲಿಲ್ಲವೆಂದು ತಿಳಿದುಬರುತ್ತದೆ. ಭವಿಷ್ಯದಲ್ಲಿ ಈ ಪಾಳೆಯಗಾರರು ತಮ್ಮ ವಿರುದ್ಧವೆ ಬಲಿಷ್ಠರಾಗಿ ನಿಲ್ಲಬಹುದೆಂದು ಯೋಚನೆ ಅವರಲ್ಲಿತ್ತು. ಹೀಗಾಗಿ ಚಿಕ್ಕಪುಟ್ಟಕಲ್ಲುಗಳಿಂದ, ಮಣ್ಣಿನಿಂದ ನಿರ್ಮಾಣವಾದ, ಕೋಟೆ, ಅರಮನೆ, ಇತರ ಕೆಲವು ಕಟ್ಟಡಗಳನ್ನು ಕಾಣಬಹುದು. ವಿಜಯನಗರ ನಂತರದಲ್ಲಿ ಪ್ರಬಲಗೊಂಡ ನಾಯಕರಲ್ಲಿ ಕೆಲವರು ಬೃಹತ್ ಕೋಟೆ ಅರಮನೆಗಳನ್ನು ನಿರ್ಮಿಸಿಕೊಂಡಿರುವುದನ್ನು ಕಾಣಬಹುದು. ಚಿತ್ರದುರ್ಗ ಸಂಸ್ಥಾನ ಇದಕ್ಕೊಂದು ಪ್ರಮುಖ ಉದಾಹರಣೆ. ದೊರೆಗಳನ್ನು ಹೊರತುಪಡಿಸಿದರೆ ಉಳಿದ ಕೆಲವು ಅಧಿಕಾರಿಗಳೂ ಉತ್ತಮ ವ್ಯವಸ್ಥೆಯ ಸೌಲಭ್ಯಗಳಿಂದ ಕೂಡಿದ ಮನೆಗಳನ್ನು ಕಟ್ಟಿಸಿಕೊಂಡು ಜೀವನ ನಡೆಸುತ್ತಿದ್ದರು. ಜನಸಾಮಾನ್ಯರು ಸಾಮಾನ್ಯ ಗುಣಮಟ್ಟದ ಮನೆಗಳಲ್ಲಿ ಗುಡಿಸಲುಗಳಲ್ಲಿ ನೆಲೆಸಿದ್ದರು.

ಸಮಾಜದಲ್ಲಿ ಪಾಳೆಯಗಾರ ಮನೆತನದ ಸ್ತ್ರೀಯರು ಉನ್ನತ ಸ್ಥಾನಮಾನಗಳನ್ನು ಗಳಿಸಿದ್ದರು. ದೊರೆಗಳು ಹೊಂದಿದ ಸ್ಥಾನಮಾನಗಳನ್ನು ರಾಣಿಯರೂ ಹೊಂದಿದ್ದರು 'ನಾಗತಿ' ಎಂಬ ವಿಶೇಷ ಗೌರವ ನಾಮದಿಂದ ಪಟ್ಟದರಾಣಿಯನ್ನು ಕರೆಯುತ್ತಿದ್ದರು. ಆಡಳಿತದಲ್ಲಿ ಸಾರ್ವಜನಿಕ ಕಾರ್ಯದಲ್ಲಿ ರಾಣಿಯರು ಬಾಹ್ಯವಾಗಿ ಭಾಗವಹಿಸುತ್ತಿದ್ದರು. ಸಾರ್ವಜನಿಕ ಅಭಿವೃದ್ಧಿ ಕಾರ್ಯಗಳನ್ನು ನಾಗತಿಯರು ಕೈಗೊಂಡಿರುವ ಬಗ್ಗೆ ಕೆಲವು ಶಾಸನಗಳು ತಿಳಿಸುತ್ತವೆ. ರಾಜರು ರಾಣಿಯರಿಗೆ ಸ್ವಾತಂತ್ರ್ಯವನ್ನು ನೀಡಿದ್ದರು. ದೇವಾಲಯ ಗಳನ್ನು ಕಟ್ಟಿಸುವುದು ಇಲ್ಲವೆ, ಜೀರ್ಣೋದ್ಧಾರ ಮಾಡಿಸುವುದು, ಕೆರೆಗಳನ್ನು ಕಟ್ಟಿಸುವುದು, ದಾನದತ್ತಿ ನೀಡುವುದು, ಅಗ್ರಹಾರ ಸ್ಥಾಪಿಸುವುದು ಮುಂತಾದ ಸಾರ್ವಜನಿಕ ಕೆಲಸಗಳಲ್ಲಿ ನಾಗತಿಯರು ತೊಡಗಿಕೊಂಡಿದ್ದರು. ೧ನೇ ಕಸ್ತೂರಿ ರಂಗಪ್ಪನಾಯಕನ ನಾಗತಿ ಕಾಟವ್ವನಾಗತಿ ಎಂಬುವಳು ಚಿತ್ರದುರ್ಗದ ತಿಮ್ಮಣ್ಣನಾಯಕನ ಕೆರೆಯ ಹಿಂದೆ ತನ್ನ ಹೆಸರಿನಲ್ಲಿ 'ಕಾಟಿಮಠ' ಮತ್ತು ಒಂದು ತೋಪನ್ನು ನಿರ್ಮಿಸಿದಳು.[೧೨೧] ಚಿಕ್ಕಣ್ಣನಾಯಕನ ಹೆಂಡತಿ ಹಟ್ಟಿಮಲ್ಲವ್ವನಾಗತಿ ವೀರಶೈವ ಧರ್ಮ ಸ್ವೀಕರಿಸಿ ಅದೇ ಧರ್ಮದಲ್ಲಿ ಮುಂದುವರೆದು ಮರಣ ಹೊಂದಿದಳು. ರಾಜನು ಯಾವುದೇ ರೀತಿಯಲ್ಲಿ ಅವಳ ಈ ನಿರ್ಧಾರಕ್ಕೆ ಅಡ್ಡಿಯಾಗಲಿಲ್ಲ.[೧೨೨] ಚಿತ್ರದುರ್ಗ ಇತಿಹಾಸದಲ್ಲಿ ರಾಜಕೀಯ ಮುತ್ಸದ್ದಿತನ ತೋರಿದ ಹಿರೇಮದಕರಿನಾಯಕನ ಹೆಂಡತಿ ಗಂಡೋಬಳವ್ವನಾಗತಿ ವೃದ್ಧಾಪ್ಯದಲ್ಲೂ ರಾಯದುರ್ಗ ಕೃಷ್ಣಪ್ಪನೊಡನೆ ಹೋರಾಡಿದಳು ಮತ್ತು ಹರಪನಹಳ್ಳಿ ರಾಜನನ್ನು ಸೋಲಿಸಿದಳು.[೧೨೩] ಓಬಣ್ಣನಾಯಕನ ಸೊಸೆ ತನ್ನ ಗಂಡ ನರಸಿಂಹನು ಮರಣ ಹೊಂದಿದ್ದಕ್ಕಾಗಿ ಅವನ ಹೆಸರಿನಲ್ಲಿ 'ನರಸಪುರ' ಎಂಬ ಗ್ರಾಮವನ್ನು

ನಿರ್ಮಿಸಿ ಅವನ ನೆನಪಿಗಾಗಿ ಆಂಜನೇಯ ಗುಡಿಯನ್ನು ಕಟ್ಟಿಸಿದಳು. ಕನಕಗಿರಿಯ ಇಮ್ಮಡಿ ವುಡಿಸಿ ನಾಯಕನ ಪತ್ನಿ ಚಿನ್ನಮ್ಮ ಕನಕಗಿರಿ ಸ್ವಾಮಿ ದೇವಸ್ಥಾನದ ಪೌಳಿಗೆ ಕಲ್ಲುಹಾಸಿಗೆ ಹಾಸಿದಳು. ಮತ್ತು ಪೇಟೆ ಬಸವೇಶ್ವರ ದೇವಾಲಯವನ್ನು ಕಟ್ಟಿಸಿದಳು. ಈ ದೊರೆಯ ಇನ್ನೊಬ್ಬರಾಣಿ ಕನಕಮ್ಮಳು ಬಾವಿಯೊಂದನ್ನು ಕಟ್ಟಿಸಿದಳು. ಕನಕಗಿರಿ ಸಂಸ್ಥಾನವು ಹುಲಿಹೈದರ್‌ಗೆ ವರ್ಗವಾದ ನಂತರ ಅಲ್ಲಿ ಗೌರಮ್ಮ ಎಂಬ ರಾಣಿಯು ಕೆಲವು ದಿನಗಳ ಕಾಲ ಅಧಿಕಾರ ನಡೆಸಿದಳು.[೧೨೪] ರಾಜಾಮಾತೆ ಹರಿಯಮ್ಮಾಜಿ ಐದು ವರ್ಷಗಳ ಕಾಲ ಹರಪನಹಳ್ಳಿ ಸಂಸ್ಥಾನವನ್ನು ಆಳಿದಳು. ತನ್ನ ವಿರುದ್ಧ ಪಿತೂರಿ ನಡೆಸಿದವರನ್ನು ಮತ್ತು ಯುದ್ಧದಲ್ಲಿ ಅನೇಕ ಸೈನಿಕರನ್ನು ಸಂಹರಿಸಿದಳು. ಗುಡಗುಂಟ ಸಂಸ್ಥಾನದಲ್ಲೂ ರಾಣಿಗೌರಮ್ಮ ಎಂಬುವಳು ರಾಜ್ಯಭಾರ ಮಾಡಿರುವುದು ತಿಳಿದುಬರುತ್ತದೆ.[೧೨೫] ಒಟ್ಟಿನಲ್ಲಿ ಹಿಂದಿನ ರಾಜ ಮಹಾರಾಜರ ಹೆಂಡತಿಯರಂತೆ ಬೇಡ ಪಾಳೆಯಗಾರರ ಹೆಂಡತಿಯರು ಸಹಾ ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಹೊಂದಿದ್ದರು. ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಎಲ್ಲಾ ರಂಗಗಳಲ್ಲೂ ಸ್ವಾತಂತ್ರ್ಯವನ್ನು ಹೊಂದಿದ್ದರೆಂದು ಹೇಳಬಹುದು.

ಘೋಷಾ ಪದ್ಧತಿಯು ಬೇಡ ದೊರೆಗಳ ಕುಟುಂಬದಲ್ಲಿ ಕಂಡುಬರುತ್ತದೆ. ಈ ಪದ್ಧತಿಯು ಮುಸ್ಲಿಂ ಮಹಿಳೆಯರು ಧರಿಸುವ ಬುರಕಾದಂತೆ ಕಂಡುಬಂದರೂ ಸ್ವಲ್ಪ ಭಿನ್ನವಾಗಿದೆ. ನಿಜಾಮನ ಆಳ್ವಿಕೆಗೆ ಒಳಗಾದ ಪ್ರದೇಶಗಳಲ್ಲಿದ್ದ ಬೇಡ ಸಂಸ್ಥಾನಿಕರು ಈ ಪದ್ಧತಿಗೆ ಹೆಚ್ಚಿನ ಮಹತ್ವ ನೀಡಿದ್ದರು. ಇಸ್ಲಾಂ ಧರ್ಮದ ಪ್ರಭಾವದಿಂದ ಈ ಪದ್ಧತಿ ಬಂದಿದೆ. ಅರಮನೆಯ ಸ್ತ್ರೀಯರು ಸದಾ ಘೋಷಾದಲ್ಲಿರಬೇಕೆಂದು ಅರ್ಥವಲ್ಲ. ಅರಮನೆಯಿಂದ ಹೊರ ಹೋಗುವಾಗ ಅರಮನೆಯ ಹೆಂಗಸರನ್ನು ಬೇರೆಯವರು ನೋಡಬಾರದು ಎಂಬುದು ಈ ಘೋಷ ಹಾಕಲಿಕ್ಕೆ ಕಾರಣವಾಗಿದೆ. ಅರಮನೆ ಸ್ತ್ರೀಯರು ಅರಮನೆಯ ಕಿಟಕಿಗಳ ಮೂಲಕ ಹೊರಗೆ ನಡೆಯುವ ಕರಡಿ ಕುಣಿತ, ಮೋಡಿ, ಜಾದು, ಕವಲೆತ್ತು ಆಡಿಸುವುದು, ಮುಂತಾದ ಮನೋರಂಜನಾ ಆಟಗಳನ್ನು ವೀಕ್ಷಿಸುತ್ತಿದ್ದರು. ಅರಮನೆ ಬಿಟ್ಟು ಹೊರಗೆ ಹೋಗಬೇಕಾದ ಸಂದರ್ಭ ಬಂದಲ್ಲಿ 'ಬಗೀಖಾನೆ' ಎಂಬ ವಾಹನದಲ್ಲಿ ಸಂಚರಿಸುತ್ತಿದ್ದರು. ಈ ಬಗೀಖಾನೆ ವಸ್ತ್ರದಿಂದ ತುಂಬಾ ಮುಚ್ಚಲ್ಪಟ್ಟಿರುತ್ತಿತ್ತು. ಅರಮನೆಯ ಮುಖ್ಯ ಬಾಗಿಲಿಗೆ ಬಂದು ರಾಣಿಯರನ್ನು, ಅರಮನೆಯ ಇತರ ಸ್ತ್ರೀಯರನ್ನು ಇಳಿಸಬೇಕಾಗಿತ್ತು. ಆಗ ಅವರನ್ನು ಯಾರೂ ನೋಡಬಾರದೆಂದು ಬಾಗಿಲ ಎರಡೂ ಬದಿ ನಿಂತ ಸ್ತ್ರೀಯರು ಎತ್ತರವಾಗಿ ಬಟ್ಟೆಗಳಿಂದ ಮರೆ ಮಾಡುತ್ತಿದ್ದರು. ಈ ಪದ್ಧತಿ ಕೆಲವೆಡೆ ಈಗಲೂ ಆಚರಣೆಯಲ್ಲಿದೆ. ಆದರೆ ಹಲವಾರು ಕುದುರೆಗಳ ಬಗೀಖಾನೆ ವಾಹನ ಈಗ ಇಲ್ಲ. ಸರಳವಾಗಿ ಪ್ಲಾಸ್ಟಿಕ್ ಹಾಳೆಯನ್ನು ಮುಚ್ಚಿದ ಎತ್ತಿನ ಗಾಡಿಯಲ್ಲಿ ಹೊರಗೆ ಹೋಗಿ ಬರುತ್ತಾರೆ. ಇನ್ನೂ ಕೆಲವೊಂದು ಸಂಸ್ಥಾನಿಕರು ಈ ಪದ್ಧತಿಯನ್ನು ಆಚರಣೆ ಮಾಡುವುದಿಲ್ಲ. ಇಂತಹ ಕುಟುಂಬದ ಸಂಸ್ಥಾನಿಕರು

ರಾಜಕೀಯದಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಿದ್ದಾರೆ, ತಮ್ಮ ಹೆಂಡತಿಯನ್ನು ಚುನಾವಣೆ ಸಂದರ್ಭದಲ್ಲಿ ಮತಯಾಚನೆಗೆ ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿರುವುದರಿಂದ ಈ ಘೋಷಾ ಪದ್ಧತಿಗೆ ಮಹತ್ವ ನೀಡಿಲ್ಲವೆನಿಸುತ್ತದೆ. ಕೆಲವು ಸಂಸ್ಥಾನಿಕರು ಈ ಪದ್ಧತಿಯನ್ನು ಕೈಬಿಡಬೇಕೆಂದರೂ ಜನರು 'ನೀವು ದೊರೆಗಳು, ನಿಮ್ಮ ಮನೆಯ ಸ್ತ್ರೀಯರು ಘೋಷಾವಿಲ್ಲದೆ ಹೊರಗೆ ಹೋಗಬಾರದು' ಎಂದು ಹೇಳುವುದರಿಂದ ಈ ಪದ್ಧತಿ ಆಚರಣೆ ಅವರಿಗೆ ಅನಿವಾರ್ಯವಾಗಿದೆ. ಮುಸ್ಲಿಂ ಸಂಪ್ರದಾಯದಂತೆ ಬೇಡ ದೊರೆಗಳು ಹಮ-ರಿಕಾಬಿ(ಒಂದೇ ಬಾಜನದಲ್ಲಿ ಊಟ ಮಾಡುವ ಪದ್ಧತಿ) ಎಂಬ ಪದ್ಧತಿಯನ್ನು ಅನುಸರಿಸುವರು.[೧೨೬] ಸುರಪುರ ದೇವದುರ್ಗ, ಗುಡಗುಂಟ ದೊರೆಗಳ ಮನೆತನದಲ್ಲಿ ಈ ಪದ್ಧತಿ ಇತ್ತು. ನನ್ನೀವಾಳದ ದೊರೆಗಳು ಮುಸ್ಲಿಂರಂತೆ ಮುಂಜಿ ಕಾರ್ಯಕ್ರಮ ಮಾಡುತ್ತಾರೆ. ಇಸ್ಲಾಂ ಧರ್ಮದ ಸೂಫಿಗಳೂ, ಸುಲ್ತಾನರೂ, ನಿಜಾಮನೂ ಬೇಡರ ಮೇಲೆ ಪ್ರಭಾವ ಬೀರಿರುವುದನ್ನು ಈ ಆಚರಣೆಗಳು ಸ್ಪಷ್ಟಪಡಿಸುತ್ತವೆ.

ಬೇಡ ನಾಯಕ ಅರಸರ ಊಟದ ವ್ಯವಸ್ಥೆ ಶಿಸ್ತುಬದ್ಧವಾಗಿತ್ತು. ದೊರೆಯ ಸಮಸ್ತ ರಾಜಪರಿವಾರದೊಡನೆ ಊಟ ಮಾಡುತ್ತಿದ್ದನು. ಊಟದ ತಯಾರಿ ಮತ್ತು ರಾಜರಿಗೆ ಉಣಬಡಿಸುವಲ್ಲಿ ಶಿಸ್ತನ್ನು ಕಾಯ್ದುಕೊಳ್ಳಲಾಗುತ್ತಿತ್ತು. ಹರಿವಾಣ ಬಟ್ಟಲುಗಳಲ್ಲಿ ಊಟ ಮಾಡುತ್ತಿದ್ದರು. ಮೊದಲು ವಿಭಿನ್ನ ಉಪ್ಪಿನಕಾಯಿ, ಹಪ್ಪಳ, ಸಂಡಿಗೆ, ಪಲ್ಲೆಯನ್ನು ಊಟಕ್ಕೆ ಬಡಿಸಲಾಗುತ್ತಿತ್ತು. ಸೀಕರಣೆ, ಕೋಸಂಬರಿ, ಸಣ್ಣಕ್ಕಿ ಅನ್ನ, ತುಪ್ಪ, ತೊಗರಿಬೆಳೆಯ ಹಸನಾದ ಸೂಪ, ಸಣ್ಣಶಾವಿಗೆ, ಹಾಲುಂಡೆ, ಕರಿಗಡುಬು, ಕೊಟೆ, ದೋಸೆ, ಸಣ್ಣಕ್ಕಿ ಪಾಯಸ, ಹಾಲು, ಮೊಸರು, ಮಜ್ಜಿಗೆ ಮುಂತಾದ ವಿಭಿನ್ನ ಪಾಕಗಳನ್ನು ದೊರೆಗಳು ಬಳಸುತ್ತಿದ್ದರು. ಊಟವಾದ ಬಳಿಕ ವೀಳ್ಯದೆಲೆಯನ್ನು ಜಗಿಯುತ್ತಾರೆ. ಆದರೆ ಸಾಮಾನ್ಯ ಬೇಡರು ಜೋಳ, ಸಜ್ಜೆ, ನವಣೆ, ರಾಗಿ ಮುಂತಾದ ಧಾನ್ಯಗಳಿಂದ ತಯಾರಿಸಿದ ಅಡಿಗೆಯನ್ನು ಬಳಸುತ್ತಿದ್ದರು. ಬೇಡರು ಮೂಲತಃ ಮಾಂಸಹಾರಿಗಳಾದರೂ ಕೆಲವರು ಸಸ್ಯಾಹಾರಿಗಳಾಗಿದ್ದಾರೆ. ಈ ಎರಡು ಆಹಾರಪದ್ಧತಿ ಗಳು ಇಂದು ಬೇಡರಲ್ಲಿವೆ. ಸಸ್ಯಹಾರಿ ಸಮಾಜದವರ ಪ್ರಭಾವ ಬೇಡ ಸಮಾಜದ ಮೇಲಾಗಿದೆ. ಶೈವ ಮತ್ತು ವೈಷ್ಣವ ಧರ್ಮಗಳ ಪ್ರಭಾವದಿಂದ, ಪುರೋಹಿತ ಮತ್ತು ಜಂಗಮರಂತಹ ಸಸ್ಯಹಾರಿ ವರ್ಗಗಳ ಸಹವಾಸದಿಂದ ಸುಧಾರಿಸಿದ ಬೇಡ ಜನಾಂಗದ ಕೆಲವು ದೊರೆಗಳು ಮಾಂಸಹಾರವನ್ನು ತ್ಯಜಿಸಿದರು. ಕೆಲವು ಪಾಳೆಯಗಾರರು ವೀರಶೈವ ಧರ್ಮವನ್ನು ಸ್ವೀಕರಿಸಿದ್ದರಿಂದ ಅವರು ಸಂಪೂರ್ಣವಾಗಿ ಮಾಂಸಹಾರವನ್ನು ತ್ಯಜಿಸಿದರು.

ಹಾಗಲವಾಡಿ, ಹರಪನಹಳ್ಳಿ, ಮತ್ತೋಡು ಪಾಳೆಯಗಾರರು ಮೊದಲು ಮಾಂಸಹಾರಿಗಳೆ ಆಗಿದ್ದರೂ ನಂತರ ಮಾಂಸಹಾರವನ್ನು ತ್ಯಜಿಸಿದರು. ಈಗಲೂ ಈ ಮನೆತನದ ವಂಶಜರು ವೀರಶೈವ ಧರ್ಮ

ಸಂಸ್ಕೃತಿಯಲ್ಲಿರುವುದರಿಂದ ಅವರು ಸಸ್ಯಹಾರಿಗಳಾಗಿದ್ದಾರೆ. ವೀರಶೈವ ಧರ್ಮ ಸ್ವೀಕರಿಸದ ಹಾಗೂ ವೀರಶೈವ ಧರ್ಮಕ್ಕನುಗುಣವಾಗಿ ನಡೆದುಕೊಳ್ಳುವ ಹಟ್ಟಿ, ಜರಿಮಲೆ, ಗುಡೇಕೋಟೆ, ಗುಂತಗೋಳ, ಗುಡಗುಂಟ, ಮುಂತಾದ ಸಂಸ್ಥಾನಿಕರು ಕೆಲವು ಹಬ್ಬಗಳಲ್ಲಿ ಮಾತ್ರ ವಾರಗಟ್ಟಲೆ ಮಾಂಸಹಾರ ನಿಷೇಧ ಮಾಡುತ್ತಾರೆ. ಜರಿಮಲೆಯವರು ಉಜ್ಜನಿ ಜಾತ್ರೆ ಸಂದರ್ಭದಲ್ಲೂ, ಗುಂತಗೋಳ, ಗುಡಗುಂಟ ದೊರೆಗಳು ಅಮರೇಶ್ವರ ಜಾತ್ರೆ ಹಾಗೂ ದಸರಾ ಹಬ್ಬಗಳ ಸಂದರ್ಭದಲ್ಲಿ ಮಾಂಸಹಾರವನ್ನು ನಿಷೇಧಿಸುತ್ತಾರೆ. ಶಾಕ್ತ ಆರಾಧನೆಗೆ ಚಿತ್ರದುರ್ಗ ದೊರೆಗಳು ಹೆಚ್ಚಿನ ಆದ್ಯತೆ ನೀಡಿದ್ದರು. ಅವರ ಅರಮನೆ ದೇವತೆ ಉತ್ಸವಾಂಬೆ. ಬೇಡರಲ್ಲಿ ದೇವಿಗೆ ಪ್ರಾಣಿಬಲಿಕೊಡುವ ಪದ್ಧತಿ ಇತ್ತು. ದೇವಿಗೆ ಕುರಿ, ಕೋಳಿ, ಕೋಣಗಳ ಬಲಿ ಕೊಡುವ ಜಾತ್ರೆಗಳು ಇಂದಿಗೂ ನಡೆಯುತ್ತಲಿವೆ. ಬೇಡರೇತರ ಇತರ ಕೆಳಜಾತಿಗಳೂ ಇಂತಹ ಹಬ್ಬಗಳನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಬೇಡರಲ್ಲಿ ದೇವರಿಗೆ ಹರಕೆ ಹೋರುವುದು, ಮೀಸಲು ಕಟ್ಟುವುದು ಮುಂತಾದ ಪದ್ಧತಿಗಳಿವೆ. ಬೇಡ ಜನಾಂಗದಲ್ಲಿ ದೇವದಾಸಿ ಪದ್ಧತಿ ಇದೆ. ಕೆಳವರ್ಗದಲ್ಲಿಯೆ ಹುಟ್ಟಿಕೊಂಡ ಈ ಪದ್ಧತಿಯ ಮೂಲ ಆಳುವ ವರ್ಗವೇ ಆಗಿತ್ತು. ಮೇಲ್ವರ್ಗದವರೇ ಈ ದೇವದಾಸಿಯರನ್ನು ಆಳುತ್ತಿದ್ದರು. ಹೀಗಾಗಿ ಇಂತಹ ಸಸ್ಯಹಾರ ವರ್ಗದ ಸಂಸ್ಕೃತಿ ಕೆಲವು ದೇವದಾಸಿ ಮನೆಗಳಲ್ಲಿ ಕಂಡುಬಂದಿತು. ಆ ಮನೆಗಳಲ್ಲಿ ಶಾಖಾಹಾರ ನಿಂತಿತು. ದೇವದಾಸಿ ಮಕ್ಕಳು ಸಸ್ಯಹಾರಿಗಳಾಗಿ, ಮೇಲ್ವರ್ಗದ ಆಚಾರವಿಚಾರಗಳಲ್ಲಿ ಬೆಳೆದರು. ದೊರೆಗಳು ದೊರೆಗಳ ಮನೆತನದೊಡನೆ ಮಾತ್ರ ಸಹಪಂಕ್ತಿ ಭೋಜನ ಮಾಡುತ್ತಿದ್ದರು.[೧೨೭] ದೊರೆಗಳು ಸಾಮಾನ್ಯ ಬೇಡರ ಮನೆಗಳಿಗೆ ಭೋಜನ ಇತ್ಯಾದಿ ಕಾರ್ಯಕ್ರಮಗಳಿಗೆ ಬರುತ್ತಿರಲಿಲ್ಲ. ಆದ್ದರಿಂದ ವಿಶೇಷ ಹಬ್ಬಹರಿದಿನಗಳಲ್ಲಿ ಇವರು ಅಕ್ಕಿಪಡಿ(ಬೆಲ್ಲ, ಬೆಳೆ, ಅಕ್ಕಿ, ಕೊಬ್ಬರಿ ಇತ್ಯಾದಿ) ಎಂದು ಸಿಹಿ ಊಟಕ್ಕೆ ಬೇಕಾಗುವ ಎಲ್ಲಾ ಸಾಮಾನುಗಳನ್ನು ತೆಗೆದುಕೊಂಡು ದೊರೆಗಳಿದ್ದಲ್ಲಿಗೆ ಹೋಗಿ ಕೊಟ್ಟುಬರುತ್ತಿದ್ದರು. ಈಗಲೂ ಈ ಅಕ್ಕಿಪಡಿ ಕೊಡುವ ಪದ್ಧತಿ ಕೆಲವು ಕಡೆ ಆಚರಣೆಯಲ್ಲಿದೆ. ಸುರಪುರ, ಗುಡಗುಂಟ, ಗುಂತಗೋಳ, ಕನಕಗಿರಿ ಸಂಸ್ಥಾನಿಕರು ಹಬ್ಬಹರಿದಿನಗಳಲ್ಲಿ, ಮದುವೆ ಸಂದರ್ಭದಲ್ಲಿ ಮನೆಯಲ್ಲಿದ್ದ ಈಚಲು ಮರದಿಂದ ಮಾಡಿದ ವಸ್ತುಗಳನ್ನು ದೂರ ಹಾಕಿ ಬರುವ ಸಂಪ್ರದಾಯವನ್ನು ಉಳಿಸಿಕೊಂಡು ಬಂದಿರುವರು. ಜರಿಮಲೆ ಮತ್ತು ಗುಡೇಕೋಟೆ ಸಂಸ್ಥಾನಿಕರ ಮನೆತನಗಳಲ್ಲಿ ಮದ್ಯಪಾನ ಮತ್ತು ಕೋಳಿಮಾಂಸಗಳಿಗೆ ಸಂಪೂರ್ಣ ನಿಷೇಧವಿದೆ.

ಸಮಾಜದ ಮೇಲ್ವರ್ಗದಲ್ಲಿ ದೇವದಾಸಿ ಪದ್ಧತಿ ಆಚರಣೆಯಲ್ಲಿರಲಿಲ್ಲ. ಆದರೆ ಈ ಪದ್ಧತಿಗೆ ದೊರೆಗಳು ನೇರವಾಗಿ ಅಲ್ಲದಿದ್ದರೆ ಬಾಹ್ಯವಾಗಿಯಾದರೂ ಅವಕಾಶ ನೀಡಿದ್ದರೆಂದು ತಿಳಿದುಬರುವುದು.

ಇಂದಿಗೂ ದೇವದಾಸಿ ಪದ್ಧತಿಯನ್ನು ಬೇಡ ಜನಾಂಗದಲ್ಲಿ ಕಾಣಬಹುದು. ಕ್ರಿ.ಶ.೧೫೬೫ರ ರಕ್ಕಸ-ತಂಗಡಿ ಕದನದಲ್ಲಿ ಮರಣ ಹೊಂದಿದ ಸೈನಿಕರ ಕುಟುಂಬಗಳು ಜೀವನ ನಿರ್ವಹಣೆಗಾಗಿ ದೇವದಾಸಿಗಳಾದರು.[೧೨೮] ಇಂತಹ ಕುಟುಂಬಗಳು ಹೆಚ್ಚಾಗಿ ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲ್ಲೂಕಗಳಲ್ಲಿದ್ದಾರೆಂದು ಹೇಳಲಾಗುತ್ತದೆ. ದೇವದಾಸಿಯರಿಗೆ ಮೊದಲು ಒಳ್ಳೆಯ ಗೌರವ ಸ್ಥಾನಮಾನಗಳಿದ್ದವು. ಸಮಾಜದಲ್ಲಿ ಅವರು ಯಾವುದೇ ಸಂಕೋಚವಿಲ್ಲದೆ ಬದುಕುತ್ತಿದ್ದರು. ದೇವಸ್ಥಾನಕ್ಕೆ ಸೀಮಿತವಾಗಿದ್ದ ಈ ಪದ್ಧತಿ ಕ್ರಮೇಣ ಅರಮನೆಯ ಒಪ್ಪಿಗೆಯನ್ನು ಪಡೆಯಿತು. ರಾಜನಿಗೂ ಇದು ಇಷ್ಟವಾಗಿತ್ತು, ಅದಕ್ಕೆ ಬೆಂಬಲ ನೀಡಿದರು. ನಂತರ ದೇವದಾಸಿ ಪದ್ಧತಿ ಅರ್ಥಕಳೆದುಕೊಂಡು 'ಸೂಳೆಗಾರಿಕೆ' ಎಂದು ಹೆಸರಾಯಿತು. ವಿಜಯನಗರ ಕಾಲದಲ್ಲಿ ಸೂಳೆಗಾರಿಕೆ ರಾಜಮನ್ನಣೆ ಪಡೆದುಕೊಂಡು ಪ್ರಸಿದ್ಧಿಯನ್ನು ಹೊಂದಿತ್ತು. ವ್ಯಕ್ತಿಸೂಳೆ, ದೇವಸೂಳೆ, ಸಮಾಜಸೂಳೆ ಎಂದು ಕರೆಯುತ್ತಿದ್ದದು ಕ್ರಮೇಣ ವೃತ್ತಿ ಸೂಳೆಯಾಗಿ ಒಂದೇ ಹೆಸರಿನಲ್ಲಿ ಕರೆಸಿಕೊಳ್ಳುವುದನ್ನು ಕಾಣಬಹುದು. ಕೆಳಜಾತಿಗಳಲ್ಲಿ ಬಹುತೇಕವಾಗಿ ಈ ಪದ್ಧತಿ ಇದೆ. ಬೇಡ ಜನಾಂಗದಲ್ಲಿ ಹನುಮಂತದೇವರ ಗುಡಿಯಲ್ಲಿ ದೇವದಾಸಿಗೆ ಮುದ್ರೆ ಹಾಕುವ ಮೂಲಕ ಈ ಪದ್ಧತಿಯನ್ನು ಅನುಸರಿಸುತ್ತಾರೆ. ಸಂಸ್ಕೃತದ ದಾಸ, ದಾಸಿ ಎಂಬ ಪದಕ್ಕೆ ಸಮನಾದ ಕನ್ನಡ ಪದ ತೊತ್ತು. ಯುದ್ಧ ಕಾಲಕ್ಕೆ ಸೋತು ಸೆರೆಸಿಕ್ಕವರ ಮಡದಿ ಮಕ್ಕಳನ್ನು ಗೆದ್ದ ದೊರೆ ತನ್ನ ತೊತ್ತಿನಂತೆಯೂ ಉಪಯೋಗಿಸಿಕೊಳ್ಳುತ್ತಿದ್ದ. ಆರ್ಥಿಕ ಕೊರತೆಗಾಗಿ ತಮ್ಮ ಮಕ್ಕಳನ್ನು ಶ್ರೀಮಂತರಿಗೆ ಮಾರುವುದರ ಮೂಲಕ ತಮ್ಮನ್ನು ತಾವೇ ಮಾರಿಕೊಳ್ಳುವುದರ ಮೂಲಕ ಈ ಪದ್ಧತಿ ಹೆಚ್ಚು ಬಳಕೆಗೆ ಬಂದಿರುವ ಸಾಧ್ಯತೆ ಇದೆ.[೧೨೯] ದೇವದಾಸಿಯರು ರಾಜಕೀಯದಲ್ಲಿ, ಆಡಳಿತದಲ್ಲಿ, ಯುದ್ಧದಲ್ಲಿ ಮುಖ್ಯಪಾತ್ರವಹಿಸುತ್ತಿದ್ದರು. ವೇಶ್ಯೆಯರ ಬಗ್ಗೆ ವಿದೇಶಿ ಪ್ರವಾಸಿಗರು ತಮ್ಮ ಪ್ರವಾಸ ಕಥನಗಳಲ್ಲಿ ವಿವರವಾಗಿ ತಿಳಿಸಿದ್ದಾರೆ.[೧೩೦] ದೇವದಾಸಿಯರು ವಿಜಯನಗರದಲ್ಲಿ ಗುಪ್ತ ರಾಜಕೀಯದಲ್ಲಿ ಅಧಿಕಾರಿಗಳಿಗೆ ಸಹಾಯಕರಾಗಿದ್ದರು.[೧೩೧] ನಾಯಕನಹಟ್ಟಿ ಕಾಟೇಮಲ್ಲನಾಯಕನನ್ನು ಸೆರೆಹಿಡಿದು ತರಲು ೫೦೦ ಸೂಳೆಯರನ್ನು ಕಳುಹಿಸಿದ ಸಂಗತಿ ಮತ್ತು ರಾಯಚೂರು ದಂಡಯಾತ್ರೆಯಲ್ಲಿ ಅನೇಕ ದೇವದಾಸಿಯರು ಭಾಗವಹಿಸಿದ್ದರು ಎಂಬುದನ್ನು ಗಮನಿಸಿದರೆ, ದೇವದಾಸಿ ಸಮಾಜವು ರಾಜಮನ್ನಣೆಯೊಂದಿಗೆ ಬದುಕುತ್ತಿತ್ತೆಂದು ಹೇಳಬಹುದು. ಗಂಡು ಸಂತಾನವಿಲ್ಲದವರು ತಮ್ಮ ಆಸ್ತಿ ಮತ್ತು ಕುಟುಂಬ ಜವಾಬ್ದಾರಿ ನಿರ್ವಹಣೆಗಾಗಿ ಮನೆಯಲ್ಲಿಯೇ ಮಗಳು ಇರಲಿ ಎಂದು ಮನೆಯಲ್ಲಿ ಬಿಡುವ(ವೇಶ್ಯೆ) ಪದ್ಧತಿ ಇದೆ. ಮೊದಮೊದಲು ಏಕವ್ಯಕ್ತಿಯನ್ನು ಆಯ್ಕೆಮಾಡಿಕೊಂಡು, ಜೀವನಪರ್ಯಂತ ಅವನೊಡನೆ ಜೀವಿಸುವ ಸೂಳೆಯರಿದ್ದರು. ಆದರೆ ಕಾಲಕ್ರಮೇಣ ದುಡಿಮೆಯ ಸ್ವರೂಪ ಪಡೆದುಕೊಂಡ ಸೂಳೆಗಾರಿಕೆ ತನ್ನ ಮಹತ್ವವನ್ನು ಕಳೆದುಕೊಂಡಿತು.

ಪಾಳೆಯಗಾರರು, ಅವನ ಅರಮನೆ ವರ್ಗದವರು ಅಲಂಕಾರಪ್ರಿಯರಾಗಿದ್ದರು. ವೇಷಭೂಷಣಗಳು ಹಿಂದಿನ ರಾಜಾಮಹಾರಾಜರಂತೆ ಇದ್ದವು. ಅರಸುವರ್ಗದ ಉಡುಗೆ-ತೊಡುಗೆ ಇತರ ವರ್ಗಗಳ ಉಡುಗೆ-ತೊಡುಗೆಗಳಿಗಿಂತ ಭಿನ್ನವಾಗಿತ್ತು. ದೊರೆಗಳು ಬೆಲೆಬಾಳುವ ರೇಷ್ಮೆ ಬಟ್ಟೆಯ ಧೋತರ, ನಿಲುವಂಗಿ, ಜರತಾರಿ ಮುಂಡಾಸು ಅಥವಾ ರುಮಾಲು, ನಡುಪಟ್ಟಿ, ಮುತ್ತಿನಸರಗಳು, ಕರ್ಣಭೂಷಣ, ಶಿರಭೂಷಣ, ಕಂಕಣ, ಉಂಗುರ, ಜೊತೆಗೆ ಕಠಾರಿ, ಕೈಚೂರಿ, ಹರಿಗತ್ತಿ, ಷಡ್ಗತ್ತಿ, ವಾಲುಗತ್ತಿ ಮುಂತಾದ ಆಯುಧಗಳು ಅವರ ಉಡುಗೆ-ತೊಡುಗೆಗಳಲ್ಲಿರುತ್ತಿದ್ದವು. ರಾಣಿಯರು(ನಾಗತಿಯರು) ಚಿನ್ನ, ಬೆಳ್ಳಿ ಕಸೂತಿ ಕೆಲಸಗಳಿಂದ ಕೂಡಿದ್ದ ಜರತಾರಿ ಸೀರೆ, ನಾನಾ ಬಗೆಯ ವಜ್ರ-ವೈಡೂರ್ಯ, ಮುತ್ತು-ರತ್ನಗಳ ವಿವಿಧ ಆಕಾರಗಳ ಹೇಮಮಯ ಮಾಲೆಗಳು, ಕಂಠಹಾರಗಳು, ಕರ್ಣಾಭರಣಗಳು, ಮೂಗುತಿ, ದೋತಿ, ಕೇಶಾಭರಣಗಳು, ಬಳೆಗಳು, ಕಡಗ, ಉಂಗುರಗಳು, ತೋಳಬಂದಿ, ಒಡ್ಯಾಣ, ಕಾಲಗೆಜ್ಜೆ ಮುಂತಾದ ಉಡುಗೆ ಆಭರಣಗಳನ್ನು ಅಲಂಕರಿಸಿಕೊಳ್ಳುತ್ತಿದ್ದರು. ಸಾಮಾನ್ಯರು ಲಂಗೋಟಿ, ಚಲ್ಲಣ ಧರಿಸುತ್ತಿದ್ದರು. ಜೊತೆಗೆ ಕರಿಯ ಕಂಬಳಿ ಇರುತ್ತಿತ್ತು. ರೇಷ್ಮೆಬಟ್ಟೆ ಮತ್ತು ಬೆಲೆ ಬಾಳುವ ಆಭರಣಗಳನ್ನು ಪಾಳೆಯಗಾರರು, ರಾಣಿಯರು ಧರಿಸುತ್ತಿದ್ದರು. ಸ್ತ್ರೀ-ಪುರುಷರಿಬ್ಬರೂ ಅಲಂಕಾರ ಪ್ರಿಯರಾಗಿದ್ದರು. ಹಿಂದೂ ಮತ್ತು ಮುಸ್ಲಿಂ ಶೈಲಿಯ ಉಡುಗೆ-ತೊಡುಗೆಯನ್ನು ಬೇಡ ದೊರೆಗಳು ಧರಿಸುತ್ತಿದ್ದರು. ಚಿತ್ರದುರ್ಗದ ಭರಮಪ್ಪನಾಯಕನು ಖಾಸನಾಗತಿಯರಿಗೆ, ಕುಮಾರಿಯರಿಗೆ, ಕುಮಾರರಿಗೆ, ಕುದುರೆಗಳಿಗೂ, ಬೇಕಾದ ಆಭರಣಗಳನ್ನು ಮಾಡಿಸುವುದಕ್ಕಾಗಿ ಮೇಲುದುರ್ಗದ ಅರಮನೆಯಲ್ಲಿ ಒಂದು ಚೌಕಿ ಕಟ್ಟಿಸಿ ಅದರಲ್ಲಿ ಅಕ್ಕಸಾಲಿಗರನ್ನು ಇರಿಸಿದನು. ಈ ಚೌಕಿಗೆ 'ಚಿನ್ನದ ಮನೆ' ಎಂದು ಕರೆಯಲಾಯಿತು. ಇದಕ್ಕಾಗಿ ಸಾಕಷ್ಟು ಹಣ ಖರ್ಚು ಮಾಡಿದನು.[೧೩೨] ಬೇಡ ದೊರೆಗಳ ಉಡುಗೆ-ತೊಡಗೆ ಬಗ್ಗೆ ಕೆಲವು ಲೇಖಕರು ವಿಕೃತವಾಗಿ ಚಿತ್ರಿಸಿದ್ದಾರೆ. ಅಹೋಬಲನ "ವಿರೂಪಾಕ್ಷ ವಸಂತೋತ್ಸವ" ಚಂಪೂ ಕೃತಿಯಲ್ಲಿ ಚಿತ್ರದುರ್ಗ ನಾಯಕನ ಉಡುಗೆ-ತೊಡುಗೆಯನ್ನು, ಸಾಮಾನ್ಯ ಬೇಡನ ಉಡುಗೆ-ತೊಡುಗೆಯಂತೆ ವರ್ಣನೆ ಮಾಡಿರುವುದು ಕಂಡುಬರುತ್ತದೆ. ಈ ಬಗ್ಗೆ ಪ್ರೊ.ಲಕ್ಷ್ಮಣ್ ತೆಲಗಾವಿಯವರು ಪ್ರತಿಕ್ರಿಯಿಸುತ್ತಾ, ಮಧ್ಯಕಾಲೀನ ಶ್ರೇಣೀಕೃತ ಸಮಾಜ ಮತ್ತು ಆ ನೆಲೆಯ ಅತ್ಯಂತ ಹೀನಾಯವಾದ ಜಾತಿವ್ಯವಸ್ಥೆಯ ಪ್ರಭಾವ ಈ ಗ್ರಂಥಕರ್ತೃನ(ಅಹೋಬಲಪಂಡಿತನ) ಮೇಲೂ ಆಗಿದ್ದರಲ್ಲಿ ಆಶ್ಚರ್ಯವೇನು ಇಲ್ಲ ಎಂದಿದ್ದಾರೆ.[೧೩೩] ಬ್ರಾಹ್ಮಣರಿಗೆ ಒಳ್ಳೆಯ ಸ್ಥಾನಮಾನಗಳನ್ನು ನೀಡಿ, ತಮ್ಮ ಬಳಿ ಪುರೋಹಿತರನ್ನಾಗಿ, ರಾಜಗುರುಗಳನ್ನಾಗಿ, ಮುಜಂದಾರರನ್ನಾಗಿ ಮಾಡಿಕೊಂಡ ಬೇಡ ದೊರೆಗಳ ಬಗ್ಗೆ ಅವರು ಒಳ್ಳೆಯ ಭಾವನೆಗಳು ಕಂಡುಬರಲಿಲ್ಲವೆಂದು ಕಾಣುತ್ತದೆ. ಏಕೆಂದರೆ, ಬ್ರಾಹ್ಮಣರು ಬೇಡರನ್ನು ಅತೀ ನೀಚ ಕುಲಗಳಲ್ಲಿ ಒಂದು ಎಂದು ಎಣಿಸುತ್ತಿದ್ದರು.[೧೩೪] ಬಿ.ಎಲ್.ರೈಸ್[೧೩೫] ಮತ್ತು ಬುಕಾನರು ಮಾಡಿದ ಎಡಗೈ ಬಲಗೈ ಗುಂಪಿನ ಜಾತಿಗಳಲ್ಲಿ ಬೇಡರನ್ನು ಎಡಗೈ ಗುಂಪಿನಲ್ಲಿ ಗುರುತಿಸಿದ್ದಾರೆ.[೧೩೬]

ಸಹಗಮನ ಪದ್ಧತಿ ಬೇಡ ಸಮಾಜದಲ್ಲಿತ್ತು. ದೊರೆಗಳ ಮನೆತನದಲ್ಲಿ ಅಷ್ಟೇ ಅಲ್ಲದೆ ಜನಸಾಮಾನ್ಯ ಬೇಡರಲ್ಲೂ ಸತಿಸಹಗಮನ ಪದ್ಧತಿ ಇತ್ತೆಂದು ಕಂಡುಬರುವುದು. ಹಿರಿಯೂರು ತಾಲ್ಲೂಕಿನ ಜವನ ಗೊಂಡನಹಳ್ಳಿ ಹೋಬಳಿಯಲ್ಲಿ ಬರುವ ಗೌಡನಹಳ್ಳಿಯ ನಾಯಕರ ಹೆಣ್ಣೊಬ್ಬಳು ಕಾಳಗದಲ್ಲಿ ಮಡಿದ ತನ್ನ ಗಂಡನಿಗಾಗಿ ಕೊಂಡದಲ್ಲಿ ಹಾರಿದಳು. ಈಗ ಈ ಕೊಂಡವನ್ನು ವೀರತಿಮ್ಮವ್ವನ ಕೊಂಡವೆಂದು ಕರೆಯುತ್ತಾರೆ.[೧೩೭] ಗಾದ್ರಿಪಾಲನಾಯಕನ ಹೆಂಡತಿಯರಾದ ಕೆಂಚವ್ವ, ಕಾಮವ್ವರು ಗಂಜಿಕಟ್ಟೆ ಊರಗೌಡರಿಂದ ಮುತ್ತೈದೆಯರಾಗಿ ಸಹಗಮನ ಮಾಡಿದರು.[೧೩೮] ಮುಸ್ಲಿಂ ದಾಳಿಗಳ ಹಿನ್ನೆಲೆಯಲ್ಲಿ ಉತ್ತರ ಭಾರತದಲ್ಲಿ ಸಹಗಮನ ಘಟನೆಗಳು ಹೆಚ್ಚಾಗಿದ್ದವು. ಹಾಗಾಗಿ ಕರ್ನಾಟಕದಲ್ಲೂ ವಿಜಯನಗರೋತ್ತರ ಕಾಲದಲ್ಲಿ ಮುಸ್ಲಿಂ ದಾಳಿಗಳಿಂದ ಹಿಂದೂ ಸ್ತ್ರೀಯರ ಸಹಗಮನದ ಸಂಖ್ಯೆ ತುಂಬಾ ವರ್ಧಿಸಿತು.[೧೩೯] ವಿದೇಶಿ ಪ್ರವಾಸಿಗರು ವಿಜಯನಗರಕ್ಕೆ ಭೇಟಿ ನೀಡಿದಾಗ ಸಹಗಮನ ಬಗ್ಗೆ ಕೆಲವು ಮಾಹಿತಿಗಳನ್ನು ನೀಡಿರುವರು.[೧೪೦] ಮೊದಲಿನಿಂದಲೂ ಬೇಡ ಜನಾಂಗದಲ್ಲಿ ಸಹಗಮನವಿದ್ದುದನ್ನು ಶಾಸನಗಳು ಸಮರ್ಥಿಸುತ್ತವೆ. ಗಂಡನ ಸಾವಿನ ಸುದ್ದಿ ತಿಳಿದು ಸಹಗಮನ ಮಾಡುವವರಲ್ಲಿ ಬಹುತೇಕವಾಗಿ ಅರಸುಮನೆತನದವರೆ ಆಗಿದ್ದರು. ಮೊದಮೊದಲು ಒಬ್ಬರು ಅಥವಾ ಇಬ್ಬರು ಸಹಗಮನ ಮಾಡುವಂತಹ ಪದ್ಧತಿ ಇತ್ತು. ಆದರೆ ಈ ಕಾಲಕ್ಕೆ ಸಾಮೂಹಿಕವಾಯಿತು. ಸಹಗಮನ ಪದ್ಧತಿ ಒತ್ತಾಯಪೂರ್ವಕವಾಗಿ ಜರುಗುತ್ತಿರಲಿಲ್ಲ, ಅದನ್ನು ಅವರವರ ಇಚ್ಛೆಗೆ ಬಿಡಲಾಗಿತ್ತು. ಜೀವಂತವಾಗಿರಲು ಇಚ್ಛಿಸಿದವರ ಹೊರತು ಉಳಿದೆಲ್ಲಾ ಹೆಂಡತಿಯರು ಗಂಡ ಸತ್ತ ನಂತರ ಸಹಗಮನ ಮಾಡಿಬಿಡುತ್ತಿದ್ದರು.[೧೪೧] ಚಿತ್ರದುರ್ಗದ ಇತಿಹಾಸದಲ್ಲಿ ಇಂತಹ ಅನೇಕ ಉದಾಹರಣೆಗಳನ್ನು ಕಾಣಬಹುದು. ಓಬಣ್ಣನಾಯಕನು (ಮದಕರಿನಾಯಕ) ಸ್ವರ್ಗಸ್ಥನಾದ ಸುದ್ದಿ ಕೇಳಿ ೫ ಜನ ನಾಗತಿಯರು ಸಹಗಮನ ಮಾಡಿದರು. ಇಬ್ಬರು ನಾಗತಿಯರು ಉಳಿದುಕೊಂಡರು.[೧೪೨] ಕಸ್ತೂರಿ ರಂಗಪ್ಪನಾಯಕನು ಮರಣ ಹೊಂದಿದ ನಂತರ ೭ ಜನರು ಸಹಗಮನ ಮಾಡಿದರು. ಐದು ಜನರು ಹಾಗೇ ಉಳಿದುಕೊಂಡರು.[೧೪೩] ಇಮ್ಮಡಿ ಮದಕರಿನಾಯಕನ ಮರಣ ನಂತರ ಅವನ ಸಂಗಡ ೨೭ ಜನ ಹೆಂಡಂದಿರು ಸಹಗಮನ ಮಾಡಿದರು. ಹಾಗೂ ಮೂರು ಜನ ನಾಗತಿಯರು ಉಳಿದುಕೊಂಡರು.[೧೪೪] ಕೊನೆ ಮದಕರಿನಾಯಕನು ಶತ್ರುವಿನ ವಶವಾದ ಸುದ್ದಿ ಕೇಳಿ ರಾಣಿವಾಸದವರು ಮೇಲುದುರ್ಗದ ಹೊಂಡಗಳ ಮಡುವಿನಲ್ಲಿ ಧುಮುಕಿ ಆತ್ಮಾರ್ಪಣೆ ಮಾಡಿಕೊಂಡರು.[೧೪೫] ಈ ಘಟನೆಗಳಿಂದ ದೊರೆಗಳು ಸತ್ತ ನಂತರ ರಾಣಿಯರು ಉಳಿದುಕೊಳ್ಳುವ ಸ್ವಾತಂತ್ರ್ಯವಿದ್ದರೂ ಅನೇಕರು ತಮ್ಮ ಗಂಡನ ಜೊತೆಯಲ್ಲಿಯೇ ಸಾಯಲು ಇಚ್ಛಿಸುತ್ತಿದ್ದರೆಂದು ಕಂಡುಬರುತ್ತದೆ. ಆಗಿನ ರಾಜಕೀಯ ದಾಳಿಗಳ ಸಂದರ್ಭದಲ್ಲಿ ರಾಣಿಯರು ಗೌರವಯುತವಾಗಿ ಬದುಕುವುದು ಕಷ್ಟವಿತ್ತು. ರಾಜಾವೀರ ಮದಕರಿನಾಯಕನ

ನಂತರದಲ್ಲಿ ಈ ತರಹ ಸಹಗಮನ ಪದ್ಧತಿ ಆಚರಣೆಯಲ್ಲಿರಲಿಲ್ಲ. ಅಮಾನವೀಯ ಮತ್ತು ಅತ್ಯಂತ ಹಿಂಸಾತ್ಮಕವಾದ ಈ ಪದ್ಧತಿಯು ಕಾಲಕ್ರಮೇಣ ಮರೆಯಾಯಿತು.

ಬೇಡರ ಮೂಲವೃತ್ತಿ ಬೇಟೆ. ಬೇಟೆ ಮತ್ತು ಬೇಡನ ಅನ್ಯೋನ್ಯ ಸಂಬಂಧ ಇಂದಿಗೂ ಉಳಿದುಕೊಂಡು ಬಂದಿದೆ. ಬೇಡರಿಗೆ ಬೇಟೆಯು ಮೊದಲು ಜೀವನಾಧಾರಿತ ವೃತ್ತಿಯಾಗಿತ್ತು. ನಂತರ ಹವ್ಯಾಸವಾಯಿತು. ಬೇಟೆಯಲ್ಲಿ ತೋರುತ್ತಿದ್ದ ಸಾಹಸ, ಧೈರ್ಯಗಳಿಂದ ಬೇಡರು ಸೈನಿಕರಾಗಿ ಸೇರುವಂತಾದರು. ಬೇಟೆ ರಾಜ ಮಹಾರಾಜರ ಅಚ್ಚುಮೆಚ್ಚಿನ ಹವ್ಯಾಸವಾಗಿತ್ತು. ಆಗ ಅವರಿಗೆ ಬೇಡರು ಬೇಕಾಗಿತ್ತು. ದುರ್ಗಮವಾದ ಕಾಡು, ಕಾಡುಮೃಗಗಳ ಚಲನವಲನ ಬಗ್ಗೆ ತಿಳಿದಿದ್ದವರು ಬೇಡರೇ ಆಗಿದ್ದರು. ಬೇಡರು ಹಿಂದೆ ಬೇಟೆಯಲ್ಲಿ ಬಳಸುತ್ತಿದ್ದ ಅಸ್ತ್ರಗಳನ್ನು ಸೈನಿಕರಾಗಿ ಸೇರಿದ ಮೇಲೂ ಬಳಸಿದರು. ಇಂದು ಯಾವುದೇ ಬೇಡನ ಮನೆಯೊಳಗೆ ಹೋದರೆ ಭರ್ಚಿ, ಗಂಡುಗೊಡಲಿ, ಕೊಡಲಿ, ಬಾಕು ಮುಂತಾದವುಗಳಲ್ಲಿ ಒಂದಾದರೂ ಸಿಗುತ್ತವೆ. ದಸರಾ ಹಬ್ಬದಲ್ಲಿ ಆಯುಧ ಪೂಜೆ ಮಾಡುವಾಗ ತಮ್ಮ ಮನೆಯಲ್ಲಿರುವ ಭರ್ಚಿಗಳನ್ನು ಊರಿನ ಚಾವಡಿಯಲ್ಲಿಟ್ಟು ಪ್ರಾಣಿಯನ್ನು ಅವುಗಳಿಗೆ ಬಲಿ ಕೊಡುವ ಪದ್ಧತಿ ಇದೆ. ಮರುದಿನ ಬೇಟೆಯಾಡಲು ಇಡೀ ಊರಿನ ಯಜಮಾನ ಮತ್ತು ಯುವಕರೊಡಗೂಡಿ ಕಾಡಿಗೆ ಹೋಗುತ್ತಿದ್ದರು. ಇತ್ತೀಚೆಗೆ ಸಾಯಂಕಾಲ, ರಾತ್ರಿ ಬ್ಯಾಟರಿಗಳ ಸಹಾಯದಿಂದ ಕಾಡುಪ್ರಾಣಿಗಳನ್ನು ಬೇಟೆಯಾಡುವುದು ಬೇಡರಿಗೆ ಒಂದು ಹವ್ಯಾಸವಾಗಿದೆ. ದೊರೆಗಳ ಆಳ್ವಿಕೆ ಕಾಲದಲ್ಲಿ ಬೇಟೆಯಾಡುವುದು ಮೂರು ದಿನಗಳ ಕಾಲ ನಡೆಯುತ್ತಿತ್ತು. ಮೊದಲ ದಿನ ಬೇಟೆಯಾಡುವುದನ್ನು 'ದೊರೆಗಳ ಬೇಟೆ' ಎಂದು ಕರೆಯುವರು. ಅಂದರೆ ಆ ದಿನ ಬೇಟೆಯಾಡಿದ ಪ್ರಾಣಿಗಳನ್ನು ದೊರೆಗಳಿಗೆ ಹಾಗೂ ಅವರ ಕುಟುಂಬ ವರ್ಗಕ್ಕೆ ಕೊಡಬೇಕಾಗಿತ್ತು. ಎರಡನೇ ದಿನದ ಬೇಟೆಯನ್ನು 'ದೈವದ ಬೇಟೆಯೆಂದು' ಕರೆಯಲಾಗುತ್ತಿತ್ತು. ಈ ದಿನ ಬೇಟೆಯಾಡಿದ ಪ್ರಾಣಿಗಳನ್ನು ದೈವದವರಿಗೆ(ಜನಾಂಗದ ಪ್ರಮುಖರು) ಕೊಡಬೇಕಾಗಿತ್ತು. ಅವುಗಳನ್ನು ತಮ್ಮಲ್ಲಿ ಹಂಚಿಕೊಳ್ಳುತ್ತಿದ್ದರು. ಮೂರನೇ ದಿನ ಬೇಟೆಯನ್ನು 'ಸರಕಾರಿ ಬೇಟೆ' ಎಂದು ಹೇಳುವರು. ಈ ಬೇಟೆಯ ದಿನದಂದು ಯಾರು ಪ್ರಾಣಿಗಳನ್ನು ಕೊಲ್ಲುತ್ತಾರೋ ಅವರೆ ಆ ಪ್ರಾಣಿಗಳನ್ನು ಕೊಂಡೊಯ್ಯಬಹುದಿತ್ತು. ದಸರಾ, ಯುಗಾದಿ ಹಬ್ಬಗಳಲ್ಲಿ ಕಡ್ಡಾಯವಾಗಿ ಬೇಟೆಯಾಡಲು ಬೇಡರು ಕಾಡಿಗೆ ಹೋಗುತ್ತಾರೆ. ಗುರಿಕಾರ, ಗುಮೇದಾರ, ಕುಲ್ಕರ್ಣಿ, ಗೌಡ್ರು, ತಳವಾರ ಮತ್ತು ದೊರೆ ಸೇರಿಕೊಂಡು ಬೇಟೆಗೆ ಹೊರಟವರ ಜೊತೆ ಊರು ದಾಟುವವರೆಗೆ ಹೋಗಿಬರುತ್ತಿದ್ದರು. ಕೆಲವೊಮ್ಮೆ ದೊರೆಗಳು ಕಾಡಿನವರೆಗೂ ಬೇಟೆಯಾಡಲು ಹೋಗುತ್ತಿದ್ದುದುಂಟು. ಅತ್ಯಂತ ಸಂಭ್ರಮದಿಂದ ಇಡೀ ರಾಜಧಾನಿಯ ಜನತೆ ಬೇಟೆಗಾರರನ್ನು ಬೀಳ್ಕೊಡುತ್ತಿತ್ತು ಮತ್ತು ಅಷ್ಟೇ ಉತ್ಸಾಹದಿಂದ ಸಂಜೆ ಸ್ವಾಗತಿಸುತ್ತಿತ್ತು. ಬೇಟೆಯಲ್ಲಿ ಪ್ರಾಣಿಗಳನ್ನು ಕೊಂದ ವೀರರಿಗೆ ಊರಿನ ಸುಮಂಗಲಿಯರು ಆರತಿ

ಎತ್ತುವ ಮೂಲಕ ಬೇಟೆಗಾರರ ಶೌರ್ಯವನ್ನು ಕೊಂಡಾಡುತ್ತಿದ್ದರು. ದೊರೆಯು ಬಹುಮಾನವನ್ನು ಘೋಷಿಸುವ ಮೂಲಕ ಅವರನ್ನು ಗೌರವಿಸುತ್ತಿದ್ದನು. ಬೇಟೆಯ ತಯಾರಿ ಮಾಡಿದ ಸಕಲ ಜನರಿಗೆ, ಆರತಿ ಮಾಡಿದವರಿಗೆ, ಮುಂತಾದವರಿಗೆ ದೊರೆಯು ಗುರಿಕಾರನ ಮೂಲಕ ಕಾಣಿಕೆಯನ್ನು ನೀಡುತ್ತಿದ್ದರು. ಇಂದು ಕೆಲವು ಕಡೆ ಬೇಟೆಯಾಡುವುದು ಸಂಪೂರ್ಣ ನಿಂತಿದೆ. ಇನ್ನು ಕೆಲವು ಕಡೆ 'ಹಿಂದಿನಿಂದ ಹಿರಿಯರು ಮಾಡಿಕೊಂಡು ಬಂದ ಸಂಪ್ರದಾಯ ನಾವು ಬಿಡಬಾರದು' ಎಂಬ ಭಾವನೆಯಿದೆ. ಹುಮ್ಮಸ್ಸುಳ್ಳವರು ಯುಗಾದಿ ಮತ್ತು ದಸರಾ ಹಬ್ಬಗಳ ಸಂದರ್ಭಗಳಲ್ಲಿ ಮಾತ್ರ ಬೇಟೆಗೆ ಹೋಗಿ ಬರುತ್ತಾರೆ.

ಅನೇಕ ಮನರಂಜನಾ ಚಟುವಟಿಕೆಗಳಲ್ಲಿ ಬೇಡರು ಭಾಗವಹಿಸುತ್ತಿದ್ದರು. ಹುಂಜ ಕಾಳಗ, ಟಗರು ಕಾಳಗ, ಕುಸ್ತಿ, ಬಯಲುನಾಟಕ, ಮೋಡಿ, ಎತ್ತಿನಗಾಡಿ ಓಟ, ಜೂಜು ಮುಂತಾದ ಚಟುವಟಿಕೆಗಳು ಹಬ್ಬ-ಹರಿದಿನದಲ್ಲಿ ಜನರಿಗೆ ಮನರಂಜನೆಯನ್ನು ನೀಡುತ್ತಿದ್ದವು. ಬೇಡರು ಸಾಹಸ ಕ್ರೀಡೆಗಳಲ್ಲಿ, ಸಾಹಸ ಸ್ಪರ್ಧೆಯಲ್ಲಿ ಭಾಗವಹಿಸುವಲ್ಲಿ ತುಂಬಾ ಉತ್ಸಾಹ ಶಾಲಿಗಳಾಗಿದ್ದರು. ಬೇಡ ಪಾಳೆಯಗಾರರು ಅಧಿಕಾರ ನಡೆಸಿದ ಪ್ರದೇಶದಲ್ಲಿ ಗರಡಿ ಮನೆಗಳನ್ನು ಇಂದಿಗೂ ಕಾಣಬಹುದು. ಗರಡಿ ಮನೆಗಳು ಆಗೀನ ಯುದ್ಧ ತಯಾರಿ ಕೇಂದ್ರಗಳಾಗಿದ್ದವು. ಸೈನಿಕರನ್ನು ದೈಹಿಕವಾಗಿ ಸದೃಢರನ್ನಾಗಿ ಮಾಡುವಲ್ಲಿ ಗರಡಿ ಮನೆಗಳು ಮಹತ್ವಪಡೆದಿದ್ದವು. ಕೆಲವು ಆದಿವಾಸಿ ಸ್ಥಿತಿಯಲ್ಲಿದ್ದ ಬೇಡರು ಕರಡಿ, ಕೋತಿ ಮತ್ತು ಹೋರಿಗಳಿಗೆ ತರಬೇತಿ ಕೊಟ್ಟು ಅವುಗಳಿಂದ ಜನರನ್ನು ರಂಜಿಸಿ ತಮ್ಮ ಹೊಟ್ಟೆ ಹೊರೆದುಕೊಳ್ಳುತ್ತಿದ್ದರು. ಇವುಗಳ ಜೊತೆಗೆ ಮೇಲ್ವರ್ಗಗಳು ರಥಸ್ಪರ್ಧೆ, ಚದುರಂಗ, ನೃತ್ಯ, ಗಾಯನ, ಬಯಲಾಟ, ಸೈನ್ಯ ಕವಾಯತು, ಬೇಟೆ, ವರ್ಣಚಿತ್ರಕಲೆ, ಕಾವ್ಯರಚನೆ ಮುಂತಾದ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದ ಬೇಡ ದೊರೆಗಳು ಕುಸ್ತಿಯ ಕಲೆಯಲ್ಲಿ ಪ್ರವೀಣರಾಗಿದ್ದರು.[೧೪೬] ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಸಾಕಷ್ಟು ಗರಡಿ ಮನೆಗಳಿವೆ. ಕುಸ್ತಿ ಕಲೆಯು ವಿಜಯನಗರ ಅರಸರು ಬೆಳೆಸಿದ್ದ ಅತ್ಯಂತ ಸಾಹಸ ಕ್ರೀಡೆಗಳಲ್ಲಿ ಒಂದಾಗಿದೆ.

"ಜಗತ್ತಿನಲ್ಲಿ ಬೇಡರಷ್ಟು ಶೂರರು ಸಿಗಬಹುದು, ಆದರೆ ಬೇಡರಿಗಿಂತ ಶೂರರು ದೊರೆಯಲಾರರು" ಎಂದು ವಿಲಿಯಂ ಸ್ಮಿತ್ ಅಭಿಪ್ರಾಯಪಟ್ಟಿದ್ದಾರೆ. ಅಧಿಕಾರ ಕಳೆದುಕೊಂಡ ಬೇಡ ಪಾಳೆಯಗಾರರನ್ನು ಬ್ರಿಟೀಷ್ ಸಶಸ್ತ್ರಾ ನಿಷೇಧ ಶಾಸನಗಳು ಬಗ್ಗುಬಡಿದವು. ಹಲ್ಲುಕಿತ್ತ ಹಾವಿನ ಸ್ಥಿತಿ ಬೇಡರದಾಯಿತು. ಬ್ರಿಟೀಷರ ವಿರುದ್ಧ ಶಸ್ತ್ರಸಜ್ಜಿತರಾಗಿ ಹೋರಾಟಕ್ಕಿಳಿದವರಲ್ಲಿ ಬೇಡರು ಮೊದಲಿಗರಾಗಿದ್ದರು. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಬೇಡದೊರೆಗಳ ಅಧಿಕಾರವನ್ನು ಕಿತ್ತುಕೊಂಡರು; ಆದರೆ ಬ್ರಿಟೀಷರು ಬೇಡರ ಅಧಿಕಾರದ ಜೊತೆಗೆ ಅವರಲ್ಲಿದ್ದಂತಹ ಧೈರ್ಯ-ಸಾಹಸದಂತಹ ಮೂಲಗುಣಗಳನ್ನೂ ಕಿತ್ತು ಹಾಕದರು. ಇಂದಿಗೂ ಬೇಡರು, ಬೇಡಜನಾಂಗದ ದೊರೆಗಳು ತಮ್ಮ ಮನೆಯಲ್ಲಿರುವ ಭರ್ಚಿ, ಬಾಣ, ಖಡ್ಗ, ಗಂಡುಗೊಡಲಿ, ಚಾಕು, ಬಂದೂಕು ಮುಂತಾದ ಆಯುಧಗಳನ್ನು ಮನೆಯಿಂದ ಹೊರತರಲೂ

ಹೆದರುತ್ತಾರೆ. ಸರ್ಕಾರದವರು ಸಹ ಬೇಡರ ಅಸ್ತ್ರಗಳನ್ನು ಕಿತ್ತುಕೊಂಡರು. ಇಂದಿಗೂ ಬೇಡರಲ್ಲಿರುವ ಬಂದೂಕುಗಳನ್ನು ಕೆಲವು ವಿಶೇಷ ಹಬ್ಬ ಮತ್ತಿತರ ಸಂದರ್ಭಗಳಲ್ಲಿ ಪೋಲೀಸ್ ಕಛೇರಿಗೆ ಒಪ್ಪಿಸಿ ಬರಬೇಕು. ಬೇಟೆಯಾಡುವುದನ್ನು ಬೇಡರು ಕೈಬಿಡಲಿಕ್ಕೆ ಕೆಲವು ಆರಣ್ಯ ಕಾಯ್ದೆಗಳು ಸಹ ಕಾರಣವಾದವು. ಆರಂಭದಲ್ಲಿ ಗುಡ್ಡಗಾಡು ಜನರನ್ನು ನೋಡಿ ಬ್ರಿಟೀಷರು ಹೆದರಿದರು. ಬ್ರಿಟೀಷರನ್ನು ಗುಡ್ಡಗಾಡು ಜನರು ತಮ್ಮ ಶಸ್ತ್ರಗಳ ಮೂಲಕ ಹೆದರಿಸಿದರು ಮತ್ತು ಬ್ರಿಟೀಷರ ವಿರುದ್ಧ ಬಂಡಾಯವೆದ್ದರು. ಹಾಗಾಗಿ ಬ್ರಿಟಿಷರು ಈ ಗುಡ್ಡಗಾಡು ಜನರಲ್ಲಿದ್ದ ಶಸ್ತ್ರಾಸ್ತ್ರಗಳನ್ನು ಕಿತ್ತುಕೊಂಡರು. ಕರ್ನಾಟಕದಲ್ಲಿ ಬೇಡರು ೧೮೫೭ರಲ್ಲಿ ಹಾಗೂ ನಂತರದಲ್ಲಿ ಬ್ರಿಟಿಷರ ವಿರುದ್ಧ ಬಂಡಾಯವೆದ್ದರು. ಹಾಗಾಗಿ ಬ್ರಿಟೀಷರು ಬೇಡರ ಶಸ್ತ್ರಾಗಳನ್ನು ಕಿತ್ತುಕೊಂಡು ಅವರ ಬಂಡಾಯವನ್ನು ದಮನ ಮಾಡಿದರು.

ಬೇಡರ ಸಾಮಾಜಿಕ ನ್ಯಾಯಪಂಚಾಯ್ತಿಯನ್ನು ಕಟ್ಟೆಮನಿ, ಕಟ್ಟೆಮನಿ ಎಂದು ಕರೆಯಲಾಗುತ್ತದೆ. ಕಟ್ಟೆಮನೆಗೆ ಒಬ್ಬ ಮುಖ್ಯಸ್ಥನಿರುತ್ತಾನೆ. ಅನೇಕ ಗ್ರಾಮಗಳನ್ನು ಸೇರಿಸಿ ಒಂದು ಕಟ್ಟೆಮನೆಯನ್ನು ಸ್ಥಾಪಿಸಲಾಗುತ್ತಿತ್ತು. ರಾಜ್ಯದಲ್ಲಿ ಇಂತಹ ಅನೇಕ ಕಟ್ಟೆಮನೆಗಳಿದ್ದವು. ಕೆಳವರ್ಗದ ಸಮಾಜದಲ್ಲಿ ಇಂತಹ ಕಟ್ಟೆಮನೆಗಳು ಕುಲಾಚಾರಕ್ಕೆ ಸಂಬಂಧಪಟ್ಟ ನ್ಯಾಯವಿಚಾರಣೆ ಕೆಲಸವನ್ನು ಮಾಡುತ್ತಿದ್ದವು. ತಮ್ಮ ತಮ್ಮ ಕುಲಾಚಾರಗಳಿಗನುಗುಣವಾಗಿ ತಮ್ಮಲ್ಲಿಯೇ ನ್ಯಾಯತೀರ್ಮಾನವನ್ನು ಮಾಡಿಕೊಳ್ಳು ತ್ತಿದ್ದರು. ದೊರೆಗಳು ಕಟ್ಟೆಮನೆಗೆ ಒಬ್ಬ ಮುಖ್ಯಸ್ಥನನ್ನು ನೇಮಕಮಾಡಿ ಆಯಾಯ ಕುಲಾಚಾರಗಳಿಗೆ ಧಕ್ಕೆ ಬರದಂತೆ ನೋಡಿಕೊಳ್ಳುವ ಜವಬ್ದಾರಿಯನ್ನು ಅವನಿಗೆ ನೀಡುತ್ತಿದ್ದರು. ಕಟ್ಟೆಮನೆಯ ಯಜಮಾನನ ಬಗ್ಗೆ ಜನರಲ್ಲಿ ಒಳ್ಳೆಯ ನಂಬಿಕೆ ಇತ್ತು. ಕಟ್ಟೆಮನೆ ನ್ಯಾಯತೀರ್ಪನ್ನು ಯಾರೂ ಉಲ್ಲಂಘಿಸುವಂತಿರಲಿಲ್ಲ. ದೊರೆಗಳು ತಮ್ಮ ನ್ಯಾಯತೀರ್ಮಾನದ ಕೆಲಸದ ಕಾರ್ಯಭಾರವನ್ನು ಕಡಿಮೆ ಮಾಡಿಕೊಳ್ಳುವ ಹಾಗೂ ಆಯಾ ಜನಾಂಗಗಳ ಕುಲಾಚಾರಗಳನ್ನು ಉಳಿಸಿ ಬೆಳೆಸುವ ಹಿನ್ನೆಲೆಯಲ್ಲಿ ಈ ಕಟ್ಟೆಮನೆಗಳಿಗೆ ಅಧಿಕಾರವನ್ನು ನೀಡಿದ್ದನು. ಇತ್ತೀಚಿನವರೆಗೂ ಬೇಡ ಸಮಾಜದಲ್ಲಿ ಕಟ್ಟೆಮನೆಗಳ ಆಡಳಿತವಿದ್ದು ಅಲ್ಲಲ್ಲಿ ಮಾತ್ರ ಉಳಿದುಕೊಂಡಿದೆ. ಹುಲಿಹೈದರ ಸಂಸ್ಥಾನಿಕರು ಈ ಕಟ್ಟೆಮನೆ ವ್ಯಾಜ್ಯಗಳನ್ನು ಇಂದಿಗೂ ತಮ್ಮ ಸಮ್ಮುಖದಲ್ಲಿಯೇ ನೆರವೇರಿಸುತ್ತಾರೆ. ಸಮಾಜದಲ್ಲಿ ಕಟ್ಟೆಮನೆ ಮುಖಂಡನು ಉನ್ನತ ಸ್ಥಾನಮಾನಗಳನ್ನು ಹೊಂದಿದ್ದನು. ಅವನ ಸಹಾಯಕ್ಕಾಗಿ ದಾಸಯ್ಯ, ಕೋಲಕಾರ ಎಂಬ ಕೆಲಸಗಾರರಿದ್ದರು. ಗುರಿಕಾರನು ಕಟ್ಟೆಮನೆ ನ್ಯಾಯದಾನದ ಉಸ್ತುವಾರಿಯನ್ನು ವಹಿಸುತ್ತಿದ್ದನು. ಇವನು ದೊರೆಯ ಕೈಕೆಳಗೆ ಇದ್ದ ಪ್ರಮುಖ ಅಧಿಕಾರಿಗಳಲ್ಲಿ ಒಬ್ಬನಾಗಿದ್ದನು. ಕಟ್ಟೆಮನೆ ಯಜಮಾನನ್ನು ಚಿತ್ರದುರ್ಗ, ರಾಯಚೂರು ಜಿಲ್ಲೆಗಳಲ್ಲಿ 'ಕಟ್ಟೆಮನೆ ದೊರೆಗಳೆಂದೇ' ಕರೆಯುವರು. ಎಲ್ಲಾ ಜನಾಂಗದವರೂ ದೊರೆಗಳ ಸ್ಥಾನಕ್ಕೆ ನ್ಯಾಯ ಕೋರಿ ಬರುತ್ತಾರೆ. ಕಟ್ಟೆಮನೆ ತೀರ್ಮಾನಗಳನ್ನು ಅಲ್ಲಗೆಳೆಯುವಂತಿರಲಿಲ್ಲ. ಸಮಾಜದಲ್ಲಿ,

ಜನಾಂಗಗಳಲ್ಲಿ ಆಗುತ್ತಿದ್ದ ಅನಾಚಾರಗಳನ್ನು ನಿಯಂತ್ರಿಸುವಲ್ಲಿ ಈ ಕಟ್ಟೆಮನೆ ಆಡಳಿತ ಮುಖ್ಯಪಾತ್ರ ವಹಿಸುತ್ತಿತ್ತು. ಹಿಂದೆಲ್ಲಾ ಪ್ರತಿಯೊಂದು ಜನಾಂಗಕ್ಕೂ ಒಂದೊಂದು ಕೇರಿಗಳಿದ್ದವು. ಆಯಾಯ ಜನಾಂಗದ ಮುಖ್ಯಸ್ಥನು ತಮ್ಮ ಜನಾಂಗದ ಕುಲಾಚಾರಗಳನ್ನು ಅನುಸರಿಸಿ ಜಾತಿಯಲ್ಲಿ ಅನಾಚಾರ ನಡೆಯದಂತೆ ನೋಡಿಕೊಳ್ಳುತ್ತಿದ್ದನು. ಸಾಮಾಜಿಕವಾಗಿ ಶಾಂತಿ ನಿರ್ಮಾಣ ಮಾಡಿ ಸರ್ವ ಜನಾಂಗಗಳ ಸಹಬಾಳ್ವೆಯನ್ನು ನಿರ್ಮಾಣ ಮಾಡುವಲ್ಲಿ ಈ ಕಟ್ಟೆಮನೆ ನ್ಯಾಯವಿಧಾನ ಮುಖ್ಯಪಾತ್ರವಹಿಸಿತ್ತು.

ಬೇಡರು ಶೂದ್ರವರ್ಗಕ್ಕೆ ಸೇರಿದ್ದರೂ ಅಧಿಕಾರವನ್ನು ಹಿಡಿದುಕೊಂಡ ನಂತರ ಕ್ಷತ್ರಿಯ ಸ್ಥಾನಮಾನಗಳನ್ನು ಅನುಭವಿಸಿದರು. ಮೇಲ್ವರ್ಗಗಳು ಆ ಸ್ಥಾನಮಾನಗಳನ್ನು ನೀಡಿ ಗೌರವಿಸಿದವು. ಆದರೆ ಅಧಿಕಾರ ಕಳೆದುಕೊಂಡ ನಂತರ ಮತ್ತೆ ಶೂದ್ರವರ್ಗಕ್ಕೆ ತಳ್ಳಲ್ಪಟ್ಟಿದ್ದು ವಿಪರ್ಯಾಸವೇ ಸರಿ. ತಾವು ದೊರೆಗಳ ವಂಶಸ್ಥರು ಎಂದು ಕರೆದುಕೊಳ್ಳುವ ಮೂಲಕ ಸಾಮಾಜಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹಿಂದಿನ ರಾಜ ಗೌರವಗಳನ್ನು ಪಡೆದುಕೊಳ್ಳುವ ಸ್ಥಿತಿ ಈ ಬೇಡ ಅರಸು ವಂಶಸ್ಥರಿಗೆ ಬಂದಿದೆ.

### ೪.೩. ಆರ್ಥಿಕ ಸ್ಥಿತ್ಯಂತರ

ಆರ್ಥಿಕ ಅಂಶಗಳು ಮಾನವನ ಏಳಿಗೆಯನ್ನು ನಿರ್ಧರಿಸುವಲ್ಲಿ ಸಹಾಯಕವಾಗುತ್ತವೆ. ಮಾನವನನ್ನು ನಿರ್ದಿಷ್ಟಪ್ರದೇಶದಲ್ಲಿ ನೆಲೆಸುವಂತೆ ಮಾಡುವ ಇಲ್ಲವೆ ವಲಸೆ ಹೋಗುವಂತೆ ಮಾಡುವಲ್ಲಿ ಆರ್ಥಿಕ ಅಂಶಗಳ ಪಾತ್ರವೂ ಇದೆ. ಬೇಡ ಜನಾಂಗದ ಜೀವನಾವಶ್ಯಕ ಆಸರೆಯಾಗಿದ್ದ ಬೇಟೆಯು ಕಾಲಕ್ರಮೇಣ ಅವರ ಹವ್ಯಾಸವಾಯಿತು. ಕಾಡು ಸಂಸ್ಕೃತಿಯ ಬೇಡರು ನಗರ ಸಂಸ್ಕೃತಿಯನ್ನು ದರ್ಶಿಸಿದ ನಂತರ ಅವರ ಜೀವನ ವಿಧಾನ, ಉಡುಗೆ-ತೊಡಗೆ, ವಸತಿ, ಆಹಾರ ಪಾನೀಯ, ವಿವಾಹ ಮುಂತಾದವುಗಳಲ್ಲಿ ಅಮೂಲಾಗ್ರ ಬದಲಾವಣೆಗಳು ಕಂಡುಬಂದವು. ಕಾಡಿನಲ್ಲಿದ್ದಂತಹ ಸಾಮೂಹಿಕ ಉತ್ಪಾದನೆ ಮತ್ತು ಸಮಾನ ಹಂಚಿಕೆ ಹಬ್ಬದ ಸಂದರ್ಭಗಳಲ್ಲಿನ ಬೇಟೆಯ ಸಂದರ್ಭಕ್ಕಷ್ಟೇ ಸೀಮಿತವಾಯಿತು. ಗ್ರಾಮ ಮತ್ತು ರಾಜ್ಯಗಳ ಬೆಳವಣಿಗೆಯಿಂದ ಸಾಮೂಹಿಕ ಉತ್ಪಾದನೆ, ಸಮಾನ ಹಂಚಿಕೆಗಳ ಕಲ್ಪನೆ ಕಣ್ಮರೆಯಾಗುತ್ತಾ ಬಂದಿತು.[೨೬] ಹಿಂಸೆಯ ಅರಿವು ಇಲ್ಲದಂತಹ ಕಾಲಕ್ಕೆ ಬೇಟೆಯಾಡುವುದರ ಬಗ್ಗೆ ಯಾವ ಪ್ರತಿರೋಧವಿರಲಿಲ್ಲ. ಆದರೆ ಅಹಿಂಸೆ ಬಗ್ಗೆ ತಿಳಿದುಕೊಂಡ ಅಲ್ಪಸ್ವಲ್ಪ ಜನರು ಬೇಟೆಯಾಡು ವುದನ್ನು ನಿಲ್ಲಿಸಿದರು. ನಿತ್ಯಮಾಂಸಾಹಾರಿಗಳಾಗಿದ್ದ ಕೆಲವರು ಸಸ್ಯಾಹಾರಿಗಳಾದರು.

ಗ್ರಾಮಸಹವಾಸದಿಂದ ಬೇಟೆಯು ಬೇಡರಿಗೆ ಹವ್ಯಾಸವಾಯಿತು. ಬೇಡರು ಬೇಟೆಯಾಡುವುದನ್ನು ಬಿಡುವ ಸಂದರ್ಭದಲ್ಲಿ ಪಶುಪಾಲನೆ, ಕೃಷಿ, ಕುರಿಸಾಕಾಣಿಕೆ, ಮೇಕೆಸಾಕಾಣಿಕೆ ಹೀಗೆ ಹಲವು ಉದ್ಯೋಗ ಗಳನ್ನು ಆಯ್ಕೆ ಮಾಡಿಕೊಂಡು ಕಾಡುತೀರದಲ್ಲಿ ಕೃಷಿಯನ್ನು ಆರಂಭಿಸಿದರು. ನದಿ, ಹಳ್ಳ, ತೀರ

ಪ್ರದೇಶದಲ್ಲಿ ಫಲವತ್ತಾದ ಮಣ್ಣು ದೊರೆಯುತ್ತಿದ್ದುದರಿಂದ ಕೃಷಿಯು ಆ ಭಾಗದಲ್ಲಿ ಅಭಿವೃದ್ಧಿ ಗೊಂಡಿತು. ಜನಸಂಖ್ಯೆ, ಗ್ರಾಮಗಳು, ಅಭಿವೃದ್ಧಿಯಾದಂತೆ ಅರಣ್ಯದ ಬಗ್ಗೆ ಮೊದಲು ಹೊಂದಿದಂತಹ ಭಾವನೆಯನ್ನು ಜನರು ಹೊಂದಿರಲಿಲ್ಲ. ಅರಸು ಮನೆತನದವರು ಕೃಷಿಯ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡರು. ದೊರೆಗಳು ತಮ್ಮ ಯುದ್ಧ ಖರ್ಚಿಗೆ, ವಿಲಾಸಿ ಬದುಕಿಗೆ, ಅನೇಕ ರೀತಿಯ ತೆರಿಗೆಗಳನ್ನು ಜನರ ಮೇಲೆ ಹೇರಿದರು. ಕೃಷಿಯು ರಾಜ್ಯದ ಆದಾಯದ ಮುಖ್ಯ ಮೂಲವಾಯಿತು. ಕೆರೆ, ಕಾಲುವೆ, ಆಣೆಕಟ್ಟುಗಳನ್ನು ಕಟ್ಟಿಸುವ ಮೂಲಕ ಕೃಷಿಗೆ ಹೆಚ್ಚಿನ ಆದ್ಯತೆ ನೀಡಿದರು. ಸಾಕಷ್ಟು ಭೂಮಿಯನ್ನು ಹೊಂದಿದವರು ತಮ್ಮ ಪ್ರದೇಶದಲ್ಲಿ ಪ್ರಸಿದ್ಧಿಗೆ ಬಂದರು. ಮತ್ತು ರಾಜಕೀಯವಾಗಿ ಆ ಪ್ರದೇಶದ ಮೇಲೆ ಹಿಡಿತವನ್ನು ಸಾಧಿಸಿದರು. ಕೃಷಿಕರಾದವರು ಆನಂತರ ರಾಜಕೀಯ ದಲ್ಲಿ ಮುನ್ನಡೆದರು. ಅನೇಕ ಪಾಳೆಯಪಟ್ಟುಗಳ ಸ್ಥಾಪಕರು ಮೂಲದಲ್ಲಿ ಕೃಷಿಕರಾಗಿದ್ದವರೆನ್ನುವುದು ಸ್ವಾರಸ್ಯದ ಸಂಗತಿಯಾಗಿದೆ.[೧೪೮] ತಮ್ಮ ಆರ್ಥಿಕ ಸಂಪತ್ತನ್ನು ರಕ್ಷಿಸಿಕೊಳ್ಳಲು ಮತ್ತು ಆ ಪ್ರದೇಶದ ಜನರನ್ನು ರಕ್ಷಿಸಲು ಸೈನ್ಯವನ್ನು ಕಟ್ಟಿಕೊಂಡ ನಾಯಕರು ಮುಂದೆ ಪಾಳೆಯಗಾರರಾದರು. ಮಧ್ಯಕಾಲೀನ ಉಳಿಗಮಾನ್ಯ ವ್ಯವಸ್ಥೆ ರಾಜಮನ್ನಣೆಗಿಂತ ಮುನ್ನವೇ ಇತ್ತು. ಕೃಷಿ ಉತ್ಪಾದನೆಯಲ್ಲಿ ಪ್ರಾದೇಶಿಕವಾಗಿ ಬಲಿಷ್ಠವಾದ ಸಮುದಾಯದಲ್ಲೊಬ್ಬನು ಆ ಪ್ರದೇಶದ ನಾಯಕನಂತೆ ವರ್ತಿಸಿದನು. ಇವನನ್ನು ಪಾಳೆಯಗಾರ ಎಂದು ಕರೆಯಲಾಯಿತು. ರಾಜರಿಂದ ಭೂಮಿಯನ್ನು ಪಡೆದುಕೊಂಡು ಸಮಯಕ್ಕನು ಗುಣವಾಗಿ ಅವನಿಗೆ ಸೈನ್ಯ, ಹಣದ ಸಹಾಯ ಮಾಡುತ್ತಾ ತಾನು ಅವರ ಜೊತೆಯಲ್ಲಿಯೆ ಬೆಳೆದನು. ಇಂತಹ ಅನೇಕ ಪಾಳೆಯಗಾರರು ವಿಜಯನಗರ ಕಾಲಕ್ಕೆ ಪ್ರಸಿದ್ಧಿಗೆ ಬಂದರು. ಈ ಪಾಳೆಯಗಾರರು ಕಾಡು, ಬೆಟ್ಟಗಳನ್ನ ಕಡಿದು ಕೃಷಿ ಸೌಕರ್ಯಗಳನ್ನು ಜನರಿಗೆ ಕಲ್ಪಿಸಿಕೊಟ್ಟರು; ಜನರ ಪ್ರೀತಿ, ಕೃತಜ್ಞತೆಗೆ ಪಾತ್ರರಾದರು.[೧೪೯] ವಿಜಯನಗರ ಕಾಲಕ್ಕಿಂತ ಮುನ್ನ ಇಂತಹ ಪಾಳೆಯಪಟ್ಟುಗಳು ದೊಡ್ಡ ದೊಡ್ಡ ಅರಸರನ್ನು ಹೆದರಿಸುವಷ್ಟು ಬಲಿತುಕೊಂಡಿದ್ದವು. ಹೀಗಾಗಿ ವಿಜಯನಗರದ ಅರಸರು ಅವರನ್ನು ಎದುರು ಹಾಕಿಕೊಳ್ಳದೆ ಅವರನ್ನು ಆ ಪ್ರದೇಶದ ಒಡೆಯರನ್ನಾಗಿ ಮಾಡಿ ತಮ್ಮ ಕಡೆ ಸೆಳೆದುಕೊಂಡರು. ಇಂತಹ ಪಾಳೆಯಪಟ್ಟುಗಳ ಹುಟ್ಟಿಗೆ ಆರ್ಥಿಕ ಅಂಶಗಳೇ ಮುಖ್ಯವಾಗಿದ್ದವು. ಪೋರ್ಚುಗೀಸ್ ಪ್ರವಾಸಿ ನ್ಯೂನಿಜ್ ಹೀಗೆ ಬರೆಯುತ್ತಾನೆ "ನೆಲವೆಲ್ಲವೂ ರಾಜನಿಗೆ ಸೇರಿದೆ. ಅವನಿಂದ ದಂಡನಾಯಕರು ಅದನ್ನು ಪಡೆಯುತ್ತಾರೆ. ಅವರು ರೈತರಿಗೆ ವಹಿಸಿಕೊಡುತ್ತಾರೆ. ಉತ್ಪನ್ನದ ಹತ್ತನೆ ಒಂಬತ್ತು ಪಾಲನ್ನು ಅವರು ದಂಡನಾಯಕನಿಗೆ ಸಲ್ಲಿಸುತ್ತಾರೆ. ಅವರು ರಾಜನಿಗೆ ಅರ್ಧವನ್ನು ಸಲ್ಲಿಸುತ್ತಾರೆ.[೧೫೦] ಪಾಳೆಯಗಾರರು ಜನರಿಗೆ ಹತ್ತಿರದವರಾಗಿದ್ದರು. ರಾಜಧಾನಿಯಲ್ಲಿ ಅರಸರು ಅನುಭವಿಸುತ್ತಿದ್ದಂತಹ ಸುಖಗಳನ್ನು ಈ ಪಾಳೆಯಗಾರರು ತಮ್ಮ ಕೇಂದ್ರದಲ್ಲಿ ಅನುಭವಿಸುತ್ತಿದ್ದರು. ವಿಜಯನಗರ ಕಾಲದಲ್ಲಿ ಅನೇಕ ಪಾಳೆಯ

ಗಾರರು ವಿಜಯನಗರ ದೊರೆಗಳ ಸಾಮಂತರಾಗಿ ಅವರಂತೆ ರಾಜ್ಯಾಧಿಕಾರ, ಸಕಲ ವೈಭೋಗ ಜೀವನವನ್ನು ನಡೆಸಿದರು.

ಕುಮಾರರಾಮನು ವಿಜಯನಗರ ಮುನ್ನ ಪ್ರಸಿದ್ಧಿ ಪಡೆದ ಬೇಡ ದೊರೆಗಳಲ್ಲಿ ಮೊದಲಿಗನು. ಕುಮ್ಮಟದುರ್ಗದ ಈ ವೀರನ ತಂದೆ, ತಾತರು ಸಕಲ ರಾಜ ಸುಖಗಳನ್ನು ಅನುಭವಿಸಿದ್ದರು. ಕುಮಾರ ರಾಮನೂ ಅಷ್ಟೆ ಸುಖ ಸಮೃದ್ಧಿಯಿಂದ ಕೂಡಿದ ರಾಜ್ಯದ ದೊರೆಯಾಗಿ ಪ್ರಸಿದ್ಧಿ ಪಡೆದಿದ್ದನು. ಕುಮ್ಮಟದುರ್ಗದ ದೊರೆಗಳನ್ನು ಆಶ್ರಯಿಸಿ ಅವರ ಬಂಧುಗಳು, ಸಂಬಂಧಿಕರು ಮತ್ತು ಅವರ ಜನಾಂಗವು ರಾಜಧಾನಿ ಸುತ್ತಮುತ್ತ ಬಂದು ನೆಲೆಸಿದರು. ಕೃಷಿಯಲ್ಲಿ ಅನೇಕರನ್ನು ತೊಡಗಿಸುವ ಸಲುವಾಗಿ ಕೆರೆ, ಕಟ್ಟೆಗಳನ್ನು ಕಟ್ಟಿಸಿದರು. ಮಧ್ಯಕಾಲೀನ ಕರ್ನಾಟಕದ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತ್ಯಂತರಗಳ ಸಂಕೇತವೇ ಕುಮಾರರಾಮನೆಂದು ತೋರುತ್ತದೆಂಬ ಡಾ.ಪುರೋಷೋತ್ತಮ ಬಿಳಿಮಲೆಯವರ ನಿಲುವು ಸೂಕ್ತವಾಗಿದೆ.[೧೫೧] ವಿಜಯನಗರ ಅರಸರು ಹೆಚ್ಚಿನ ಆದ್ಯತೆಯನ್ನು ಕೃಷಿಗೆ ನೀಡಿದ್ದರು. ಅವರು ಕಟ್ಟಿಸಿದ ಸಾವಿರಾರು ಕೆರೆಗಳಲ್ಲಿ ಕೆಲವು ಇಂದಿಗೂ ಕೃಷಿಗೆ ನೀರಾವರಿ ಸೌಲಭ್ಯವನ್ನು ನೀಡುತ್ತಿವೆ. ಅವರ ಆರ್ಥಿಕ ಸಮೃದ್ಧಿಗೆ ಈ ಕೆರೆಗಳು ಅತ್ಯಂತ ಮಹತ್ವ ಪಾತ್ರವಹಿಸಿದ್ದವು. ವಿಜಯನಗ ರೋತ್ತರ ಕಾಲದಲ್ಲಿ ಸ್ವತಂತ್ರಗೊಂಡ ಪಾಳೆಯಗಾರರು ಅನೇಕ ಕೆರೆ, ಬಾವಿ, ಕಟ್ಟೆಗಳನ್ನು, ಕಟ್ಟಿಸಿ ಕೃಷಿಯನ್ನು ಅಭಿವೃದ್ಧಿಗೊಳಿಸಿದರು. ರಾಜರು ತಮ್ಮ ಹೆಂಡತಿ, ಮಗ, ಇಲ್ಲವೆ ಸೊಸೆ ಹೆಸರಿನಲ್ಲಿ, ರಾಣಿಯರು ತಮ್ಮ ಹೆಸರಿನಲ್ಲಿ ಇಲ್ಲವೆ ತಮ್ಮ ಗಂಡಂದಿರ ಹೆಸರಿನಲ್ಲಿ ಬಾವಿ, ಕೆರೆಗಳನ್ನು ಕಟ್ಟಿಸಿದರು. ಹೀಗೆ ಕೃಷಿ ಮತ್ತು ನೀರಾವರಿ ಕ್ಷೇತ್ರದ ಕಡೆ ಅರಸರು ಗಮನ ನೀಡಿದ್ದರಿಂದ ಅನೇಕ ಬುಡಕಟ್ಟು ವರ್ಗಗಳು ಕೃಷಿಯ ಕ್ಷೇತ್ರದ ಕಡೆ ಒಲವು ತೋರಿ ಕೃಷಿಯನ್ನು ಆರಂಭಿಸಿದವು. ಆದರೆ ಬೇಡ ಜನಾಂಗವು ಬೇಟೆ, ಪಶುಪಾಲನೆ, ಕುರಿಸಾಕಾಣಿಕೆ, ಮೇಕೆಸಾಕಾಣಿಕೆಗೆ ನೀಡಿದ ಪ್ರಾಮುಖ್ಯತೆಯಷ್ಟು ಕೃಷಿಗೆ ನೀಡಲಿಲ್ಲವೆಂದು ಕಂಡುಬರುತ್ತದೆ; ಅವರು ಕೃಷಿಯಲ್ಲಿ ತೊಡಗಿದ್ದು ರಾಜ್ಯಾಧಿಕಾರ ಪಾಳೆಯಗಾರರಿಂದ ಕೈತಪ್ಪಿದ ಬಳಿಕವೆಂದು ಕಂಡುಬರುತ್ತದೆ. ಏಕೆಂದರೆ ಬೇಡ ಜನಾಂಗದವರ ಭೂಮಿಗಳು ಬಹುತೇಕ ಗ್ರಾಮದಿಂದ ಬಹುಪಾಲು ದೂರವೇ, ಅಂದರೆ ಅರಣ್ಯಗಳ ತೀರದಲ್ಲಿವೆ. ಅಲ್ಲದೆ ಇನ್ನೂ ಅನೇಕ ಬೇಡರು ಪಶುಪಾಲನೆ, ಕುರಿಸಾಕಣಿಕೆ, ಮೇಕೆ ಸಾಕಾಣಿಕೆ ಇತ್ಯಾದಿ ಉದ್ಯೋಗಗಳಲ್ಲಿ ಇದ್ದಾರೆ.

ಅಧಿಕಾರಕ್ಕೆ ಬಂದ ಬೇಡ ಪಾಳೆಯಗಾರರು ಆರ್ಥಿಕವಾಗಿ ಸಮೃದ್ಧರಾಗಿದ್ದರು. ಜನರಿಂದ ಅನೇಕ ತೆರಿಗೆಗಳನ್ನು ಸಂಗ್ರಹಿಸುತ್ತಿದ್ದರು. ಸ್ವತಂತ್ರರಾದ ನಂತರ ಪಾಳೆಯಗಾರರು ದೊರೆಗಳೆಂದು ಕರೆದುಕೊಂಡು ತಮ್ಮ ಪ್ರದೇಶದ ಮೇಲೆ ಸಂಪೂರ್ಣ ಸ್ವಾತಂತ್ರ್ಯವನ್ನು ಸಾಧಿಸಿದರು. ತಮಗೆ ಸೇರಿದ ಭೂಪ್ರದೇಶದ ಪ್ರತಿಯೊಂದು ಸಂಪತ್ತು ಈ ಪಾಳೆಯಗಾರರ ಇಚ್ಛೆಗನುಗುಣವಾಗಿ ಬಳಕೆಯಾಯಿತು. ಕೃಷಿಯೋಗ್ಯ

ಭೂಮಿ ಹೊರತುಪಡಿಸಿ ಉಳಿದ ಭೂಮಿಯು ಪಾಳೆಯಗಾರರಿಗೆ ಸೇರಿತ್ತು. ಕೃಷಿಯೋಗ್ಯ ಭೂಮಿಯಿಂದ ಅನೇಕ ರೀತಿಯ ತೆರಿಗೆಗಳನ್ನು ಪಡೆಯುತ್ತಿದ್ದರು. ಬೇಚರಾಕು ವಾರಸುದಾರರಿಲ್ಲದ ಭೂಮಿಯನ್ನು ತಮ್ಮ ವಶದಲ್ಲಿಟ್ಟುಕೊಂಡು ಇಷ್ಟಬಂದವರಿಗೆ, ಇಷ್ಟಬಂದ ರೀತಿಯಲ್ಲಿ ಹಂಚುವ, ದಾನವಾಗಿ ನೀಡುವ ಅಧಿಕಾರ ಹಾಗೂ ಸ್ವಾತಂತ್ರ್ಯ ದೊರೆಗಳಿಗಿತ್ತು.[೧೫೨] ರಾಜ್ಯದ ಬೊಕ್ಕಸದ ಖರ್ಚುವೆಚ್ಚಗಳು ದೊರೆಗಳ ಇಚ್ಛೆಗೆ ಬಿಡಲಾಗಿತ್ತು. ಅರಮನೆ ಸುಖಭೋಗ ಜೀವನವನ್ನು ಆಗ ಪ್ರಶ್ನಿಸುವಂತಿರಲಿಲ್ಲ. ಆದರೆ ಪಾಳೆಯಗಾರರು ಕೇವಲ ವೈಭವ-ಭೋಗ ಜೀವನಗಳಲ್ಲಿ ನಿರತರಾಗದೆ ಜನಸಾಮಾನ್ಯರಿಗೆ ಉಪಯುಕ್ತವಾದ ಕಾರ್ಯಗಳನ್ನು ಕೈಗೊಂಡು ಪ್ರಜಾವಾತ್ಸಲ್ಯವನ್ನುಗಳಿಸಿದ್ದರು. ಇವರ ಆಳ್ವಿಕೆಯಲ್ಲಿ ತೆರಿಗೆಗಳು ವಿಜಯನಗರ ಕಾಲಕ್ಕಿಂತಲೂ ಹಗುರವಾಗಿದ್ದವು.[೧೫೩]

ಪಾಳೆಯಗಾರರ ಕಾಲದ ರಾಜಕೀಯವು ಅಸ್ಥಿರತೆಯಿಂದ ಕೂಡಿದ್ದರಿಂದ ಆರ್ಥಿಕವಾಗಿ ಪಾಳೆಯಗಾರರು ಆಗಾಗ ಸಂಕಷ್ಟಸ್ಥಿತಿಗೆ ಗುರಿಯಾಗುತ್ತಿದ್ದರು. ಕಿರುಕುಳ, ಕಾಳಗಗಳು ಆಗಾಗ ನಡೆಯುತ್ತಿದ್ದವು, ಯುದ್ಧದ ಸಂದರ್ಭದಲ್ಲಿ ಸಂಪತ್ತ ಲೂಟಿಯಾಗುತ್ತಿದ್ದರಿಂದ ತಾವು ಸಂಪಾದಿಸಿದಂತಹ ರಾಜ್ಯ ಮತ್ತು ಸಂಪತ್ತನ್ನು ಸಂರಕ್ಷಿಸಿಕೊಳ್ಳುವುದು ಕೆಲವರಿಗೆ ಕಷ್ಟವಾಗಿತ್ತು. ಪಾಳೆಯಗಾರರು ಅನೇಕ ತೆರಿಗೆಗಳಿಂದ, ಕಾಣಿಕೆಗಳಿಂದ, ಆಯಗಾರರ ಕೆಲಸಗಳಿಂದ ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದರು. ಚಿತ್ರದುರ್ಗದ ಭರಮಪ್ಪನಾಯಕನು ಆಯಗಾರರು ಬಿಟ್ಟಿ ಚಾಕರಿ ಮಾಡಬೇಕೆಂದು ನಿರ್ಣಯ ಮಾಡಿದ್ದನು.[೧೫೪] ಇವನ ಕಾಲದಲ್ಲಿ ರಾಜ ಕುಟುಂಬದವರು ಕಾಳಮ್ಮ, ಉಚ್ಚಂಗೆಮ್ಮ ಹಾಗೂ ಇತರ ದೇವತೆಗಳ ಪೂಜೆಗಾಗಿ ಯಾತ್ರೆಗೆ ಹೊರಡುತ್ತಿದ್ದರು. ಬೇಟಿ ನೀಡಿದ ಸ್ಥಳಗಳಲ್ಲಿ, ಪ್ರತಿ ಹಳ್ಳಿಯ ತಳವಾರನು ಆಡಳಿತಗಾರರಿಗೆ ಒಂದು ತುಪ್ಪದ ಕೊಡ ಮತ್ತು ಒಂದು ಮೇಕೆಯನ್ನು ನೀಡುತ್ತಿದ್ದನು. ವಿನಾಯಕ ಚತುರ್ದಶಿಯೆಂದು ತಿರುಕನ ವೇಷ ಧರಿಸಿದ ರಾಜನು ಪ್ರತಿಗ್ರಾಮದ ಗೌಡನಿಂದ ಒಂದು ವರಹ ಕಾಣಿಕೆಯನ್ನು ಪಡೆಯುತ್ತಿದ್ದನು. ಪ್ರತಿ ಧಾರ್ಮಿಕ ಮತದ ಮುಖ್ಯಸ್ಥರೂ ಅರಮನೆಗೆ ಕೊಬ್ಬರಿಯಲ್ಲಿ ಮಾಡಿದ ವಿಶೇಷ ಭಕ್ಷ್ಯವನ್ನು ನೀಡಬೇಕಾಗಿತ್ತು. ಪ್ರತಿಯೊಬ್ಬ ನೇಯ್ಗೆಯವನೂ ಮಗ್ಗವೊಂದಕ್ಕೆ ವರ್ಷಪ್ರತಿ ನೂಲೊಂದನ್ನು ಅರಮನೆಗೆ ಕಾಣಿಕೆಯಾಗಿ ನೀಡಬೇಕಾಗಿತ್ತು. ಗ್ರಾಮಸ್ಥರು ಚಿತ್ರದುರ್ಗಕ್ಕೆ ಹೋಗಿ ಅರಮನೆಯ ಕುದುರೆ ಲಾಯಗಳನ್ನು ಶುಚಿಗೊಳಿಸಬೇಕಾಗಿತ್ತು. ಹಳ್ಳಿಯ ಗೌಡರು ಅರಮನೆಯ ಕುದುರೆ ಲಾಯಕ್ಕೆ ಹತ್ತು ಹೇರು ಹುಲ್ಲನ್ನು ಕೊಡಬೇಕಾಗಿತ್ತು. ಪ್ರತಿ ಹಳ್ಳಿಯಿಂದ ಇಬ್ಬರು ದೃಢಕಾಯರು ಚಿತ್ರದುರ್ಗದ ಎಲ್ಲೆ ಕಟ್ಟಿನಲ್ಲಿ ಕೆಲವು ನಿರ್ದಿಷ್ಟ ಕೆಲಸ ಮಾಡಬೇಕಾಗಿತ್ತು. ಧಾರ್ಮಿಕ ಸಮಾರಂಭ ಹಾಗೂ ಹಬ್ಬ ಹರಿದಿನಗಳಂತಹ ಸಂದರ್ಭಗಳಿಗಾಗಿ ಧನ ಹಾಗೂ ವಸ್ತು ರೂಪದ ಅನೇಕ ತೆರಿಗೆಗಳನ್ನು ಅವರು ವಿಧಿಸುತ್ತಿದ್ದರು. ಹೈದರಾಲಿಯು ಇಂತಹ ತೆರಿಗೆಗಳನ್ನು ಕ್ರೋಢಿಕರಿಸುತ್ತಿದ್ದನು.[೧೫೫] ಮತ್ತೋಡು ಅರಸರ ಅರಮನೆಯ

ಗೋಡೆಗಳು ಬಣ್ಣಗಳ ಕೆಲಸದಿಂದ ಕೂಡಿದ್ದು ಬಂಗಾರದಂತೆ ಹೊಳೆಯುತ್ತಿದ್ದವು ಎಂದು ಹೊಳಲ್ಕೆರೆಯ ನೇರಲಕೆರೆಯಲ್ಲಿ ದೊರೆತ ತಾಮ್ರಶಾಸನ ಹೇಳುತ್ತದೆ.[೧೫೬] ಈ ಮನೆತನದವರ ರಾಜವೈಭೋಗ, ಆರ್ಥಿಕ ಸ್ಥಿತಿಯನ್ನು ಇದರಿಂದ ತಿಳಿಯಬಹುದು. ಚಿತ್ರದುರ್ಗ ಅರಸರು ವಿಜಯನಗರ ಅರಸರ ನಾಣ್ಯಪದ್ಧತಿಯನ್ನು ಅನುಸರಿಸಿದರು. ಚಿತ್ರದುರ್ಗವು ಅರ್ಥಿಕವಾಗಿ ಸುಸ್ಥಿತಿಯಲ್ಲಿತ್ತು ಎಂಬುದಕ್ಕೆ ಹೈದರಾಲಿಯು ದುರ್ಗದಿಂದ ಲೂಟಿ ಹೊಡೆದ ಸಂಪತ್ತೇ ಹೇಳುತ್ತದೆ. ಬುಕಾನನ್ ಪ್ರಕಾರ ಚಿತ್ರದುರ್ಗದ ಪಾಳೆಯಗಾರರು ವಿಜಯನಗರ ರಾಜಮನೆತನದ ಅವನತಿಯ ಕಾಲಕ್ಕೆ ೧೦,೦೦೦ ಪಗೋಡಾ ಮೌಲ್ಯದ ರಾಜ್ಯವನ್ನಾಳುತ್ತಿದ್ದರು. ಮತ್ತು ಈ ಸಾಹಸಿಗಳಾದ ಬೇಡರು ತಮ್ಮ ರಾಜ್ಯವನ್ನು ವಾರ್ಷಿಕವಾಗಿ ೩,೫೦,೦೦೦ ಪಗೋಡದಷ್ಟು ಮೌಲ್ಯದ್ದಾಗುವವರೆಗೂ ವಿಸ್ತರಿಸಿದರು.[೧೫೭]

ಚಿತ್ರದುರ್ಗ ಸಂಸ್ಥಾನವು ಸೈನಿಕವಾಗಿ ವಿಜಯನಗರೋತ್ತರ ಕಾಲದಲ್ಲಿ ಪ್ರಬಲವಾದ ರಾಜ್ಯವಾಗಿತ್ತು. ಕೆಳದಿ ಆರ್ಥಿಕವಾಗಿ ಬಲಿಷ್ಠವಾಗಿತ್ತು. ಚಿತ್ರದುರ್ಗ ಸಂಸ್ಥಾನವು ಬಹುತೇಕವಾಗಿ ಬಯಲು ಪ್ರದೇಶದಲ್ಲಿ ವಿಸ್ತರಿಸಿತ್ತು. ಕೆಳದಿರಾಜ್ಯದಷ್ಟು ಶ್ರೀಮಂತವಾಗಿರದಿದ್ದರೂ ಆರ್ಥಿಕವಾಗಿ ಇವರು ಸಬಲರಾಗಿಯೇ ಇದ್ದರು. ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ದೇವಾಲಯಗಳು, ಕೋಟೆಗಳು, ಮಠಗಳು, ಕೆರೆಗಳು, ಪುಷ್ಕರಣಿಗಳು(ಬಾವಿ), ನಿರ್ಮಾಣಕ್ಕಾಗಿ ಮಾಡಿದ ಖರ್ಚುನ್ನು ಮತ್ತು ಅರಮನೆವೆಚ್ಚ, ಯುದ್ಧವೆಚ್ಚ, ಇತ್ಯಾದಿ ಅಂಶಗಳನ್ನು ನೋಡಿದಾಗ ಈ ಅರಸರ ಆರ್ಥಿಕ ಸ್ಥಿತಿ ಉತ್ತಮವಾಗಿತ್ತೆಂದು ಹೇಳಬಹುದು. ಕಸ್ತೂರಿರಂಗಪ್ಪನಾಯಕನ ಕಾಲದಲ್ಲಿ ಚಿತ್ರದುರ್ಗ ರಾಜ್ಯ ವಿಸ್ತಾರವಾಗಿಯೂ, ಸಂಪತ್ತಿನಿಂದಲೂ ಕೂಡಿತ್ತು. ಆಗ ೬೫,೦೦೦ ದುರ್ಗಿ ಪಗೋಡಗಳೂ ದುರ್ಗದ ಭಂಡಾರದಲ್ಲಿದ್ದವು.[೧೫೮] ೨ನೇ ಮದಕರಿನಾಯಕನ ಕಾಲಕ್ಕೆ ೧ಲಕ್ಷ ವರಹ ಆದಾಯದ ಸೀಮೆಯನ್ನು ನಾಲ್ಕು ಭಾಗಗಳನ್ನಾಗಿ ಮಾಡಿ ಅಧಿಕಾರಿಗಳನ್ನು ನೇಮಿಸಿದನು.[೧೫೯] ಚಿತ್ರದುರ್ಗ ಸಂಸ್ಥಾನದಲ್ಲಿ ಕ್ರಿ.ಶ.೧೬೫೨ರಲ್ಲಿ ೬೫,೦೦೦ ವರಹಗಳಷ್ಟು ಕಂದಾಯವನ್ನು ಸಂಗ್ರಹಿಸಲಾಗಿತ್ತು. ಅದು ೧೬೭೨ರ ಹೊತ್ತಿಗೆ ಒಟ್ಟು ಆದಾಯ ವಾರ್ಷಿಕ ೧ಲಕ್ಷ ವರಹಗಳಷ್ಟಾಯಿತು.[೧೬೦] ಭರಮಪ್ಪನಾಯಕನ ಕಾಲಕ್ಕೆ ಎಲ್ಲಾ ಬಾಬ್ತುಗಳು ಸೇರಿ ೪೦೦೦೦೦ ಲಕ್ಷ ವರಹಗಳಷ್ಟು ಆದಾಯ ಬರುತಿತ್ತು. ಈಗಿನ ಬೆಲೆಯಲ್ಲಿ ೫೦ ಲಕ್ಷಕ್ಕೂ ಹೆಚ್ಚು ಆಗುತ್ತಿತ್ತು.[೧೬೧] ಓರೇಮದಕರಿನಾಯಕನ ಕಾಲಕ್ಕೆ ಚಿತ್ರದುರ್ಗದ ಆದಾಯ ೩ ಲಕ್ಷ ವರಹ ದಾಟಿತ್ತು.[೧೬೨] ಪ್ರೊ.ಲಕ್ಷ್ಮಣ್ ತೆಲಗಾವಿಯವರ ಪ್ರಕಾರ ಇವನ ಕಾಲದಲ್ಲಿ ೯.೪೦.೦೦೦ವರಗಳ ಆದಾಯ ಬರುತ್ತಿತ್ತು.[೧೬೩] ಮತ್ತೊಡು ಪಾಳೆಯಗಾರರೂ ಸಹ ಆರ್ಥಿಕವಾಗಿ ಸಬಲರಾಗಿದ್ದರು. ಆರಂಭದಲ್ಲಿ ಈ ಸಂಸ್ಥಾನವು ೯,೦೦೦ ಪಗೋಡಗಳ ಆದಾಯವುಳ್ಳ ಲಕ್ಕವ್ವನಹಳ್ಳಿಯ ಸುತ್ತಮುತ್ತಲ ಒಂದು ಸಣ್ಣ ಪ್ರಾಂತ್ಯವಾಗಿತ್ತು. ನಂತರ ಇದು ವಿಸ್ತಾರವನ್ನು ಹೊಂದಿತು. ಈಗಿನ ಚಿಕ್ಕನಾಯಕನಹಳ್ಳಿ, ಹೊಸದುರ್ಗ, ಹಿರಿಯೂರು, ಹೊಳಲ್ಕೆರೆ,

ತಾಲ್ಲೂಕುಗಳ ಭಾಗಗಳನ್ನು ಒಳಗೊಂಡ ಸಂಸ್ಥಾನವೆಂದು ಕರೆಸಿಕೊಂಡಿತು.[೧೬೪] ಹರತಿ ಮತ್ತು ನಾಯಕನಹಟ್ಟಿ ದೊರೆಗಳು ಸಹ ತಮ್ಮ ಪ್ರದೇಶದಲ್ಲಿನ ಜನರು ನೀಡುತ್ತಿದ್ದ ತೆರಿಗೆಗಳಿಂದ, ಕಾಣಿಕೆಗಳಿಂದ ಆರ್ಥಿಕವಾಗಿ ಸಬಲರಾಗಿದ್ದರು.

ಗುಡೇಕೋಟೆ ಮತ್ತು ಜರಿಮಲೆ ಸಂಸ್ಥಾನಿಕರು ಕೃಷ್ಣದೇವರಾಯನಿಂದ ಪಡೆದುಕೊಂಡಿದ್ದ ಏಳೂ ತಾಲ್ಲೂಕುಗಳನ್ನು ಆಳುತ್ತಾ ಆ ಪ್ರದೇಶಗಳಿಂದ ಬರುತ್ತಿದ್ದ ಆದಾಯದಿಂದ ಸುಖವಾಗಿದ್ದರು. ಜರಿಮಲೆಯ ಪೆನ್ನಪ್ಪನಾಯಕನಿಗೆ ಅಚ್ಚುತರಾಯನು ಮೊದಲು ೧೫,೩೦೦ ಮಹಮ್ಮದ್ ಷಾಹಿ ಪಗೋಡ ಆದಾಯವಿರುವ ನಾಲ್ಕು ಮಾರ್ಗಗಳನ್ನು, ನಂತರದಲ್ಲಿ ೫೦೦ ಅಶ್ವದಳ, ೩,೦೦೦ ಕಾಲ್ದಳ, ಸೈನ್ಯ ಪೂರೈಸುವ ಷರತ್ತಿನ ಮೇಲೆ ೩೫,೧೫೦ ಮಹಮ್ಮದ್ ಶಾಹಿ ಪಗೋಡಾ ಆದಾಯವಿರುವ ಹೆಚ್ಚಾಗಿ ಮತ್ತೆರಡು ಮಾಗಣಿಗಳನ್ನು ನೀಡಿದನು. ನಿಜಾಮನ ಆಳ್ವಿಕೆಗೆ ಒಳಗಾದ ಬೇಡಸಂಸ್ಥಾನಿಕರು ಆರ್ಥಿಕವಾಗಿ ಉತ್ತಮವಾಗಿಯೆ ಇದ್ದರು. ನಿಜಾಮನು ಬೇಡ ಸಂಸ್ಥಾನಿಕರಿಗೆ ಜಾಗೀರುಗಳನ್ನು ಹಾಕಿಕೊಟ್ಟು ಆ ಪ್ರದೇಶಕ್ಕೆ ಅವರನ್ನು ದೊರೆಗಳೆಂದು ಕರೆದು ರಾಜಗೌರವವನ್ನು ನೀಡಿದನು. ಆರ್ಥಿಕವಾಗಿ ಈ ಭಾಗದ ಸಂಸ್ಥಾನಿಕರು ಸುಧಾರಿಸಿಕೊಂಡು ಪ್ರಗತಿಯಾಗುವಲ್ಲಿ ಈ ಜಾಗೀರುಗಳೇ ಕಾರಣ. ನಿಜಾಮನು ಗುಡ ಗುಂಟಿಯ ದೊರೆಗಳಿಗೆ ೪೨ ಹಳ್ಳಿಗಳನ್ನು,[೧೬೫] ಕನಕಗಿರಿ(ಹುಲಿಹೈದರ್ ) ನಾಯಕನಿಗೆ ೧೬ ಹಳ್ಳಿಗಳನ್ನು[೧೬೬] ಗುಂತಗೋಳ ದೊರೆಗಳಿಗೆ ೩೦ ಹಳ್ಳಿಗಳನ್ನು[೧೬೭] ದೇವದುರ್ಗ ಮತ್ತು ಕ್ಯಾದಿಗೇರಾ ಸಂಸ್ಥಾನಿಕರಿಗೂ ಕೆಲವು ಹಳ್ಳಿಗಳನ್ನು ಜಾಗೀರು ನೀಡಿದನು. ಈ ಹಳ್ಳಿಗಳ ಮೇಲೆ ಸಿವಿಲ್ ಮತ್ತು ಪೋಲಿಸ್ ಅಧಿಕಾರವನ್ನು ಸ್ವತಂತ್ರವಾಗಿ ಇವರು ಚಲಾಯಿಸುತ್ತಿದ್ದರು. ಈ ಕಾಲಕ್ಕೆ ಮೈಸೂರು ಭಾಗದ ಬೇಡ ಸಂಸ್ಥಾನಿಕರು ಬ್ರಿಟೀಷರು ನೀಡುತ್ತಿದ್ದ ಮಾಶಾಸನ(ವಿಶ್ರಾಂತಿ ವೇತನ)ಕ್ಕೆ ಸೀಮಿತವಾಗಿದ್ದರು. ನಿಜಾಮನ ಪ್ರದೇಶದ ದೊರೆಗಳು ಆರ್ಥಿಕವಾಗಿ ಮೊದಲಿಂದಲೂ ಉತ್ತಮ ಸ್ಥಿತಿಯನ್ನು ಕಾಯ್ದುಕೊಂಡು ಬಂದಿದ್ದರಿಂದ ಇಂದಿನ ರಾಜ್ಯ ರಾಜಕೀಯ ಕ್ಷೇತ್ರದಲ್ಲಿ ಉತ್ತಮ ಸ್ಥಾನಗಳನ್ನು ಪಡೆದಿದ್ದಾರೆ ಮತ್ತು ಪಡೆಯುತ್ತಿದ್ದಾರೆ.

ರಾಜಮಹಾರಾಜರು ಮನರಂಜನೆಗಾಗಿ ಬೇಟೆಮಾಡುವುದರಲ್ಲಿ ತುಂಬಾ ಆಸಕ್ತರಾಗಿದ್ದರು. ರಾಜರು ಬೇಟೆಯಾಡಲು ಅರಣ್ಯಕ್ಕೆ ಹೋಗುವಾಗ ಬೇಡರನ್ನು ಕರೆದುಕೊಂಡು ಹೋಗುತ್ತಿದ್ದರು. ಧೈರ್ಯಶಾಲಿಗಳಾದ ಬೇಡರು ಅರಣ್ಯದಲ್ಲಿದ್ದ ಕಾಡುಪ್ರಾಣಿಗಳ ಬಗ್ಗೆ, ಅವುಗಳ ಚಲನಗಳ ಬಗ್ಗೆ ತಿಳಿದುಕೊಂಡಿದ್ದರು. ದುರ್ಗಮವಾದ ಕಾಡಿನಲ್ಲಿ ಸಂಚರಿಸುವುದೆಂದರೆ ಸಾಹಸದ ಕೆಲಸವೇ ಆಗಿತ್ತು. ಬೇಡರು ಕಾಡಿನೊಂದಿಗೆ ಅನ್ಯೋನ್ಯ ಸಂಬಂಧ ಹೊಂದಿದ್ದರಿಂದ ರಾಜನು ಬೇಟೆಗೆ ಹೋಗುವಾಗ ಅವರನ್ನು ಬಿಟ್ಟು ಹೋಗುತ್ತಿರಲಿಲ್ಲ. ರಾಜನಿಗೆ ಬೇಟೆಯಾಡುವ ಕಲೆಯನ್ನು ಬೇಡರು ಹೇಳಿಕೊಡುತ್ತಿದ್ದರು. ಬೇಡರು ಪ್ರಾಣಿಗಳನ್ನು

ಗುರಿಯಿಟ್ಟು ಹೊಡೆಯುವಲ್ಲಿ ಪ್ರವೀಣರಾಗಿದ್ದರು. ಹೀಗಾಗಿ ಅವರನ್ನು ಗುರಿಕಾರರೆಂದು ಕರೆಯಲಾಗಿದೆ. ಧೈರ್ಯ, ಸಾಹಸ, ಜೀವದಹಂಗು ತೊರೆದು ಹೋರಾಡುವ ವೀರರಾದ ಬೇಡರನ್ನು ರಾಜರು ಯುದ್ಧ ಸಂದರ್ಭದಲ್ಲಿ ಸೈನ್ಯದಲ್ಲಿ ಸೇರಿಸಿಕೊಳ್ಳುತ್ತಿದ್ದರು. ಯುದ್ಧಮುಗಿದ ನಂತರ ಅವರಿಗೆ ಕಾಣಿಕೆಗಳನ್ನು, ಬಹುಮಾನವನ್ನು ಕೊಟ್ಟು ಕಳುಹಿಸುತ್ತಿದ್ದರು. ಸೈನ್ಯದಲ್ಲಿ ಸೇರಿಕೊಂಡ ಬೇಡರು ಸೈನ್ಯವೃತ್ತಿಯನ್ನು ಮಾಡುತ್ತಲೇ ಬಂದರು. ಆ ವೃತ್ತಿ ವಂಶಪಾರಂಪರ್ಯವೆನಿಸಿತು. ಸೈನ್ಯವೃತ್ತಿಗೆ ಸೇರಿದ ಬೇಡರ ಜೀವನ ಸುಧಾರಿಸಿತು. ಯೋಧ ಜನಾಂಗವೆಂದು ಹೆಸರಾಯಿತು. ತಮ್ಮದೇ ಆದ ಬೇಡ ಪಡೆಯನ್ನು ಕಟ್ಟಿಕೊಂಡರು. ಕರ್ನಾಟಕದ ಇತಿಹಾಸದಲ್ಲಿ ಬೇಡಪಡೆಯು ಪ್ರಸಿದ್ಧಿಯನ್ನು ಪಡೆದುಕೊಂಡಿತು. ಈ ಪಡೆಯನ್ನು 'ಕರ್ನಾಟಕ ಪಾಯದಳ', 'ಕರ್ನಾಟಕ ಪಡೆ' ಎಂದೂ ಕರೆಯಲಾಗುತ್ತಿತ್ತು. ಬೇಡರ ಸೈನಿಕ ವೃತ್ತಿ ಬಗ್ಗೆ ಪ್ರೊ.ಜಾದೂನಾಥ ಸರಕಾರ ಅವರು ತಮ್ಮ 'ಔರಂಗಜೇಬನ ಇತಿಹಾಸ' ಕೃತಿಯಲ್ಲಿ ಸುರಪುರದ ಪಾಮನಾಯಕನ ಫೌಜನ್ನು ಕುರಿತು, His Berads clans men who were reputed as the brevest foot soldiers and best shots ಎಂದೂ, ಮತ್ತೊಂದೆಡೆ Berads were then reputed as the brevest soldiers of southern India, sure shoots and hardy hunters, these strong athletic and patriotic Berad infantry...,[೧೬೮] ಬೇಡ ಸೈನಿಕರ ದೇಶಪ್ರೇಮ, ಹೋರಾಟ, ಮುಂತಾದ ಅನೇಕ ವಿಷಯಗಳನ್ನು ತಿಳಿಸಿರುವರು. ಸೈನಿಕರಾಗಿ ಬೇಹುಗಾರರಾಗಿ, ವೈರಿಗಳನ್ನು ಸದೆಬಡೆಯುವಲ್ಲಿ, ವೈರಿಗಳನ್ನು ತುಂಡರಿಸುವಲ್ಲಿ ಬೇಡರು ನಿಸ್ಸೀಮರು. ನಂಬಿಕೆಗೆ, ಸ್ವಾಮಿನಿಷ್ಠೆಗೆ ಹೆಸರಾದವರೆಂದರೆ ಬೇಡರು. ಈ ಗುಣಗಳಿಂದ ಬೇಡರು ಸೈನ್ಯದಲ್ಲಿ ಗಟ್ಟಿಯಾಗಿ ಉಳಿದುಕೊಂಡು ಬಂದರು. ಕ್ರಮೇಣ ರಾಜ್ಯಾಡಳಿತದಲ್ಲೂ ಕಂಡುಬಂದರು. ಕೆಲವರು ಸೈನಿಕವಾಗಿ ಬೆಳೆದು ಪ್ರಸಿದ್ಧರಾಗಿ, ಕಾಲಕ್ಕೆ ಸುಧಾರಿಸುತ್ತಾ ಬಂದರು. ಪಾಳೆಯಗಾರರಾಗಿ, ಅಮರನಾಯಕರಾಗಿ ಅಧಿಕಾರದಲಿದ್ದಂತಹ ಬೇಡನಾಯಕರ ಆರ್ಥಿಕ ಸ್ಥಿತಿಯು ಉತ್ತಮವಾಗಿತ್ತು. ಸೈನ್ಯದಲ್ಲಿ ಸೇರಿದವರು ಸಂಬಳ, ಉಂಬಳಿ ಕಾಣಿಕ ಹಾಗೂ ಯುದ್ಧಲೂಟಿಯಲ್ಲಿ ಪಾಲು ಇತ್ಯಾದಿಯಾಗಿ ರಾಜರಿಂದ ಆದಾಯ ಬರುತ್ತಿತ್ತು. ಯುದ್ಧದಲ್ಲಿ ವೀರಮರಣ ಹೊಂದಿದವರಿಗೆ ಉಂಬಳಿ ಭೂಮಿಯನ್ನು ನೀಡುತ್ತಿದ್ದರು. ಗೆದ್ದವರಿಗೆ ಬಹುಮಾನಗಳನ್ನು, ಕಾಣಿಕೆಗಳನ್ನು ಕೊಡುತ್ತಿದ್ದರು. ಆಡಳಿತದಲ್ಲಿರುವವರು ಸಂಬಳವನ್ನು, ವಿಶೇಷ ಭತ್ಯೆಗಳನ್ನು ಸ್ವೀಕರಿಸು ತ್ತಿದ್ದರು. ಯೋಧರಾಗಿದ್ದ ಬೇಡರ ಮುಖ್ಯ ವೃತ್ತಿ ಯುದ್ಧಮಾಡುವುದಾದರೂ ಅವರಿಗೆ ಜಮೀನು ಇತ್ತೆಂದು, ಅದನ್ನು ಬೇರೆಯವರಿಂದ ಬೇಸಾಯ ಮಾಡಿಸುತ್ತಿದ್ದರೆಂದು ಕಂಡುಬರುತ್ತದೆ.[೧೬೯] ಹೋರಾಟದಲ್ಲಿ ಮಡಿದರೆ ವೀರಗಲ್ಲುಗಳನ್ನು ನಿಲ್ಲಿಸಿ ನೆತ್ತರು ಗೊಡಿಗೆಯನ್ನು, ಸತಿಹೋದವರಿಗೆ ಹೆಣ್ಣು ದಾನವನ್ನೂ, ಭೂಮಿ ರೂಪದಲ್ಲಿ ನೀಡುತ್ತಿದ್ದರು.[೧೭೦] ಸೈನಿಕರಿಗೆ ಭೂಮಿಯು ದಾನ ರೂಪದಲ್ಲಿ ಬರುತ್ತಿತ್ತು. ಸದಾ ಯುದ್ಧಭೂಮಿಯಲ್ಲಿರುತ್ತಿದ್ದ ಸೈನಿಕರು ತಮ್ಮ ಭೂಮಿಗಳನ್ನು ಸಾಗುವಳಿ ಮಾಡಿಸುವಲ್ಲಿ ವಿಫಲರಾಗಿದ್ದರು.

ಅಂತಹ ಭೂಮಿಗಳನ್ನು ಬೇರೆಯವರಿಗೆ ಕೊಡುತ್ತಾ ಗುತ್ತಿಗೆ, ಲಾವಣಿ ರೂಪದಲ್ಲಿ ಬೇಸಾಯ ಮಾಡಿಸುತ್ತಿದ್ದರು. ಸೈನಿಕವೃತ್ತಿ ವಂಶಪಾರಂಪರ್ಯವಾಗಿ ಬೆಳೆದಿದ್ದರಿಂದ ಎಷ್ಟೋ ಭೂಮಿಯು ಉಳುಮೆಗೊಳಗಾಗದೆ ಹಾಗೇ ಉಳಿದು ಬೇರೆಯವರ ಪಾಲಾಯಿತು. ಸೈನ್ಯಕ್ಕೆ ರಾಜರು ಹೆಚ್ಚಿನ ಪ್ರಾಧಾನ್ಯತೆ ನೀಡಿದ್ದರಿಂದ ಬೇಡಜನಾಂಗದಂತಹ ಇತರ ಜನಾಂಗದಲ್ಲೂ ಸೈನಿಕರಾದುದು ಕಂಡು ಬರುತ್ತದೆ. ಬೇಟೆಯು ಹೇಗೆ ಜೀವನಾಧಾರ ಕಸುಬಾಗಿತ್ತೋ ಹಾಗೇ ಸೈನಿಕವೃತ್ತಿಯು ಬೇಡರಿಗೆ ಜೀವನಾಶ್ರಯವಾಯಿತು. ಬೇಡರು ಒಂದುಕಾಲದಲ್ಲಿ ಸೇನಾವೃತ್ತಿ ಹೊರತು ಬೇರೆ ವೃತ್ತಿಯನ್ನು ಕಲಿಯಲಿಲ್ಲ, ಹಾಗೂ ಕಲಿಯುವ ಮನಸ್ಸು ಬರಲಿಲ್ಲ ಮತ್ತು ಕಲಿಯುವಂತಹ ಪರಿಸ್ಥಿತಿಯೂ ಅವರಿಗೆ ಎದುರಾಗಲಿಲ್ಲ.

ವಿಜಯನಗರ ಅರಸರು 'ಬೇಡಪಡೆ'ಗೆ ಹೆಚ್ಚಿನ ಆದ್ಯತೆಯನ್ನು ನೀಡಿದ್ದರು. ನಂತರ ಬಂದ ಪಾಳೆಯಗಾರರು ಈ ಬೇಡಪಡೆಯ ಮೂಲಕವೇ ಯುದ್ಧದಲ್ಲಿ ಗೆಲುವನ್ನು ಪಡೆಯುತ್ತಿದ್ದರು. ಈ ಬೇಡಪಡೆಯ ಮಹತ್ವ ಅರಿತ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ತಮ್ಮ ಸೈನ್ಯದಲ್ಲಿ ಬೇಡರನ್ನು ಸೇರಿಸಿಕೊಂಡರು. ಆದರೆ ನಂತರ ಅತ್ಯಂತ ಜಾಣತನದಿಂದ ಈ ಬೇಡರಿಂದ ಅಧಿಕಾರವನ್ನು ಕಸಿದುಕೊಂಡರು. ಆರ್ಥಿಕವಾಗಿ ಜೀವನಾಶ್ರಯವಾಗಿದ್ದ ಸೈನಿಕವೃತ್ತಿಯನ್ನು, ರಾಜಪದವಿಯನ್ನು ತೆಗೆದು ಹಾಕಿದರು. ಹೈದರಾಲಿಯು ಮೊದಲು ಒಳ್ಳೆಯ ಮನಸ್ಸಿನಿಂದ ಬೇಡ ತರುಣರನ್ನು ಸೈನ್ಯದಲ್ಲಿ ಸೇರಿಸಿಕೊಂಡಿದ್ದರಿಂದ ಆಗ ಬೇಡಸೈನಿಕರ ಸ್ಥಿತಿ ಉತ್ತಮವಾಗಿತ್ತು. ಹೈದರಾಲಿಯು ಹೈದ್ರಾಬಾದ್‌ನಿಂದ ಸಂಪತ್ತನ್ನು ಲೂಟಿ ಮಾಡಿಕೊಂಡು ಬರುವಲ್ಲಿ ಬೇಡ ತರುಣರೇ ಕಾರಣರಾಗಿದ್ದರು. ಹೈದರಾಲಿಯ ಸೈನ್ಯದಲ್ಲಿ 'ಬೇಡಪಡೆ' ಇತ್ತು. ಅವನ ಸೈನ್ಯದಲ್ಲಿದ್ದ ೨೦,೦೦೦ ಚೇಲಾಪಡೆಯು 'ಬೇಡಪಡೆ'ಯೇ ಆಗಿತ್ತು. ಯುದ್ಧ, ಲೂಟಿ, ದಾಳಿಗಳಂತಹ ಸಂದರ್ಭದಲ್ಲಿ ಹೈದರಾಲಿಯು ಬೇಡ ಪಡೆಯ ಸಹಾಯದಿಂದ ಗೆಲುವನ್ನು ಸಾಧಿಸುತ್ತಿದ್ದನು. ಬುಕಾನನು ತನ್ನ ಪ್ರವಾಸ ವರದಿಯಲ್ಲಿ ಹೀಗೆ ಉಲ್ಲೇಖಿಸಿದ್ದಾನೆ. during Tippoo's government were settled many Baydaru, or hunters, Who recieved twelvepagodas a year, and served as irregular troops whenever required... During the wars of Hyder and his son these men were chief instruments in the terrible depredations commited in the Lower carnatic.[೨೨] ಬೇಡದೊರೆಗಳ ಸಹಾಯದಿಂದ ಮೇಲಕ್ಕೆ ಬಂದ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ವಿಶಾಲವಾದ ರಾಜ್ಯವನ್ನು ಕಟ್ಟುವ ಪ್ರಯತ್ನ ಮಾಡಿದರು. ಅನೇಕ ಪಾಳೆಯಗಾರರು ಆಗ ಈ ತಂದೆ-ಮಗನ ದಾಳಿಗೆ ತುತ್ತಾದರು. ಸೋತ ಪಾಳೆಯಗಾರರಿಂದ ಇವರು ಸಾಕಷ್ಟು ಕಪ್ಪಕಾಣಿಕೆಗಳನ್ನು ವಸೂಲಿ ಮಾಡುತ್ತಿದ್ದರು. ಇಲ್ಲವೇ ಖಜಾನೆಯನ್ನು ಲೂಟಿ ಮಾಡಿಕೊಂಡು ಹೋಗುತ್ತಿದ್ದರು. ಈ ಸಂದರ್ಭದಲ್ಲಿ ಪಾಳೆಯಗಾರರ ಆರ್ಥಿಕ ಸ್ಥಿತಿಯು ಸಂಕಷ್ಟಕ್ಕೀಡಾಗುತ್ತಿತ್ತು. ಇದೇ ಸಂದರ್ಭದಲ್ಲಿ ಮರಾಠರು, ನಿಜಾಮರು ಸಹ ಹಣದ ಮತ್ತು ಅಧಿಕಾರದ ಆಸೆಗಾಗಿ ಹಾತೊರೆಯುತ್ತಿದ್ದರು.

ಯಾರು ಹೆಚ್ಚು ಹಣವನ್ನು ಕೊಡುತ್ತಿದ್ದರೋ ಅವರ ಕಡೆ ಸಹಾಯ ಮಾಡುತ್ತಿದ್ದರು. ಚಿತ್ರದುರ್ಗವನ್ನು ಹೊರತು ಪಡೆಸಿದರೆ ಉಳಿದ ಚಿಕ್ಕಪುಟ್ಟ ಸಂಸ್ಥಾನಿಕರು ತಮ್ಮ ಸ್ಥಾನವನ್ನು ರಕ್ಷಿಸಿಕೊಳ್ಳುವ ಸಲುವಾಗಿ ತಮಗೆ ಆಶ್ರಯ ನೀಡುವವರಿಗೆ ಕಪ್ಪಕಾಣಿಕೆಗಳನ್ನು ನೀಡುತ್ತಿದ್ದರು. ನಿಜಾಮನ ಪ್ರದೇಶದ ಬೇಡ ಸಂಸ್ಥಾನಿಕರು ಮರಾಠರ ಆದಿಲ್ ಷಾಹಿಗಳ ಮತ್ತು ಮೊಗಲರ ದಾಳಿಗಳನ್ನು ಎದುರಿಸಲಾಗದೆ ಅವರಿಗೆ ಇಂತಿಷ್ಟು ಎಂದು ಕಾಣಿಕೆಗಳನ್ನು ಸಲ್ಲಿಸುವ ಮೂಲಕ ಅಧಿಕಾರ ನಡೆಸಿದರು. ಮೈಸೂರು ಭಾಗದಲ್ಲಿ ಮಾರಾಠರು ಸಾಕಷ್ಟು ಹಣವನ್ನು ದೋಚಲು ದಾಳಿ ಮಾಡುತ್ತಿದ್ದರು.[೨೨] ಆಗ ಅನಿವಾರ್ಯವಾಗಿ ಅವರಿಗೆ ಹಣವನ್ನು ನೀಡಲೇಬೇಕಾಗಿತ್ತು. ಬೇಡ ಸಂಸ್ಥಾನಿಕರೊಳಗೆ ಅನೇಕ ಕಿರುಕುಳ ಯುದ್ಧಗಳು ಸಂಭವಿಸಿದವು. ಒಂದು ಬೇಡ ಸಂಸ್ಥಾನ ಗೆದ್ದರೆ ಇನ್ನೊಂದು ಬೇಡ ಸಂಸ್ಥಾನವೇ ಸೋಲುತ್ತಿತ್ತು. ಅಲ್ಲಿ ಬೇಡ ಸಂಸ್ಥಾನಿಕರೇ ಹಾಳಾಗುತ್ತಿದ್ದರು. ೧೭೭೯ರ ಹೊತ್ತಿಗೆ ಚಿಕ್ಕಪುಟ್ಟ ಪಾಳೆಯಗಾರರನ್ನೆಲ್ಲ ಗೆದ್ದ ಹೈದರಾಲಿ ಕೊನೆಗೆ ಚಿತ್ರದುರ್ಗದ ಮೇಲೆ ದಾಳಿ ಮಾಡಿ ಗೆದ್ದುಕೊಂಡನು. ಮೂರು ದಿನಗಳ ಕಾಲ ಖಜಾನೆಯನ್ನು ಲೂಟಿ ಮಾಡಿದನು.[೨೩] ಖಜಾನೆಯಿಂದ ಹೈದರಾಲಿ ೬೪,೦೦,೦೦೦ ಬೆಳ್ಳಿನಾಣ್ಯ, ೧,೦೦,೦೦೦ ರಾಯಲ್, ೧೭,೦೦,೦೦೦ ಅಷರಫಿ, ೨೫,೦೦,೦೦೦ ದಾಬೋಲಿ ಕದಲಿ, ೧೦,೦೦,೦೦೦ ಚವರಿಯಷ್ಟು ಸಂಪತ್ತನ್ನು ದೋಚಿದನು.[೨೪] ಹೈದರಾಲಿಯ ನಂತರ ಟಿಪ್ಪು ಸುಲ್ತಾನನು ಬ್ರಿಟಿಷರ ವಿರುದ್ಧ ಮಾಡಿದ ಹೋರಾಟಗಳಲ್ಲಿ ಸೋಲುತ್ತಾ ಬಂದನು. ೧೭೯೨ರಲ್ಲಿ ಮೂರನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಟಿಪ್ಪೂಸುಲ್ತಾನನು ಸೋತನು. ಅಲ್ಲದೆ ಅಪಮಾನಕರವಾದ ಶ್ರೀರಂಗಪಟ್ಟಣ ಒಪ್ಪಂದಕ್ಕೆ ಸಹಿಹಾಕಬೇಕಾಯಿತು. ಈ ಒಪ್ಪಂದ ಪ್ರಕಾರ ಬ್ರಿಟಿಷರು ಪಾಳೆಯಗಾರರನ್ನು ಟಿಪ್ಪೂವಿನ ವಜ್ರಮುಷ್ಠಿಯಿಂದ ಮುಕ್ತಿಗೊಳಿಸಲು ಯತ್ನಿಸಿದುದಲ್ಲದೆ, ಆಯಾಯ ಪಾಳೆಯಗಾರಿಕೆಗಳಲ್ಲಿ ಅವರವರ ಸ್ಥಿತಿಗಳನ್ನು ಸುಧಾರಿಸಲು ಶ್ರಮಿಸಿದರು. ಈ ಪಾಳೆಯಗಾರರನ್ನು ಬ್ರಿಟೀಷರು ಸ್ವಪ್ರಾಯೋಜನಕ್ಕಾಗಿ ಬಳಸಿಕೊಳ್ಳಬಹುದೆಂದು ಲಾರ್ಡ್ ಹೋಬರ್ಟನು ೧೭೯೭ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಸಂಚಾಲಕ ಮಂಡಲಿಗೆ ತಿಳಿಸಿ, ಅದಕ್ಕಾಗಿ ಕೈಗೊಳ್ಳತಕ್ಕ ಕಾರ್ಯಕ್ರಮಗಳನ್ನು ಸೂಚಿಸಿದನು. ಸಂಚಾಲಕ ಮಂಡಳಿಯು ಅವನ ಸೂಚನೆಗಳನ್ನು ಸಮ್ಮತಿಸಿತು. ಪಾಳೆಯಗಾರರ ಸೈನ್ಯಬಲವನ್ನು ಪೂರ್ಣವಾಗಿ ನಿಗ್ರಹಿಸಿ ಅವರ ವರ್ಷಂಪ್ರತಿ ಸಲ್ಲಿಸುವ ಪೊಗದಿಯ ಬದಲಾಗಿ ಅವರ ಪೊಲ್ಲಮಗಳ ಆದಾಯಕ್ಕೆ ತಕ್ಕಂತೆ ಹಾಗೂ ಪ್ರಜಾಸಮುದಾಯದ ರಕ್ಷಣೆಗೆ ಸಾಕಾಗುವಂತೆ ಸಮಂಜಸವಾದ ಹಣವನ್ನು ಅವರಿಂದ ಸಂಗ್ರಹಿಸಬೇಕೆಂದೂ ಆಜ್ಞಾಪಿಸಿತು. ಹೀಗೆ ಪಾಳೆಯಗಾರರ ಶಕ್ತಿಯನ್ನು ನಿಗ್ರಹಿಸಿದರು. ನಂತರ ಅವರೆಲ್ಲರಿಗೂ ಕ್ಷಮಾದಾನ ಮಾಡಿ ಜಮೀನ್ದಾರಿ ಒಡುವಳಿಯ ತತ್ವಗಳ ಪ್ರಕಾರ ಅವರ ಕಂದಾಯವನ್ನು ನಿರ್ಧರಿಸಿತು. ೧೮೬೧ರಲ್ಲಿ ಮೈಸೂರು ಸರಕಾರದವರು ಈ ಪಾಳೆಯಗಾರರೆಲ್ಲರನ್ನು ಅಧಿಕಾರಚ್ಯುತಿಗೊಳಿಸಿ ತಮ್ಮ ನಿಯಂತ್ರಣಕ್ಕೆ ತೆಗೆದುಕೊಂಡರು.

ಬ್ರಿಟಿಷ್ ಸರಕಾರವು ಪಾಳೆಯಗಾರರ ವಿಶ್ರಾಂತಿವೇತನ ಧನವನ್ನು ನಿರ್ಧರಿಸಿ ಕೊಟ್ಟಿದ್ದುದು ನಿಜವಾದರೂ, ಅವರು ಪೇಷ್ಕಷ್ ಸಂದಾಯ ನಿರ್ಬಂಧಕ್ಕೂ ಒಳಪಟ್ಟಿದ್ದರು. ಆದರೆ ಮೈಸೂರು ಸರಕಾರದವರು ಪಾಳೆಯಗಾರರ ಕುಟುಂಬಗಳಿಗೆ ವಿಶ್ರಾಂತಿ ವೇತನವನ್ನು ಮಾತ್ರವಲ್ಲದೆ ಉತ್ತರಾಧಿಕಾರ ಸೌಲಭ್ಯವನ್ನು ದಯಪಾಲಿಸಿದರು. ಇದರ ಜೊತೆಗೆ ಪಾಳೆಯಗಾರರಿಗೆ ಸಲ್ಲಿಸುವ ವಿಶ್ರಾಂತಿವೇತನ ನಿಮಿತ್ತವಾಗಿ ದತ್ತಕ ಸ್ವೀಕಾರಕ್ಕೆ ಅನುಮತಿ ನೀಡಿದರು.[೧೭೫]

ಟಿಪ್ಪೂಸುಲ್ತಾನನ ನಂತರ ಕರ್ನಾಟಕವನ್ನು ಪ್ರವೇಶಿಸಿದ ಬ್ರಿಟೀಷರು ಪಾಳೆಯಗಾರರ ಬಗ್ಗೆ ಹೈದರಾಲಿ ಮತ್ತು ಟಿಪ್ಪೂಸುಲ್ತಾನರು ಅನುಸರಿಸಿದ ನೀತಿಗಿಂತ ಕಠಿಣವಾದ ನೀತಿಯನ್ನು ಅನುಸರಿಸಿದರು. ಶರಣಾದವರನ್ನು, ಕಪ್ಪಕಾಣಿಕೆ ನೀಡುವವರನ್ನು ಹೈದರಾಲಿ-ಟಿಪ್ಪುಸುಲ್ತಾನರು ಮನ್ನಿಸಿ ಅವರ ಆಳ್ವಿಕೆಗೆ ಅವಕಾಶ ನೀಡುತ್ತಿದ್ದರು. ಆದರೆ ಅಂತಹ ಪ್ರಶ್ನೆಯೇ ಈಗ ಇರಲಿಲ್ಲ. ಪಾಳೆಯಗಾರರು ಮತ್ತು ಪಾಳೆಯಗಾರ ವಂಶಜರೆಲ್ಲರೂ ಬ್ರಿಟೀಷರು ನೀಡುವ ಮಾಸಿಕ ಇಲ್ಲವೆ ವಾರ್ಷಿಕ ವಿಶ್ರಾಂತಿವೇತನವನ್ನು ಒಪ್ಪಿಕೊಳ್ಳಬೇಕಾಯಿತು. ಬ್ರಿಟೀಷರ ಕೈಕೆಳಗೆ ಅಧಿಕಾರ ಪಡೆದ ನಿಜಾಮನು ದೊರೆಗಳ ಮನೆತನದವರಿಗೆ ಭೂಮಿಯನ್ನು ಜಹಗೀರು ಹಾಕಿಕೊಟ್ಟು ಅವರಿಂದ ಹೆಚ್ಚು ತೆರಿಗೆ, ಕಾಣಿಕೆ ಮುಂತಾದ ಮೂಲಗಳ ರೂಪದಲ್ಲಿ ಆದಾಯವನ್ನು ಸಂಗ್ರಹಿಸಿಕೊಳ್ಳುತ್ತಿದ್ದನು. ಜಹಗೀರು ಪಡೆದ ದೊರೆಗಳು ತಮ್ಮ ಪ್ರದೇಶದಲ್ಲಿನ ಕಂದಾಯ ಸಂಗ್ರಹ ಮಾಡಿಕೊಂಡು ಸುಖಕರ ಜೀವನ ನಡೆಸುತ್ತಿದ್ದರು. ಆದರೆ ಸ್ವಾತಂತ್ರ್ಯ ಪ್ರೇಮಿಗಳಾದ ಬೇಡ ದೊರೆಗಳು ಬ್ರಿಟೀಷರ ವಿರುದ್ಧ ಬಂಡಾಯವೆದ್ದರೂ ಅದರಿಂದೇನೂ ಲಾಭವಾಗಲಿಲ್ಲ. ಬ್ರಿಟೀಷರು ನೀಡುತ್ತಿದ್ದ ವಿಶ್ರಾಂತಿವೇತನದಲ್ಲಿಯೇ ಪಾಳೆಯಗಾರ ಮನೆತನದವರು ಜೀವನ ಮಾಡಬೇಕಾಗಿತ್ತು. ಕಾಲಕ್ರಮೇಣ ಈ ವಿಶ್ರಾಂತಿ ವೇತನವನ್ನು ಕಿತ್ತುಕೊಂಡರು. ಪಾಳೆಯಗಾರ ಕುಟುಂಬದವರನ್ನು ಮಿಲಿಟರಿ ಸೇವೆಯಲ್ಲಿ ಸಹಾಯಕರನ್ನಾಗಿ ನೇಮಿಸಿಕೊಂಡರು. ಪೋಲೀಸ್, ಅರಣ್ಯ ರಕ್ಷಕರನ್ನಾಗಿಯೂ ನೇಮಿಸಿಕೊಂಡು ಇಂತಿಷ್ಟು ಸಂಬಳ ಕೊಡುತ್ತಿದ್ದರು.[೧೭೬] ಈ ಪಾಳೆಯಗಾರರು ದುಸ್ಥಿತಿ ತಲುಪಿದ ಬಗ್ಗೆ ಹಾಗೂ ಅಧಿಕಾರವನ್ನು ಕಳೆದುಕೊಂಡ ನಂತರ ಸ್ಥಿತಿಯ ಬಗ್ಗೆ ಬುಕಾನನು ತನ್ನ ವರದಿಯಲ್ಲಿ ತಿಳಿಸಿದ್ದಾನೆ. At present as they recieve no pay, They are obliged to apply more closely to agriculture; for in that way they always employed their leisure; and there is a prospect of their becoming a quiet and industrious people, although they still retain their arms and an anxious desire for plunder.[೧೭೭] ಪಾಳೆಯಗಾರರಾಗಿ ರಾಜಾರೋಷವಾಗಿ ಬದುಕಿದ್ದ ಕುಟುಂಬಗಳನ್ನು ಸೇವಕವರ್ಗವನ್ನಾಗಿ ಮಾಡಿಕೊಂಡ ಬ್ರಿಟೀಷರು, ಬೇಡರು ಆರ್ಥಿಕವಾಗಿ ಸಬಲರಾಗದಂತೆ ನೋಡಿಕೊಂಡರು. ಊರಿನ ಶಾಂತಿ, ಸುವ್ಯವಸ್ಥೆಗಾಗಿ ಗಸ್ತು ತಿರುಗುತ್ತಿದ್ದ ಹಾಗೂ ಉತ್ತಮ ಸ್ಥಾನದಲ್ಲಿದ್ದ ತಳವಾರನನ್ನು ಗ್ರಾಮಲೆಕ್ಕಿಗರ ಕೈಕೆಳಗೆ ದುಡಿಯುವಂತೆ ಮಾಡಿದರು.

ಬೇಟೆಯಾಡುವುದನ್ನು ಸರಕಾರ ನಿಷೇಧಿಸಿದ ನಂತರ ಬೇಟೆಯನ್ನು ನೆಚ್ಚಿಕೊಂಡ ಕುಟುಂಬಗಳು ತೊಂದರೆಗೆ ಗುರಿಯಾದವು. ಅನೇಕ ಅರಣ್ಯಶಾಸನಗಳು ಜಾರಿಯಾಗಿದ್ದರಿಂದ ಅರಣ್ಯದೊಡನೆ ಮೊದಲಿದ್ದ ನಂಟು ಕಡಿಮೆಯಾಯಿತು. ಬೇಟೆಯು ಬೇಡರಂತಹ ಹಲವು ಬುಡಕಟ್ಟು ಜನಾಂಗಗಳ ಜೀವನಾಧಾರವಾಗಿತ್ತು. ಕಾಲಕ್ರಮೇಣ ಸಮಾಜದ ಕೆಳವರ್ಗದ ಜನಾಂಗದವರು ಕಾಡುಪ್ರಾಣಿಗಳನ್ನು ಬೇಟೆಯಾಡಲು ಪ್ರಾರಂಭಿಸಿದ್ದರಿಂದ ಬೇಟೆಯಾಡುವುದು ಬೇಡರಲ್ಲಿ ಮಾತ್ರ ಉಳಿಯಲಿಲ್ಲ. ಕಾಡಿನಲ್ಲಿ ಪ್ರಾಣಿಗಳ ಸಂತತಿ ಕಡಿಮೆ ಆಯಿತು. ಜನಸಂಖ್ಯೆ ಬೆಳೆದಂತೆ ಅರಣ್ಯನಾಶವಾಯಿತು. ದಟ್ಟವಾದ ಕಾಡುಗಳೂ ಮರೆಯಾಗುತ್ತ ಬಂದವು. ಅರಣ್ಯ ಇಲಾಖೆ ಬೇಡರನ್ನು ಅರಣ್ಯಕ್ಕೆ ಹೋಗದಂತೆ ತಡೆಯಿತು. ಜೀವನೋಪಾಯಕ್ಕಾಗಿ ಮಾಡಿಕೊಂಡ ಪಶುಪಾಲನೆ, ಕುರಿಸಾಕಾಣಿಕೆ, ಮೇಕೆಸಾಕಾಣಿಕೆ ಕಷ್ಟವಾಯಿತು. ಏಕೆಂದರೆ ಇವುಗಳ ಸಾಕಾಣಿಕೆ ಸಂಪೂರ್ಣವಾಗಿ ಅರಣ್ಯವನ್ನು ಅವಲಂಬಿಸಿತ್ತು. ಕಳ್ಳ ಮಾರ್ಗಗಳ ಮೂಲಕ ಕಾಡು ಪ್ರವೇಶಿಸಿದರು. ಆದರೆ ಕುರಿ, ಮೇಕೆ, ಪಶುಸಾಕಾಣಿಕೆ ವೃತ್ತಿಗೆ ಹೊಡೆತ ಬಿತ್ತು. ಕಾಲಕ್ರಮೇಣ ಅನೇಕ ಬೇಡರು ಈ ವೃತ್ತಿಗಳನ್ನು ಉಪವೃತ್ತಿಗಳನ್ನಾಗಿ ಮಾಡಿಕೊಂಡರು. ಇನ್ನು ಕೆಲವರು ಪೂರ್ಣ ಕೈಬಿಟ್ಟರು. ಕೃಷಿ ಮತ್ತಿತರ ಉದ್ಯೋಗಗಳ ಕಡೆ ಗಮನಹರಿಸಿದರು. ಸರಕಾರದವರು ಕುರಿಸಾಕಾಣಿಕೆ ಕೇಂದ್ರಗಳನ್ನು ತೆರೆದಿದ್ದರಿಂದ, ಕುರಿಸಾಕಾಣಿಕೆಗಳಿಗೆ ಉತ್ತೇಜನ ದೊರೆಯಿತು. ಅರಣ್ಯ ತೀರದಲ್ಲಿ ನೆಲೆಸಿರುವ ಬೇಡರು ದಕ್ಷಿಣ ಭಾರತದಲ್ಲಿಯೇ ಪ್ರಸಿದ್ಧಿ ಪಡೆದ ಅಮೃತಮಹಲ್ ಅಥವಾ ಸುಲ್ತಾನ್‌ತಳಿ ದನಗಳನ್ನು ಸಾಕುತ್ತಾರೆ. ಹೊಳಲ್ಕೆರೆಯಿಂದ ಗುಂಡೇರಿಯಿಂದ ಎರಡು ಮೂರು ಕೀ.ಮೀ ದೂರದಲ್ಲಿರುವ ಕಾಯಿನಾಡು ಮತ್ತು ರಾಮಗಿರಿ ಸುತ್ತುವರೆದ ೨ ಸಾವಿರಕ್ಕೂ ಹೆಚ್ಚು ಎಕರೆ ಭೂಮಿಯಲ್ಲಿ ಆರುನೂರು ಅಮೃತಮಹಲ್ ರಾಸುಗಳನ್ನು ಬೇಡರು ಸಾಕಿಕೊಂಡು ಬರುತ್ತಿದ್ದಾರೆ.[೧೭೮] ಅದೇ ರೀತಿ ಹೊಸದುರ್ಗ ತಾಲ್ಲೂಕಿನ ಅಜ್ಜಂಪುರದಲ್ಲಿಯೂ ಸಹ ಅಮೃತಮಹಲ್ ರಾಸುಗಳನ್ನು ಕಾಣಬಹುದು. ಹೈದರಾಲಿ ಚಿತ್ರದುರ್ಗ ನಾಯಕನನ್ನು ಸೋಲಿಸಿದ ನಂತರ ಈ ತಳಿಗಳನ್ನು ಮೈಸೂರಿಗೆ ಕೊಂಡೊಯ್ಯದನು ಎಂದು ತಿಳಿದುಬರುತ್ತದೆ. ಟಿಪ್ಪೂಸುಲ್ತಾನನು ಈ ತಳಿಯ ಹೋರಿಗಳನ್ನು ಅಭಿವೃದ್ಧಿಪಡಿಸಿದನು.[೧೭೯] ಈ ಅಮೃತ್‌ಮಹಲ್ ಹೋರಿಗಳನ್ನು ಸಾಕುವುದು, ಮೇಯಿಸುವ ಉಸ್ತುವಾರಿ ನೋಡಿಕೊಳ್ಳುವುದು ಮುಂತಾದ ಕೆಲಸಗಳನ್ನು ಮಾಡುವವರು ಬೇಡರೇ ಆಗಿದ್ದರು.

ಬೇಡಪಾಳೆಯಗಾರರು ದಾನ-ಧರ್ಮದಲ್ಲಿ ಉದಾರಿಗಳು. ಬೇಡಿದವರಿಗೆ, ಹಸಿದವರಿಗೆ ಎಂದೂ ಇಲ್ಲವೆನ್ನುತ್ತಿರಲಿಲ್ಲ. ಬೇಡಿದವರಿಗೆಲ್ಲಾ ಕೇಳಿದ್ದನ್ನು ಕೊಟ್ಟರು. ಹಾಗಾಗಿ ಈ ದಾನ, ಧರ್ಮ ಮಾಡುತ್ತಿದ್ದ ಪಾಳೆಯಗಾರರ ಆರ್ಥಿಕ ಸ್ಥಿತಿಯು ದುರ್ಬಲವಾಯಿತೆನ್ನಬಹುದು. ದೊರೆತನದ ಹಮ್ಮೋ ಇಲ್ಲಾ ದೊಡ್ಡಸ್ತಿಕೆಯ ಸಂಕೇತವೊ ಅಥವಾ ಮಾನವೀಯತೆಯ ದೃಷ್ಟಿಯೋ ಒಟ್ಟಿನಲ್ಲಿ ಬೇಡ

ಪಾಳೆಯಗಾರರು ಕೊಡುಗೈ ದಾನಿಗಳಾಗಿದ್ದರು. ಚಿತ್ರದುರ್ಗ ದೊರೆಗಳು ವೈರಿಗಳ ಇರುವಿಕೆಯ ಸುದ್ದಿಯನ್ನು ತಂದವರಿಗೆ, ಒಳ್ಳೆಯ ಸುದ್ದಿ ಹೇಳಿದವರಿಗೆ ಸಾಕಷ್ಟು ಬಹುಮಾನವನ್ನು ನೀಡುತ್ತಿದ್ದರು. ಒಳ್ಳೆಯ ಸುದ್ದಿಯನ್ನು ತಂದು ಹೇಳಿದವರಿಗೆ ಅವರ ಬಾಯಿ ತುಂಬಾ ಹೊನ್ನನ್ನು ಹಾಕಿಸುತ್ತಿದ್ದರು. ಯುದ್ಧದಲ್ಲಿ ಶತ್ರುವನ್ನು ಕೊಂದವರಿಗೆ ತಲೆ ಒಂದಕ್ಕೆ ಇಂತಿಷ್ಟು ಇನಾಮೆಂದು ಬಹುಮಾನವನ್ನು ಕೊಡುತ್ತಿದ್ದರು.[೧೮೦]

ಅನೇಕ ಮಠಗಳನ್ನು ದೇವಾಲಯಗಳನ್ನು ಬೇಡ ದೊರೆಗಳು ಕಟ್ಟಿಸಿಕೊಟ್ಟರು ಮತ್ತು ಅವುಗಳಿಗೆ ದಾನದತ್ತಿಯನ್ನು ನೀಡುತ್ತಿದ್ದರು. ಇಂತಹ ಮಠಗಳನ್ನು ಚಿತ್ರದುರ್ಗ, ಗುಡೇಕೋಟೆ, ಜರಿಮಲೆ, ಮತ್ತೋಡು, ನಾಯಕನಹಟ್ಟಿ, ಹರತಿ, ಕನಕಗಿರಿ ಮುಂತಾದ ಸ್ಥಳಗಳಲ್ಲಿ ನೋಡಬಹುದು. ಕೂಡಲೀಶೃಂಗೇರಿ ಮಠಕ್ಕೆ ಅನೇಕ ದೊರೆಗಳು ಭೂದಾನವನ್ನು ನೀಡಿದರು. ದಾನ, ದತ್ತಿ, ಉಂಬಳಿ, ಬಹುಮಾನ ಎಂದೆಲ್ಲಾ ಭೂಮಿಯನ್ನು ಕೊಡುತ್ತಲೆ ಬಂದರು. ದೇವಾಲಯಗಳು, ಮಠಗಳು ಆರ್ಥಿಕವಾಗಿ ಸಬಲವಾದವು. ಮಠಗಳು ಸಂಪತ್ತಿನ ಕೇಂದ್ರಗಳಾದವು. ಗುಡಿಗುಂಟೆಯ ರಾಜಾ ಜಡಿಸೋಮಪ್ಪನಾಯಕನು ಮುಜುಂದಾರರಿಗೆ, ರಾಜರ ಮುಂದೆ ಬೆಳ್ಳಿಬೆತ್ತ ಹಿಡಿಯುವ ಚೋಪುದಾರರಿಗೆ, ಹವಾಲ್ದಾರರಿಗೆ, ಸುಬೇದಾರರಿಗೆ, ಆನೆ ಮಾವುತರಿಗೆ, ನೀರು ಹೊರುವವರಿಗೆ, ಖಾಜಿಗಳಿಗೆ ತಮ್ಮ ಭೂಮಿಯನ್ನು ಇನಾಮು ಹಾಕಿಕೊಟ್ಟರು. ವಿನೋಬಾ ಭಾವೆಯವರ ಭೂದಾನ ಚಳುವಳಿಗೆ ಮಾರುಹೋಗಿ ೨೦೦ ಎಕರೆ ಜಮೀನನ್ನು ಭೂದಾನ ಮಾಡಿದ ಕೀರ್ತಿ ಇವರದಾಗಿದೆ.[೧೮೧] ಕನಕಗಿರಿ ನಾಯಕನಿಗೆ ನಿಜಾಮನು ಶ್ರೀ ಕನಕಚಲಪತಿದೇವರ ಜಾತ್ರೆ ನಡೆಸುವುದಕ್ಕಾಗಿ ೩೦೦೦ ರೂಗಳನ್ನು ಕೊಡುತ್ತಿದ್ದನು; ನಂತರ ಹಣ ಕೊಡುವುದನ್ನು ನಿಲ್ಲಿಸಿದನು. ಆದರೂ ಕನಕಗಿರಿಯ ರಂಗನಾಥಪ್ಪನಾಯಕರು ಸ್ವಂತ ಖರ್ಚಿನಿಂದ ಜಾತ್ರೆ ಮತ್ತು ನಿತ್ಯಪೂಜೆಗಳನ್ನು ನಡೆಸಿಕೊಂಡು ಬಂದರು.[೧೮೨] ಈ ದೊರೆಮನೆತನದ ವಂಶಸ್ಥರ ಪ್ರಕಾರ ಸಾಕಷ್ಟು ಭೂಮಿಯನ್ನು ಹಿಂದಿನವರು ಬೇಕಾಬಿಟ್ಟಿ ದಾನ ಮಾಡಿದ್ದಾರೆ. ಉದಾಹರಣೆಗೆ ರಾಜರ ಮುಂದೆ ಬೆತ್ತ ಹಿಡಿದವನಿಗೆ, ಕಹಳೆ ಊದಿದವನಿಗೆ, ಪಲ್ಲಕ್ಕಿ ಹೊತ್ತವರಿಗೆ, ವಾದ್ಯ ನುಡಿಸಿದವರಿಗೆ, ಕಳಸ ಬೆಳಗಿದವರಿಗೆ ಮುಂತಾದವರಿಗೆ ಭೂದಾನವನ್ನು ಮಾಡಿದ್ದರು.

ಬೇಡ ಪಾಳೆಯಗಾರರು ತಮ್ಮ ಅಧಿಕಾರವನ್ನು ಕಳೆದುಕೊಂಡ ನಂತರ ಬೇರೆ ಉದ್ಯೋಗದ ಕಡೆ ಯೋಚಿಸಲಿಲ್ಲ. ದೊರೆ ಮನೆತನದವರು ಉದ್ಯೋಗ ಮಾಡುವುದು ಅಪಮಾನ. ರಾಜವಂಶಸ್ಥರಿಗೆ ಅದು ಸಲ್ಲದು. ಏನಿದ್ದರೂ ಆಳುವುದು, ಅಧಿಕಾರ ನಡೆಸುವುದು ದೊರೆ ವಂಶಸ್ಥರಿಗೆ ಸೇರಿದ್ದು ಎಂಬ ಭಾವನೆ ಗಳು ಪಾಳೆಯಗಾರರಲ್ಲಿ ಮತ್ತು ಅವರ ವಂಶಜರಲ್ಲಿ ಬಂದವು. ಪಾಳೆಯಗಾರರಿಗೆ, ಅವರ ವಂಶಸ್ಥರಿಗೆ ನೀಡುತ್ತಿದ್ದ ವಿಶ್ರಾಂತಿ ವೇತನ ನಿಂತಾಗಲೂ ಇನ್ನು ಅದೇ ಹಿಂದಿನ ರಾಜ ವೈಭವ ಜೀವನವನ್ನು

ಬಯಸುತ್ತಿದ್ದರು. ರಾಜಗೌರವಗಳನ್ನು ಜನರಿಂದ ನಿರೀಕ್ಷಿಸುತ್ತಿದ್ದರು. ಕ್ರಮೇಣ ಆರ್ಥಿಕ ಸ್ಥಿತಿಯು ದುರ್ಬಲವಾಗುತ್ತಾ ಬಂದರೂ ಬೇರೆ ವೃತ್ತಿಗಳನ್ನು ಹುಡುಕುವ ಮನಸ್ಸು ಮಾಡಲಿಲ್ಲ. ಇದ್ದ ಆಸ್ತಿಯನ್ನೆಲ್ಲಾ ಮಾರಿಕೊಳ್ಳಲು ಪ್ರಾರಂಭಿಸಿದರು. ಬಹುತೇಕ ಪಾಳೆಯಗಾರರು ತಮ್ಮ ಹಿಂದಿನ ಆಸ್ತಿಯನ್ನೆಲ್ಲ ಮಾರಿಕೊಳ್ಳುತ್ತಾ ಬಂದಿದ್ದರಿಂದಲೇ ಇಂದು ಭೂ ರಹಿತರಾಗಿರುವರು. ಇತ್ತೀಚಿಗೆ ಜೀವನ ನಿರ್ವಹಣೆ ತುಂಬಾ ಕಷ್ಟವಾದಾಗ ಅನಿವಾರ್ಯವಾಗಿ ಸಿಕ್ಕ ಕೆಲಸಗಳಲ್ಲಿ ಸೇರಬೇಕಾಯಿತು.

ಆರ್ಥಿಕವಾಗಿ ಬೇಡ ಸಂಸ್ಥಾನಗಳಲ್ಲಿ ಪ್ರಬಲವಾಗಿದ್ದ ಚಿತ್ರದುರ್ಗ ಕಾಲ ಕ್ರಮೇಣ ದುರ್ಬಲವಾಗುತ್ತ ಬಂದಿತು. ಇದ್ದ ಸಂಪತ್ತು ಹೈದರಾಲಿಯು ದೋಚಿಕೊಂಡು ಹೋದನು. ನಂತರ ಚಿತ್ರದುರ್ಗ ನಾಯಕರ ವಂಶಸ್ಥರ ಸ್ಥಿತಿ ತೀರ ಸಂಕಷ್ಟಕ್ಕೊಳಗಾಯಿತು. ದೊಡ್ಡಮದಕರಿನಾಯಕನು. ಹೈದರಾಲಿಯ ಪರವಾಗಿ ಇತರ ಸಂಸ್ಥಾನಿಕರ ವಿರುದ್ಧ ನಂತರ ಟಿಪ್ಪೂಸುಲ್ತಾನನ ವಿರುದ್ಧವಾಗಿ ಬ್ರಿಟೀಷರ ಪರವಾಗಿ ಹೋರಾಡಿ ದನಾದರೂ ಅವನ ಆಸೆಯಂತೆ ಚಿತ್ರದುರ್ಗ ರಾಜ್ಯವು ತನಗೆ ಸಿಗಲಿಲ್ಲ. ಸ್ವತಂತ್ರವಾಗಿ ವಿಲಾಸಿಯಾಗಿ ಬದುಕಿದ್ದ ಪಾಳೆಯಗಾರರು ಕೊನೆಗೆ ಬ್ರಿಟೀಷರು ಕೊಡುವ ವಿಶ್ರಾಂತಿ ವೇತನಕ್ಕಾಗಿ ಹಾತೊರೆಯು ವಂತಾಯಿತು. ಜಾಣರಾದ ಬ್ರಿಟೀಷರು ಮತ್ತು ಅವರ ಅಧಿಕಾರಿಗಳು ಚಿತ್ರದುರ್ಗ ರಾಜ್ಯವನ್ನು ಬೇಡದೊರೆಗಳಿಗೆ ಬಿಟ್ಟುಕೊಡಲಿಲ್ಲ. ಇವರಿಗೆ ಕೊಡುತ್ತಿದ್ದ ವಿಶ್ರಾಂತಿ ವೇತನವು ಅವರ ಮಕ್ಕಳಲ್ಲಿ ಹಂಚಿಕೆ ಯಾಗುತ್ತಾ ಬಂದಿತು. ಕೊನೆ ಕೊನೆಗೆ ಅದು ನಿಂತಿತು. ಆಗ ಇದ್ದ ತಮ್ಮ ಆಸ್ತಿಯ ಉತ್ಪನ್ನದ ಮೇಲೆ ಅವಲಂಬಿತ ವಾಗಬೇಕಾಯಿತು. ಕೃಷಿ ಮಾಡಲಿಕ್ಕೆ ಬಾರದವರು ಹಾಗೂ ದೊರೆಗಳು ಎಂದು ರಾಜಮರ್ಯಾದೆಯಲ್ಲಿ ಬೆಳೆದವರು; ಇರುವ ಭೂಮಿಯಲ್ಲಿನ ಉತ್ಪನ್ನ ಕಡಿಮೆಯಾದಾಗ ಆ ಭೂಮಿಗಳನ್ನು ಮಾರುತ್ತಾ ಬಂದರು.

ಈಗ ಚಿತ್ರದುರ್ಗದ ನಾಯಕರ ವಂಶಸ್ಥರು ಚಳ್ಳಕೆರೆ, ಕಾಟಪ್ಪನಹಟ್ಟಿ, ಗುಡೇಕೋಟೆ ಮತ್ತು ಹೊಳಲ್ಕೆರೆ(ತಾ) ಅರೆಹಳ್ಳಿಹಟ್ಟಿ ಮುಂತಾದ ಸ್ಥಳಗಳಲ್ಲಿದ್ದಾರೆ. ಇವರ ಆರ್ಥಿಕ ಸ್ಥಿತಿ ಉತ್ತಮವಾಗಿಲ್ಲ. ನಂತರ ಕುಟುಂಬ ನಿರ್ವಹಣೆ ಮಾಡುವುದಕ್ಕೊಸ್ಕರ ತಮಗೆ ದೊರಕಿದ ಉದ್ಯೋಗವನ್ನು ಆಯ್ದು ಕೊಂಡಿ ರುವುದು ಕಂಡುಬರುತ್ತದೆ. ಕುಟುಂಬದ ಖರ್ಚಿಗಾಗಿ ಆಸ್ತಿಯನ್ನು ಮಾರುತ್ತಲೇ ಬಂದು ಈಗ ಆಸ್ತಿ ಹೀನರಾಗಿದ್ದಾರೆ. ಕೆಲವರು ಆಸ್ತಿಯನ್ನು ಉಳಿಸಿಕೊಂಡಿರುವರಾದರೂ ಅದು ಸ್ವಲ್ಪ. ಚಳ್ಳಕೆರೆಯಲ್ಲಿರುವ ಈ ಮನೆತನದ ಪಿ.ಆರ್. ವೀರಭದ್ರನಾಯಕರು ಗ್ರಂಥಾಲಯದಲ್ಲಿ ಸಹಾಯಕರಾಗಿ ಸೇವೆ ಮಾಡುತ್ತಿರುವರು. ಇವರ ತಂದೆಯವರು ಚಳ್ಳಕೆರೆ ಪುರಸಭೆಯಲ್ಲಿ ನೌಕರರಾಗಿದ್ದರು. ಆಗ ಸ್ವಲ್ಪ ಆಸ್ತಿ ಇತ್ತು. ಆದರೆ ನಂತರ ಅದನ್ನು ಮಾರಿದರು. ಚಳ್ಳಕೆರೆ ಸಮೀಪ ಕಾಟಪ್ಪನಹಟ್ಟಿಯಲ್ಲಿರುವ ವೀರಭದ್ರನಾಯಕರ ಚಿಕ್ಕಪ್ಪನವರಾಗಿದ್ದ ಗೋಪಾಲಸ್ವಾಮಿನಾಯಕರು ಯಾವುದೇ ಉದ್ಯೋಗದಲ್ಲಿರಲಿಲ್ಲ. ಹಾಗೂ ಅವರಿಗೆ

ಆಸ್ತಿಯೂ ಇಲ್ಲ. ಇದ್ದ ಆಸ್ತಿಯನ್ನು ಮಾರಿಕೊಂಡಿದ್ದಾರೆ. ಈಗ ಇವರ ಮಕ್ಕಳು ಬಸ್ ಏಜೆಂಟರಾಗಿ, ಹೋಟೆಲ್ ಮ್ಯಾನೇಜರ್ ಆಗಿ ಕೆಲಸ ಮಾಡುತ್ತಿದ್ದಾರೆ. ವೀರಭದ್ರನಾಯಕ ಅವರ ತಂದೆ ಕಾಲಕ್ಕೆ ಇದ್ದ ೧೦೦ ಎಕರೆ ಭೂಮಿಯಲ್ಲಿ ೫೦ ಎಕರೆ ದಾನ ಮಾಡಿದರೆಂದು ತಿಳಿದುಬರುವುದು. ಕೊನೆ ಕೊನೆಗೆ ತಮ್ಮ ಅಣ್ಣತಮ್ಮಂದಿರಿಗೆ ಉಳಿದದ್ದು ಎರಡೆರಡು ಎಕರೆ ಭೂಮಿ. ಉದ್ಯೋಗವಿಲ್ಲದಿದ್ದ ಸಂದರ್ಭದಲ್ಲಿ ಆ ಎರಡು ಎಕರೆ ಭೂಮಿಯನ್ನೂ ಮಾರಿಕೊಂಡರೆಂದು ತಿಳಿದುಬರುತ್ತದೆ. ಚಳ್ಳಕೆರೆಯ ಪಾದಗಟ್ಟೆ ಹತ್ತಿರ ನೆಲೆಸಿದ್ದ ಒಂದು ಕುಟುಂಬವು ಉದ್ಯೋಗ ಆಶ್ರಿತರಾಗಿ ಬೆಂಗಳೂರಿನಲ್ಲಿ ನೆಲೆಸಿದ್ದಾರೆ. ಹೊಳಲ್ಕೆರೆ(ತಾ) ಅರೆಹಳ್ಳಿಹಟ್ಟಿಯಲ್ಲಿರುವ ಬಿ.ಎಸ್.ಶ್ರೀನಿವಾಸನಾಯಕರು ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯಲ್ಲಿ ಉದ್ಯೋಗಿಯಾಗಿ ಕೆಲಸ ಮಾಡಿ ಈಗ ನಿವೃತ್ತರಾಗಿರುವರು. ಚಿತ್ರದುರ್ಗ ನಾಯಕರ ಈಗಿರುವ ವಂಶಸ್ಥರ ಪೈಕಿ ಆರ್ಥಿಕವಾಗಿ ಸ್ವಲ್ಪ ಸುಧಾರಿಸಿಕೊಂಡಿರುವವರೆಂದರೆ ಇವರೇ. ಇವರ ತಾತ ರಾಮಪ್ಪನಾಯಕರು ೧೮೫೭ರಲ್ಲಿ ನಡೆದ (ಶಸ್ತ್ರಾಸ್ತ್ರ ಬಂಡಾಯ) ಸಿಪಾಯಿದಂಗೆಯಲ್ಲಿ ಭಾಗವಹಿಸಿದ್ದರು. ಆಗ ಬ್ರಿಟೀಷರು ಇವರಿಗೆ ಮರಣದಂಡನೆ ಶಿಕ್ಷೆ ನೀಡಿದರು. ಈ ಶಿಕ್ಷೆಯಿಂದ ತಪ್ಪಿಸಿಕೊಳ್ಳಲು ನಾಲ್ಕು ವರ್ಷ ಕಷ್ಟಪಟ್ಟರು. ಆಗ ಸಾಕಷ್ಟು ಆಸ್ತಿಯನ್ನು ಬ್ರಿಟೀಷರು ಮುಟ್ಟುಗೋಲು ಹಾಕಿಕೊಂಡರು. ಮತ್ತು ಸ್ವಲ್ಪ ಆಸ್ತಿ ಆಗಿನ ಖರ್ಚಿಗೆಂದು ಹೋಯಿತು. ಈಗ ೧೫ ಎಕರೆ ಭೂಮಿ ಮಾತ್ರ ಇವರಿಗೆ ಉಳಿದಿದೆ. ಇವರು ಉದ್ಯೋಗ 'ಲ್ಲಿದ್ದಾಗ ಯಾವ ಆಸ್ತಿಯನ್ನೂ ಮಾಡದೆ ಪ್ರಾಮಾಣಿಕವಾಗಿ ಸೇವೆ ಮಾಡಿದರು. ಗುಡೇಕೋಟೆಯಲ್ಲಿರುವ ಡಾ.ರಾಜಾಜಯಚಂದ್ರರಾಜರು ವೃತ್ತಿಯಲ್ಲಿ ವೈದ್ಯರಾಗಿರುವರು. ಚಿತ್ರದುರ್ಗ ಜಿಲ್ಲೆಯ ಭರಮಸಾಗರ ಹೋಬಳಿ ಅಡವಿಗೊಲ್ಲನಹಳ್ಳಿಯಲ್ಲಿ ಇವರ ತಾತನವರ ಕಾಲಕ್ಕೆ ೧೫೦ ಎಕರೆ ಭೂಮಿ ಇತ್ತು. "ಆದರೆ ಅದನ್ನು ನಿಭಾಯಿಸಲು ಆಗದೆ ಮಾರಾಟ ಮಾಡಿದೆವು" ಎಂದು ಜಯಚಂದ್ರರವರು ಹೇಳುವರು. ಜಯಚಂದ್ರರಾಜರ ಚಿಕ್ಕಪ್ಪ ರಾಜಾ ಬಿ.ಜಯಸ್ವಾಮಿನಾಯಕರು ಮಿಲಿಟೆರಿಯಲ್ಲಿ ಸೇವೆಸಲ್ಲಿಸಿದ್ದರು. ತಂದೆ ರಾಜಾ ಬಿಚ್ಚುಗತ್ತಿ ಪರಶುರಾಮಪ್ಪನಾಯಕರು ಪೋಲಿಸ್ ಇನ್ಸ್‌ಪೆಕ್ಟರ್ ಆಗಿದ್ದರು. ಹಾಗೂ ಉದ್ಯೋಗದಲ್ಲಿ ಈ ಮನೆಯವರು ಇದ್ದುದರಿಂದ ಆರ್ಥಿಕವಾಗಿ ಉತ್ತಮವಾಗಿದ್ದರು. ಕಾಲಕ್ರಮೇಣ ಭೂಮಿಯನ್ನು ಮಾರಿಕೊಂಡು ಬಂದುದರಿಂದ ಚಿತ್ರದುರ್ಗ ನಾಯಕರ ವಂಶಿಕರಲ್ಲಿ ಈಗ ಭೂಮಿ ಉಳಿದಿಲ್ಲ. ಶ್ರೀನಿವಾಸನಾಯಕರೊಬ್ಬರೆ ಸ್ವಲ್ಪ ಭೂಮಿಯನ್ನು ಹೊಂದಿರುವವರು. ಇನ್ನು ಸರಕಾರಿ ಉದ್ಯೋಗದಲ್ಲಿ ಸೇರಿದವರ ಸಂಖ್ಯೆಯೂ ಕಡಿಮೆ. 'ರಾಜರಾದ ನಾವೇಕೆ ಸರಕಾರಿ ಉದ್ಯೋಗಕ್ಕೆ ಹೋಗಬೇಕು. ಸರಕಾರವನ್ನು ನಡೆಸಿದ ಕುಲದವರು ನಾವು' ಎಂಬ ಭಾವನೆ ಈ ಪಾಳೆಯಗಾರ ಮನೆತನದಲ್ಲಿತ್ತೆಂದು ತಿಳಿದುಬಂದಿದೆ. ಇತ್ತೀಚಿನ ಒಂದು ತಲೆಮಾರಿನ ನಂತರದಲ್ಲಿ ಅನಿವಾರ್ಯವಾಗಿ ಬೇರೆ ಬೇರೆ ಉದ್ಯೋಗಗಳನ್ನು ಆಶ್ರಿಸಬೇಕಾದಂತಹ ಪರಿಸ್ಥಿತಿ ಈ ಪಾಳೆಯಗಾರರಿಗೆ ಬಂದೊದಗಿದೆ.[೧೦೩]

ಬಳ್ಳಾರಿ ಜಿಲ್ಲೆಯ ಗುಡೇಕೋಟೆ ಮತ್ತು ಜರಿಮಲೆ ಪಾಳೆಯಗಾರರ ವಂಶಸ್ಥರು ಅಲ್ಲಿಯೇ ನೆಲೆಸಿದ್ದಾರೆ. ಪ್ರಸ್ತುತ ಈ ಸಂಸ್ಥಾನಿಕರ ಆರ್ಥಿಕ ಸ್ಥಿತಿಯು ಶೋಚನೀಯವಾಗಿದೆ. ಸ್ವಲ್ಪ ಮಟ್ಟಿಗೆ ಗುಡೇಕೋಟೆಯ ಪಾಳೆಯಗಾರರ ವಂಶಸ್ಥರು ಉತ್ತಮ ಸ್ಥಿತಿಯಲ್ಲಿದ್ದಾರೆ. ಗುಡೇಕೋಟೆ ಸಂಸ್ಥಾನಿಕರು ಆಸ್ತಿಯನ್ನು ಸುರಕ್ಷಿತವಾಗಿ ಕಾಪಾಡಿಕೊಂಡು ಬಂದಿರುವರು. ಏಕಪುತ್ರಸಂತಾನ ಹೆಚ್ಚಾಗಿ ಕಂಡುಬಂದಿದ್ದರಿಂದ ಆಸ್ತಿಯು ಹಂಚಿಕೆಯಾಗಿಲ್ಲ ಮತ್ತು ಯಾರೂ ಉದ್ಯೋಗಕ್ಕೆ ಸೇರುವ ಪ್ರಮೇಯವೇ ಇರಲಿಲ್ಲ. ಈಗ ಗುಡೇಕೋಟೆಯಲ್ಲಿರುವ ಕೃಷ್ಣವರ್ಮರಾಜರು ಹೇಳುವಂತೆ ಇವರ ತಾತನವರ ಕಾಲಕ್ಕೆ ಸಾಕಷ್ಟು ಭೂಮಿ ಇತ್ತು. ಅಲ್ಲದೆ ಅರಣ್ಯ ಕಂದಾಯ(ಫಾರೆಸ್ಟ್ ರೆವಿನ್ಯೂ)ವನ್ನು ಇವರಿಗೆ ಸರಕಾರದವರು ಕೊಟ್ಟಿದ್ದರು. ಈ ಕಂದಾಯದಿಂದ ಸುಖವಾಗಿದ್ದರು. ಆದರೆ ನಂತರ ಈ ಕಂದಾಯವನ್ನು ಸರಕಾರವೇ ಸಂಗ್ರಹಿಸಿಕೊಳ್ಳಲಾರಂಭಿಸಿತು. ಕೃಷ್ಣವರ್ಮರಾಜರ ತಂದೆಯವರ ಕಾಲದಲ್ಲಿ ಭೂಮಿಯು ೧೦೦ ಎಕರೆಗಿಂತ ಹೆಚ್ಚು ಇತ್ತು. ಈಗ ೧೦೦ ಎಕರೆ ಇದೆ. ಈ ಭೂಮಿಯಲ್ಲಿ ೫೦ ಎಕರೆಯನ್ನು ಕೃಷ್ಣವರ್ಮರಾಜರು ತಮ್ಮ ಅಕ್ಕನವರಿಗೆ ಕೊಟ್ಟಿರುವರು. ವ್ಯವಸಾಯವು ಮುಖ್ಯವೃತ್ತಿಯಾದರೂ ರಾಜಕೀಯದಲ್ಲಿ ಸಕ್ರಿಯವಾಗಿ ಮುಂದುವರೆದುಕೊಂಡು ಬಂದಿದ್ದಾರೆ. ಕೃಷ್ಣವರ್ಮರಾಜರ ತಂದೆಯವರು ರಾಜಕೀಯದಲ್ಲಿ ಪ್ರಭಾವಿತ ವ್ಯಕ್ತಿಗಳಾಗಿದ್ದರು. ಈ ರಾಜಕೀಯ ಕ್ಷೇತ್ರದಲ್ಲಿ ಬೆಳೆಸಿದ್ದರೂ ಯಾವುದೇ ಆಸೆ, ಆಕಾಂಕ್ಷೆಗಳಿಗೆ ಬಲಿಯಾಗದೆ ಪ್ರಾಮಾಣಿಕವಾಗಿ ಜನರ ಸೇವೆಯನ್ನು ಮಾಡಿಕೊಂಡು ಬಂದಿದ್ದರು.[೧೫೪] ಈಗಲೂ ಕೃಷ್ಣವರ್ಮ ರಾಜರು ಪ್ರಾಮಾಣಿಕ ಬದುಕಿಗೆ ಹೆಸರಾದವರು. ಜರಿಮಲೆ ಪಾಳೆಯಗಾರರ ವಂಶಿಕರ ಸ್ಥಿತಿ ತೀರಾ ಶೋಚನೀಯವಾಗಿದೆ. ಜರಿಮಲೆಯಲ್ಲಿ ನೆಲೆಸಿರುವ ಈ ಪಾಳೆಯಗಾರರ ವಂಶಸ್ಥರ ಒಟ್ಟು ಆಸ್ತಿ ೧೨ ಎಕರೆ ಮಾತ್ರ. ಇವರ ತಾತನವರ ಕಾಲಕ್ಕೆ ೧೫೦ ಎಕರೆ ಭೂಮಿಯನ್ನು ಹೊಂದಿದ್ದರು. ಈ ಭೂಮಿಯು ಇವರ ತಂದೆಯ ಕಾಲಕ್ಕೆ ಹೋಯಿತು ಮತ್ತು ಸರಕಾರದಿಂದ ಬರುತ್ತಿದ್ದ ವಿಶ್ರಾಂತಿ ವೇತನವೂ ನಿಂತುಹೋಯಿತು. ಜರಿಮಲೆಯಲ್ಲಿರುವ ಈ ಮನೆತನದ ಹಿರಿಯರೂ ಆಗಿರುವ ರಾಜಾಪಂಪಾಪತಿನಾಯಕರು ಸರಕಾರದಿಂದ ಏನಾದರೂ ಬರುವ ನಿರೀಕ್ಷೆಯಲ್ಲಿದ್ದಾರೆ. ಇವರ ಮನೆ ಬೀಳುವ ಸ್ಥಿತಿಯಲ್ಲಿದೆ. ಈಗ ಇವರು ಭೂಮಿ ಖುಷ್ಕಿ. ಮಳೆ ಬಂದರೆ ಮಾತ್ರ ಬೆಳೆ. ಹಿಂದಿನ ದಿನಗಳಲ್ಲಿ ಮಳೆ ಬೆಳೆ ಚೆನ್ನಾಗಿ ಆಗುತ್ತಿತ್ತು. ರೈತರು ದೊರೆಗಳ ಪಾಲು ಎಂದು ದವಸಧಾನ್ಯ ಮತ್ತು ಕಾಣಿಕೆಯನ್ನು ಇವರಲ್ಲಿಗೇ ಬಂದು ಕೊಡುತ್ತಿದ್ದರು. ಈಗ ಮಳೆ ಬೆಳೆ ಚೆನ್ನಾಗಿ ಆದರೂ ಯಾರೂ ಅವರಿದ್ದಲ್ಲಿಗೆ ಬಂದು ಈ ತರಹದ ಕಾಣಿಕೆಗಳನ್ನು ನೀಡುತ್ತಿಲ್ಲ. ಹಾಗಾಗಿ ದೊರೆಗಳೇ ಕೆಲವೊಂದು ಸಂದರ್ಭಗಳಲ್ಲಿ ರೈತರಲ್ಲಿಗೆ ಹೋಗಿ ಕಾಣಿಕೆಯನ್ನು, ಧವಸಧಾನ್ಯವನ್ನು ಕೇಳಿ ಪಡೆದುಕೊಂಡು ಬರುತ್ತಾರೆ. ಈ ಬಗ್ಗೆ ಇವರಲ್ಲಿ ನೋವಿದೆ. ಪಂಪಾಪತಿನಾಯಕರನ್ನು ಹೊರತುಪಡಿಸಿದರೆ ಉಳಿದ ಅಣ್ಣತಮ್ಮಂದಿರ ಎರಡು

ಮನೆಗಳು ಸ್ವಲ್ಪ ಉತ್ತಮವಾಗಿವೆ. ಈ ಮನೆತನದಲ್ಲಿ ಉದ್ಯೋಗಕ್ಕೆ ಸೇರಿದವರ ಸಂಖ್ಯೆ ಕಡಿಮೆ ಇತ್ತೀಚಿಗೆ ಕೆಲವರು ಖಾಸಗಿ ಸಂಸ್ಥೆಯಲ್ಲಿ ಶಿಕ್ಷಕರಾಗಿ, ಇತರ ಇಲಾಖೆಗಳಲ್ಲಿ ಉದ್ಯೋಗಿಗಳಾಗಿ ಕೆಲಸ ಮಾಡುತ್ತಿದ್ದಾರೆ.[೧೮೫] ಒಟ್ಟಿನಲ್ಲಿ ಈ ಮನೆತನದವರು ಇತರರಂತೆ ಜೀವನವನ್ನು ನಿರ್ವಹಿಸುತ್ತಿರುವುದನ್ನು ಕಾಣಬಹುದು.

ಮತ್ತೋಡು ಪಾಳೆಯಗಾರರ ವಂಶಸ್ಥರು ಈಗ ಮತ್ತೋಡು ಸಮೀಪ ಅರಸಿನತೋಟದಲ್ಲಿ ನೆಲೆಸಿದ್ದಾರೆ. ಕೆಲವರು ದಾವಣಗೆರೆ, ಮೈಸೂರು, ಬೆಂಗಳೂರುಗಳಲ್ಲಿ ನೆಲೆಸಿದ್ದಾರೆ. ಮತ್ತೆ ಕೆಲವರು ವಿದೇಶದಲ್ಲಿದ್ದಾರೆ. ಅರಸಿನತೋಟದಲ್ಲಿರುವವರ ಒಟ್ಟು ಆಸ್ತಿ ೧೫ ಎಕರೆ. ಉನ್ನತ ಉದ್ಯೋಗಕ್ಕೆ ಹೋದವರು ಸ್ವಲ್ಪ ಹೆಚ್ಚು ಆಸ್ತಿಯನ್ನು ಮಾಡಿದ್ದಾರೆ. ಕೆಲವರು ಇದ್ದ ಆಸ್ತಿಯನ್ನು ಮಾರಿಕೊಂಡು ಹೋಗಿದ್ದಾರೆ. ವಿದೇಶದಲ್ಲಿ ನೆಲೆಸಿರುವವರ ಆಸ್ತಿ, ಮನೆಗಳು ಅರಸಿನತೋಟದಲ್ಲಿ ಇವೆ. ಇಂಜಿನಿಯರ್, ಡಾಕ್ಟರ್, ಐ.ಎ.ಎಸ್., ಕೆ.ಎ.ಎಸ್ ಮುಂತಾದ ಉನ್ನತ ಹುದ್ದೆಗಳಲ್ಲಿ ಕೆಲವರು ಇದ್ದರು. ಪರಪ್ಪನಾಯಕರು ಬಸ್ ಮಾಲೀಕರಾಗಿದ್ದರು. ಹಾಲಪ್ಪನಾಯಕರು ಐ.ಎ.ಎಸ್ ಅಧಿಕಾರಿಯಾಗಿದ್ದರು. ಸಿದ್ಧರಾಮಣ್ಣನಾಯಕರು ಕೆ.ಎ.ಎಸ್ ಅಧಿಕಾರಿಗಳಾಗಿದ್ದರು.[೧೮೬] ಉದ್ಯೋಗಸ್ಥರಾಗಿದ್ದ ಇವರ ಆರ್ಥಿಕಸ್ಥಿತಿ ಅತ್ಯುತ್ತಮವಾಗಿತ್ತು. ಇವರ ಮಕ್ಕಳಲ್ಲಿ ಕೆಲವರು ವಿದೇಶದಲ್ಲಿ ಉದ್ಯೋಗ ಮಾಡುತ್ತಿದ್ದಾರೆ. ಕೆಲವರು ಬೆಂಗಳೂರಿನಲ್ಲಿ ಉನ್ನತ ಹುದ್ದೆಗಳಲ್ಲಿದ್ದಾರೆ. ಉದ್ಯೋಗಕ್ಕೆ ಹೋದವರ ಕುಟುಂಬಗಳು ಉದ್ಯೋಗದಲ್ಲಿಯೇ ಮುಂದು ವರೆದವು. ಆದರೆ ಅರಸಿನತೋಟದಲ್ಲಿರುವ ಕುಟುಂಬಗಳು ಸಂಪೂರ್ಣವಾಗಿ ಕೃಷಿಯನ್ನು ಅವಲಂಬಿಸಿವೆ. ಇರುವ ೧೫ ಎಕರೆ ಭೂಮಿಯಲ್ಲಿ ಐದು ಕುಟುಂಬಗಳು ಜೀವನವನ್ನು ಮಾಡುತ್ತಿವೆ. ಪಾಳೆಯಗಾರ ಎಂದು ಕರೆದುಕೊಂಡರೆ ಸರಕಾರದಿಂದ ಏನೂ ಸೌಲಭ್ಯವಿಲ್ಲವೆಂಬ ಅರಿವು ಮಲ್ಲಿಕಾರ್ಜುನನಾಯಕ ಎಂಬುವರಲ್ಲಿದೆ. ಅಂದರೆ ಈ ಕುಟುಂಬಗಳು ಆರ್ಥಿಕವಾಗಿ ಸರಕಾರದ ಸೌಲಭ್ಯಗಳನ್ನು ಬಯಸುತ್ತವೆಂದು ತಿಳಿಯುತ್ತದೆ.[೧೮೭]

ನಾಯಕನಹಟ್ಟಿ ಪಾಳೆಯಗಾರರ ವಂಶಸ್ಥರು ನಾಯಕನಹಟ್ಟಿ ಮತ್ತು ನಾಯಕನಹಟ್ಟಿ ಸಮೀಪ ದೊರೆಗಳಹಟ್ಟಿಯಲ್ಲಿ ನೆಲೆಸಿದ್ದಾರೆ. ಈ ವಂಶಸ್ಥರ ಒಟ್ಟು ಆಸ್ತಿ ಈಗ ೩೬ ಎಕರೆಗಳು ಮಾತ್ರ. ಈ ಆಸ್ತಿಯಲ್ಲಿ ಇತ್ತೀಚೆಗೆ ಖರೀದಿ ಮಾಡಿದ್ದು ಸ್ವಲ್ಪ ಭೂಮಿಯೂ ಸೇರಿದೆ. ದೊರೆಗಳ ಹಟ್ಟಿಯಲ್ಲಿರುವ ಶಿವಸ್ವಾಮಿನಾಯಕರ ತಂದೆ ಪಟೇಲ ಪುಟ್ಟಬಸಪ್ಪನಾಯಕರ ಕಾಲಕ್ಕೆ ೧೦೦ ಎಕರೆ ಭೂಮಿ ಇತ್ತು. ಹಿರೇಮನೆಯವರೆಂದು ಕರೆಯಲಾಗುವ ನಾಯಕನಹಟ್ಟಿಯಲ್ಲಿರುವ ದಿ.ತಿಪ್ಪೇಸ್ವಾಮಿಯವರಿಗೆ ಆಸ್ತಿಯೇ ಇರಲಿಲ್ಲ. ಕಾಲಾನಂತರದಲ್ಲಿ ಇದ್ದ ಆಸ್ತಿಯನ್ನು ಇವರೂ ಮಾರುತ್ತಾ ಬಂದರು. ಈ ಮನೆತನದವರು ಒಂದೆ ವಿಶ್ರಾಂತಿವೇತನ ಬೇಡ ಎಂದು ಬರೆದುಕೊಟ್ಟಿದ್ದಕ್ಕಾಗಿ ಇವರಾರಿಗೂ ವಿಶ್ರಾಂತಿವೇತನ ಬರಲಿಲ್ಲ.

ನಂತರ ಆರ್ಥಿಕ ಸ್ಥಿತಿ ಬಿಕ್ಕಟ್ಟಾದಾಗ ವಿಶ್ರಾಂತಿವೇತನವನ್ನು ಕೇಳಿಕೊಂಡರು. ಆದರೆ ದೊರಕಲಿಲ್ಲ. ಬಹುತೇಕವಾಗಿ ಹಟ್ಟಿಮನೆತನದ ವಂಶಸ್ಥರು ಕೃಷಿಯನ್ನೇ ನೆಚ್ಚಿಕೊಂಡಿರುವರು. ಇತ್ತೀಚೆಗೆ ಕೆಲವು ಮಕ್ಕಳು ವಿದ್ಯಾಭ್ಯಾಸ ಪಡೆದುಕೊಂಡು ನಿರುದ್ಯೋಗಿಗಳಾಗಿರುವುದು ಕಂಡುಬರುತ್ತದೆ. ಈ ಮನೆತನಕ್ಕೆ ಸೇರಿದ ಕುಟುಂಬವೊಂದು ಚಳ್ಳಕೆರೆ ಬಳಿ ಕಾಟಪ್ಪನಹಟ್ಟಿಯಲ್ಲಿ ನೆಲೆಸಿದೆ. ಈ ಕುಟುಂಬದವರು ಬಸ್ ಏಜೆಂಟರಾಗಿ ಜೀವನವನ್ನು ನಿರ್ವಹಿಸುತ್ತಿದ್ದಾರೆ. ಈ ಕುಟುಂಬದವರು ಇತ್ತೀಚಿಗೆ ಸ್ವಲ್ಪ ಆಸ್ತಿಯನ್ನು ಖರೀದಿಸಿದ್ದಾರೆ. ಇಂದಿನ ಆಧುನಿಕ ಕಾಲದಲ್ಲೂ ಯಾವುದೇ ಬಸ್ ಸಂಚರಿಸದಂತಹ ಕುಗ್ರಾಮವೊಂದರಲ್ಲಿ (ದೊರೆಗಳಹಟ್ಟಿ) ಹಟ್ಟಿಸಂಸ್ಥಾನಿಕ ವಂಶೀಕರು ನೆಲೆಸಿದ್ದಾರೆ. ಅವರ ಸದ್ಯದ ಬದುಕು ಹೇಗಿದೆಯೆಂಬುದನ್ನು ಇದು ತೋರಿಸಿಕೊಡುತ್ತದೆ.[೧೮೮]

ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿನ ಬೇಡ ಸಂಸ್ಥಾನಿಕರು ೧೯೪೮ರವರೆಗೆ ರಾಜಕೀಯ ಅಧಿಕಾರದಲ್ಲಿದ್ದುದರಿಂದ ಕೆಲವರು ಆರ್ಥಿಕವಾಗಿ, ರಾಜಕೀಯವಾಗಿ ಉನ್ನತ ಸ್ಥಾನದಲ್ಲಿದ್ದಾರೆ. ಆದರೆ ಇನ್ನು ಕೆಲವರು ಆರ್ಥಿಕವಾಗಿ ಆಧೋಗತಿಗೆ ಇಳಿದಿದ್ದಾರೆ. ಗುಡಗುಂಟಿ ದೊರೆಗಳ ವಂಶೀಕರಾದ ರಾಜಾ ಅಮರಪ್ಪನಾಯಕರು ಎರಡುಬಾರಿ ವಿಧಾನಸಭಾ ಸದಸ್ಯರಾಗಿದ್ದರು. ಇವರ ತಂದೆಯವರ ಕಾಲಕ್ಕೆ ೪೨ ಹಳ್ಳಿಗಳ ಜಹಗೀರು ಇತ್ತು. ಈ ಹಳ್ಳಿಗಳ ಮೇಲೆ ದೊರೆಗಳು ಪೊಲೀಸ್ ಮತ್ತು ಕಂದಾಯ ಸಂಗ್ರಹಣೆಯ ಅಧಿಕಾರವನ್ನು ಹೊಂದಿದ್ದರು. ಇವರು ಗುಡಗುಂಟಿಯ ಜನರಿಗೆ ನೀರು ಸರಬರಾಜು ಮಾಡುವುದಕ್ಕಾಗಿಯೇ ಉಚಿತವಾಗಿ ಈಗಿರುವ ಹಟ್ಟಿ ಚಿನ್ನದ ಗಣಿ ಪ್ರದೇಶವನ್ನು ಬಿಟ್ಟುಕೊಟ್ಟಿದ್ದರು. ಸದ್ಯದಲ್ಲಿ ಅಮರಪ್ಪ ನಾಯಕರು ಕೃಷಿಕರಾಗಿ, ಪ್ರಭಾವಿ ರಾಜಕಾರಣಿಗಳಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಈಗ ಅವರಿಗೆ ೧೦೦ ಎಕರೆ ಭೂಮಿ ಇದೆ. 'ಉಳುವವನೇ ಒಡೆಯ' ಕಾನೂನು ಪ್ರಕಾರ ಯಾರೂ ದೊರೆಗಳ ವಿರುದ್ಧ ಅರ್ಜಿಹಾಕಲಿಲ್ಲ. ಕಾರಣ ಅಷ್ಟೊತ್ತಿಗೆ ದೊರೆಗಳೇ ಭೂಮಿಯನ್ನು ರೈತರಿಗೆ ಬಿಟ್ಟುಕೊಟ್ಟಿದ್ದರು. ಆರ್ಥಿಕವಾಗಿ ಸಂಪನ್ನರಾಗಿರುವ ಇವರಿಗೆ ಮಾಜಿ ವಿಧಾನಸಭೆ ಸದಸ್ಯರಿಗೆಂದು ಕೊಡುವ ಪಿಂಚಣಿ ರೂ.೪೫೦೦ ಬರುತ್ತದೆ. ಒಳ್ಳೆಯ ದರ್ಬಾರ್, ಸಾಕಷ್ಟು ಆಸ್ತಿ, ಹಿಂದಿನ ರಾಜಗೌರವ, ಇಂದಿನ ರಾಜಕೀಯ ಸ್ಥಾನಮಾನ ಮುಂತಾದವುಗಳ ಮೂಲಕ ಅಮರಪ್ಪನಾಯಕರು ಸುಖವಾಗಿ ಜೀವಿಸುತ್ತಿದ್ದಾರೆ.[೧೮೯]

ಗುಂತಗೋಳ ಸಂಸ್ಥಾನಿಕರ ಕುಟುಂಬಗಳು ಗುಡಗುಂಟಿಯಲ್ಲಿ ಇತ್ತೀಚೆಗೆ ಬಂದು ಉಳಿದುಕೊಂಡಿವೆ. ಈ ಸಂಸ್ಥಾನಿಕರ ಒಟ್ಟು ಆಸ್ತಿ ಈಗ ೧೫೦ ಎಕರೆ. ಈ ಆಸ್ತಿಯು ಮೂರು ಕುಟುಂಬಗಳಲ್ಲಿ ಹಂಚಿಕೆಯಾಗಿದೆ. ಇವರ ತಂದೆಯವರ ಕಾಲಕ್ಕೆ ಸಾಕಷ್ಟು ಭೂಮಿ ಇತ್ತು. ಅವರು ದಾನ, ಇನಾಮು ಎಂದು ಭೂಮಿಯನ್ನು ಕಳೆದರು. ಈಗಿರುವ ಭೂಮಿ ಕೃಷ್ಣಾಬಲದಂಡೆ ಯೋಜನೆಯಿಂದ ನೀರಾವರಿಯಾಗಿದೆ. ಹಿರಿಯುವರಾದ ರಾಜಾ ರಾಯಪ್ಪನಾಯಕರು ಪ್ರಭಾವಿರಾಜಕಾರಣಿಗಳು. ಇವರ ಸಹೋದರ ರಾಜಾ

ಅಮರೇಶ್ವರನಾಯಕರು ಬಂಧಿಖಾನೆ, ಗೃಹದಳ ಮತ್ತು ಕಾನೂನುಮಾಪನ ರಾಜ್ಯಖಾತೆ ಸಚಿವರಾಗಿರುವರು. ಚಿಕ್ಕವರಾದ ಶ್ರೀನಿವಾಸನಾಯಕರು ಸಹಾ ರಾಜಕೀಯದಲ್ಲಿ ಮುನ್ನಡೆಯುತ್ತಿದ್ದಾರೆ. ಒಳ್ಳೆಯ ಮನೆ, ನೀರಾವರಿ ಭೂಮಿ, ಉತ್ತಮ ರಾಜಕೀಯ ಸ್ಥಾನಮಾನಗಳನ್ನು ಅನುಭವಿಸುತ್ತಾ ಈ ಮನೆತನದ ದೊರೆಗಳು ಇರುವರು.[೯೦]

ದೇವದುರ್ಗ ಸಂಸ್ಥಾನಿಕ ವಂಶಿಕರು ದೇವದುರ್ಗದಲ್ಲಿರುವರು. ಮನೆತನದವರ ಒಟ್ಟು ಆಸ್ತಿ ೧೨೦ ಎಕರೆ. ಈ ಆಸ್ತಿಯು ಮೂರು ಕುಟುಂಬಗಳಲ್ಲಿ ಹಂಚಿಕೆಯಾಗಿದೆ. ಆರ್ಥಿಕವಾಗಿ ಈ ಸಂಸ್ಥಾನಿಕರು ಅಷ್ಟೇನೂ ಶ್ರೀಮಂತರಲ್ಲ. ಹಿರಿಯವರಾದ ರಾಜಾಕಿಲಿಚನಾಯಕರು ವೃತ್ತಿಯಲ್ಲಿ ವಕೀಲರಾಗಿದ್ದರು. ಇವರ ಮಗ ರಾಯಚೂರು ಥರ್ಮಲ್ ಶಾಖೋತ್ಪನ್ನ ಘಟಕದಲ್ಲಿ ಉದ್ಯೋಗಿಯಾಗಿದ್ದರು. ಕಿಲಿಚನಾಯಕರ ಸಹೋದರ ಮಕ್ಕಳಲ್ಲಿ ಕೆಲವರು ಕಂಟ್ರಾಕ್ಟರ್ ಎಂದು ಕೆಲಸ ಮಾಡುವರು. ಕೆಲವರು ರಾಜಕೀಯದಲ್ಲಿ ರುವರು. ಈ ಮನೆತನದವರಲ್ಲಿ ಸರಕಾರಿ, ಅರೆಸರಕಾರಿ ಅಥವಾ ಖಾಸಗಿರಂಗದಲ್ಲಿ ಉದ್ಯೋಗಕ್ಕೆ ಸೇರಿದವರ ಸಂಖ್ಯೆ ಕಡಿಮೆ. ಇತ್ತೀಚಿಗೆ ಶಿಕ್ಷಣ ಪಡೆದುಕೊಳ್ಳುವ ಮತ್ತು ಉದ್ಯೋಗಕ್ಕೆ ಸೇರುವ ಪ್ರಯತ್ನಗಳು ಈ ಮನೆತನದವರಲ್ಲಿ ಕಂಡುಬರುತ್ತಲಿವೆ. ಹಿಂದೆ ಭೂಮಿಯು ಬಹಳವಿತ್ತು. ಕೆರೆಗಳಿರುವ ಭೂಪ್ರದೇಶವೆಲ್ಲಾ ಇವರದೇ ಆಗಿತ್ತು. ಕೆರೆಯಲ್ಲಿ ನೀರು ಖಾಲಿಯಾದಾಗ ಬಿತ್ತುವುದು ಬೆಳೆಯುವುದು ನಡೆಯುತ್ತಿತ್ತು. ಆದರೆ ಸರಕಾರದವರು ಈ ಭೂಮಿಯನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ನಂತರ ಇವರಿಗೆ ಉಳಿದಿದ್ದೂ ಅಲ್ಪ ಸ್ವಲ್ಪ ಭೂಮಿ ಮಾತ್ರ.[೯೧]

ಕನಕಗಿರಿ ನಾಯಕರ ವಂಶಸ್ಥರು ಕೃಷಿಯನ್ನು ತಮ್ಮ ಮುಖ್ಯ ಉದ್ಯೋಗವನ್ನಾಗಿ ಮಾಡಿಕೊಂಡಿದ್ದಾರೆ. ಅವರ ಆರ್ಥಿಕ ಸ್ಥಿತಿ ತೃಪ್ತಿಕರವಾಗಿಲ್ಲ. ಈ ಸಂಸ್ಥಾನಿಕರ ಈಗಿರುವ ಒಟ್ಟು ಆಸ್ತಿ ೯೨ ಎಕರೆಯಾದರೂ, ಈ ಆಸ್ತಿಯೂ ೬ ಕುಟುಂಬದವರಲ್ಲಿ ಹಂಚಲ್ಪಟ್ಟಿದೆ. ಹುಲಿಹೈದರನಲ್ಲಿ ಇಂದು ಈ ಕುಟುಂಬಗಳು ಇವೆ. ನಿಜಾಮನು ಇವರಿಗೆ ೧೬ ಹಳ್ಳಿಗಳನ್ನು ಜಹಗೀರರಾಗಿ ನೀಡಿದ್ದರು. ಆಗ ಇವರು ಬೇಡಜನಾಂಗಕ್ಕೆ ಗುರುಗಳಾಗಿ ಮತ್ತು ಇಡೀ ಸರ್ವಜನಾಂಗಕ್ಕೆ ದೊರೆಗಳಾಗಿ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದರು. ಗುರುಗಳೆಂದು ಆಗ ಶಿಷ್ಯ ಜನಾಂಗವೆಲ್ಲಾ ಅನೇಕ ರೀತಿಯ ಕಾಣಿಕೆಗಳನ್ನು ನೀಡುತ್ತಿದ್ದರು. ಅಲ್ಲದೆ ಬಿಟ್ಟಿ ಚಾಕರಿ ಮಾಡಲು ತಮ್ಮ ಮಕ್ಕಳನ್ನು ಕೆಲವರು ದರ್ಬಾರ್‌ನಲ್ಲಿ ಬಿಡುತ್ತಿದ್ದರು. ಆದರೆ ಈ ಸಂಸ್ಥಾನದ ಜಾಗೀರು ಗ್ರಾಮಗಳು ಅಣ್ಣತಮ್ಮಂದಿರಲ್ಲಿ ಹಂಚಿಕೆಯಾಗುತ್ತಾ ಬಂದವು. ಹುಲಿಹೈದರನಲ್ಲಿ ರಂಗನಾಥಪ್ಪನಾಯಕರು ಅಧಿಕಾರದಲ್ಲಿರುವಾಗ ಅವರ ಸಹೋದರ ಹನುಮಪ್ಪನಾಯಕ ಗೋಡಿನಾಳ ಗ್ರಾಮವನ್ನು ಪಡೆದು ಪ್ರತ್ಯೇಕವಾದರು.[೯೨] ನಂತರ ರಂಗಪ್ಪನಾಯಕರ ಕಾಲದಲ್ಲಿ ಅವರ ಸಹೋದರರಾದ ಕನಕಪ್ಪನಾಯಕ ಮತ್ತು ಬುಮ್ಮಳನಾಯಕರು ಸೋಮಸಾಗರ ಮತ್ತು ಗುಂತುಮಡುವಿನ ಗ್ರಾಮಗಳನ್ನು

ತೆಗೆದುಕೊಂಡು ಪ್ರತ್ಯೇಕಗೊಂಡರು.[೧೯೩] ಈ ಜಹಗೀರು ಗ್ರಾಮಗಳ ಹಂಚಿಕೆಯಿಂದ ಹುಲಿಹೈದರ್ ಸಂಸ್ಥಾನದ ಆರ್ಥಿಕ ಸಂಪನ್ಮೂಲಕ್ಕೆ ಧಕ್ಕೆಯಾಯಿತು. ರಾಣಿಗೌರಮ್ಮನವರು ಸಂಸ್ಥಾನದ ಜವಾಬ್ದಾರಿಯನ್ನು ವಹಿಸಿಕೊಂಡು ಅಧಿಕಾರ ನಡೆಸುತ್ತಿರುವಾಗ ದರ್ಬಾರದಲ್ಲಿದ್ದ ದೊರೆಗಳ ಆಪ್ತ ವರ್ಗವು ರಾಣಿಯನ್ನು ದುರ್ಬಳಕೆ ಮಾಡಿಕೊಂಡು ಆಸ್ತಿಗಳನ್ನು ಹರಾಜು ಹಾಕುವಂತೆ ಮಾಡಿದರು. ಆಗ ಸಾಕಷ್ಟು ಆಸ್ತಿಯನ್ನು ಸಂಸ್ಥಾನವು ಕಳೆದುಕೊಂಡಿತು.[೧೯೪] ಈ ವಂಶೀಕರಲ್ಲಿ ಉದ್ಯೋಗಕ್ಕೆ ಹೋದವರು ಒಬ್ಬರೇ ಒಬ್ಬರು. ಗಂಗಾವತಿ ಮರಳಿ ಸಕ್ಕರೆ ಕಾರ್ಖಾನೆಯಲ್ಲಿ ಅವರು ಉದ್ಯೋಗ ಮಾಡುತ್ತಿದ್ದಾರೆ. ರಾಜಾರಂಗಪ್ಪನಾಯಕರು ೧೦ ವರ್ಷಗಳ ಕಾಲ ಗ್ರಾಮಪಂಚಾಯತಿಯ ಅಧ್ಯಕ್ಷರಾಗಿ ನಿಸ್ವಾರ್ಥ ಸೇವೆಯನ್ನು ಮಾಡಿದರು. ರಾಜಾ ಚಚ್ಚಪ್ಪನಾಯಕರು ಗಂಗಾವತಿ ಎ.ಪಿ.ಎಂ.ಸಿ.ಯ ಡೈರೆಕ್ಟರ್ ಆಗಿ ಸೇವೆ ಮಾಡುತ್ತಿರುವರು. ಉಳಿದಂತೆ ಕೃಷಿಯೇ ಜೀವನದ ಮೂಲಾಧಾರವಾಗಿದೆ.[೧೯೫]

ವಿಜಯನಗರೋತ್ತರ ಕಾಲದಲ್ಲಿ ಬೇಡ ಪಾಳೆಯಪಟ್ಟುಗಳು ಆರಂಭದಲ್ಲಿ ಆರ್ಥಿಕವಾಗಿ ಬಲಿಷ್ಠವಾಗಿದ್ದವು. ಆದರೆ ಕಾಲನಂತರದಲ್ಲಿ ದುರ್ಬಲವಾದವು. ರಾಜಕೀಯ ಅಧಿಕಾರವಿರುವವರೆಗೆ ಮಾತ್ರ ಆರ್ಥಿಕ ಜೀವನ ಸಮೃದ್ಧವಾಗಿತ್ತು. ಅಧಿಕಾರವನ್ನು ಕಳೆದುಕೊಂಡ ನಂತರದಲ್ಲಿ ಅವರ ಬದುಕು ತೀರಾ ಸಂಕಷ್ಟಕ್ಕೆ ಗುರಿಯಾದುದನ್ನು ಕಾಣಬಹುದು. ದೊರೆಗಳ ವಂಶಸ್ಥರು ಅಥವಾ ಹಿಂದೆ ಅಧಿಕಾರವನ್ನು ಕಳೆದುಕೊಂಡ ಬೇಡನಾಯಕರು ಬೇರೆ ಉದ್ಯೋಗವನ್ನು ಮಾಡುವ ಮನಸ್ಸು ಮಾಡಲಿಲ್ಲ. ತಾವು ದೊರೆಗಳು, ಪಾಳೆಯಗಾರರು, ನೂರಾರು ವರ್ಷ ಈ ಪ್ರದೇಶವನ್ನು ಆಳಿದವರು. ಇಂತಹ ಮನೆತನದಲ್ಲಿ ಹುಟ್ಟಿದವರಾದ ತಾವು ಉದ್ಯೋಗ ಮಾಡುವುದೆಂದರೆ ತಮ್ಮ ಮನೆತನಕ್ಕೇ ಕಳಂಕ, ತಮ್ಮದೇನಿದ್ದರೂ ಆಳುವುದು, ಆಳುವವರ ಮುಂದೆ ಹೋಗಿ ಬದುಕುವುದಲ್ಲ ಎಂಬ ಮನಸ್ಸು ಪಾಳೆಯಗಾರರಲ್ಲಿತ್ತು. ಇಂದಿಗೂ ಆ ಧೋರಣೆ ಹೋಗಿಲ್ಲ. ಹಿಡಿದ ಹಟ ಬಿಡದಿರುವುದು, ಇನ್ನೊಬ್ಬರ ಕೈಕೆಳಗೆ ಬದುಕಲು ಇಚ್ಛಿಸದಿರುವುದು, ತಾವು ದೊರೆಗಳ ಮನೆತನದವರು ಎಂಬ ಹಿರಿಮೆ ಮುಂತಾದ ಗುಣಗಳಿಂದಲೇ ಬೇಡ ಜನಾಂಗದ ಅರಸು ವಂಶಸ್ಥರು ಆರ್ಥಿಕವಾಗಿ ದುರ್ಬಲರಾದರು. ಇತ್ತೀಚೆಗೆ ಎಚ್ಚೆತ್ತುಕೊಂಡ ಕೆಲವು ಪಾಳೆಯಗಾರ ವಂಶಸ್ಥರು ತಮ್ಮ ಮಕ್ಕಳನ್ನು ಒಳ್ಳೆಯ ಶಿಕ್ಷಣ ಕೊಡಿಸುವ ಮತ್ತು ಉದ್ಯೋಗಕ್ಕೆ ಕಳುಹಿಸುವ ಪ್ರಯತ್ನಗಳನ್ನು ನಡೆಸಿದ್ದಾರೆ.

## ೪.೪. ಸಾಂಸ್ಕೃತಿಕ ಸ್ಥಿತ್ಯಂತರ

ಸಂಸ್ಕೃತಿ ಸಮಾಜದ ಅವಿಭಾಜ್ಯ ಅಂಗ. ಸಮಾಜ ಮತ್ತು ಸಂಸ್ಕೃತಿಗಳೆರಡೂ ಅನ್ಯೋನ್ಯ ಸಂಬಂಧಗಳನ್ನು ಹೊಂದಿವೆ. ಸಮೂಹ ಮತ್ತು ಸಂಬಂಧಗಳ ಆಯಾಮದಲ್ಲಿ ಪ್ರಕಟಗೊಳ್ಳುವ

ಸಾಮಾಜಿಕ ಸತ್ಯಗಳ ಮೊತ್ತವೇ ಸಮಾಜ. ಇದೇ ಮೊತ್ತದ ಕ್ರಿಯೆಯ ಆಯಾಮವೇ ಸಂಸ್ಕೃತಿ.[೧೯೬] ಸಂಸ್ಕೃತಿಯ ಮೂಲ ನಿರ್ಮಾಪಕ, ನಿರ್ದೇಶಕ ಮನುಷ್ಯ. ವೈಲ್ಡ್ ಹೇಳುವಂತೆ "ಮನುಷ್ಯನ ಶ್ರಮ ಎಷ್ಟು ಬಳಕೆಯಾಗುತ್ತದೆಯೋ ಅಷ್ಟಷ್ಟೂ ಸಂಸ್ಕೃತಿಯ ವಿಕಾಸವಾಗುತ್ತದೆ. ಮನುಷ್ಯನ ದೈಹಿಕ ಹಾಗೂ ಬೌದ್ಧಿಕ ಶ್ರಮ ಬಳಕೆಯಾದಂತೆಲ್ಲಾ ಬದಲಾವಣೆಗಳು ಆಗುತ್ತವೆ. ಹೊಸ ಹೊಸ ವಿನ್ಯಾಸಗಳು ರೂಪಗೊಳ್ಳುತ್ತವೆ".[೧೯೭] ಮಾನವನನ್ನು ಕೇಂದ್ರಸ್ಥಾನದಲ್ಲಿಟ್ಟುಕೊಂಡ ಸಂಸ್ಕೃತಿ ಬಗ್ಗೆ ತಿಳಿಸಿರುವುದರಿಂದ ಸಂಸ್ಕೃತಿಗೆ ಮೇಲುಕೀಳು ಎಂಬುದಿಲ್ಲ. ಅದೊಂದು ಜನರ ಜೀವನ ವಿಧಾನವಾಗಿದೆ. ಸಂಸ್ಕೃತಿಯು ಒಂದು ವಿಶಾಲ ಅರ್ಥವನ್ನು ಹೊಂದಿದೆ. ಅನೇಕ ಅಂಶಗಳನ್ನು ಅದು ಒಳಗೊಂಡಿದೆ; ಅದರ ವ್ಯಾಪ್ತಿ ದೊಡ್ಡದು. "ಒಂದು ನಿರ್ದಿಷ್ಟ ಸಮಾಜದ ಸದಸ್ಯರು ಹಂಚಿಕೊಳ್ಳುವ ಹಾಗೂ ಪ್ರಸಾರ ಮಾಡುವ ಜ್ಞಾನ, ದೃಷ್ಟಿಕೋನ ಮತ್ತು ಸ್ವಾಭಾವಿಕ ನಡವಳಿಕೆಯ ನಮೂನೆಗಳ ಒಟ್ಟು ಮೊತ್ತವೇ ಸಂಸ್ಕೃತಿ" ಎಂದು ಲಿಂಟನ್ ಹೇಳಿದ್ದಾರೆ.[೧೯೮] ಸಂಸ್ಕೃತಿಯು ಏಕವ್ಯಕ್ತಿಗೆ ಸೀಮಿತವಾದುದಲ್ಲ ಅದೊಂದು ಸಾಮೂಹಿಕ ಪ್ರಕ್ರಿಯೆ.

ಸಾಂಸ್ಕೃತಿಕ ಅಂಶಗಳಲ್ಲಿ 'ಧರ್ಮ'ದ ಪರಿಕಲ್ಪನೆಯೂ ಒಂದು. ಧರ್ಮ ಎಂಬುದಕ್ಕೆ ಯಾವುದೇ ನಿರ್ದಿಷ್ಟ ವ್ಯಾಖ್ಯಾನ ಅಥವಾ ವಿವರಣೆಗಳು ಇಲ್ಲ. ಇದೊಂದು ಮಾನವ ಜೀವನದ ಅವಿಭಾಜ್ಯ ಅಂಶವೂ ಆಗಿದೆ. ಆದ್ದರಿಂದ ಧರ್ಮವನ್ನು ಒಂದು ಜನಸಮುದಾಯದ 'ಜೀವನ ಮಾಡುವ ಕ್ರಮ' ಅಥವಾ ವಿಧಾನ ಎಂದು ಪರಿಗಣಿಸಲು ಸಾಧ್ಯವಿದೆ.[೧೯೯] ಧರ್ಮವು ಅತ್ಯುನ್ನತ ನಿರಪೇಕ್ಷ ಮೌಲ್ಯಗಳ ಒಂದು ಕಟ್ಟು. ಬುಡಕಟ್ಟು ನೆಲೆಯ ಸಮುದಾಯಗಳು ಬಹುತೇಕವಾಗಿ ಅವರ ಬದುಕೇ ಧರ್ಮವಾಗಿತ್ತು. ಅವರದೇ ಆದ ಮೌಲ್ಯಗಳಲ್ಲಿ ಬದುಕುವುದನ್ನು ಕಾಣಬಹುದು. ಧರ್ಮವಿಲ್ಲದ ಸಂಸ್ಕೃತಿಯೊಂದನ್ನು ಇತಿಹಾಸವು ನಮಗೆ ಕಾಣಿಸಲಾರದು. "ಉನ್ನತವಾದುದರ ಕಡೆಗೆ ಚಲನೆಯನ್ನು ಪ್ರತಿರೋಧಿಸುವ ಅಂತಃ ಶಕ್ತಿಯೇ ಧರ್ಮ"[೨೦೦]

ಸಂಸ್ಕೃತಿಯು ಏಕಕಾಲದಲ್ಲಿ ಸ್ಥಿರವೂ, ಚಲನಶೀಲವೂ ಆಗಿರುತ್ತದೆಂದು ಹೇಳಿದ ಹರ್ಸ್ಕವಿಟ್ಸ್ ರ ವ್ಯಾಖ್ಯಾನ ಬುಡಕಟ್ಟು ಸಮುದಾಯಗಳಿಗೆ ಸಂಬಂಧಿಸಿದಂತೆ ಸೂಕ್ತವಾಗಿದೆ. ಸಮಾಜದಲ್ಲಿ ಹಳೆಯ ಆಚಾರ-ವಿಚಾರಗಳು ಜನರು ಮತ್ತು ಹೊಸ ಜೀವನ ವಿಧಾನದ ಜನರು ಒಟ್ಟೊಟ್ಟಿಗೆ ಜೀವನ ಮಾಡುವುದನ್ನು ನೋಡಬಹುದಾಗಿದೆ. ಸಂಸ್ಕೃತಿಯ ಚಲನಶೀಲತೆಯು ಮಾನವನ ಜ್ಞಾನ ಬೆಳವಣಿಗೆ ಅಥವಾ ಬಾಹ್ಯ ಪ್ರಪಂಚದ ಪ್ರಭಾವದಿಂದ ಆಗಿರಬಹುದು. ಬರುವ ಹೊಸ ಆಚಾರ-ವಿಚಾರಗಳು ಅಥವಾ ಹಳೆಯ ಆಚಾರ-ವಿಚಾರಗಳು ಆಗಿನ ಕಾಲಕ್ಕೆ ಹೊಸ ಸಂಸ್ಕೃತಿಯೇ ಸರಿ. ನಾಗರೀಕತೆಯು ಸಂಸ್ಕೃತಿಯ ಹೊಸ ರೂಪವಷ್ಟೇ.

ಬೇಡ ಜನಾಂಗದವರು ಮೂಲತಃ ಪ್ರಕೃತಿ ಆರಾಧಕರು. ಸೂರ್ಯ, ಚಂದ್ರ, ಗಿಡ-ಮರ, ಪ್ರಾಣಿ-ಪಕ್ಷಿಗಳನ್ನು ಪೂಜಿಸಿಕೊಂಡು ಬಂದವರು. ಕಾಲಕ್ರಮೇಣ ಮೂರ್ತಿಪೂಜೆಯು ಪ್ರಕೃತಿ ಆರಾಧನೆಯ ಜೊತೆಗೂಡಿತು. ಬೇಡರಲ್ಲಿ ಶೈವ ಸಂಪ್ರದಾಯವು ಆರಂಭದಲ್ಲಿ ಕಂಡುಬಂದಿತ್ತಾದರೂ ನಂತರದಲ್ಲಿ ವೈಷ್ಣವ ಮತ್ತು ಶಾಕ್ತ ಪರಂಪರೆ ಕಂಡುಬಂದಿತು. ದ್ರಾವಿಡ ಪಶುಪಾಲಕರ ಸಮುದಾಯಗಳಲ್ಲಿ ಒಂದಾದ ಬೇಡ ಜನಾಂಗದವರು ಭೈರ, ಸಿದ್ಧ, ಶಿವ, ನಾಥ ಪಂಥಗಳನ್ನು ಆರಾಧಿಸುತ್ತಾರೆ. ಜೊತೆಗೆ ವೈಷ್ಣವ ಸಂಪ್ರದಾಯವೂ ಹಾಗೂ ಇತರ ಧರ್ಮಗಳ ಪ್ರಭಾವವೂ ಬೇಡ ಜನಾಂಗದಲ್ಲಿ ಕಂಡುಬಂದಿತು. ಅರವತ್ಮೂರು ಪುರಾತನರಲ್ಲಿ ಒಬ್ಬನಾದ ಮಹಾಶಿವಭಕ್ತ ಬೇಡರಕಣ್ಣಪ್ಪನು ಬೇಡರ ಜಾತಿಯವನು; ಹೀಗಾಗಿ ಬೇಡರು 'ಕನ್ನಯ್ಯನ ಮಕ್ಕಳು' ಎಂದು ಕರೆದುಕೊಳ್ಳುವರು. ಮಹಾಶಿವರಾತ್ರಿ ಬೇಡರಿಗೆ ಪವಿತ್ರ ದಿನವೆಂಬ ಭಾವನೆಯಿದೆ. ಬೇಡರು ಕರ್ನಾಟಕದ ಕಡೆ ಬರುವ ಮುನ್ನ ಶ್ರೀಶೈಲ ಪರ್ವತಾವಳಿ ಪ್ರದೇಶದಲ್ಲಿದ್ದರು ಎಂಬ ನಂಬಿಕೆ ಇಂದಿಗೂ ಬೇಡ ಜನಾಂಗದಲ್ಲಿದೆ. ಕಮ್ಮಟದುರ್ಗದ ವೀರಕುಮಾರ ರಾಮನು ಜಟ್ಟಂಗಿರಾಮೇಶ್ವರನ ಅನುಗ್ರಹದಿಂದ ಜನಿಸಿದವನು. ಇವನ ತಾಯಿ ಹರಿಯಾಲದೇವಿ ಈ ದೇವರ ಪರಮಭಕ್ತಳು. ಇಂದಿಗೂ ಕುಮಾರರಾಮನ ವಂಶದವರೆಲ್ಲರೂ ಜಟ್ಟಂಗಿರಾಮೇಶ್ವರನ ಪರಮಭಕ್ತರಾಗಿರುವರು. ಓರಂಗಲ್ಲಿನ ಎಪ್ಪತ್ತರಾಜನ ಬಳಿ ಇದ್ದ ಒಂದು ಲಕ್ಷ ಬೆಲೆಬಾಳುವ 'ಬೊಲ್ಲ' ಎಂಬ ಕುದುರೆಯನ್ನು ಗೆದ್ದುಕೊಂಡುಬರಲು ಕುಮಾರರಾಮನು ಹೊರಟಾಗ ಗೆಲುವು ದೊರಕಲಿ ಎಂದು ಗುಂಡಬ್ರಹ್ಮಯ್ಯರಲ್ಲಿ ಬೇಡಿಕೊಂಡನು. ಈ ಪ್ರಕಾರ ಶೂಲದ ಹಬ್ಬವನ್ನು ಮಾಡಿದನು; ಈ ಗುಂಡ ಬ್ರಹ್ಮಯ್ಯರು ಶಿವಶರಣರಾಗಿದ್ದರು ಎಂಬ ಅಭಿಪ್ರಾಯವಿದೆ.[೨೦೧] ಕುಮಾರರಾಮನ ವಂಶಕ್ಕೆ ಸೇರಿದ್ದ ಹರಿಹರಬುಕ್ಕರು ಶೈವ ಸಂಪ್ರದಾಯವನ್ನು ಬೆಳೆಸಿದರು. ಸಂಗಮ ವಂಶದ ಕಾಲಕ್ಕೆ ವಿಜಯನಗರ ಸಾಮ್ರಾಜ್ಯದಲ್ಲಿ ಶೈವಧರ್ಮವು ಉಜ್ವಲವಾಗಿ ಬೆಳೆಯಿತು. ಸಂಗಮ ದೊರೆಗಳು ಶೈವಧರ್ಮಕ್ಕೆ ರಾಜಾಶ್ರಯ ನೀಡಿದ್ದರು. ನಾಯಕನಹಟ್ಟಿ ಪಾಳೆಯಗಾರರ ಮೂಲಪುರುಷ ಕಾಟೇಮಲ್ಲನಾಯಕನು ಶ್ರೀಶೈಲ ಪ್ರದೇಶದಿಂದ ಬಂದವನು ಎಂದು ಹೇಳಲಾಗುತ್ತದೆ. ಅವನ ವಂಶಸ್ಥರು ವೀರಶೈವ ಧರ್ಮ ಪರಂಪರೆಗೆ ರಾಜಾಶ್ರಯ ನೀಡಿದ್ದರು. ಅಲ್ಲದೆ ವೀರಶೈವ ಧರ್ಮವನ್ನು ಸ್ವೀಕರಿಸಿದ್ದರು. ಕ್ರಿ.ಶ.೧೨ನೇ ಶತಮಾನದಲ್ಲಿ ಬಸವೇಶ್ವರರ ಸಮಾಜೋಧಾರ್ಮಿಕ, ಕ್ರಾಂತಿಕಾರಿ ಚಳುವಳಿಯಿಂದ ಕೆಳವರ್ಗದಲ್ಲಿ ವಚನಕಾರರು ಕಂಡುಬಂದರು. ಶಿವಶರಣ ಧರ್ಮ ಸುಧಾರಣೆಯಿಂದ ಬಸವೇಶ್ವರರ ನಂತರದಲ್ಲಿ ವೀರಶೈವ ಧರ್ಮವು ಗಟ್ಟಿಯಾಗಿ ಉಳಿದುಕೊಂಡಿತು. ಅಲ್ಲದೆ ಅನೇಕ ಕೆಳವರ್ಗದ ಜನರು, ಕೆಲವು ಪಾಳೆಯಗಾರರು ವೀರಶೈವ ಧರ್ಮವನ್ನು ಸ್ವೀಕರಿಸಿದರು.

ವಿಜಯನಗರೋತ್ತರಕಾಲೀನ ರಾಜ್ಯಗಳಲ್ಲಿ ಆಗಮ ಸಂಪ್ರದಾಯದ ಪ್ರಭಾವವು ಹಿಂದಿನಷ್ಟು ಸ್ಪಷ್ಟವಾಗಿ ಕಾಣಿಸಿಕೊಳ್ಳುವುದಿಲ್ಲ. ಜೊತೆಗೆ ಪೂಜಾರಾಧನೆಯ ಸಂಪ್ರದಾಯಗಳಲ್ಲಿ ಸಾಕಷ್ಟು ಏಳುಬೀಳುಗಳು ಉಂಟಾಗಿದ್ದವು. ೧೪ನೇ ಶತಮಾನದ ನಂತರ ಶೈವ ಮತ್ತು ಜೈನ ಸಂಪ್ರದಾಯಗಳ ಸ್ಥಾನವನ್ನು ವೈಷ್ಣವ ಸಂಪ್ರದಾಯ ಆಕ್ರಮಿಸಿಕೊಂಡಿತು. ಅದರಲ್ಲಿ ಶ್ರೀವೈಷ್ಣವ ಸಂಪ್ರದಾಯವು ವೆಂಕಟೇಶ್ವರ ಮತ್ತು ರಂಗನಾಥ ಎಂಬ ವಿಷ್ಣುವಿನ ಎರಡು ರೂಪಗಳ ಮೂಲಕ ಕರ್ನಾಟಕದ ಒಳನಾಡಿನಲ್ಲಿ ಪ್ರಚಲಿತದಲ್ಲಿ ಬಂದಿತು. ವಿಜಯನಗರ ಕಾಲದಲ್ಲಿ ಗುಡ್ಡಗಾಡಿನ ಬುಡಕಟ್ಟುಗಳ ಹಿನ್ನೆಲೆಯನ್ನು ಹೊಂದಿದ ನಾಯಕ ಜನಾಂಗ ಈ ಮೇಲಿನ ದೇವತೆಗಳನ್ನು ಪೂಜಿಸಿದ್ದು ಕಂಡುಬರುತ್ತದೆ. ಜೊತೆಗೆ ಹನುಮಂತನೂ ಒಂದು ಮಹತ್ವದ ದೇವರಾಗಿ ಮಾಧ್ವ ಸಂಪ್ರದಾಯದಿಂದ ಪ್ರಸಿದ್ಧಿಗಳಿಸಿದನು. ಅಲ್ಲದೆ ಕೆಲವು ನಾಯಕರು ಹನುಮಂತನನ್ನು ತಮ್ಮ ಕುಲದೈವನನ್ನಾಗಿ ಮಾಡಿಕೊಂಡರು.[೨೦೨]

ವಿಜಯನಗರದ ದೊರೆಗಳಾಗಿದ್ದ ಕೃಷ್ಣದೇವರಾಯ, ಅಚ್ಯುತರಾಯ ಮತ್ತು ಸದಾಶಿವರಾಯರ ಕಾಲದಲ್ಲಿ ಶ್ರೀವೈಷ್ಣವ ಪಂಥವು ಹೆಚ್ಚು ಮಹತ್ವ ಪಡೆದುಕೊಂಡಿತ್ತು. ಆ ಕಾಲದಲ್ಲಿ ತಿರುಪತಿಯು ದೊರೆಗಳಿಗೆ, ಪಾಳೆಯಗಾರರಿಗೆ ಮತ್ತು ಜನಸಾಮಾನ್ಯರಿಗೆ ಪವಿತ್ರ ಕ್ಷೇತ್ರವಾಗಿತ್ತು. ರಾಮಾನುಜಾಚಾರ್ಯರ ಪ್ರಭಾವದಿಂದ ಕೆಳವರ್ಗದವರು ವೈಷ್ಣವ ಧರ್ಮದ ಕಡೆಗೆ ಬಂದರು. ರಾಮಾನುಜಾಚಾರ್ಯರು ಹೊಯ್ಸಳ ದೊರೆ ಬಿಟ್ಟಿಗನನ್ನು ವೈಷ್ಣವನನ್ನಾಗಿ ಮಾಡಿದ್ದರಿಂದ ಕರ್ನಾಟಕದಲ್ಲಿ ಬೇರೂರಿ ನಿಲ್ಲು ವಂತಾಯಿತು. ಆಳ್ವಾರುಗಳ ಪ್ರಾಮಾಣಿಕ ಧರ್ಮ ಪ್ರಚಾರದಿಂದ ಮಧ್ಯಕಾಲೀನ ಕರ್ನಾಟಕ ಅರಸರು ವೈಷ್ಣವ ಸಂಸ್ಕೃತಿಗೆ ಹೊಂದಿಕೊಂಡರು. ಕನಕಗಿರಿ ನಾಯಕರು ರಾಜಧಾನಿಯಲ್ಲಿ ಈ ಆಳ್ವರುಗಳ ಪ್ರತಿಮೆ ಗಳನ್ನು ಸ್ಥಾಪಿಸಿದರು. ಲಕ್ಷ್ಮೀನರಸಿಂಹನ ಪರಮಭಕ್ತನಾಗಿದ್ದ ಇವರು ಕಲಾತ್ಮಕ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯವನ್ನು ಕಟ್ಟಿಸಿದರು. ಒಂದು ಐತಿಹ್ಯ ಪ್ರಕಾರ ಈ ಪ್ರದೇಶದಲ್ಲಿನ ಶೂದ್ರರಿಗೆ ದರ್ಶನ ನೀಡಲೆಂದೆ ತಿರುಪತಿ ವೆಂಕಟರಮಣನು ಇಲ್ಲಿಗೆ ಬಂದನಂತೆ. ಬೇಡ ಜನಾಂಗದ ಸಾಂಸ್ಕೃತಿಕ ವೀರ ಜಗಳೂರಜ್ಜ ತಿರುಪತಿ ವೆಂಕಟರಮಣನ ಪರಮಭಕ್ತನಾಗಿದ್ದನು. ವೆಂಕಟರಮಣನೆ ಜಗಳೂರಜ್ಜ ಇದ್ದಲ್ಲಿಗೆ ಬಂದು ದರ್ಶನ ನೀಡಿದನು ಎಂಬ ಪ್ರತೀತಿ ಇದೆ. ಕನಕಗಿರಿ ನಾಯಕ ಮನೆತನದ ಮೂಲಪುರುಷನಾದ ಪರಸಪ್ಪ ಉಡಿಚನಾಯಕನಿಗೂ ತಿರುಪತಿ ವೆಂಕಟರಮಣನು ದರ್ಶನ ನೀಡಿ ಲಕ್ಷ್ಮೀನರಸಿಂಹನಾಗಿ ಕನಕಗಿರಿಯಲ್ಲಿ ಉಳಿದುಕೊಂಡನೆಂದು ಹೇಳಲಾಗುತ್ತದೆ. ಈ ನಾಯಕನು ಶ್ರೀಶೈಲ ಕಡೆಯಿಂದ ಬಂದವನು. ಶೈವ ಸಂಪ್ರದಾಯಸ್ಥರಾಗಿದ್ದ ಜಗಳೂರಜ್ಜ, ಪರಸಪ್ಪನಾಯಕ ಮತ್ತು ಇಂತಹ ಅನೇಕರು ಅಂದಿನ ವೈಷ್ಣವ ಸಂಪ್ರದಾಯದ ಪ್ರಭಾವಕ್ಕೆ ಒಳಗಾದರು. ಪಾಳೆಯಗಾರರು ಪರಮಭಕ್ತರು 'ತಿರುಪತಿ ಪಗೋಡ'ದ ಪವಿತ್ರ ಪ್ರಕಾರಗಳು ನಾಲ್ವರು ಪಾಳೆಯಗಾರರ ರಕ್ಷಣೆಯಲ್ಲಿದ್ದವು. ಇವರು

ಆ ಪಗೋಡದ ಪಾರಂಪರ್ಯಾಧಿಕಾರದ ಕಾವಲುಗಾರರಾಗಿದ್ದರು. ಇವರ ರಕ್ಷಣೆಯಿಂದಲೆ ಬೇರೆ ಧರ್ಮದವರ ದಾಳಿಗಳಿಂದ ತಿರುಪತಿ ಸುರಕ್ಷಿತವಾಗಿದ್ದುದು.[೨೦೩]

ವಿಜಯನಗರದ ಕೊನೆಯ ವಂಶಗಳೆರಡು ವೈಷ್ಣವ ಪಂಥಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದವು. ವಿಜಯನಗರ ಅಧೀನ ಪಾಳೆಯಗಾರರು ವಿಜಯನಗರ ಅರಸರಿಗೆ ಋಣಿಯಾಗಿದ್ದುದರಿಂದ ಅವರಲ್ಲಿ ಅನೇಕರು ವೈಷ್ಣವ ಧರ್ಮವನ್ನು ಅನುಸರಿಸಿದರು. ನಿಡಗಲ್ಲು ದುರ್ಗಾಧಿಪತಿ ಚಿಕ್ಕತಿಪ್ಪರಾಜನು ಸಾಳ್ವನರಸಿಂಹನಿಗೆ ನಿಷ್ಠೆಯಾಗಿದ್ದುದರ ಸಂಕೇತವಾಗಿ ವೈಷ್ಣವ ಪಂಥವನ್ನು ಸ್ವೀಕರಿಸಿದ್ದನು.[೨೦೪] ಸಾಮಾನ್ಯವಾಗಿ ಆಗಿನ ರಾಜರು ಪಾಳೆಯಗಾರರು ಧಾರ್ಮಿಕ ಸಹಿಷ್ಣುರಾಗಿದ್ದರು. ಎಲ್ಲಾ ಧರ್ಮದ ದೇವಾಲಯಗಳಿಗೂ ದಾನ ದತ್ತಿಗಳನ್ನು ನೀಡುತ್ತಿದ್ದರು. ವಿಜಯನಗರ ದೊರೆಗಳೂ ಧರ್ಮಸಹಿಷ್ಣುತೆಗೆ ಹೆಸರಾಗಿದ್ದರು. ಕನಕಗಿರಿ ಲಕ್ಷ್ಮೀನರಸಿಂಹ ದೇವಾಲಯಕ್ಕೆಂದು ಪ್ರೌಢದೇವರಾಯನು, ಸಾಳ್ವನರಸಿಂಹನು, ಕೃಷ್ಣದೇವರಾಯನು ಮತ್ತು ಅಚ್ಚುತದೇವರಾಯರು ಅನೇಕ ದಾನದತ್ತಿ, ಉಂಬಳಿ ಗ್ರಾಮಗಳನ್ನು ಬಿಟ್ಟುಕೊಟ್ಟಿರುವುದನ್ನು ಈ ದೇವಾಲಯದ ಆವರಣದೊಳಗೆ ಇರುವ ಶಾಸನಗಳು ತಿಳಿಸುತ್ತವೆ.[೨೦೫] ಪರಸಪ್ಪನಾಯಕನು ವಿಶಿಷ್ಟಾದ್ವೈತ ಸಂಪ್ರದಾಯ ಶ್ರೀವೈಷ್ಣವ ಸ್ವಾಮಿಯಾದ ಕೊಂಡಮಚಾರ್ಯ ಎಂಬುವರಿಗೆ ತಿಪ್ಪನಾಳ ಮತ್ತು ಮಲ್ಲಾಪುರ ಗ್ರಾಮಗಳನ್ನು ಕೊಟ್ಟು, ಕನಕಚಲಾಪತಿಯ ನಿತ್ಯಪೂಜೆ ಜರುಗುವಂತೆ ನೇಮಿಸಿದನು.[೨೦೬] ಚಿತ್ರದುರ್ಗನಾಯಕರ ಕುಲದೇವರು ನೀರ್ಥಡಿ ರಂಗನಾಥಸ್ವಾಮಿ. ಮತ್ತಿತಿಮ್ಮಣ್ಣನಾಯಕನು ಶ್ರೀರಂಗನಾಥ ಸ್ವಾಮಿ ದೇವಾಲಯವನ್ನು ಕಟ್ಟಿಸಿದನು. ದೇವಾಲಯದ ಬಾಗಿಲ ಮುಂಭಾಗದಲ್ಲಿ ನೆಟ್ಟಕಲ್ಲಮ್ಮದೇವಿ ಪ್ರತಿಮೆ ಮತ್ತು ದಾಸ ಶಂಕು, ಜಾಗಟೆ, ದೀವಟಿಗೆ, ಬೆತ್ತ ಮುಂತಾದ ವೈಷ್ಣವ ಸಂಪ್ರದಾಯಕ್ಕೆ ಸಂಬಂಧಪಟ್ಟಂತೆ ಶಿಲ್ಪಗಳನ್ನು ಕೆತ್ತಲಾಗಿದೆ. ಕನಕಗಿರಿಯ ಕನಕಚಲಾದೇವರ ರಥೋತ್ಸವ ಮುನ್ನ ದಿನ ನಡೆಯುವ ಗರುಡೋತ್ಸವದ ಸಂದರ್ಭದಲ್ಲಿ ಭಕ್ತರು ದೀವಟಿಗೆಗಳನ್ನು ಹಿಡಿದುಕೊಂಡು ಉತ್ಸವ ಆಚರಿಸುವುದನ್ನು ಇಂದಿಗೂ ನೋಡಬಹುದು. ಈ ಕಾರ್ಯಕ್ರಮದಲ್ಲಿ ಹಿಂದೆಲ್ಲಾ ದೊರೆಗಳು ಮುಖ್ಯ ಪಾತ್ರವಹಿಸುತ್ತಿದ್ದರು. ಕ್ರಿ.ಶ.೧೬೭೮ರಲ್ಲಿ ಕಸ್ತೂರಿ ಚಿಕ್ಕಣ್ಣನಾಯಕನು ತಮ್ಮ ತಂದೆ-ತಾಯಿಗಳಿಗೆ ಪುಣ್ಯವಾಗಲೆಂದು ರಾಮಾನುಜಕೂಟದ ತಿರುಪತಿ ಪೆದ್ದಜೀಯರಯ್ಯನವರಿಗೆ ಗ್ರಾಮವೊಂದನ್ನು ಉಂಬಳಿ ಹಾಕಿದನು. ರಾಮಾನುಜ ಪಂಥದವರಿಗೆ ಇದೇ ನಾಯಕನು ಕಂದಾಯವನ್ನು ಮನ್ನಾ ಮಾಡಿದ ವಿಚಾರ ತಿಳಿಯುತ್ತದೆ.[೨೦೭]

ವೈಷ್ಣವ ಧರ್ಮದ ಸಂಸ್ಕೃತಿಯನ್ನು ಚಿತ್ರದುರ್ಗ ಪಾಳೆಯಗಾರರು ಅನುಸರಿಸುತ್ತಿದ್ದರು. ಪಾಳೆಯಗಾರರು 'ನಾಂದಿ' ಎನ್ನುವ ಧಾರ್ಮಿಕ ಕಾರ್ಯಮಾಡಿಕೊಳ್ಳುವ ಮೂಲಕ ಬ್ರಾಹ್ಮಣರ ಪುರೋಹಿತ್ಯದಲ್ಲಿ ಜನಿವಾರ ವನ್ನು ಧರಿಸುತ್ತಿದ್ದರು. ಮದುವೆ, ಹುಟ್ಟು, ಸಾವು ಹಾಗೂ ಯಾವುದೇ ಶುಭಕಾರ್ಯಗಳ ಸಂದರ್ಭದಲ್ಲಿ

ವೈಷ್ಣವ ಸಂಪ್ರದಾಯಕ್ಕನುಸಾರವಾಗಿ ಕಾರ್ಯಕ್ರಮಗಳು ನಡೆಯುತ್ತಿದ್ದವು. ಚಿತ್ರದುರ್ಗ ನಾಯಕರ ವಂಶಸ್ಥರು ಇಂದಿಗೂ ಈ ಸಂಪ್ರದಾಯವನ್ನು ಅನುಸರಿಸುವರು. ದೇವದುರ್ಗ, ಸುರಪುರ ಮತ್ತು ಇತರ ಕೆಲವು ಪಾಳೆಯಗಾರ ವಂಶಸ್ಥರು ವೈಷ್ಣವ ಧರ್ಮವನ್ನು ಅನುಸರಿಸುವರು. ಕ್ಷಾತ್ರ ಸಂಕೇತವೆಂದು ಬಹುತೇಕವಾಗಿ ಎಲ್ಲಾ ಬೇಡದೊರೆಗಳು ಜನಿವಾರವನ್ನು ಹಾಕಿಕೊಳ್ಳುತ್ತಾರೆ. ಈ ಜನಿವಾರಧಾರಣೆ ಕಾರ್ಯಕ್ರಮ ನೆರವೇರಿಸಲು ಬ್ರಾಹ್ಮಣರು ಬೇಕೇ ಬೇಕು. ಚಿತ್ರದುರ್ಗನಾಯಕರು ಧರ್ಮ ಸಹಿಷ್ಣರಾಗಿದ್ದರು. ಶೈವ ಮತ್ತು ವೈಷ್ಣವ ಧರ್ಮಗಳಿಗೆ ಸಮಾನ ಆದ್ಯತೆಯನ್ನು ಕೊಟ್ಟಿದ್ದರು. ವೈಷ್ಣವ ಧರ್ಮಕ್ಕೆ ಸಂಬಂಧಪಟ್ಟಂತೆ ಮಠಗಳನ್ನು ಚಿತ್ರದುರ್ಗ ದೊರೆಗಳು ಕಟ್ಟಿಸಿದರು ಮತ್ತು ಅವುಗಳಿಗೆ ದಾನ ದತ್ತಿಯನ್ನು ನೀಡಿದರು. ಅವುಗಳಲ್ಲಿ ರಾಘವೇಂದ್ರಸ್ವಾಮಿಗಳ ಮಠ, ತಾತಾಚಾರ್ಯರ ಮಠ, ಮಧ್ವಾಚಾರ್ಯರ ಮಠ ಮುಂತಾದವು ಮುಖ್ಯವಾದುವು.[೨೦೮] ಬಿಚ್ಚುಗತ್ತಿ ಭರಮಣ್ಣನಾಯಕನು ನೀರ್ಥಡಿ ರಂಗನಾಥ ದೇವಾಲಯವನ್ನು ದುರಸ್ತಿಗೊಳಿಸಿ ದತ್ತಿಕೊಡುವುದರ ಮೂಲಕ ಆ ದೇವಾಲಯದ ಜೀರ್ಣೋದ್ಧಾರ ಮಾಡಿದನು.[೨೦೯] ಅಲ್ಲದೆ ಭರಮಣ್ಣನಾಯಕನು ವ್ಯಾಸರಾಯಮಠದ ಶ್ರೀಮದ್‌ರಘುತೀರ್ಥ ಪಾದಂಗಳವರಿಗೆ ಚಿತ್ರದುರ್ಗ ಸಂಸ್ಥಾನಕ್ಕೆ ಸೇರಿದ ಕೊಡಗನೂರು ಸೀಮೆಯ ದೇಮಲವನ(ದ್ಯಾಮವ್ವನ) ಹಳ್ಳಿಯನ್ನು ಬಿಟ್ಟುಕೊಡುವುದರ ಮೂಲಕ ತನ್ನ ಗೌರವವನ್ನು ತೋರಿದನು.[೨೧೦] ಗುಡೇಕೋಟೆ ಪಾಳೆಯಗಾರರು ಗುಡೇಕೋಟೆಯಲ್ಲಿ ವೆಂಕಟೇಶ್ವರ ದೇವಾಲಯವನ್ನು ಕಟ್ಟಿಸಿದರು. ವೈಷ್ಣವ ಧರ್ಮವು ಮೊದಲು ರಾಜರ ಮನವನ್ನು ಗೆದ್ದು ನಂತರ ಜನರ ಹತ್ತಿರ ಬಂದುದರಿಂದ ಅದಕ್ಕೆ ಸಾಕಷ್ಟು ಮನ್ನಣೆ ಸಿಕ್ಕಿತು. ಬೇಡಜನಾಂಗದ ಕೆಲವರಲ್ಲಿ 'ಮುದ್ರೆ' ಹಾಕುವ ಪದ್ಧತಿ ಆಚರಣೆಯಲ್ಲಿದೆ. ಶಂಖ ಮತ್ತು ಚಕ್ರ ಮುದ್ರೆಗಳಿಂದ ಭುಜಗಳೆರಡಕ್ಕೆ ಒತ್ತುವ ಈ ಕಾರ್ಯಕ್ರಮ ಆಗದ ಹೊರತು ಮದುವೆ ಮತ್ತು ಪ್ರಮುಖ ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ. ವೈಷ್ಣವ ಸಂಸ್ಕಾರಗಳಿಗನುಗುಣವಾಗಿ ಈ ಕಾರ್ಯ ನಡೆಯುತ್ತದೆ. ಕಂಪಳ ರಂಗನಾಥ, ಓಬಳದೇವರು, ಅಹೋಬಲನರಸಿಂಹ ಮುಂತಾದ ದೇವರುಗಳು ಬೇಡ ಜನಾಂಗದ ಆರಾಧ್ಯದೇವರುಗಳು. ಬೇಡಜನಾಂಗದಲ್ಲಿ ತಮ್ಮ ಜನಾಂಗದ ಸಾಂಸ್ಕೃತಿಕ ವೀರರನ್ನು ಆರಾಧಿಸುವ ಪರಂಪರೆ ಇದೆ. ಗಾದ್ರಿಪಾಲನಾಯಕ, ಪಾಪನಾಯಕ, ಕುಮಾರರಾಮ, ಯರಮಂಚಯ್ಯನಾಯಕ, ಕೋರ್ಲಪಾಪನಾಯಕ, ಮಂದಭೂಪಾಲ, ಅಂಬೋಜರಾಜ, ಶುಕ್ಲಮಲ್ಲನಾಯಕ ದಾಸಪಾಲಮ್ಮ, ಚುಂಚಲಕ್ಷ್ಮಿ, ಪೆದ್ದಕ್ಕರಾಯಲದೇವಿ, ಭಾನುಕೋಟೆರಾಜು, ಸೂರಪ್ಪರಾಜ, ಸೆಟ್ಲುಪಟ್ಲಪ್ಪ ರಾಜು, ಕೊರ್ಲಿಮಲ್ಲಿರಾಜು, ಕಾರುಮಂಚಿರಾಜು, ಶಾಪನ್ನರಾಜು ಮತ್ತು ತಿಪ್ಪಂಡರಾಜು ಇವರನ್ನು ಸಂಸ್ಕೃತಿ ನಿರ್ಮಾಪಕರೆನ್ನಲಾಗಿದೆ.[೨೧೧]

ಕೆಲವು ಬೇಡನಾಯಕರು ದೊರೆಗಳಾಗಿ ರಾಜಕೀಯವಾಗಿ ಪ್ರಸಿದ್ಧಿ ಪಡೆದಂತೆ ತಮ್ಮ ಜನಾಂಗಕ್ಕೆ ಗುರುಗಳಾಗಿಯೂ ಪ್ರಖ್ಯಾತಿ ಪಡೆದರು. ಕನಕಗಿರಿಯ ನಾಯಕರು ತಮ್ಮ ಜನಾಂಗಕ್ಕೆ ಗುರುಗಳಾಗಿದ್ದರೆ, ಅವರಿಗೆ ಬ್ರಾಹ್ಮಣರು ಗುರುಗಳು. ಧಾರ್ಮಿಕ ಕಾರ್ಯಗಳು ಗುರು ಮತ್ತು ದೊರೆ ಸ್ಥಾನದಲ್ಲಿದ್ದ ನಾಯಕರ ಅನುಮತಿಯಿಂದ ಇಲ್ಲವೆ ಉಪಸ್ಥಿತಿಯಲ್ಲಿ ಜರುಗುತ್ತಿದ್ದವು. ಬೇಡ ಜನಾಂಗಕ್ಕೆ ಮುದ್ರೆ ಹಾಕುವ, ಕುಲಾಚಾರಕ್ಕೆ ಧಕ್ಕೆ ಬಂದಾಗ ಶುದ್ಧೀಕರಿಸಿ ಕುಲದೊಳಗೆ ಸೇರಿಸಿಕೊಳ್ಳುವ ಉತ್ಸವ, ಮದುವೆ ಮುಂತಾದ ಅನೇಕ ಕಾರ್ಯಗಳು ದೊರೆಗಳ ಸಮ್ಮುಖದಲ್ಲಿ ನಡೆಯುತ್ತಿದ್ದವು. ಕನಕಗಿರಿಯು ಒಂದು ಧಾರ್ಮಿಕ ಸಂಸ್ಥಾನ, ಇಲ್ಲಿ ಎಲ್ಲಾ ಧರ್ಮದವರಿಗೂ ಸೇರಿದ ದೇವಾಲಯಗಳಿವೆ. ಹೀಗಾಗಿ ಈ ನಾಯಕರಿಗೆ ಗುರುಸ್ಥಾನ ದೊರಕಿತು ಎಂದು ಹೇಳಲಾಗುತ್ತದೆ. ಈಗಲೂ ಈ ಮನೆತನದವರನ್ನು ತಮ್ಮ ಗುರುಗಳೆಂದೂ ಈ ಭಾಗದ ಬೇಡರು ಕರೆಯುತ್ತಾರೆ. ಧಾರ್ಮಿಕರಂಗದಲ್ಲಿ ಉನ್ನತಸ್ಥಾನ ತಲುಪಿದ ಬೇಡನಾಯಕರು 'ನಾಯಕ ಮಹಾಚಾರ್ಯ', 'ನಾಯಕ ಶಿರೋಮಣಿ' ಎಂಬ ಬಿರುದುಗಳನ್ನು ಧರಿಸಿದರು. ಗುಂತಗೋಳ ಗುಡಗುಂಟಿ, ದೇವದುರ್ಗ, ಕನಕಗಿರಿ, ನಾಯಕರನ್ನು ಗುರುಗಳೆಂದು ಕರೆಯುವ ಮೂಲಕ ಬೇಡರು ಕೆಲವು ಕಾಣಿಕೆಗಳನ್ನು ಸಲ್ಲಿಸುತ್ತಾರೆ. ಈ ಸಂಪ್ರದಾಯವು ಅಲ್ಲಲ್ಲಿ ಇನ್ನೂ ಉಳಿದುಕೊಂಡು ಬಂದಿದೆ.

ಹನ್ನೆರಡನೆ ಶತಮಾನದ ನಂತರ ವೀರಶೈವ ಧರ್ಮವು ಪ್ರಸಿದ್ಧಿಯನ್ನು ಪಡೆದುಕೊಂಡಿತು. ವೀರಶೈವ ಧರ್ಮದ ಸಿದ್ಧಾಂತಗಳನ್ನು ರಾಜರುಗಳು ಗೌರವಿಸಿದರು. ಪಾಳೆಯಗಾರರು ಈ ಧರ್ಮದ ಕಡೆ ಒಲವು ತೋರಿದರು ಮತ್ತು ಕೆಲವರು ವೀರಶೈವ ಧರ್ಮವನ್ನು ಸ್ವೀಕರಿಸಿದರು. ಕನಕಗಿರಿಯ ನಾಯಕ ದೊರೆ ನವಾಬ ಉಡಿಚನಾಯಕನು ಹಂಪೆಯ ವಿರೂಪಾಕ್ಷದೇವಾಲಯದ ಉತ್ತರಗೋಪುರವನ್ನು ಕಟ್ಟಿಸಿದನು.[೨೧೨] ವೈಷ್ಣವರಾಗಿದ್ದರೂ ಕನಕಗಿರಿ ನಾಯಕರು ಶೈವಧರ್ಮಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದ್ದರು. ಶರಣ ಮೊನಪ್ಪಯ್ಯ ಕನಕಗಿರಿಗೆ ಬಂದಾಗ ಅದ್ದೂರಿಯಾಗಿ ಸ್ವಾಗತಿಸಿ ಅವರಿಗೊಂದು ಮಠ ಕಟ್ಟಿಸಿಕೊಟ್ಟನು. ಈ ಮಠವನ್ನು ಮೊನಪ್ಪಯ್ಯ ಮಠವೆಂದು ಕರೆಯಲಾಗುತ್ತದೆ. ಈ ಮಠವನ್ನು ಕೆಲವಡಿ ಉಡಿಚನಾಯಕನ ರಾಣಿ ಕೊನಾಟಮ್ಮಳು ಕಟ್ಟಿಸಿದಳೆಂದು ತಿಳಿಯುತ್ತದೆ.[೨೧೩] ಇಮ್ಮಡಿ ಉಡಿಚನಾಯಕನ ಹೆಂಡತಿ ರಾಣಿ ಚೆನ್ನಮ್ಮಳು ಕನಕಗಿರಿಯಲ್ಲಿ ಪೇಟೆ ಬಸವಣ್ಣ ದೇವಾಲಯವನ್ನು ಕಟ್ಟಿಸಿದಳು. ಇಮ್ಮಡಿ ಕನಕಪ್ಪ ಉಡಿಚನಾಯಕರ ಕಾಲದಲ್ಲಿ ಚಿದಾನಂದಾವಧೂತರು ಎಂಬ ಮಹಾಂತರು ಕನಕಗಿರಿಗೆ ಆಗಮಿಸಿದಾಗ, ಅವರಿಗೆ ಒಂದು ಆಶ್ರಮವನ್ನು ಈ ನಾಯಕನು ಕಟ್ಟಿಸಿಕೊಟ್ಟನು.[೨೧೪] ಈಗ ಆ ಆಶ್ರಮವನ್ನು 'ಚಿದಾನಂದ ಮಠ' ಎಂದು ಕರೆಯಲಾಗುವುದು. ಗುಡಗುಂಟಿಯ ದೊರೆಗಳು ಶೈವಧರ್ಮವನ್ನು ಅನುಸರಿಸುತ್ತಿದ್ದರು. ಈಗಲೂ ಈ ಮನೆತನದವರಿಗೆ ಶ್ರೀ ಅಮರೇಶ್ವರ ದೇವರು ಮನೆದೇವರು. ಈ ಮನೆತನದಲ್ಲಿ ಹುಟ್ಟು,

ಸಾವು, ಇತ್ಯಾದಿ ಸಂದರ್ಭದಲ್ಲಿ ವೀರಶೈವ ಧರ್ಮಕ್ಕನುಗುಣವಾಗಿಯೇ ಕಾರ್ಯಕ್ರಮಗಳು ನಡೆಯುತ್ತವೆ. ಕಕ್ಕೇರಿ ಸೋಮನಾಥ ಇವರ ಮನೆದೇವರು ಗಜದಂಡಸ್ವಾಮಿಗಳು ಇವರ ರಾಜಗುರುಗಳಾಗಿದ್ದರು. ಗುಡಗುಂಟಿಯ ಅಮರೇಶ್ವರ ರಥೋತ್ಸವಕ್ಕೆ ಈ ಮನೆತನದವರು ಫಲಪುಷ್ಪಗಳನ್ನು ಅರ್ಪಿಸಿದ ಬಳಿಕವೇ ರಥ ಸಾಗುತ್ತದೆ. ಈ ಮನೆತನದ ಕಲ್ಲಪ್ಪನಾಯಕ ಎಂಬ ದೊರೆ "ಬಸವಶಂಕರ" ಎಂಬ ಬಿರುದನ್ನು ಹೊಂದಿದ್ದನು. ಶೈವಚಾರಕ್ಕೆ ಗುಡಗುಂಟಿಯ ದೊರೆಗಳು ನೀಡಿದ ಸ್ಥಾನ ಎಂತಹದು ಎಂದು ಇದರಿಂದ ತಿಳಿಯಬಹುದಾಗಿದೆ.[೨೧೫] ಗುಡಗುಂಟಿಯ ಶ್ರೀ ವೆಂಕಟೇಶ್ವರ ದೇವಸ್ಥಾನದಲ್ಲಿ ನವರಾತ್ರಿಯಂದು ಉತ್ಸವಗಳನ್ನು ನಡೆಸುತ್ತಿದ್ದರು. ಶಿವರಾತ್ರಿ ಸಂದರ್ಭದಲ್ಲಿ ಸಕಲ ಧರ್ಮದವರನ್ನು ಆಮಂತ್ರಿಸಿ ಭಜನೆ, ಕೀರ್ತನೆ, ಜಾಗರಣೆಗಳನ್ನು ದೊರೆಗಳು ನಡೆಸುತ್ತಿದ್ದರು. ಈ ಸಂದರ್ಭದಲ್ಲಿ ಸರ್ವಧರ್ಮದ ಪಂಡಿತರಿಗೂ, ವಿದ್ವಾಂಸರಿಗೂ ಕಲಾವಿದರಿಗೂ ಬಹುಮಾನಗಳನ್ನು ಕೊಟ್ಟು ಸತ್ಕರಿಸಲಾಗುತ್ತಿತ್ತು.[೨೧೬] ಗುಂತಗೋಳ ಸಂಸ್ಥಾನದ ದೊರೆಗಳು ಸಹ ಶಿವಭಕ್ತರಾಗಿದ್ದರು. ಇವರು ಗುಡಗುಂಟಿಯ ಅಮರೇಶ್ವರ ದೇವರ ಪರಮಭಕ್ತರು. ದೇವದುರ್ಗದ ಸಂಸ್ಥಾನಿಕರು ವೈಷ್ಣವ ಧರ್ಮವನ್ನು ಅನುಸರಿಸುತ್ತಿದ್ದರು. ರಂಗನಾಥಸ್ವಾಮಿ ಇವರ ಮನೆದೇವರು. ಈ ಮನೆತನದಲ್ಲಿ ಹನ್ನೊಂದು ವರ್ಷ ತುಂಬಿದ ಗಂಡು ಮಕ್ಕಳಿಗೆ 'ಮುಂಜಿ' ಎಂಬ ಕಾರ್ಯವನ್ನು ಮಾಡುವರು. ಆಗ ತಲೆಯನ್ನು ಬೋಳಿಸಿ, ಜುಟ್ಟನ್ನು ಬಿಟ್ಟು ಧಾರ್ಮಿಕವಾಗಿ ಮಂತ್ರೋಪದೇಶ ಆಗುತ್ತಿತ್ತು. ನಂತರ ಜನಿವಾರಧಾರಣೆ ಕಾರ್ಯ ನಡೆಯುತ್ತಿತ್ತು. ಈಗ ಈ ಪದ್ಧತಿಯಲ್ಲಿ ಕೆಲವು ಬದಲಾವಣೆಗಳಾಗಿವೆ. ವೈಷ್ಣವ ಸಂಪ್ರದಾಯವನ್ನು ಈ ಮನೆತನದ ವಂಶಜರು ಇಂದಿಗೂ ಅನುಸರಿಸುವರು. ದೇವದುರ್ಗದ ದೊರೆಗಳು ವೈಷ್ಣವರಾಗಿದ್ದರು. ಶೈವ ಸಂಪ್ರದಾಯಕ್ಕೆ ಯಾವುದೇ ಅಡ್ಡಿಪಡಿಸಲಿಲ್ಲ. ಅವರು ಧರ್ಮಸಹಿಷ್ಣುರಾಗಿದ್ದುದು ತಿಳಿದುಬರುತ್ತದೆ.

ಜರಿಮಲೆ ಮತ್ತು ಗುಡೇಕೋಟೆಯ ಪಾಳೆಯಗಾರರು ಶೈವಧರ್ಮವನ್ನು ಆಚರಿಸುತ್ತಿದ್ದರು. ಜಟ್ಟಂಗಿರಾಮೇಶ್ವರ ಇವರ ಮನೆದೇವರಾದರೂ ವೆಂಕಟರಮಣ ಮತ್ತು ಕಾಳಿಕಾದೇವಿಯನ್ನು ಆರಾಧಿಸುತ್ತಿದ್ದರು. ಕೂಡ್ಲಿಗಿ ತಾಲ್ಲೂಕಿನಲ್ಲಿರುವ ಉಜ್ಜನಿ ವೀರಶೈವ ಮಠವು ಈ ನಾಯಕರ ಮೇಲೆ ಪ್ರಭಾವ ಬೀರಿದೆ. ಈ ಮಠದ ಸ್ವಾಮಿಗಳೇ ಇವರ ರಾಜಗುರುಗಳಾಗಿದ್ದರು. ಇವರು ಉಜ್ಜನಿ ಮರುಳಸಿದ್ಧೇಶ್ವರ ದೇವರ ಪರಮ ಭಕ್ತರು. ಗುಡೇಕೋಟೆಯ ಪಾಳೆಯಗಾರರು ಕಂಚಿಯ ಜಗದ್ಗುರುಗಳನ್ನು ಗುರುಗಳೆಂದು ಭಾವಿಸಿ ವರ್ಷಕ್ಕೊಮ್ಮೆ ಈ ಮೊದಲು ಹೋಗಿ ಬರುತ್ತಿದ್ದರು. ಆದರೆ ಈಗ ಹೋಗುವುದಿಲ್ಲ. ಈ ಮನೆತನಗಳಲ್ಲಿ ಮೊದಲು ಲಿಂಗಧಾರಣೆ ಮಾಡಿಕೊಳ್ಳುತ್ತಿದ್ದರೆಂದು, ನಂತರ ಮಾಂಸಾಹಾರ ಸೇವನೆ ಮಾಡಿದ್ದರಿಂದ ಲಿಂಗಧಾರಣೆಯನ್ನು ಕೈಬಿಟ್ಟರೆಂದು ತಿಳಿದುಬರುತ್ತದೆ. ಜರಿಮಲೆಯಲ್ಲಿ 'ಮುರಿಘಾಮಠ'ವನ್ನು ಕಟ್ಟಿಸುವ ಮೂಲಕ ಜರಿಮಲೆ ಪಾಳೆಯಗಾರರು ವೀರಶೈವ ಧರ್ಮಪರವಾದ ತಮ್ಮ ಒಲುಮೆ

ತೋರಿದರು. ಬಸವಣ್ಣ ದೇವಾಲಯ, ಈಶ್ವರ ಲಿಂಗದೇವಾಲಯಗಳು ಜರಿಮಲೆಯಲ್ಲಿ ನಾಯಕರಿಂದ ಕಟ್ಟಿಸಲ್ಪಟ್ಟವು. ಚಿತ್ರದುರ್ಗದ ಬೃಹನ್ಮಠದೊಂದಿಗೆ ಒಳ್ಳೆಯ ಸಂಬಂಧ ಹೊಂದಿದ ಜರಿಮಲೆಯ ನಾಯಕರು ಬೃಹನ್ಮಠಕ್ಕೆ ಹಲವಾರು ಪತ್ರಗಳನ್ನು ಬರೆದಿರುವುದು ತಿಳಿದುಬರುತ್ತದೆ. ರಾಜಾ ರಾಮಪ್ಪನಾಯಕರು ಬರೆದ ಪತ್ರಗಳು ಬೃಹನ್ಮಠದಲ್ಲಿವೆ.[೨೦೭] ಉಜ್ಜಯಿನಿಯ ಶ್ರೀ ಮರುಳಸಿದ್ಧಸ್ವಾಮಿ ರಥೋತ್ಸವದ ನಂತರದ ದಿನ ನಡೆಯುವ ಶಿಖರಕ್ಕೆ ಎಣ್ಣೆ ಎರೆಯುವ ಮೊದಲು ಜರಿಮಲೆ ಪಾಳೆಯಗಾರರು ತಂದ ಎಣ್ಣೆಯನ್ನು, ನಂತರ ಭಕ್ತಾಧಿಗಳ ತಂದ ಎಣ್ಣೆಯನ್ನು ಎರೆಯುತ್ತಾರೆ. ಜರಿಮಲೆಯಿಂದ ಎಣ್ಣೆ ಹೋಗದ ಹೊರತು ತೈಲಾಭಿಷೇಕ ಆರಂಭವಾಗುವುದಿಲ್ಲ. ಈ ಸಂಪ್ರದಾಯ ಇಂದಿಗೂ ಮುಂದುವರಿದುಕೊಂಡು ಬಂದಿದೆ. ಹಾಗೂ ಈ ವಂಶದ ಮೂಲ ನಾಯಕನಿಗೆ ಉಜ್ಜನಿ ಗುರುಗಳು ಆರ್ಶೀವದಿಸಿ ನೀನು ರಾಜನಾಗು ಎಂದು ಆರ್ಶೀವಾದೊಂದಿಗೆ ನೀಡಿದ ಮಾವಿನ ಗೊಟಿಗೆ ಬಂಗಾರ ಕವಚ ಹಾಕಿ ವಂಶಪರಂಪರೆಯಾಗಿ ಪೂಜಿಸಿಕೊಂಡು ಬಂದ ಸಂಪ್ರದಾಯ ಈ ಮನೆತನದಲ್ಲಿ ಈಗಲೂ ಇದೆ. ಗುಡೇಕೋಟೆಯ ಪಾಳೆಯಗಾರರು ಕೊಟ್ಟೂರುಸ್ವಾಮಿ ಮಠ ಮತ್ತು ಎಣ್ಣೆವೀರಪ್ಪ ಮಠವನ್ನು ಕಟ್ಟಿಸಿದರು. ಇವರು ಕೊಟ್ಟೂರು ಗುರುಬಸವೇಶ್ವರ ಭಕ್ತರೆಂದು ಇದರಿಂದ ತಿಳಿದುಬರುತ್ತದೆ. ಉಜ್ಜನಿ ಮರುಳಸಿದ್ಧೇಶ್ವರ ಮತ್ತು ಕೊಟ್ಟೂರು ಗುರುಬಸವೇಶ್ವರ ರಥೋತ್ಸವದ ಸಂದರ್ಭದಲ್ಲಿ ಅತ್ಯಂತ ಮಡಿವಂತಿಕೆಯಿಂದ ನಡೆದುಕೊಳ್ಳುವ ಈ ಪಾಳೆಯಗಾರರು ಈ ಮಠಗಳ ಸದ್ಭಕ್ತರೆಂಬುದು ಇದರಿಂದ ವೇದ್ಯವಾಗುತ್ತದೆ. ಆ ಸಂದರ್ಭದಲ್ಲಿ ಮಾಂಸಾಹಾರ ನಿಷೇಧಿಸುತ್ತಾರೆ. ಪ್ರತಿನಿತ್ಯ ಇವರು ತಮ್ಮ ಮನೆಗಳಲ್ಲಿ ವೀರಶೈವಧರ್ಮದ ಆಚರಣೆಗನುಗುಣವಾಗಿಯೇ ನಡೆದುಕೊಳ್ಳುತ್ತಾರೆ. ಉಜ್ಜನಿ ಮಠದೊಂದಿಗೆ ಅನ್ಯೋನ್ಯ ಭಕ್ತಿ ಸಂಬಂಧವನ್ನು ಇಂದಿಗೂ ಈ ನಾಯಕ ಅರಸರು ಹೊಂದಿರುವರು. ಪಂಚಗಣಾಧೀಶರಲ್ಲೊಬ್ಬರಾದ ಕೊಟ್ಟೂರು ಗುರುಬಸವೇಶ್ವರರು ಈ ಪಾಳೆಯಗಾರರ ಮೇಲೆ ಅಷ್ಟೇ ಅಲ್ಲದೆ ಈ ಪ್ರದೇಶದಲ್ಲಿ ತುಂಬಾ ಪ್ರಭಾವ ಬೀರಿದ್ದಾರೆ.

ಚಿತ್ರದುರ್ಗದ ಪಾಳೆಯಗಾರರು ಮೂಲತಃ ವೈಷ್ಣವರೆಂದು ಹೇಳಬಹುದು. ಅವರ ಮನೆತನದ ಮೂಲದೇವರು ನೀರ್ಥಡಿ ರಂಗನಾಥಸ್ವಾಮಿ. ಧರ್ಮಸಹಿಷ್ಣುರಾಗಿದ್ದ ಚಿತ್ರದುರ್ಗ ಪಾಳೆಯಗಾರರು ಶೈವ ಮತ್ತು ವೈಷ್ಣವಧರ್ಮಗಳೆರಡಕ್ಕೂ ಸಮಾನ ಸ್ಥಾನಮಾನಗಳನ್ನು ನೀಡಿದ್ದರು. ಅನೇಕ ಮಠ, ದೇವಾಲಯಗಳನ್ನು ಕಟ್ಟಿಸಿದ ಅವರು ದಾನದತ್ತಿ ನೀಡಿ ಅವುಗಳನ್ನು ಜೀರ್ಣೋದ್ಧಾರ ಮಾಡಿದರು. ಶೃಂಗೇರಿ ಮಠ, ಸತ್ಯಬೋಧನಾಚಾರ್ಯರ ಮಠ, ರಾಘವೇಂದ್ರಸ್ವಾಮಿಗಳ ಮಠ, ತಾತಾಚಾರ್ಯರ ಮಠ, ಉಜ್ಜನಿ ಮಠ, ಮೈಸೂರು ಮಠ, ಬೃಹನ್ಮಠ, ಮುಂಡಿಮಠ, ಮದ್ವಾಚಾರ್ಯರ ಮಠ ಮುಂತಾದ ಮಠಗಳು ಚಿತ್ರದುರ್ಗ ನಾಯಕರ ಕಾಲದಲ್ಲಿ ಕಟ್ಟಲ್ಪಟ್ಟವು. ಚಿತ್ರದುರ್ಗ ನಾಯಕರ ಪಟ್ಟಾಭಿಷೇಕ

ಮಹೋತ್ಸವವು ಸಂಪಿಗೆಸಿದ್ದೇಶ್ವರ ದೇವಾಲಯದಲ್ಲಿ ಜರುಗುತ್ತಿತ್ತು.[೨೧೮] ತಿಮ್ಮಣ್ಣನಾಯಕನ ನಂತರ ಆಳಿದ ಓಬಣ್ಣನಾಯಕನಿಗೆ 'ರಸಾಸಿದ್ಧರು' ಎಂದು ಕರೆಯಲಾಗುವ ಸಿದ್ಧಪುರುಷರ ಆತ್ಮೀಯ ಸಂಪರ್ಕ ಉಂಟಾಗಿತ್ತು. ಇವರು ಬಹುಶಃ ಶೈವ ಕಾಪಾಲಿಕ ನಾಥ ಸಂಪ್ರದಾಯದ ಯೋಗಸಿದ್ಧರಿರಬೇಕೆಂದು ತಿಳಿಯಲಾಗಿದೆ. ನಾಯಕರಿಗೂ ವೀರಶೈವ ಧಾರ್ಮಿಕ ಪುರುಷರೊಂದಿಗೆ ಒಂದಲ್ಲ ಒಂದು ರೀತಿಯ ಸಂಪರ್ಕ ಸತತವಾಗಿ ಸಾಗಿ ಬಂದಿರುವುದು ಕಾಣುತ್ತದೆ. ದೊರೆ ೧ನೇ ಕಸ್ತೂರಿರಂಗಪ್ಪನಾಯಕನ ಕಾಲದಲ್ಲಿ ಇವನ ನಾಗತಿ ಕಾಟವ್ವ 'ಕಾಟಿಮಠ'ವನ್ನು ಕಟ್ಟಿಸಿ ಅದಕ್ಕೆ ಸಂಬಂಧಿಸಿದಂತೆ ಒಂದು ತೋಪು ನಿರ್ಮಿಸಿದಳು.[೨೧೯] ಇಮ್ಮಡಿ ಮದಕರಿನಾಯಕನು ಗುಡ್ಡದಲ್ಲಿ ಒಂದು ಕಲ್ಲುಮಠ ಮತ್ತು ಅದಕ್ಕೆ ಸೇರಿದಂತೆ ಬಾವಿಯನ್ನು ಮಾಡಿಸಿದ ಬಗ್ಗೆ ದಾಖಲೆಗಳು ತಿಳಿಸುತ್ತವೆಯಾದರೂ ಇವುಗಳ ನಿರ್ಮಾಣದ ನಿರ್ದಿಷ್ಟ ಸ್ಥಳ, ಕಾಲದ ಬಗ್ಗೆ ಗೊತ್ತಾಗಿಲ್ಲ.[೨೨೦] ಚಿತ್ರದುರ್ಗದ ಇತಿಹಾಸದಲ್ಲಿ ಚಿಕ್ಕಣ್ಣನಾಯಕನ ಕಾಲ ಧಾರ್ಮಿಕವಾಗಿ ಮುಖ್ಯವಾದುದು. ಇವನು ಮತ್ತು ಇಡೀ ಅರಮನೆ ವರ್ಗವೆಲ್ಲಾ ವೀರಶೈವಧರ್ಮಕ್ಕೆ ಮತಾಂತರ ಹೊಂದಿದ್ದರು. ಆಗ ಇವರಿಗೆ ಗುರುಗಳಾಗಿದ್ದ ವೀರಶೈವ ಜಂಗಮ ಉಗ್ರಚನ್ನವೀರಸ್ವಾಮಿಗಳಿಗೆ ಕೋಟೆಯಲ್ಲಿ ಕಲ್ಲುಮಠವನ್ನು ಕಟ್ಟಿಸಿಕೊಡಲಾಯಿತು. ಆದರೆ ಕೆಲವೇ ದಿನಗಳಲ್ಲಿ ಮತ್ತೆ ಮೂಲ ಜಾತಿಗೆ ಹಿಂದಿರುಗಿ ಲಿಂಗವನ್ನು ತೆಗೆದು ಹಾಕಿದರು. ಇವನ ರಾಣಿ ನಾಯಕನಹಟ್ಟಿ ಮಲ್ಲವ್ವನಾಗತಿ ಮಾತ್ರ ತಾನು ಧರಿಸಿದ ಲಿಂಗವನ್ನು ತೆಗೆಯದೆ ತಾನೇ ಬೇರೊಂದು ಅರಮನೆಯಲ್ಲಿ ನೆಲೆಸಿ ಕೊನೆಯ ಕಾಲದವರೆಗೂ ವೀರಶೈವ ಧರ್ಮದಲ್ಲಿಯೇ ಉಳಿದುಕೊಂಡಳು.[೨೨೧] ದೊರೆ ಚಿಕ್ಕಣ್ಣನಾಯಕನು ಈ ನಾಗತಿಗೆ ಯಾವುದೇ ರೀತಿಯಲ್ಲಿ ಅಡ್ಡಿಪಡಿಸಲಿಲ್ಲ. ಈ ನಾಯಕನ ಕಾಲದಲ್ಲಿಯೇ ಕೂಡಲೀ ಶೃಂಗೇರಿ ಮಠದೊಂದಿಗೆ ಸಂಪರ್ಕ ಏರ್ಪಟ್ಟಿತು. ನಾಯಕನು ಚಿತ್ರದುರ್ಗಕ್ಕೆ ಸೇರಿದ ಬಾಗೂರು ಸೀಮೆಯೊಳಗಿನ ಮಾರಬಗಟ್ಟೆ ಗ್ರಾಮವನ್ನು ಕೂಡಲೀ ಶೃಂಗೇರಿಮಠದ ಅಂದಿನ ಗುರುಗಳಾಗಿದ್ದ ಶ್ರೀ ಶಂಕರಭಾರತೀಸ್ವಾಮಿಗಳಿಗೆ ವಹಿಸಿಕೊಟ್ಟು, ತನ್ನ ಗೌರವ ವ್ಯಕ್ತಪಡಿಸಿದನು.[೨೨೨] ಭರಮಪ್ಪನಾಯಕನು ಇಮ್ಮಡಿ ಶ್ರೀ ಶಾಂತವೀರಸ್ವಾಮಿಗಳ[೨೨೩] ಸಹಾಯದಿಂದ ಚಿತ್ರದುರ್ಗ ಅರಸನಾದನೆಂದೂ, ತಾನು ಅರಸನಾದ ನಂತರ ಬೆಟ್ಟದ ಮೇಲೆ ಮಠವನ್ನು ಕಟ್ಟಿಸಿಕೊಡುವುದರ ಮೂಲಕ ಸ್ವಾಮಿಗಳಲ್ಲಿ ತನ್ನ ಭಕ್ತಿಯನ್ನು ತೋರಿಸಿದನೆಂದು ಹೇಳಲಾಗಿದೆ.[೨೨೪] ಈ ಗುರುಗಳಿಗೆ ೭೨ ಬಿರುದುಗಳನ್ನು ಕೊಟ್ಟು ರಾಜಗುರುಗಳನ್ನಾಗಿ ಮಾಡಿಕೊಂಡನು. ಕ್ರಿ.ಶ.೧೭೦೦ರಲ್ಲಿ ಬೃಹನ್ಮಠವನ್ನು ಭರಮಣ್ಣನಾಯಕನು ಕಟ್ಟಿಸಿದನು. ಅವರು ಬೆಟ್ಟದ ಕಲ್ಮಠದಿಂದ ಹೊಸಮಠಕ್ಕೆ ಬಂದಾಗ ಭರಮಣ್ಣನಾಯಕನು ಹಾಗೂ ಆತನ ಪರಿವಾರಕ್ಕೆ ಲಿಂಗದೀಕ್ಷೆ ಮಾಡಿದರು ಎಂದು ಅಭಿಪ್ರಾಯಪಡಲಾಗಿದೆಯಾದರೂ ಅದಕ್ಕೆ ದಾಖಲೆ ಕೊರತೆ ಇದೆ. ಮಠದ ಸ್ವಾಮಿಗಳ ಮೇಲೆ ಅತ್ಯಂತ ಭಕ್ತಿ ಭಾವನೆ ಹೊಂದಿದ್ದ ಭರಮಣ್ಣನಾಯಕನು

ಬೃಹನ್ಮಠದ ಸೇವೆಗಾಗಿ ತನ್ನ ಏಳು ಮಂದಿ ಮಕ್ಕಳಲ್ಲಿ ಒಬ್ಬನನ್ನು(ಗಂಗಣ್ಣನಾಯಕನನ್ನು) ನೇಮಿಸಿದನು. ಮತ್ತು ಮಠಕ್ಕೆ ದೊಡ್ಡ ತೂಗು ಗಂಟೆಯನ್ನು ದಾನವಾಗಿ ನೀಡಿದನು.[೩೩೫] ಹಿರೇಮದಕರಿನಾಯಕನು ಧೀರ, ಭಗವದ್ಭಕ್ತ ಆಗಿದ್ದನು. ಅವನು ಸಂಪಿಗೆ ಸಿದ್ದೇಶ್ವರ, ನೀರ್ಥಡಿರಂಗನಾಥ, ಕೂಡಲೀ ಶೃಂಗೇರಿ ಜಗದ್ಗುರುಗಳ ಪರಮಭಕ್ತ. ಆ ಶ್ರೀಗಳ(ಶೃಂಗೇರಿ) ಕೃಪೆಯಿಂದ ಚಂದ್ರಮೌಳೇಶ್ವರ ಲಿಂಗವನ್ನು ಪಡೆದು ನಿತ್ಯಾರಾಧನೆ ಮಾಡುತ್ತಿದ್ದನು.[೩೩೬] ಈ ನಾಯಕನು ಪೂಜಾಕಾಲದಲ್ಲಿ ಬ್ರಾಹ್ಮಣರ ಸಂಗಡ ತಾನೂ ರುದ್ರಾಭಿಷೇಕವನ್ನು ಮಾಡಿ ಸಹಸ್ರನಾಮಗಳಲ್ಲಿ ಪುಷ್ಪಗಳನ್ನು ಸಮರ್ಪಿಸಿ, ಧೂಪದೀಪ ನೈವೇದ್ಯಗಳನ್ನು ಸಮರ್ಪಣೆ ಮಾಡಿ ಅನಂತರ ಭೋಜನ ಸ್ವೀಕರಿಸುತ್ತಿದ್ದನೆಂದು ದಾಖಲೆಗಳಲ್ಲಿ ಉಲ್ಲೇಖಿಸಲಾಗಿದೆ. ಈತನು ಕೂಡಲೀ ಶೃಂಗೇರಿ ಶ್ರೀ ಶಂಕರಭಾರತೀಸ್ವಾಮಿಗಳವರ ಪರಮ ಭಕ್ತನಾಗಿದ್ದನು. ಈ ಕೂಡಲೀ ಶೃಂಗೇರಿ ಶ್ರೀಗಳು ಚಿತ್ರದುರ್ಗದಲ್ಲಿಯೇ ಸಮಾಧಿಸ್ಥರಾಗಿದ್ದಾರೆ. ಇಲ್ಲಿಯವರೆಗೆ ಬೃಹನ್ಮಠಕ್ಕೆ ರಾಜಗೌರವ ನೀಡಿದ್ದ ಚಿತ್ರದುರ್ಗ ದೊರೆಗಳು ಹಿರೇಮದಕರಿ ನಾಯಕನ ಕಾಲದಲ್ಲಿ ಕೂಡಲೀಶೃಂಗೇರಿ ಮಠಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದು ಯಾಕೆ? ಎಂಬುದು ಕುತೂಹಲವನ್ನುಂಟು ಮಾಡುತ್ತದೆ. ಈ ಬಗ್ಗೆ ಪ್ರೊ.ಲಕ್ಷ್ಮಣ್ ತೆಲಗಾವಿಯವರು ಹಿರೇಮದಕರಿನಾಯಕನ ಮತ್ತು ಶ್ರೀಬೃಹನ್ಮಠ ನಡುವಿನ ಸಂಬಂಧ ಕುರಿತು ಮರುಪರಿಶೀಲಿಸಬೇಕಿದೆಯೆಂದು ಅಭಿಪ್ರಾಯ ಪಟ್ಟಿರುವರು. ಅಲ್ಲದೆ ಹಿರೇಮದಕರಿನಾಯಕನ ಆಡಳಿತಾವಧಿಯಲ್ಲಿ ನಡೆದ ಘಟನೆಯೊಂದು ಅರಮನೆ-ಗುರುಮನೆಗಳ ಮಧ್ಯೆ ನೆಲೆಗೊಂಡಿದ್ದ ಪವಿತ್ರ ಬಾಂಧವ್ಯವು ತಾತ್ಕಾಲಿಕವಾಗಿ ಕತ್ತರಿಸಿ ಹೋಗಲು ಕಾರಣವೆನಿಸಿತು ಎಂದೂ ಹೇಳಿರುವರು.[೩೩೭] ಮಹಾದೇವನ ಕಾವ್ಯದಲ್ಲಿ ಅರಸನ ಹೆಸರನ್ನು ದುರ್ಗದ ದೊರೆ ಎಂದಷ್ಟೇ ಹೇಳಿದ್ದರಿಂದ ಈ ದೊರೆ ಹಿರೇಮದಕರಿ ಇರಬಹುದೆಂದು ಅವರು ಗ್ರಹಿಸಿದ್ದಾರೆ. ಹಿರೇಮದಕರಿನಾಯಕನ ನಂತರ ಚಿತ್ರದುರ್ಗವನ್ನಾಳಿದ ರಾಜವೀರ ಮದಕರಿನಾಯಕನ ಕಾಲದಲ್ಲಿ ಬೃಹನ್ಮಠದ ಗುರುಗಳೊಡನೆ ಒಳ್ಳೆಯ ಬಾಂಧವ್ಯ ಮುಂದುವರೆಯಿತು. ಕೂಡಲೀ ಶೃಂಗೇರಿ ಮಠದ ಪಂಚಮ ಶ್ರೀ ನರಸಿಂಹಭಾರತೀಸ್ವಾಮಿಗಳವರಿಗೂ ಅವರ ನಂತರದ ಚತುರ್ಥ ಶ್ರೀ ಶಂಕರಭಾರತೀ ಸ್ವಾಮಿಗಳವರಿಗೂ ಈ ನಾಯಕನು ಅತ್ಯಂತ ಭಕ್ತಿಯಿಂದ ನಡೆದುಕೊಂಡನು.[೩೩೮] ಆದರೆ ಈ ಮನೆತನದ ವಂಶಸ್ಥರು ಬೃಹನ್ಮಠದೊಂದಿಗೆ ಇಂದಿಗೂ ಹೊಂದಿದಂತಹ ಸಂಬಂಧ ಕೂಡಲೀ ಶೃಂಗೇರಿ ಮಠದೊಂದಿಗೆ ಹೊಂದಿಲ್ಲ. ಒಟ್ಟಿನಲ್ಲಿ ಕೂಡಲೀ ಶೃಂಗೇರಿ ಮತ್ತು ಬೃಹನ್ಮಠಗಳು ಚಿತ್ರದುರ್ಗ ನಾಯಕರ ಕಾಲದಲ್ಲಿ ರಾಜಾಶ್ರಯದಲ್ಲಿದ್ದವು ಎಂದು ಹೇಳಬಹುದು.

ಮತ್ತೊಂದು ಪಾಳೆಯಗಾರರು ವೀರಶೈವ ಧರ್ಮಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದ್ದರು. ಬೇಡ ಜನಾಂಗಕ್ಕೆ ಸೇರಿದ ಇವರು ಹಾಲಪ್ಪನಾಯಕನ ಕಾಲದಲ್ಲಿ ವೀರಶೈವ ಧರ್ಮವನ್ನು ಸ್ವೀಕರಿಸಿದರು.[೩೩೯] ಶ್ರೀ ಶೈಲದಿಂದ ಆಗಮಿಸಿದ ಜಂಗಮ ಶ್ರೀಪರ್ವತ ಮಲ್ಲಿಕಾರ್ಜುನಸ್ವಾಮಿಗಳಿಂದ ಅನುಗ್ರಹ ಪಡೆದು

'ವೀರಶೈವ'ರಾಗಿ ಮತಾಂತರಗೊಂಡರು.[೨೩೦] ವೀರಶೈವ ಧರ್ಮವನ್ನು ಸ್ವೀಕರಿಸಿದ ಇವರು ಮತ್ತೆ ಬೇಡ ಜನಾಂಗಕ್ಕೆ ಮರಳಲಿಲ್ಲ; ವೀರಶೈವ ಧರ್ಮದಲ್ಲಿಯೇ ಮುಂದುವರೆದರು. ಇಂದೂ ಸಹ ಇವರ ವಂಶಜರೆಲ್ಲರೂ ಲಿಂಗಧಾರಿಗಳಾಗಿ ವೀರಶೈವರೆಂದು ಕರೆಯಿಕೊಳ್ಳುವರು. ಚಿತ್ರದುರ್ಗದ ಹಿರೇಮದಕರಿ ನಾಯಕನು[೨೩೧] ತನ್ನ ಮಗಳನ್ನು ಈ ಮತ್ತೋಡು ಮನೆತನದ ಸಿದ್ಧಪ್ಪನಾಯಕನಿಗೆ ಕೊಟ್ಟು ಮದುವೆ ಮಾಡಿದನು. ಮತ್ತೋಡಿನ ಜನತೆ ಈ ನಾಗತಿಯ ಬಗ್ಗೆ ಅಸಮಧಾನಗೊಂಡರು. ಆಗ ಮುರಿಗಾಸ್ವಾಮಿಗಳು ಮತ್ತೋಡಿಗೆ ಬಂದು ನಾಗತಿಗೆ ಲಿಂಗಧಾರಣೆ ನಡೆಸಿದರು.[೨೩೨] ವೀರಶೈವರಾದ ನಂತರ ಮತ್ತೋಡು ಪಾಳೆಯಗಾರರು ಆ ಧರ್ಮದಲ್ಲಿ ಕಟ್ಟುನಿಟ್ಟಾದುದನ್ನು ಇದು ಸೂಚಿಸುತ್ತದೆ. ವೀರಶೈವಧರ್ಮ ಸ್ವೀಕರಿಸಿದ ನಂತರ ಪರ್ವತಮಲ್ಲಿಕಾರ್ಜುನಸ್ವಾಮಿಗಳು ಇವರಿಗೆ ರಾಜಗುರುಗಳಾದರು. ಹಾಲಪ್ಪನಾಯಕನು ತನ್ನ ಭಕ್ತಿಯ ದ್ಯೋತಕವಾಗಿ ಇವರಿಗೆ ಮಠವೊಂದನ್ನು ಕಟ್ಟಿಸಿಕೊಟ್ಟನು.[೨೩೩] ಮತ್ತೋಡು ಪಾಳೆಯಗಾರರು ವೀರಶೈವ ಕುಟುಂಬಗಳೊಡನೆಯೇ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಾ ಬಂದಿದ್ದಾರೆ. ಹಾಲಪ್ಪನಾಯಕನು ಮತ್ತೋಡಿನಲ್ಲಿ ಮುರಿಗಾಸ್ವಾಮಿಗಳಿಗೆ ಮಠವೊಂದನ್ನು ಕಟ್ಟಿಸಿ ಅರೆಹಳ್ಳಿ ಎಂಬ ಗ್ರಾಮವನ್ನು ಅದರ ಪಾಲನೆಗಾಗಿ ಬಿಟ್ಟುಕೊಟ್ಟನು.[೨೩೪] ಅಲ್ಲದೆ ಮುರಿಗೆ ಸ್ವಾಮಿಗಳಿಗೆ ಅರೆಹಳ್ಳಿಯಲ್ಲೊಂದು ಮಠ, ಮತ್ತೋಡಿನಲ್ಲಿ ಚಿತ್ರಮಠ ಮತ್ತು ಗೂಳಿಹಳ್ಳಿಯಲ್ಲಿ ಹೊಸಮಠಗಳನ್ನು ಕಟ್ಟಿಸಿಕೊಟ್ಟನು. ಅರಮನೆಯ ಎಲ್ಲಾ ಶುಭಕಾರ್ಯಗಳಿಗೆ ಪರ್ವತ-ಮಲ್ಲಿಕಾರ್ಜುನಸ್ವಾಮಿಗಳಿಗೆ ನಡೆದುಕೊಂಡಂತೆ ಮುರಿಗೆಮಠದ ಗುರುಗಳಿಗೂ ನಡೆದುಕೊಂಡನು.[೨೩೫] ಮತ್ತೋಡಿನ ಸಿದ್ಧರಾಮೇಶ್ವರ ಈ ಪಾಳೆಯಗಾರರ ಆರಾಧ್ಯದೈವ, ಪ್ರತಿವರ್ಷ ಪೂಜೆ, ಪುರಸ್ಕಾರ ಏರ್ಪಡಿಸಿ ಅನ್ನಸಂತರ್ಪಣೆಗೆ ವ್ಯವಸ್ಥೆ ಮಾಡುವುದುಂಟು.[೨೩೬] ಬೇವಿನಹಳ್ಳಿ ಕರಿಯಮ್ಮ ಇವರ ಆರಾಧ್ಯದೇವತೆ. ಈ ದೇವತೆಯ ಪೂಜಾರಿಗಳು ಬೇಡಜನಾಂಗದವರು. ಬೇಡ ಜನಾಂಗದಿಂದ ವೀರಶೈವ ಧರ್ಮಕ್ಕೆ ಮತಾಂತರಗೊಂಡ ಮತ್ತೋಡು, ಹಾಗಲವಾಡಿ, ಹರಪನಹಳ್ಳಿ, ಪಾಳೆಯಗಾರರ ಜೊತೆ ಬೇಡ ಸಂಸ್ಥಾನದ ದೊರೆಗಳು ವೈವಾಹಿಕ ಸಂಬಂಧವನ್ನು ಬೆಳೆಸುವುದಿಲ್ಲ.

ನಾಯಕನಹಟ್ಟಿ ಪಾಳೆಯಗಾರರು ಸಹ ವೀರಶೈವಧರ್ಮವನ್ನು ಪೋಷಿಸಿ ಬೆಳೆಸಿದರು. ಈ ಮನೆತನದ ಮೂಲಪುರುಷ ಕಾಟೇಮಲ್ಲನಾಯಕನು ಶ್ರೀಶೈಲ ಪ್ರದೇಶದಿಂದ ಬಂದವನು. ಪಂಚಗಣಾಧೀಶರಲ್ಲಿ ಒಬ್ಬರೆಂದು ತಿಳಿಯಲಾದ ತಿಪ್ಪೇರುದ್ರಸ್ವಾಮಿ(ತಿಪ್ಪೇಸ್ವಾಮಿ)ಗಳು ಹಟ್ಟಿ ಪಾಳೆಯಗಾರರಿಗೆ ರಾಜಗುರುಗಳು.[೨೩೭] ಬೇಡ ಕುಲದವನಾಗಿದ್ದ ಬೋದಿಮಲ್ಲಪ್ಪನಾಯಕನು ತಿಪ್ಪೇರುದ್ರಸ್ವಾಮಿಗಳನ್ನು ತನ್ನ ಅರಮನೆಗೆ ಬರಮಾಡಿಕೊಂಡು ಅವರ ಪ್ರಭಾವದಿಂದ ವೀರಶೈವಧರ್ಮದ ಕಡೆಗೆ ಬಂದನು.[೨೩೮] ಚಿತ್ರದುರ್ಗ, ಜರಿಮಲೆ, ಗುಡೇಕೋಟೆ, ಮತ್ತೋಡು, ಹರತಿ, ಗುಡಗುಂಟೆ, ಹರಪನಹಳ್ಳಿ, ಹಾಗಲವಾಡಿ ಸಂಸ್ಥಾನಿಕರು ವೀರಶೈವಧರ್ಮಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದ್ದರಿಂದ ಈ ಎಲ್ಲ ಕೇಂದ್ರಸ್ಥಳಗಳಲ್ಲಿ ಮಠಮಾನ್ಯಗಳು

ಕಟ್ಟಲ್ಪಟ್ಟವು. ಈ ಪ್ರದೇಶದಲ್ಲಿ ಉಳಿದುಕೊಂಡ ಪಂಚಗಣಾಧೀಶರು[೨೩೯] ೧೪-೧೫ನೇ ಶತಮಾನದ ನಂತರ ವೀರಶೈವಧರ್ಮೋದ್ಧಾರಕ್ಕಾಗಿ ದೇಶ ಸಂಚಾರ ಮಾಡಿದರು. ಮೊದಲು ಕೂಡ್ಲಿಗಿ ತಾಲ್ಲೂಕಿನ ಕುಪ್ಪಿನಕೆರೆಗೆ ಬಂದು ಆಂಜನೇಯ ದೇವಸ್ಥಾನದಲ್ಲಿ ತಂಗಿದ ಈ ಪಂಚಗಣಾಧೀಶರರು, ಶಿಲಾಮೂರ್ತಿ ಆಂಜನೇಯನಿಗೆ ಲಿಂಗದೀಕ್ಷೆ ಮಾಡುತ್ತಾರೆ. ನಂತರ ಕೆಂಪಯ್ಯಸ್ವಾಮಿಗಳು ಹರಪನಹಳ್ಳಿಗೆ, ಗುರು ಬಸವೇಶ್ವರರು ಕೊಟ್ಟೂರಿಗೆ, ಕೋಲಶಾಂತಯ್ಯ ಅರಸೀಕೆರೆಗೆ, ತಿಪ್ಪೇರುದ್ರಸ್ವಾಮಿಗಳು ನಾಯಕನ ಹಟ್ಟಿಗೆ ಮತ್ತು ಮದ್ದಾನೇಶ್ವರರು ಕೂಲಹಳ್ಳಿಗೆ ಹೋಗಿ ಅಲ್ಲಿಯೇ ಉಳಿದುಕೊಳ್ಳುತ್ತಾರೆ.[೨೪೦] ಬಹುತೇಕವಾಗಿ ಇವರೆಲ್ಲರೂ ಬೇಡ ಪಾಳೆಯಗಾರರನ್ನು ಆಶ್ರಯಿಸಿದವರು. ಹರಪನಹಳ್ಳಿ ನಾಯಕರು ಪಂಚಗಣಾಧೀಶರ ಪ್ರಭಾವಕ್ಕೊಳಗಾದರು. ಬಸವಂತಪ್ಪನಾಯಕನು ವೀರಶೈವಧರ್ಮವನ್ನು ಸ್ವೀಕರಿಸಿದ ಮೇಲೆ ಕೊಟ್ರಪ್ಪನಾಯಕನೆಂದು ಹೆಸರಿಟ್ಟುಕೊಂಡನು; ಕೊಟ್ಟೂರು ಗುರುಬಸವೇಶ್ವರನ ಪರಮಭಕ್ತನಾದನು.[೨೪೧] ಬಸವಂತಪ್ಪ ನಾಯಕನನ್ನು ಹಂಪೆಗೆ ಕರೆದುಕೊಂಡು ಹೋಗಿ ಲಿಂಗದೀಕ್ಷೆ ಮಾಡಿಸಿ ಕೊಟ್ರಪ್ಪನಾಯಕನೆಂದು ನಾಮಕರಣ ಮಾಡುವಲ್ಲಿ ಪ್ರಮುಖರಾದವರೆಂದರೆ ಶಿವಸಂಗಪ್ಪಯ್ಯ, ಚೆನ್ನವೀರಸ್ವಾಮಿ, ವೀರಭಿಕ್ಷಾವರ್ತಿ, ಮಡಿವಾಳಸ್ವಾಮಿ, ಬಸವಸ್ವಾಮಿ, ಮಲ್ಲಿಕಾರ್ಜುನಸ್ವಾಮಿ, ಕಾಡಸಿದ್ಧಸ್ವಾಮಿ, ಬಸವಂತಪ್ಪನಾಯಕನ ನಂತರ ಈ ಮನೆತನದವರೆಲ್ಲರೂ ಲಿಂಗಧಾರಿಗಳಾದರು. ಹಾಗೂ ಈ ನಾಯಕರು ವೀರಶೈವಧರ್ಮ ಪೋಷಿತ ಸಂಸ್ಥಾನಿಕರೊಡನೆ ಉತ್ತಮ ಬಾಂಧವ್ಯವನ್ನು ಹೊಂದಿದ್ದರು. ಅಲ್ಲದೆ ಇವರಿಗೆ ಕೊಟ್ಟೂರು ಗುರುಬಸವೇಶ್ವರನೆ ರಾಜಗುರುಗಳಾದರು.[೨೪೨] ಪಂಚಗಣಾಧೀಶರಲ್ಲಿ ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ ಮತ್ತು ಕೊಟ್ಟೂರಿನ ಗುರುಬಸವೇಶ್ವರರು ತುಂಬಾ ಪ್ರಸಿದ್ಧರು. ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿಯ ಮೂಲದ ಬಗ್ಗೆ ಜಿಜ್ಞಾಸೆಯೇ ಇದೆ. ಈತನನ್ನು ಕೆಲವರು ಮ್ಯಾಸಬೇಡ ಮೂಲಕ್ಕೆ ಸೇರಿದವನೆಂದರೆ, ಈತನನ್ನು ಪಂಚಗಣಾಧೀಶರ ಗುಂಪಿಗೆ ಸೇರಿಸುವವರೂ ಇದ್ದಾರೆ. ಇವನು ನೆಲೆಸಿದ ಪ್ರದೇಶಗಳಲ್ಲಿ ತಮ್ಮ ಪವಾಡಗಳ ಮೂಲಕ ಎಲ್ಲಾ ವರ್ಗದವರನ್ನು ಸೆಳೆದುಕೊಂಡರು. ಈ ಪ್ರದೇಶಗಳಲ್ಲಿ ಕೊಟ್ರೇಶ, ಕೊಟ್ರಪ್ಪ, ಗುರುಬಸವರಾಜ, ತಿಪ್ಪೇಶ, ತಿಪ್ಪೇರುದ್ರ, ತಿಪ್ಪಣ್ಣ ಹೀಗೆ ಈ ಶರಣರ ಹೆಸರುಗಳು ಎಲ್ಲಾ ಜನಾಂಗದಲ್ಲೂ ಕಂಡುಬರುತ್ತವೆ. ಹಟ್ಟಿಯ ಪಾಳೆಯಗಾರ ಬೋದಿಮಲ್ಲಪ್ಪನಾಯಕನು ತನ್ನ ೭೭ ಬಿರುದುಗಳನ್ನು ಸ್ವಾಮಿಗಳಿಗೆ ಅರ್ಪಿಸಿ ತಾನು ಕಾಶಿಗೆ ಹೋಗಿಬರುವ ಸಂಕಲ್ಪ ತಿಳಿಸುತ್ತಾನೆ. ಆಗ ಸದ್ಭಕ್ತನ ಅಂಗಳವೇ ಕೈಲಾಸ ಎಂದು ತಿಪ್ಪೇರುದ್ರರು ಆರ್ಶೀವಾದಿಸಿದರೆಂದು ತಿಳಿದುಬರುವುದು. ಪಾಳೆಯಗಾರ ಮಲ್ಲಪ್ಪನಾಯಕನು ಸ್ವಾಮಿಗೆ ಅರ್ಪಿಸಿದ ಪಲ್ಲಕ್ಕಿ, ಛತ್ರಿ, ಚಾಮರಗಳನ್ನು ಇಂದಿಗೂ ಉತ್ಸವಗಳಿಗಾಗಿ ಬಳಸುತ್ತಾರೆ. ತಿಪ್ಪೇರುದ್ರರ ಸಮಾಧಿ ಸ್ಥಳವನ್ನು ವಾಲ್ಮೀಕಿ(ಬೇಡ) ಮತದವರು ಪೂಜಿಸುತ್ತಾರೆ. ಚಿತ್ರದುರ್ಗದ ಭರಮಪ್ಪನಾಯಕನು ತಿಪ್ಪೇರುದ್ರಸ್ವಾಮಿಗಳ ಭಕ್ತನಾಗಿದ್ದನು. ತಿಪ್ಪೇರುದ್ರರ ಸಮಾಧಿಮಠವನ್ನು ಈ ನಾಯಕನು ನಿರ್ಮಾಣ ಮಾಡಿದನು.[೨೪೩] ನಾಯಕನಹಟ್ಟಿ ದೊರೆಗಳು ತಿಪ್ಪೇರುದ್ರರನ್ನು

ಆರಾಧಿಸುತ್ತಿದ್ದಂತೆ ಬಾಳೆಹೊನ್ನೂರ ಮಠಕ್ಕೂ ನಡೆದುಕೊಳ್ಳುತ್ತಿದ್ದರೆಂದು ತಿಳಿದುಬರುವುದು. ಈಗಿರುವ ಈ ಪಾಳೆಯಗಾರರ ವಂಶಸ್ಥರು ಬಾಳೆಹೊನ್ನೂರುಮಠದ ಸ್ವಾಮಿಗಳನ್ನು ತಮ್ಮ ಗುರುಗಳೆಂದು ಭಾವಿಸುತ್ತಾರೆ. ಧಾರ್ಮಿಕವಾಗಿ ತಿಪ್ಪೇರುದ್ರರು ಕೆಳವರ್ಗದಲ್ಲಿ ತುಂಬಾ ಪ್ರಭಾವ ಬೀರಿರುವುದು ಈ ಭಾಗದಲ್ಲಿ ಸಂಚರಿಸಿದ ಪ್ರತಿಯೊಬ್ಬರಿಗೂ ತಿಳಿದುಬರುವ ಸಂಗತಿಯಾಗಿದೆ. ಹಟ್ಟಿ ಪಾಳೆಯಗಾರರ ಧರ್ಮಶ್ರದ್ಧೆಯಿಂದ ನಾಯಕನಹಟ್ಟಿ ಒಂದು ಧಾರ್ಮಿಕ ಪುಣ್ಯ ಸ್ಥಳವಾಗಿದೆ. ಹರತಿ ಪಾಳೆಯಗಾರರು ಶೈವ ಸಂಪ್ರದಾಯಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದ್ದರು. ಇವರು ವೀರಶೈವ ಮತವನ್ನು ಅವಲಂಬಿಸಿದ್ದರು.[೨೪೪] ಹರತಿ ಪಾಳೆಯಗಾರರ ಮುಮ್ಮಡಿ ರಂಗಪ್ಪನಾಯಕನು ಕಾಳಮುಖ ಗುರುಗಳ ಪರಮಭಕ್ತನಾಗಿದ್ದನು.[೨೪೫] ಹರತಿ ವಂಶಸ್ಥರ ಇನ್ನೊಂದು ಸ್ಥಳವಾದ ರತ್ನಗಿರಿಯಲ್ಲಿ ಕೂಡಲೀ ಶೃಂಗೇರಿ ಮಠದ ಶಾಖೆಯೊಂದಿತ್ತು.[೨೪೬] ಕೂಡಲೀ ಶೃಂಗೇರಿ ಮಠದ ಪ್ರಭಾವ ಇವರನ್ನು ತಟ್ಟಿತು. ಚಿಕ್ಕರಂಗಪ್ಪನಾಯಕನು ಕಾಳಮುಖ ಗುರುಗಳಾದ ಹೊಟ್ಟೆಯೀಶ್ವರಯ್ಯ ಎಂಬುವರ ಸಿಂಹಾಸನ ಮಠಕ್ಕೆ ಕ್ರಿ.ಶ.೧೫೯೨ರಲ್ಲಿ ಹೆಂಮಡಿಹಾಳು ಗ್ರಾಮವನ್ನು ದಾನನೀಡಿದನು.[೨೪೭] ಸಾರವಾಡದ ಸ್ವಾಮಿಗಳು ಹರತಿ ಪಾಳೆಯಗಾರರ ಗುರುಗಳಾಗಿದ್ದರು. ಈ ಸ್ವಾಮಿಗಳ ವಂಶಸ್ಥರ ಕುಟುಂಬಗಳು ಇನ್ನು ಇವೆಯೆಂದು ತಿಳಿದುಬಂದಿದೆ. ವೈಷ್ಣವಧರ್ಮಕ್ಕೂ ಹರತಿ ಪಾಳೆಯಗಾರರು ಉತ್ತಮಸ್ಥಾನವನ್ನು ನೀಡಿದ್ದರು. ಅಹೋಬಲ ನರಸಿಂಹನನ್ನು ಅವರು ಆರಾಧಿಸುತ್ತಿದ್ದರು.

ಬೇಡನಾಯಕರು ವೀರಶೈವಧರ್ಮವನ್ನು ಸ್ವೀಕರಿಸುವಲ್ಲಿ ಶೃಂಗೇರಿಯ ಕೂಡಲೀಮಠವು ಪ್ರಭಾವ ಬೀರಿರುವ ಸಾಧ್ಯತೆಯಿದೆ. ವಿಜಯನಗರ ಕಾಲದಿಂದಲೂ ಈ ಮಠವು ಶೈವಧರ್ಮ ಪ್ರಚಾರದಲ್ಲಿದ್ದುದು ಹಾಗೂ ದಾನದತ್ತಿ ಎಂದು ಭೂಮಿಗಳನ್ನು ಪಡೆದುಕೊಳ್ಳುವಲ್ಲಿ ಗುರುತಿಸಿಕೊಂಡಿದೆ. ಅನೇಕ ದೊರೆಗಳು ಶೃಂಗೇರಿ ಕೂಡಲೀಮಠದೊಂದಿಗೆ ಭಕ್ತಿಪೂರ್ವ ಉತ್ತಮ ಸಂಬಂಧವನ್ನು ಹೊಂದಿದ್ದರು. ಚಿತ್ರದುರ್ಗದಲ್ಲಿ ಬೃಹನ್ಮಠ ಪ್ರಭಾವಿತವಾಗಿದ್ದರೂ ನಾಯಕರು ಬೃಹನ್ಮಠಕ್ಕೆ ನೀಡಿದ ಸ್ಥಾನಮಾನಗಳನ್ನು ಕೂಡಲೀಶೃಂಗೇರಿ ಮಠಕ್ಕೂ ನೀಡಿದ್ದರು. ಕೂಡಲೀ ಶೃಂಗೇರಿ ಪೀಠದ ಶಾಖೆಯೊಂದನ್ನು ಚಿತ್ರದುರ್ಗದಲ್ಲಿ ಸ್ಥಾಪಿಸಿದ್ದರು. ಕೂಡಲೀ ಶೃಂಗೇರಿ ಮಠಕ್ಕೆ ಸನ್ನದುಗಳನ್ನಿತ್ತು ಬೇಕಾದ ವ್ಯವಸ್ಥೆಗಳನ್ನು ಮಾಡಿದ್ದರು. ಈ ಪಾಳೆಯಗಾರರು ಕೊಟ್ಟ ಸನ್ನದುಗಳನ್ನು ಇಂದಿಗೂ ಮಠದಲ್ಲಿ ನೋಡಬಹುದು. ಹರಪನಹಳ್ಳಿ ನಾಯಕರು ಸಂತೆಬೆನ್ನೂರು ನಾಯಕರು ಹರತಿ ವಂಶಸ್ಥರಾದ ರತ್ನಗಿರಿ ಪಾಳೆಯಗಾರರು ಕೂಡಲೀ ಶೃಂಗೇರಿ ಮಠದೊಂದಿಗೆ ಒಳ್ಳೆಯ ಸಂಬಂಧವನ್ನು ಹೊಂದಿದ ಬಗ್ಗೆ ತಿಳಿದುಬರುತ್ತದೆ. ಕನಕಗಿರಿ ನಾಯಕರು ಕೂಡಲೀ ಶೃಂಗೇರಿ ಮಠದೊಂದಿಗೆ ಹೊಂದಿದ್ದ ಸಂಬಂಧ ಮತ್ತು ಆ ಮಠಕ್ಕೆ ದಾನ ನೀಡಿದ ಬಗ್ಗೆ ಮೂರು ತಾಮ್ರಪತ್ರಗಳು ತಿಳಿಸುತ್ತವೆ.[೨೪೮] ಈ ನಾಯಕರು ಕ್ರಿ.ಶ.೧೭೩೫ರಲ್ಲಿ ತೊಂಡೇಹಾಳ, ೧೭೬೯ರಲ್ಲಿ ಜೂಲುದೊಡ್ಡಿ,

೧೬೬೯ರಲ್ಲಿ ಸೂಕುಂಟೆ ಗ್ರಾಮಗಳನ್ನು ಮಠಕ್ಕೆ ದಾನ ಮಾಡಿದರು. ಗುಡೇಕೋಟೆ, ಜರಿಮಲೆ ಪಾಳೆಯಗಾರರು ಸಹ ಶೃಂಗೇರಿ ಕೂಡಲೀ ಪೀಠರೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಗುಡೇಕೋಟೆ ಪಾಳೆಯಗಾರ ಚಿನ್ನಯರಾಜನು ಕ್ರಿ.ಶ.೧೬೫೨ರಲ್ಲಿ ಶೃಂಗೇರಿ ಕೂಡಲೀ ಪೀಠದ ವಿರೂಪಾಕ್ಷ ವಿದ್ಯಾಭಿನವ ಶಂಕರಭಾರತೀಸ್ವಾಮಿಗಳಿಗೆ ದಾನ ಮಾಡಿದ್ದನ್ನು ಕದಿರಡವು ಗ್ರಾಮದ ಶಾಸನದಲ್ಲಿ ನೋಡಬಹುದು.[೨೪೯]

ವೀರಶೈವಧರ್ಮವು ಕೆಳವರ್ಗದ ಜನರನ್ನು, ದೊರೆಗಳನ್ನು ತನ್ನ ಕಡೆಗೆ ಸೆಳೆದುಕೊಂಡಿತು. ಧರ್ಮಸಹಿಷ್ಣುರಾಗಿದ್ದ ಪಾಳೆಯಗಾರರು ಕೆಲವೊಮ್ಮೆ ಧರ್ಮದ ಹಿನ್ನೆಲೆಯಲ್ಲಿ ದಾಳಿಗಳನ್ನು ಎದುರಿಸಬೇಕಾಗುತ್ತಿತ್ತು. ರಾಜಕೀಯ ದೃಷ್ಟಿಯಲ್ಲಿ ಧರ್ಮವು ಮಿಶ್ರಲಾಭವನ್ನುಂಟು ಮಾಡಿತು. ಈ ಕಾಲದಲ್ಲಿ ನಡೆದ ಧರ್ಮಾಂತರ ಪ್ರಕ್ರಿಯೆಯನ್ನು ಗಮನಿಸಿದರೆ ಪ್ರಬಲ ಧರ್ಮವೊಂದು ಕೆಳವರ್ಗದ ದೊರೆಗಳ ಆಳ್ವಿಕೆಯನ್ನು ಸಹಿಸಲಿಲ್ಲವೆಂದು ಕಂಡುಬರುತ್ತದೆ. ಧರ್ಮಕ್ಕೆ ಮತಾಂತರಿಸುವಲ್ಲಿ ಈ ಭಾಗದ ಮಠಗಳು, ಜನರು, ಪ್ರಭಾವ ತೋರಿರುವ ಸಾಧ್ಯತೆ ಇದೆ. ಮತ್ತೋಡು ಪಾಳೆಯಗಾರರೊಬ್ಬರು ಲಿಂಗಧಾರಣೆ ಮಾಡಿಕೊಳ್ಳದ ದುರ್ಗದ ನಾಯಕರ ಹೆಣ್ಣೊಂದನ್ನು ಮದುವೆಯಾದಾಗ ಮತ್ತೋಡುವಿನಲ್ಲಿ ಅಶಾಂತಿ ಕಂಡುಬರುತ್ತದೆ. ಲಿಂಗಧಾರಿಯಲ್ಲದ ಲಿಂಗಾಯಿತೇತರ ಹೆಣ್ಣೊಂದು ತಮ್ಮ ಪಾಳೆಯಗಾರ ಮದುವೆ ಆಗುವುದನ್ನು ಅಲ್ಲಿನ ಜನರಿಗೆ ಇಷ್ಟವಾಗಲಿಲ್ಲ. ಧರ್ಮಾಂತರ ಕ್ರಿಯೆ ಕುರಿತು ಪ್ರೊ.ಲಕ್ಷ್ಮಣ್ ತೆಲಗಾವಿಯವರು ಹೀಗೆ ಹೇಳುತ್ತಾರೆ ಈ ಬಗೆಯ ಧರ್ಮಾಂತರದ ವರ್ಣನೆಗಳಿಗೆ ಆ ಧರ್ಮದ ಬಗೆಗಿನ ನಂಬಿಕೆ, ಒಲವುಗಳಷ್ಟೇ ಕಾರಣವಾಗಿರದೆ ಸಾಮಾಜಿಕ, ಆರ್ಥಿಕ, ರಾಜಕೀಯ ಕಾರಣಗಳೂ ಇದ್ದವೆಂಬುದನ್ನು ಅಲ್ಲಗೆಳೆಯಲಾಗದು. ಧರ್ಮ ಮತ್ತು ರಾಜಕೀಯ ಒಂದೇ ನಾಣ್ಯದ ಎರಡು ಮುಖಗಳು. ಇದರ ಪ್ರಯೋಜನವನ್ನು ಪಡೆದ ಹಲವು ಮನೆತನಗಳ ಸ್ವಾರಸ್ಯಕರ ಘಟನೆಗಳು ಇತಿಹಾಸದ ಕಡತಗಳಲ್ಲಿವೆ.[೨೫೦] ಈಗ ವೀರಶೈವಧರ್ಮದ ಸಾಧರ್ ಎಂಬ ಪಂಗಡವು ಹಿಂದೆ ಬೇಡ ಪಂಗಡವಾಗಿತ್ತು ಎಂದೂ ವೀರಶೈವರಾದರೂ ಅವರು ಹಿಂದಿದ್ದ ಬೆಡಗುಗಳನ್ನೇ ಮುಂದುವರೆಸಿರುವರೆಂದೂ ಹೇಳಲಾಗುತ್ತದೆ. ಸಾವಂತಲೂರ್, ಎಮ್ಮೆಯೋರ್, ಸೆಟಪುತ್ಲೂರು ಮುಂತಾದವು.[೨೫೧] ರಾಜಕೀಯವಾಗಿ ಧರ್ಮವು ಮುಖ್ಯಪಾತ್ರವಹಿಸುತ್ತಿತ್ತು. ಪ್ರಮುಖ ಧರ್ಮವೊಂದು ತನ್ನ ಜನಾಂಗ ಮತ್ತು ತನ್ನ ಜನಾಂಗದ ದೊರೆಗಳನ್ನು ತನ್ನೆಡೆಗೆ ಸೆಳೆದುಕೊಂಡು ರಾಜಕೀಯ ಕೇಂದ್ರೀಕರಣ ಮಾಡುತ್ತಿತ್ತು. ತನ್ನ ಧರ್ಮವಿರೋಧಿಗಳನ್ನು ಸಹ ತನ್ನೆಡೆಗೆ ಸೆಳೆಯಲು, ಇಲ್ಲವೆ ತನ್ನ ಧರ್ಮ ಸಂರಕ್ಷಕ ಸಂಸ್ಥಾನಿಕರನ್ನು ರಕ್ಷಿಸುವಲ್ಲಿ ಮುಂದಾಗುತ್ತಿತ್ತು. ಚಿತ್ರದುರ್ಗ ಅರಸರು ವೀರಶೈವ ಧರ್ಮೀಯರಾದ ಕೆಳದಿ, ಸ್ವಾದಿ, ಹರಪನಹಳ್ಳಿ, ಮತ್ತೋಡು ಮೊದಲಾದ ರಾಜಮನೆತನದವರೊಂದಿಗೆ ಇಟ್ಟುಕೊಂಡಿದ್ದ ಸ್ನೇಹಪೂರ್ಣವಲ್ಲದ ರಾಜಕೀಯ ಸಂಬಂಧಗಳೂ ಕೆಲವೊಮ್ಮೆ ಅರಮನೆ ಮತ್ತು ಗುರುಮನೆಗಳ ನಡುವಣ ಆಗುಹೋಗುಗಳ ಮೇಲೆ ಮಿಶ್ರ ಪರಿಣಾಮ ಬೀರಿದುದನ್ನು

ಕಾಣಬಹುದು. ಇಮ್ಮಡಿ ಮುರಿಗಾಗುರುಸಿದ್ಧರ ವಿರುದ್ಧ ಸೆಣಸಲೆತ್ನಿಸಿದ ಚೀಲಾಳಪ್ಪನವರು ಶ್ರೀಮಠದಿಂದ ಹೊರದೂಡಲ್ಪಟ್ಟರೂ ಚಿತ್ರದುರ್ಗದವರ ಕಡು ವೈರಿಗಳೆನಿಸಿದ ಹರಪನಹಳ್ಳಿನಾಯಕರ ಆಶ್ರಯ ಪಡೆದು ಅವರ ಬೆಂಬಲಿಗರೆನಿಸಿದರು. ಇದು ಸಹ ಎರಡು ಸಂಸ್ಥಾನಗಳ ನಡುವೆ ರಾಜಕೀಯ ಏರುಪೇರಾಟಕ್ಕೆ ಮತ್ತೊಮ್ಮೆ ಸಹಾಯ ಮಾಡಿತು. ಈ ಘಟನೆಗೆ ತೋರಿದ ಪ್ರತಿಕಾರವೆಂಬಂತೆ, ಹಿರಿಯ ಮದಕರಿನಾಯಕನು ಕ್ರಿ.ಶ.೧೭೪೮ರಲ್ಲಿ ಮಾಯಕೊಂಡದಲ್ಲಿ ನಡೆದ ಯುದ್ಧದಲ್ಲಿ ಹರಪನಹಳ್ಳಿಯ ಅರಸ ಸೋಮಶೇಖರನಾಯಕ ನಿಂದ ಹತ್ಯೆಗೀಡಾದನು. ಮಾಯಕೊಂಡ ಕಾಳಗದ ಪ್ರಧಾನ ಪಾತ್ರಧಾರಿಗಳಾದ ಕೆಳದಿ ಅರಸರು ಶ್ರೀ ಬೃಹನ್ಮಠದ ಸ್ವಾಮಿಗಳೊಂದಿಗೆ ಅತ್ಯಂತ ಭಕ್ತಿಪೂರ್ವಕ ಸಂಬಂಧವನ್ನು ಹೊಂದಿದ್ದರು. ಮತ್ತೋಡು ಹಾಲಪ್ಪನಾಯಕನು ರಾಜವೀರಮದಕರಿನಾಯಕನ ವಿರುದ್ಧ ಹೈದರಾಲಿಯ ಪರವಾಗಿ ಹೋರಾಡಿದನು.[೨೫೨] ಜರಿಮಲೆ ಪಾಳೆಯಗಾರರು ದುರ್ಗದ ವಿರುದ್ಧ ಹೈದರಾಲಿ ಪರ ಹೋರಾಡಿದರು. ಚಿತ್ರದುರ್ಗದ ಬದ್ಧ ವೈರಿಗಳಾಗಿದ್ದ ಹರಪನಹಳ್ಳಿಯವರು ಕೆಳದಿ ನಾಯಕರೊಂದಿಗೆ ಅನ್ಯೋನ್ಯ ಸಂಬಂಧವನ್ನು ಹೊಂದಿದ್ದರು. ಜರಿಮಲೆ ಪಾಳೆಯಗಾರರು ಲಿಂಗಧರಿಸುವಂತೆ ಹರಪನಹಳ್ಳಿ ಬಸವಂತಪ್ಪನಾಯಕನು ಒತ್ತಾಯಿಸಿದನು.[೨೫೩] . ಹರಪನಹಳ್ಳಿಯವರು ಚಿತ್ರದುರ್ಗದ ವಿರುದ್ಧವಾಗಿ ವೀರಶೈವ ಮಠ ಅವಲಂಬಿತ ಸಂಸ್ಥಾನಿಕರೊಡನೆ ಒಳ್ಳೆಯ ಸಂಬಂಧವನ್ನು ಬೆಳೆಸಿದರು. ಧರ್ಮವು ರಾಜಕೀಯದ ಇನ್ನೊಂದು ಮುಖವಾದುದು ಈ ಕಾಲದ ಬೆಳವಣಿಗೆಯಾಗಿದೆ.

ಬೇಡರು ಶಾಕ್ತ ಆರಾಧಕರಾಗಿದ್ದರು. ಪಾಳೆಯಗಾರರು ದೇವಿಯ ಪರಮಭಕ್ತರಾಗಿರುವುದು ಕಂಡು ಬರುತ್ತದೆ. ಇವರು ಅನೇಕ ದೇವತೆಗಳನ್ನು ಆರಾಧಿಸುತ್ತಾರೆ. ಚಿತ್ರದುರ್ಗನಾಯಕರು ಉತ್ಸಾವಾಂಬೆ, ಚೌಡಮ್ಮ, ಚಳ್ಳಿಕೇರಮ್ಮ ಮೊದಲಾದ ಸ್ತ್ರೀ ದೇವತೆಯನ್ನು, ಮತ್ತೋಡು ಪಾಳೆಯಗಾರರು ಕರಿಯಮ್ಮ, ಬಾರಿಮರದಮ್ಮರನ್ನು ಗುಡೇಕೋಟೆ ಪಾಳೆಯಗಾರರು ಕಾಳಿಕಾದೇವಿಯನ್ನು ಆರಾಧಿಸುತ್ತಿದ್ದರು. ಗುಡಗುಂಟಿ ಸಂಸ್ಥಾನಿಕರು ಮಾರಿಕಾಂಬ, ಗುಂತಗೋಳ ದೊರೆಗಳು ಹಿರೇದೇವಿಯನ್ನು ಹಾಗೂ ಕನಕಗಿರಿ ನಾಯಕರು ಹಿರೇದೇವತೆ (ದೇವತೆಗಳಲ್ಲಿಯೇ ಶ್ರೇಷ್ಠಳು) ಯನ್ನು ಆರಾಧಿಸುತ್ತಿದ್ದರು. ಗುಂತಗೋಳ ದೊರೆಗಳ ವಂಶಜರು ಸಹ ದೇವಿ ಆರಾಧಕರಾಗಿದ್ದರು. ಹಾಗಾಗಿ ಪ್ರತಿಯೊಂದು ಸಂಸ್ಥಾನಿಕರು ದೇವಿ ಆರಾಧನೆಗೊಳಗಾದುದು ತಿಳಿದುಬರುತ್ತದೆ. ಹಬ್ಬ ಹರಿದಿನಗಳಲ್ಲಿ ಮುಖ್ಯವಾಗಿ ದಸರಾ ಹಬ್ಬದ ಸಂದರ್ಭದಲ್ಲಿ ಮಡಿಯಿಂದ ದೇವಿ ಆರಾಧನೆ ಮಾಡುವುದನ್ನು ಬೇಡ ಸಂಸ್ಥಾನಿಕರಲ್ಲಿ ಕಂಡುಬರುತ್ತದೆ. ಗುಂತಗೋಳ ದೊರೆಗಳು ಸುಮಾರು ೮೪ ವರ್ಷಗಳಿಂದಲೂ ದಸರಾ ಹಬ್ಬದ ಸಂದರ್ಭದಲ್ಲಿ ದೇವಿಪುರಾಣ ಮಾಡುತ್ತಾ ಬಂದಿದ್ದಾರೆ. ಈ ಸಂದರ್ಭದಲ್ಲಿ ವಾರಗಟ್ಟಲೆ ಮಾಂಸಾಹಾರ ತ್ಯಜಿಸಿ ಭಕ್ತಿಪೂರ್ವಕವಾಗಿ ದೇವಿಯನ್ನು ಆರಾಧಿಸುತ್ತಾರೆ. ಪಾಳೆಯಗಾರರು ದೇವಿಗಾಗಿ ಅನೇಕ ದೇವಾಲಯಗಳನ್ನು

ಕಟ್ಟಿಸಿದರು. ಜನಸಾಮಾನ್ಯ ಬೇಡರಲ್ಲಿ ಮತ್ತು ಇತರ ಜನಾಂಗಗಳಲ್ಲಿದ್ದಂತಹ ಹರಕೆ ಹೊರುವ, ಬಲಿಕೊಡುವ, ಮುಡಿಕಟ್ಟುವ ಪದ್ಧತಿಗಳು ಬೇಡ ಜನಾಂಗದ ಪಾಳೆಯಗಾರರಲ್ಲೂ ರೂಢಿಯಲ್ಲಿದ್ದವು. ಚಿತ್ರದುರ್ಗ ದೊರೆಗಳು ಉತ್ಸಾವಾಂಬೆಯ ಪರಮಭಕ್ತರಾಗಿದ್ದರು. ಇಮ್ಮಡಿ ಮದಕರಿನಾಯಕನು ಮಕ್ಕಳಾಗುವಂತೆ ಉತ್ಸವಾಂಬೆ ದೇವತೆಯಲ್ಲಿ ಹರಕೆ ಮಾಡಿಕೊಂಡನು. ಆ ಪ್ರಕಾರ ಎಲ್ಲರೂ ಬೇವು ಉಡುಗೆ ತೊಟ್ಟು ಉಚ್ಚಂಗೆಮ್ಮಳ ದರ್ಶನ ಪಡೆದರು. ಮರುವರ್ಷ ದೊರೆಗೆ ಹುಟ್ಟಿದ ಮಗಳೇ ಕೆಂಚವ್ವ.[೨೫೪] ಉಚ್ಚಿಂಗಿದುರ್ಗವು ಹರಪನಹಳ್ಳಿ ಪಾಳೆಯಗಾರರಿಗೆ ಸೇರಿದ ನಂತರ ಕ್ರಿ.ಶ.೧೬೬೫ರಲ್ಲಿ ಇಮ್ಮಡಿ ಮದಕರಿನಾಯಕನು ಪೂಜಾರಿ ಕೆಂಚಯ್ಯ, ಚೌಡಿಕೆ ಸಿದ್ಧಯ್ಯ ಎಂಬುವರ ಸಹಾಯದಿಂದ ಉಚ್ಚಂಗಿದುರ್ಗದ ಉತ್ಸವಾಂಬ ಮಾತೆಯ ವಿಗ್ರಹವನ್ನು ತರಿಸಿದನು. ನಂತರ ಭರಮಣ್ಣನಾಯಕ ಮತ್ತು ಹಿರೇಮದಕರಿನಾಯಕರು ಭವ್ಯವಾದ ಉತ್ಸವಾಂಬೆ ದೇವಾಲಯವೊಂದನ್ನು ಕಟ್ಟಿಸಿದರು.[೨೫೫] ಚಿತ್ರದುರ್ಗ ನಾಯಕರ ಕಾಲದಲ್ಲಿ ಪ್ರತಿವರ್ಷ ಈ ದೊರೆಗಳ ಸಂಸಾರವೆಲ್ಲಾ ಮಹಾಲಯ ಅಮಾವಾಸ್ಯೆ ಕಟ್ಟಳೆ ಮಾಡುವುದಕ್ಕಾಗಿ ಪ್ರತಿವರ್ಷ ಕಣಕುಪ್ಪಗೆ ಹೋಗುತ್ತಾ ಇದ್ದರು. ಆದರೆ ಭರಮಣ್ಣನಾಯಕನ ಕಾಲದಲ್ಲಿ ಅದನ್ನು ತಪ್ಪಿಸಿ ಆ ಸ್ಥಳಕ್ಕೆ ಭಾರತದ ಹುಣ್ಣಿಮೆಯಲ್ಲಿ ಹೋಗಲು ಪ್ರಾರಂಭ ಮಾಡಿದರು. ಆ ಕಾಲದಲ್ಲಿ ರಾಜಕುಮಾರರು, ರಾಜಕುಮಾರಿಯರು ಸಹ ಬೇವಿನ ಉಡುಗೆ ತೊಟ್ಟು ಬಳಗ ಸಮೇತ ಹೊರಡುತ್ತಿದ್ದರು. ಹೀಗೆ ಹೋಗಿ ಉತ್ಸವಾಂಬೆಗೂ, ಕಾಟಮ್ಮ ದೇವರಿಗೂ ಸೇವೆ ಮಾಡಿ ಬರುತ್ತಿದ್ದರು.[೨೫೬] ಏಕನಾಥೇಶ್ವರ ಗುಡಿಯಲ್ಲಿ ವರ್ಷಕ್ಕೊಮ್ಮೆ ನಡೆಯುವ ಸಿಡಿ ಉತ್ಸವವು ಬಹಳ ವಿಜೃಂಭಣೆಯಿಂದ ನಡೆಯುತ್ತದೆ. ಸಿಡಿ ಎಂದರೆ ಸುಮಾರು ಆರೇಳು ಅಡಿ ಎತ್ತರದ ಬಲವಾದ ಮರದ ಕಂಬವನ್ನು ನೆಟ್ಟು ಅದರ ಮೇಲೆ ಸುಲಭವಾಗಿ ತಿರುಗಬಲ್ಲ ಚೌಕಾಕಾರದಿಂದ ಮಾಡಿದ ತಿರುಗಣಿಗೆ ಸುಮಾರು ೩೦ ಅಡಿ ಉದ್ದದ ಮರದ ತೊಲೆಯೊಂದನ್ನು ಅಡ್ಡವಾಗಿ ಅಳವಡಿಸಿರುತ್ತಾರೆ. ಇದನ್ನು ಹೂವು, ಸೊಪ್ಪುಗಳಿಂದ ಶೃಂಗರಿಸುತ್ತಾರೆ. ಇದರ ಕೆಳಭಾಗದಲ್ಲಿ ಮುಖಮಾಡಿ ಸಿಡಿ ಆಡುವ ಭಕ್ತನ ಸೊಂಟಕ್ಕೂ ಕಂಬಕ್ಕೂ ಬಟ್ಟೆಗಳ ಸಹಾಯದಿಂದ ಬಿಗಿಯಾಗಿ ಕಟ್ಟಿ ಕಂಬದ ಇನ್ನೊಂದು ತುದಿಯಿಂದ ಹಗ್ಗದ ಸಹಾಯದಿಂದ ಮೂರು ಸುತ್ತು ತಿರುಗಿಸುತ್ತಾರೆ. ಸಿಡಿ ಆಡುವ ಭಕ್ತನು ಬೇವಿನ ಉಡುಗೆ ತೊಟ್ಟಿದ್ದು ಸುತ್ತು ಬರುತ್ತಾ ದೇವಿಗೆ ವಂದನೆಗಳನ್ನು ಮಾಡುತ್ತಾ ಕೈಕಾಲುಗಳನ್ನು ಆಡಿಸುತ್ತಾನೆ.[೨೫೭] ಸಿಡಿ ಉತ್ಸವವಾದ ನಂತರ ಮಂಗಳವಾರ ಭೇಟಿ ಉತ್ಸವ ನಡೆಯುವುದು. ಭೇಟಿ ಉತ್ಸವ ಎಂದರೆ ತಿಪ್ಪನಗಟ್ಟಮ್ಮ, ಬರಗೇರಮ್ಮ ಎಂಬ ದೇವತೆಗಳು ವರ್ಷಕ್ಕೊಮ್ಮೆ ಕೇವಲ ಕೆಲವೇ ನಿಮಿಷಗಳು ಸಂಧಿಸುವುದೇ ಆಗಿದೆ.[೨೫೮]

ದೇವಿಯನ್ನು ಒಲಿಸಿಕೊಳ್ಳಲು ಅನೇಕ ಕಾರ್ಯಕ್ರಮಗಳನ್ನು ದೊರೆಗಳು ಮಾಡುತ್ತಿದ್ದರು. ಪ್ರಾಣಿಗಳನ್ನು ಬಲಿಕೊಡುವ ಮೂಲಕ ದೇವಿಯನ್ನು ಸಂತೃಪ್ತಗೊಳಿಸುತ್ತಿದ್ದರು. ದೇವಿಗೆ ಇಂದಿಗೂ ಪ್ರಾಣಿಗಳನ್ನು

ಬಲಿಕೊಡುವ ಪದ್ಧತಿ ಉಳಿದುಕೊಂಡುಬಂದಿದೆ. ಯುದ್ಧಭೂಮಿಗೆ ಹೋಗುವಾಗ ದೇವಿಯ ಅಪ್ಪಣೆಯನ್ನು ಪಡೆದುಕೊಳ್ಳುವ ಮತ್ತು ಯುದ್ಧದಲ್ಲಿ ಗೆಲುವು ದೊರೆತ ನಂತರ ದೇವಿಗೆ ವಿಶೇಷ ಪೂಜೆ ಸಲ್ಲಿಸುವ ಸಂಪ್ರದಾಯಗಳು ಅರಸು ವರ್ಗದಲ್ಲಿದ್ದವು. ಅರಸು ವರ್ಗದ ನೇತೃತ್ವದಲ್ಲಿಯೇ ಉತ್ಸವಗಳು ನಡೆಯುತ್ತಿದ್ದವು. ಯುಗಾದಿ ಮತ್ತು ದಸರಾ ಹಬ್ಬಗಳ ಸಂದರ್ಭದಲ್ಲಿ ಬೇಟೆಗೆ ಹೋಗುವುದು ಒಂದು ವಿಶಿಷ್ಟ ಆಚರಣೆಯಾಗಿದೆ. ಒಟ್ಟಾರೆ ಬೇಡ ದೊರೆಗಳು ಹಿಂದೂಧರ್ಮದ ಎಲ್ಲಾ ಆರಾಧ್ಯ ಪದ್ಧತಿಗಳನ್ನು ಅನುಸರಿಸುತ್ತಿದ್ದರು. ಧರ್ಮ ಸಹಿಷ್ಣುಗಳಾಗಿದ್ದ ಇವರು ಎಲ್ಲಾ ಧರ್ಮದವರಿಗೂ ಸಮಾನ ಆದ್ಯತೆಯನ್ನು ನೀಡಿದ್ದರು. ವೀರಶೈವ ಮತ್ತು ವೈಷ್ಣವ ಪಂಥಗಳು ಈ ಬೇಡ ದೊರೆಗಳ ಮೇಲೆ ತುಂಬಾ ಪ್ರಭಾವ ಬೀರಿದ್ದವೆನ್ನುವುದರಲ್ಲಿ ಸಂಶಯವಿಲ್ಲ.

ಸೂಫಿಗಳಿಂದ ಇಸ್ಲಾಂ ಧರ್ಮವು ಜನಪ್ರಿಯವಾಯಿತು. ಅವರು ಹಿಂದೂ ಧರ್ಮದ ಮೇಲೆ ಪ್ರಭಾವ ಬೀರಿದರು. ಮುಸ್ಲಿಂ ದೊರೆಗಳು ಇಸ್ಲಾಂ ಧರ್ಮಕ್ಕನುಸಾರವಾಗಿ ಆಳಿದರು ಮತ್ತು ಆ ಧರ್ಮವನ್ನು ಪೋಷಿಸಿದರು. ಮುಸ್ಲಿಂ ಧರ್ಮದ ಬೆಳವಣಿಗೆಯಿಂದ ಹಿಂದೂಧರ್ಮದಲ್ಲಿ ಕೆಲವು ಬದಲಾವಣೆಗಳು ಕಂಡುಬಂದವು. ಕೆಲವು ಮುಸ್ಲಿಂ ದೊರೆಗಳು ಬಲತ್ಕಾರವಾಗಿ ಹಿಂದೂಗಳನ್ನು ಮತಾಂತರಿಸುವಲ್ಲಿ ಯಶಸ್ವಿಯಾದರು. ಹಿಂದೂ ದೇವಾಲಯಗಳು ಮುಸ್ಲಿಂ ದಾಳಿಗೆ ತುತ್ತಾದವು. ಬಹುಮನಿ ಸುಲ್ತಾನರು ಆದಿಲ್‌ಷಾಹಿಗಳು ಹಾಗೂ ಹೈದರಾಲಿ ಮತ್ತು ಟಿಪ್ಪೂಸುಲ್ತಾನರ ದಾಳಿಗಳು ಹಿಂದೂಧರ್ಮದಲ್ಲಿ ಕೆಲವು ಬದಲಾವಣೆಯನ್ನು ತಂದವು. ಮುಸ್ಲಿಂ ದಾಳಿಗಳನ್ನು ಎದುರಿಸಿದವರಲ್ಲಿ ಬೇಡರು ಪ್ರಮುಖರು. ಕನಕಗಿರಿ ನಾಯಕರು ವಿಜಯನಗರ ಸಾಮ್ರಾಜ್ಯದ ರಕ್ಷಾಕೋಟೆಯಂತಿದ್ದರು. ಹೈದರಾಲಿಯನ್ನು ಸಮರ್ಥವಾಗಿ ಎದುರಿಸಿದ ಕೀರ್ತಿ ಚಿತ್ರದುರ್ಗ ನಾಯಕರಿಗೆ ಸಲ್ಲುತ್ತದೆ. ರಣದುಲ್ಲಖಾನನ ದಾಳಿಗಳನ್ನು ತಡೆಯುವಲ್ಲಿ ಸಂತೆಬೆನ್ನೂರು, ಹರಪನಹಳ್ಳಿ ನಾಯಕರು ತೋರಿದ ಸಾಹಸ ಸ್ಮರಣೀಯ. ಆದರೆ ಮುಸ್ಲಿಂ ಪ್ರಬಲ ಹಾಗೂ ಮೋಸದ ದಾಳಿಗಳಿಂದ ಗೆಲುವು ಇವರಿಗೆ ದೊರಕಲಿಲ್ಲ. ಸಂತೆಬೆನ್ನೂರು ರಾಮಚಂದ್ರದೇವರ ದೇವಾಲಯವನ್ನು ರಣದುಲ್ಲಖಾನನು ಹಾಳು ಮಾಡಿದನು. ಅಲ್ಲದೆ ಈ ದೇವಾಲಯದ ವಸ್ತುಗಳಿಂದ ಮಸೀದಿಯನ್ನು ಕಟ್ಟಿಸಿದನು.[೨೫೯] ಮೊಗಲ್ ದಾಳಿಯಿಂದ ನೀರ್ಥಡಿ ರಂಗನಾಥಸ್ವಾಮಿ ದೇವಾಲಯ ಊನಗೊಂಡಿತು.[೨೬೦] ಹೈದರಾಲಿಯು ಚಿತ್ರದುರ್ಗ ನಾಯಕರ ಮನೆದೇವತೆ ಉತ್ಸವಾಂಬೆ ದೇವಾಲಯದ ಐದು ಅಂತಸ್ತುಗಳಲ್ಲಿ ಮೂರು ಅಂತಸ್ತುಗಳನ್ನು ಕೆಡವಿಸಿದನು. ಈ ಕಲ್ಲುಗಳಿಂದಲೇ ಊರು ಮಧ್ಯದಲ್ಲಿರುವ ಜುಮ್ಮಾ ಮಸೀದಿಯನ್ನು ನಿರ್ಮಾಣ ಮಾಡಿದನು ಎಂದು ತಿಳಿದುಬರುತ್ತದೆ.[೨೬೧] ಚಿತ್ರದುರ್ಗವನ್ನು ಗೆದ್ದ ಹೈದರಾಲಿಯು ಅನೇಕ ಬೇಡ ತರುಣ ಸೈನಿಕರನ್ನು ಸೆರೆಯಾಳನ್ನಾಗಿ ಮಾಡಿಕೊಂಡು ಹೋಗಿ ಇಸ್ಲಾಂ ಧರ್ಮಕ್ಕೆ ಬಲತ್ಕಾರವಾಗಿ ಮತಾಂತರಿಸಿದನು. ಮತಾಂತರಗೊಂಡವರ ಸಂಖ್ಯೆ ೨,೬೦,೦೦೦ರಷ್ಟು ಇತ್ತು.

ಎಂದು ರೈಸ್ ಅಭಿಪ್ರಾಯಪಟ್ಟಿರುವರು.[೨೬೨] ಟಿಪ್ಪೂಸುಲ್ತಾನನು ಸಹ ಇಸ್ಲಾಂ ಧರ್ಮದಲ್ಲಿ ನಂಬಿಕೆಯನ್ನಿಟ್ಟು ಅಧಿಕಾರ ನಡೆಸಿದನು. ಚಿತ್ರದುರ್ಗದ ಕಣಕುಪ್ಪೆ ಕೋಟೆ ಮೇಲೆ ದಾಳಿ ಮಾಡಿ ಅದನ್ನು ವಶಪಡಿಸಿಕೊಂಡ ನಂತರ ಅಲ್ಲಿದ್ದ ಕಾಟಮದೇವರ ಬಂಗಾರದ ಲಿಂಗ, ಬಂಗಾರದ ಕವಚದ ದೊಣ್ಣೆ ಇವೆಲ್ಲಾ ತೆಗೆದುಕೊಂಡು ಹೋದನು.[೨೬೩] ಒಂದು ಅಭಿಪ್ರಾಯದ ಪ್ರಕಾರ, ಟಿಪ್ಪೂಸುಲ್ತಾನನು ಮತಾಂತರ ಕಾರ್ಯದಲ್ಲಿ ತೊಡಗಿರಲಿಲ್ಲ. ಕೆಲವರು ಇಸ್ಲಾಂ ಧರ್ಮವನ್ನು ಒಪ್ಪಿದರು. ಕೆಲವರು ಸೆರೆವಾಸ ಶಿಕ್ಷೆಗೆ ಹೆದರಿಕೊಂಡು ಮೋಕ್ಷರಾಗಲು ಹಾಗೆ ಮಾಡಿದರು. ಅವರನ್ನು ಬಿಟ್ಟ ನಂತರ ಅವರಿಗೆ ಅರಮನೆಯಲ್ಲಿ ಮತ್ತು ಸೆರೆಮನೆಯಲ್ಲಿಯೇ ದೊಡ್ಡ ಹುದ್ದೆಗಳನ್ನೆ ಕೊಡಲಾಯಿತು. ಆದರೂ ಬಹುಸಂಖ್ಯೆಯವರನ್ನು ಶ್ರೀರಂಗಪಟ್ಟಣ ಮತ್ತು ಚಿತ್ರದುರ್ಗಗಳಲ್ಲಿಯೇ ಸೆರೆಯಲ್ಲಿರಿಸಿ ಅವರ ಜಾತಿಯನ್ನು ಉಳಿಸಿಕೊಳ್ಳಲು ಅನುಮತಿಯನ್ನು ಕೊಡಲಾಯಿತು ಎಂದು ಹೇಳಲಾಗಿದೆ.[೨೬೪] ಕೊಡಗು ಮತ್ತು ಮಲಬಾರ್ ಪ್ರದೇಶಗಳಲ್ಲಿ ದಂಗೆಗಳು ಏಳುತ್ತಿದ್ದರಿಂದ ಅಲ್ಲಿ ಮಾತ್ರ ಮತಾಂತರಕ್ಕೆ ಆದೇಶ ಕೊಟ್ಟನೇ ಹೊರತು ಉಳಿದ ಸ್ಥಳಗಳಲ್ಲಿ ಅಲ್ಲ. ಅವನು ಪ್ರಜೆಗಳಿಗೆ ಆರಾಧನಾ ಸ್ವತಂತ್ರವನ್ನು ನೀಡಿದ್ದನೆಂತಲೂ ಹೇಳಲಾಗಿದೆ.[೨೬೫]

ಮುಸ್ಲಿಂ ಧರ್ಮ ಸಂಸ್ಕೃತಿ ಹಿಂದೂ ಧರ್ಮವನ್ನು ಪ್ರವೇಶಿಸಿತು. ಮುಸ್ಲಿಂ ಹಬ್ಬಗಳನ್ನು ಹಿಂದೂಗಳು ಆಚರಿಸಲಾರಂಭಿಸಿದರು. ಭಾಷೆ, ಸಂಸ್ಕೃತಿ, ಆಡಳಿತದಲ್ಲಿ ಇಸ್ಲಾಂ ಧರ್ಮದ ಪ್ರಭಾವ ಕಂಡುಬಂದಿತು. ಮೊಹರಂ ಹಬ್ಬವನ್ನು ಹಿಂದೂಗಳು ಮುಕ್ತಮನಸ್ಸಿನಿಂದ ಭಕ್ತಿಪೂರ್ವಕವಾಗಿ ಆಚರಿಸುತ್ತಾರೆ. ಮುಸ್ಲಿಂರಿಂದ ಪ್ರಾಣಿಗಳನ್ನು ಕೊಯ್ಯಿಸುವ ಪದ್ಧತಿ ಹಿಂದೂ ಕೆಳವರ್ಗಗಳಲ್ಲಿ ಕಂಡುಬಂದಿತು. ಮುಸ್ಲಿಂ ಹೆಸರುಗಳನ್ನು ಬೇಡಜನಾಂಗದ ಕೆಲವರು ನಾಮಕರಣ ಮಾಡಿಕೊಂಡರು. ಹುಸೇನಪ್ಪ, ಫಕೀರಪ್ಪ, ಯಮನೂರಪ್ಪ ಎಂಬ ಹೆಸರುಗಳನ್ನು ಹೊಂದಿದ ಬೇಡರನ್ನು ಕಾಣಬಹುದು. ಬೇಡ ದೊರೆಗಳೂ ಸಹ ಇಸ್ಲಾಂ ಸಂಸ್ಕೃತಿಗೆ ಮಾರುಹೋದರು. ನನ್ನಿವಾಳ ಕಟ್ಟೇಮನೆ ದೊರೆಗಳು ಮುಸ್ಲಿಂ ಸಂಪ್ರದಾಯದಂತೆ 'ಮುಂಜಿ'ಯನ್ನು ಮಾಡಿಸಿಕೊಳ್ಳುತ್ತಾರೆ ಮತ್ತು ಮುಸ್ಲಿಮರಂತೆ ನಮಸ್ಕಾರ ಇತ್ಯಾದಿ ಪದ್ಧತಿಗಳನ್ನು ಈಗಲೂ ಆಚರಿಸುವರು.[೨೬೬] ಹೈದ್ರಾಬಾದ್-ಕರ್ನಾಟಕ ಪ್ರದೇಶದ ಬೇಡ ಸಂಸ್ಥಾನಿಕರು ಮುಸ್ಲಿಂ ಸಂಪ್ರದಾಯವನ್ನು ಹೆಚ್ಚಾಗಿ ಅನುಸರಿಸುತ್ತಿದ್ದರು. ಈಗಲೂ ಕೆಲವು ಮನೆತನಗಳಲ್ಲಿ ಆಚರಣೆಯಲ್ಲಿರುವ ಘೋಷಾ ಪದ್ಧತಿಯು ಮುಸ್ಲಿಂ ಧರ್ಮದ 'ಘರ್ದಾ'ದ ಪ್ರಭಾವವೇ ಇರಬೇಕು. ಭಾಷೆಯಲ್ಲಿ, ಉಡುಗೆ-ತೊಡುಗೆಯಲ್ಲಿ ಈ ಭಾಗದ ಸಂಸ್ಥಾನಿಕರು ಇಸ್ಲಾಂ ಸಂಸ್ಕೃತಿಯನ್ನು ಅನುಸರಿಸುತ್ತಾರೆ. ನಿಜಾಮನ ಅಧೀನರಾಗಿದ್ದ ಈ ಸಂಸ್ಥಾನಿಕರು ಅನಿವಾರ್ಯವಾಗಿ ಮುಸ್ಲಿಂ ಧರ್ಮದ ಆಚರಣೆಗಳ ಪ್ರಭಾವಕ್ಕೆ ಗುರಿಯಾಗಬೇಕಾಯಿತು.

ಉನ್ನತ ಸ್ಥಾನ-ಮಾನಗಳನ್ನು ಪಡೆದುಕೊಂಡ ಬೇಡ ಜನಾಂಗದ ನಾಯಕರು ತಮ್ಮ ಮೂಲ ಸಂಸ್ಕೃತಿಯಿಂದ ಕಳಚಿಕೊಂಡರು. ಕಾಡು-ಮೇಡುಗಳಲ್ಲಿ ನೆಲೆಸಿ ತಮ್ಮದೇ ಆದ ನಂಬಿಕೆ-ಆಚರಣೆಗಳ

ನಡುವೆ ಬದುಕಿದ ಬೇಡರು ತಮ್ಮ ಧರ್ಮ, ಸಂಸ್ಕೃತಿಯನ್ನು ಮುಂದುವರೆಸಿಕೊಂಡು ಬಂದರು. ಬೇಡ ಜನಾಂಗದ ಅಧಿಕಾರಸ್ಥರಾದವರು ಇತರ ಧರ್ಮದ ಪ್ರಭಾವಕ್ಕೆ ಒಳಗಾದರು. ಬೇಡ ಜನಾಂಗದಲ್ಲಿ ಒಂದು ಭಾಗ ಬುಡಕಟ್ಟು ಸಂಸ್ಕೃತಿಯಲ್ಲಿಯೇ ಉಳಿದುಕೊಂಡಿದೆ. ಇನ್ನೊಂದು ವರ್ಗವು ಧಾರ್ಮಿಕವಾಗಿ ಹಿಂದೂಧರ್ಮ ಹಾಗೂ ಇತರ ಧರ್ಮಗಳ ಕೆಲವು ಆಚಾರ-ವಿಚಾರಗಳನ್ನು ಅನುಸರಿಸುತ್ತಾ ಬಂದಿದೆ. ಆಳುವ ವರ್ಗವೇ ಸ್ಥಿತ್ಯಂತರದ ಕೇಂದ್ರಸ್ಥಾನವಾದ್ದರಿಂದ ಅಲ್ಲಿಯೇ ಏನಲ್ಲಾ ನಡೆದವು. ಆದರೂ ಸಾಮಾನ್ಯ ಬೇಡರ ಮೇಲೂ ಅಲ್ಪಸ್ವಲ್ಪ ಪರಿಣಾಮ ಬೀರದೇ ಇರಲಿಲ್ಲವೆಂದು ತಿಳಿದುಬರುತ್ತದೆ.

**ಶಿಕ್ಷಣ**

ಶಿಕ್ಷಣದಿಂದ ದೂರವಿರುವ ಜನಾಂಗಗಳಲ್ಲಿ ಬೇಡ ಜನಾಂಗವೂ ಒಂದು. ಕಾಡು ಬೆಟ್ಟಗುಡ್ಡಗಳ ತೀರದಲ್ಲಿ ವಾಸಿಸುತ್ತಾ ಬಂದ ಬೇಡರು ಕಲಿತುಕೊಂಡಿದ್ದು ಧೈರ್ಯ, ಸಾಹಸ ಮತ್ತು ಒರಟು ಸ್ವಭಾವವನಷ್ಟೆ ಬೇಡನು ಕ್ಷತ್ರಿಯರ ಆದಿಪುರುಷ. ಹೀಗಾಗಿ ಬೇಡರಿಗೆ ಹೋರಾಡುವುದು ಗೊತ್ತೇ ವಿನಃ ಓದುವುದು ಬರೆಯುವುದು ಅಲ್ಲ. ಸೈನಿಕರಾಗಿ ಭರ್ಜಿ, ಖಡ್ಗ, ಬಾಕು ಹಿಡಿದರು. ಈ ಅಸ್ತ್ರಗಳೇ ಅವರ ಜೀವನೋಪಾಯದ ಆಯುಧಗಳಾದವು. ಮೇಲ್ವರ್ಗದವರಂತೆ ಓದು ಬರಹವೆಂದು ತಲೆ ಕೆಡಿಸಿಕೊಳ್ಳಲಿಲ್ಲ. ಪಾಳೆಯಗಾರರು ರಾಜ್ಯಾಧಿಕಾರ ಮಾಡುವಾಗಲೂ ಶಿಕ್ಷಣ ಕಲಿಯುವ ಕಡೆ ಕೊಟ್ಟ ಗಮನ ಕಡಿಮೆ, ಹೋರಾಡುವುದು ಮತ್ತು ರಾಜ್ಯವನ್ನು ಆಳುವುದು ತಮ್ಮ ಕರ್ತವ್ಯ, ಓದು ಬರಹ ಅವರ(ಬ್ರಾಹ್ಮಣರ) ಕರ್ತವ್ಯ ಎಂಬುದು ಅವರ ಅಭಿಮತವಾಗಿತ್ತು. ಆಸ್ಥಾನದಲ್ಲಿ ಯಾರಾದರೂ ಬ್ರಾಹ್ಮಣನಿಗೆ ಓದುಬರಹ ಬರುತ್ತಿರಲಿಲ್ಲವೆಂದರೆ ದೊರೆ ಅವರನ್ನು ಶಿಕ್ಷಿಸುತ್ತಿದ್ದನೆಂದು ಹೇಳಲಾಗುತ್ತದೆ. ಆದರೆ ತಾನು ಓದು ಬರಹದಲ್ಲಿ ಜಾಣನಲ್ಲ ಎಂಬುದನ್ನು ಪ್ರಶ್ನಿಸಿಕೊಳ್ಳುತ್ತಿರಲಿಲ್ಲ. ಶಿಕ್ಷಣದ ಅಭಿವೃದ್ಧಿಗಾಗಿ ಪಾಳೆಯಗಾರರು ಸಾಕಷ್ಟು ಖರ್ಚುಮಾಡುತ್ತಿದ್ದರು. ಆದರೆ ಅವರು ಮಾತ್ರ ಓದುಬರಹ ಬರುವಷ್ಟೇ ಶಿಕ್ಷಣ ಪಡೆಯುತ್ತಿದ್ದರು. ಉನ್ನತ ಶಿಕ್ಷಣ ಪಡೆದವರನ್ನು, ಪಂಡಿತರನ್ನು ಸನ್ಮಾನಿಸಿ ಕಾಣಿಕೆಯನ್ನು ಕೊಡುತ್ತಿದ್ದರು. ಅನೇಕ ಹಳ್ಳಿಗಳನ್ನು ಶಿಕ್ಷಣ ಕೇಂದ್ರಗಳಿಗೆ ಮತ್ತು ಅಲ್ಲಿನ ಗುರುಗಳಿಗೆ ದಾನವಾಗಿ ಬಿಟ್ಟುಕೊಡುತ್ತಿದ್ದರು. ದೊರೆಗಳಿಗೆ ಆಳುವ ಶಿಕ್ಷಣದ ಕಡೆ ಗಮನ ಹೆಚ್ಚು. ಗ್ರಂಥ ರಚಿಸುವ ಕಡೆ ಅಲ್ಲವಾದರೂ ಚರಿತ್ರೆಯನ್ನು ತಿಳಿದುಕೊಳ್ಳುತ್ತಿದ್ದರು. ಆದರೆ ತಮ್ಮ ಚರಿತ್ರೆಯನ್ನು ದಾಖಲೀಕರಿಸುವ ಕಡೆ ಗಮನ ಕೊಡುತ್ತಿರಲಿಲ್ಲ. ಹೀಗಾಗಿ ಈ ಪಾಳೆಯಗಾರ ದೊರೆಗಳ ಚರಿತ್ರೆ ಅಧ್ಯಯನಕ್ಕೆ ಆಧಾರಗಳ ಕೊರತೆ ಎದ್ದುಕಾಣುತ್ತದೆ. ರಾಜನ ಪರಿವಾರವು ಶಿಕ್ಷಣವನ್ನು ಪಡೆದುಕೊಳ್ಳುತ್ತಿದ್ದಿತಾದರೂ ಅದು ಬಹುತೇಕ ಕಂಠಪಾಠರೂಪದಲ್ಲಿತ್ತು. ಆಗ ಬರಹ ರೂಪದಲ್ಲಿ ಶಿಕ್ಷಣ ನೀಡುವುದು ಕಡಿಮೆ. ಪಾಳೆಯಗಾರರು ತಮ್ಮ ಮಕ್ಕಳಿಗೆ ಹೆಚ್ಚಿನ ಶಿಕ್ಷಣ ದೊರಕಿಸಲು ಇಚ್ಚಿಸುತ್ತಿರಲಿಲ್ಲವೆಂದು ಕಾಣಿಸುತ್ತದೆ. ವಂಶಪಾರಂಪರ್ಯ ಆಳ್ವಿಕೆ ಮಾಡುವಲ್ಲಿ

ಅದು ತಮಗೆ ತೊಡಕಾಗಬಹುದೆಂದು ಅವರು ಗ್ರಹಿಸಿರಬೇಕು. ಪಾಳೆಯಗಾರನಾದವನ ಮುಖ್ಯ ಗುರಿ ತನ್ನ ನಂತರ ತನ್ನ ಮಗ ತನಗಿಂತಲೂ ರಾಜ್ಯವಿಸ್ತಾರದಲ್ಲಿ, ಹಣದಲ್ಲಿ, ದರ್ಪದಲ್ಲಿ ಪ್ರಖ್ಯಾತಿಯಾಗ ಬೇಕೆಂಬುದು. ಇಷ್ಟಾದರೂ ಶಿಕ್ಷಣದಲ್ಲಿ ಸಾಧನೆ ಮಾಡಬೇಕೆಂಬ ಕಲ್ಪನೆ ಅವರ ಹತ್ತಿರವೂ ಸುಳಿಯುತ್ತಿರಲಿಲ್ಲ.

ವಿಜಯನಗರೋತ್ತರಕಾಲೀನ ರಾಜಕೀಯದಲ್ಲಿ ಚಿತ್ರದುರ್ಗ ಸಂಸ್ಥಾನವು ಬಲಿಷ್ಠವಾಗಿದ್ದರೂ ಕೆಲವೊಮ್ಮೆ ಸಂಕಷ್ಟಕ್ಕೆ ಗುರಿಯಾಗಬೇಕಾಯಿತು. ಬೇಡದೊರೆಗಳು ಕಲಿತಿದ್ದು ಯುದ್ಧದಲ್ಲಿ ಹೋರಾಡು ವುದನ್ನು ಮಾತ್ರ. ಶಿಕ್ಷಣ ಪಡೆಯುವ ಕಡೆ ಗಮನ ಕೊಡಲಿಲ್ಲ. ಆದರೆ ಶಿಕ್ಷಣವನ್ನು ನೀಡುವ ಬಗ್ಗೆ ಮಾತ್ರ ಆಲಸ್ಯ ಹೊಂದಿರಲಿಲ್ಲ. ಕೃಷಿಕರಾಗಿದ್ದು ಅಲೆಮಾರಿ ಜನಾಂಗದ ಲಕ್ಷಣಗಳನ್ನು ಹೊಂದಿದ್ದ ಬೇಡರಿಗೆ ಶಿಕ್ಷಣ ನಿಲುಕದ ವಿಷಯವಾಗಿತ್ತೆನ್ನಬಹುದೇನೊ. ದೊರೆಗಳಾದವರ ಶಿಕ್ಷಣ ಮಟ್ಟ ಅಷ್ಟಕಷ್ಟೇ. ಅವರ ಕೈಕೆಳಗಿನ ಬೇಡ ಅಧಿಕಾರಿಗಳೂ ಸಹ ಶಿಕ್ಷಣ ಪಡೆದುಕೊಳ್ಳುವ ಕಡೆ ಕೊಟ್ಟ ಗಮನ ಕಡಿಮೆ ಎನ್ನಬಹುದು. ಅವರು ಆಡಳಿತ ವ್ಯವಹಾರಕ್ಕೆ ಅನುಕೂಲವಾಗುವಷ್ಟು ಶಿಕ್ಷಣವನ್ನು ಮಾತ್ರ ಪಡೆದರು. ಹೀಗಾಗಿ ಈ ಜನಾಂಗದಲ್ಲಿ ಕಲಿತವರ ಸಂಖ್ಯೆ ಕಡಿಮೆಯೇ ಎನ್ನಬಹುದು. ಜನಸಾಮಾನ್ಯ ಬೇಡರು ಬದುಕುವುದಕ್ಕಾಗಿ ದುಡಿಯಲೇಬೇಕಾದ ಯೋಚನೆಯನ್ನು ಮಾಡುತ್ತಿದ್ದರು. ಸ್ತ್ರೀಯು ಅರಮನೆಯ ಘೋಷಾ ಪದ್ಧತಿಗೊಳಪಟ್ಟಿದ್ದರಿಂದ ಆಕೆಯ ಶಿಕ್ಷಣ ಏನಿದ್ದರೂ ಅರಮನೆಯೊಳಗೇ. ಬೇಡರಲ್ಲಿ ಕೆಲವು ಬಡಕುಟುಂಬದ ಸದಸ್ಯರಿಗೆ ದುಡಿಯುವುದೇ ಅವರ ಕೆಲಸವಾದ್ದರಿಂದ ಅವರ ಕೈ ಆಸರೆಯಾಗಿ ಸ್ತ್ರೀಯು ದುಡಿಯುತ್ತಿದ್ದಳು. ಹೀಗಾಗಿ ಶಿಕ್ಷಣವು ಅವಳಿಂದ ಬಹುದೂರವಿತ್ತು. ದೇವಾಲಯಗಳು, ಮಠಗಳು, ಬ್ರಹ್ಮಪುರಿಗಳು, ಅಗ್ರಹಾರಗಳು ಶಿಕ್ಷಣ ಕೇಂದ್ರಗಳಾಗಿ ಕೆಲಸ ಮಾಡುತ್ತಿದ್ದವು. ಧರ್ಮಾಧಾರಿತ ಶಿಕ್ಷಣವನ್ನು ಆಗ ಕೊಡಲಾಗುತ್ತಿತ್ತು. ಶೂದ್ರ ವರ್ಗಗಳನ್ನು ದೇವಾಲಯಗಳಿಂದ ದೂರವಿಟ್ಟ ಕಾಲವದು. ಜಾತಿ ಪ್ರಜ್ಞೆ ಮತ್ತು ಆಚರಣೆ ಆಗ ಮೇಲ್ವರ್ಗದಲ್ಲಿ ಹೆಚ್ಚಿದ್ದರಿಂದ ಕೆಳವರ್ಗಗಳ ಸ್ತ್ರೀಪುರುಷರು ಶಿಕ್ಷಣ ಪಡೆದುಕೊಳ್ಳುವುದು ತುಂಬಾ ಕಷ್ಟವಿತ್ತು. ಒಟ್ಟಿನಲ್ಲಿ ಬೇಡ ಸಮುದಾಯಕ್ಕೆ ಓದು ಬರಹಗಳಲ್ಲಿ ಆಸಕ್ತಿ ಇರಲಿಲ್ಲವೆನ್ನಬೇಕು. ಇದು ಬ್ರಾಹ್ಮಣರ ಕೆಲಸ, ಇಂಥ ಕೆಲಸಗಳಲ್ಲಿ ತೊಡಗುವುದು ಅವಮಾನಕರವೆಂದೂ, ಶೂರರಿಗೆ ಸಲ್ಲದೆಂಬ ಭಾವನೆಯನ್ನು ಹೊಂದಿದ್ದರು.[೨೬೭]

ವಿಜಯನಗರೋತ್ತರ ಕಾಲದಲ್ಲಿ ಅಧಿಕಾರಕ್ಕೆ ಬಂದಂತಹ ಬೇಡ ಪಾಳೆಯಗಾರರು ಶಿಕ್ಷಣ ಪಡೆದು ಕೊಳ್ಳುವಲ್ಲಿ ಹಿಂದುಳಿದರಾದರೂ ಅವರು ಶಿಕ್ಷಣದ ಪ್ರಗತಿಗೆ ಶ್ರಮಿಸಿದರು. ಬೇಡರು ಶ್ರೀಶೈಲ ಪ್ರದೇಶದಿಂದ ಬಂದವರು ಎಂದು ಹೇಳುವುದರಿಂದ ಅವರ ಮೂಲಭಾಷೆ ತೆಲುಗು ಆಗಿರಬಹುದು. ಈಗಲೂ ತೆಲುಗು ಭಾಷೆಯನ್ನು ಬೇಡರು ಕೆಲವು ಕಡೆ ಮಾತನಾಡುತ್ತಾರೆ. ಆದರೆ ಅಧಿಕಾರಕ್ಕೆ ಬಂದು

ಪಾಳೆಯಗಾರರೆನಿಸಿಕೊಂಡವರು ತೆಲುಗು ಭಾಷೆಯನ್ನು ಕೈಬಿಟ್ಟು, ಕನ್ನಡವನ್ನು ಮಾತೃಭಾಷೆಯನ್ನಾಗಿ ಮಾಡಿಕೊಂಡರು. ನಂತರ ಅದೇ ಅವರ ಭಾಷೆಯಾಯಿತು. ಹೈದ್ರಾಬಾದ್ ಕರ್ನಾಟಕ ಪ್ರದೇಶದ ಬೇಡ ಸಂಸ್ಥಾನಿಕರ ಮಾತೃಭಾಷೆ ಕನ್ನಡವಾದರೂ ನಿಜಾಮನ ಕಾಲದಲ್ಲಿ ಉರ್ದುಭಾಷೆಯು ಹೆಚ್ಚು ಬಳಕೆಯಾಗುತ್ತಿದ್ದರಿಂದ ಈ ಸಂಸ್ಥಾನಿಕರು ಉರ್ದು ಭಾಷೆಯಲ್ಲಿಯೂ ಮಾತನಾಡುತ್ತಿದ್ದರು. ಕನ್ನಡ, ತೆಲುಗು, ಸಂಸ್ಕೃತ ಭಾಷೆಗಳು ಪ್ರಗತಿಯಾಗಲು ಪಾಳೆಯಗಾರರು ಶ್ರಮಿಸಿದರು. ಚಿತ್ರದುರ್ಗದ ನಾಯಕರು ಸೈನಿಕ-ಶಿಕ್ಷಣ ಮತ್ತು ಸೈನ್ಯ ತರಬೇತಿಗೆ ಹೆಚ್ಚು ಆದ್ಯತೆ ನೀಡಿದ್ದರಿಂದ ಆದ ಬಲಿಷ್ಠ ಮಿಲಿಟರಿ ರಾಜ್ಯವಾಗಿತ್ತು. ಚಿತ್ರದುರ್ಗವನ್ನಾಳಿದ ದೊರೆಗಳು ಪ್ರಜಾಪಾಲಕರು. ಧರ್ಮಸಹಿಷ್ಣುರು. ಕಲಾರಸಿಕರು ಸಾಹಿತ್ಯಪ್ರಿಯರೂ, ಸಾಹಿತ್ಯ ಆಶ್ರಿತರೂ ಆಗಿದ್ದರು. ಹಲವಾರು ಪಂಡಿತರು, ವಕೀಲರು, ಸಂಗೀತಗಾರರು ಇವರ ಆಸ್ಥಾನದಲ್ಲಿ ಆಶ್ರಯಪಡೆದಿದ್ದರು. ಅಗ್ರಹಾರ ಮತ್ತು ಬ್ರಹ್ಮಪುರಿಗಳು ಇವರ ಕಾಲದಲ್ಲಿ ಸ್ಥಾಪಿಸಲ್ಪಟ್ಟವು ಮತ್ತು ಅವರು ಇವುಗಳಿಗೆ ದಾನ-ದತ್ತಿ ನೀಡುವ ಮೂಲಕ ಪೋಷಿಸಿದರು. ಕಸ್ತೂರಿರಂಗಪ್ಪನಾಯಕನ ಮಗ ಇಮ್ಮಡಿ ಮದಕರಿನಾಯಕನು ಚಿತ್ರದುರ್ಗ ಸಂಸ್ಥಾನದ ಚಿತ್ರಹಳ್ಳಿ ಸೀಮೆ ಹಿರೇಗುಂಟನೂರು ಮಾಗಣಿಗೆ ಸೇರಿದ ಕಡಲೆಗುದ್ದು ಗ್ರಾಮದಲ್ಲಿ ಅಗ್ರಹಾರವನ್ನು ಸ್ಥಾಪಿಸಿ ಅದನ್ನು ಕ್ಷಾತ್ರಭಟ್ಟರ ವಂಶಜನಾದ ತಿಮ್ಮಪ್ಪ ಎಂಬಾತನಿಗೆ ವಹಿಸಿಕೊಟ್ಟನು. ಸಂಗಡ ಆ ಗ್ರಾಮದ ಆದಾಯವನ್ನು ಆ ಅಗ್ರಹಾರ ಅಭಿವೃದ್ಧಿಗೆ ಬಿಟ್ಟುಕೊಟ್ಟು ಶಿಲಾಶಾಸನ ಮತ್ತು ತಾಮ್ರಪಟ ಶಾಸನವನ್ನು ಬರೆಸಿದನು.[೨೧೮] ಚಿಕ್ಕಣ್ಣನಾಯಕನ ಮಗ ಮದಕರಿನಾಯಕನು ಜಗಲೂರ ಸೀಮೆಯ ಕಸವನಹಳ್ಳಿ ಗ್ರಾಮವನ್ನು ಅಗ್ರಹಾರವಾಗಿ ಮಾಡಿ, ಆ ಗ್ರಾಮದ ಉತ್ಪತ್ತಿಯನ್ನು ವಾರಿಜನಾಬೆಯ ಸೀನಯ್ಯನಿಗೆ ವಹಿಸಿಕೊಟ್ಟನು.[೨೧೯] ಮತ್ತು ಹಿಂದೆ ಕೃಷ್ಣದೇವರಾಯನ ಕಾಲದಲ್ಲಿ ಸ್ಥಾಪಿಸಲಾಗಿದ್ದ ಆನೆಸಿದ್ರಿ ಅಗ್ರಹಾರವನ್ನು ಜೀರ್ಣೋದ್ಧಾರ ಮಾಡಿ ಶಿಲಾಶಾಸನ ಹೊರಡಿಸಿದನು.[೨೨೦] ಬಿಚ್ಚುಗತ್ತಿ ಭರಮಣ್ಣನಾಯಕನು ಬಿಳಿಚೋಡು ಸೀಮೆಯ ಕಲ್ಲೇನಹಳ್ಳಿ[೨೨೧] ಗ್ರಾಮ ಚಿತ್ರದುರ್ಗ ಸೀಮೆಗೆ ಸೇರಿದ ಹಳುವಧಾರ ಗ್ರಾಮಗಳನ್ನು ಅಗ್ರಹಾರವನ್ನಾಗಿ ಮಾಡಿದನು.[೨೨೨] ಹಿರೇಮದಕರಿನಾಯಕನು ಆನೆಸಿದ್ರಿ ಅಗ್ರಹಾರವನ್ನು ಕವಿಕೋನಪ್ಪನ ಅಗ್ರಹಾರವೆಂದು ಮರುನಾಮಕರಣ ಮಾಡಿ ಅದಕ್ಕೆ ಬೇಕಾದ ಭೂಮಿಯನ್ನು ದತ್ತಿ ನೀಡಿದನು.[೨೨೩] ಹಾಗೆಯೇ ಕೊಡಗ ನೂರು ಸೀಮೆಯ ಮಲ್ಲಣ್ಣನ ಹಳ್ಳಿಯನ್ನು ದುರಸ್ತಿಗೊಳಿಸಿ ಅದಕ್ಕೆ ಮದಕರಿಪುರವೆಂದು ನಾಮಕರಣ ಮಾಡಿ ಅಗ್ರಹಾರ ಸ್ಥಾಪಿಸಿ ಶ್ಯಾಮಚಾರ್ಯರಿಗೆ ಈ ಗ್ರಾಮವನ್ನು ಬಿಟ್ಟುಕೊಟ್ಟನು. ಓದುಬರಹದಲ್ಲಿ ಚಿತ್ರದುರ್ಗ ನಾಯಕರು ಹಿಂದುಳಿದಿದ್ದರೂ ಶಾಸ್ತ್ರಗಳನ್ನು, ಪುರಾಣಗಳನ್ನು, ದೇವಸ್ತೋತ್ರಗಳನ್ನು, ಪೂಜಾವಿಧಿ ವಿಧಾನಗಳನ್ನು ತಿಳಿದುಕೊಂಡಿದ್ದರು. ಕಂಠಪಾಠ ರೂಪದಲ್ಲಿ ಅವರು ಇವುಗಳನ್ನು ಕಲಿತು ಕೊಂಡಿದ್ದರೆನ್ನಬಹುದು.

ಚಿತ್ರದುರ್ಗ ನಾಯಕರ ಕಾಲದಲ್ಲಿ ರಚನೆಗೊಂಡ ಸಾಹಿತ್ಯವೆಂದರೆ "ಭರಮಣ್ಣನಾಯಕನ ಸಮರ ವಿಜಯ", "ಹಿರೇಮದರಿನಾಯಕನ ತಾರಾವಳಿ" ಇತ್ಯಾದಿ. ಚಂದ್ರಭೀಮಕವಿಯು "ಮದಕರಿರಾಜೇಂದ್ರ ದಂಡಕ"ವನ್ನು ರಚಿಸಿದನು. ಭೀಮಾಜಿಪಂತ್ ಎಂಬುವನು ಬರೆದ 'ಚಿತ್ರದುರ್ಗದ ಬಖೈರ್' ಇನ್ನೊಂದು ಚಾರಿತ್ರಿಕ ಆಕರವಾಗಿದೆ. ಚಿತ್ರದುರ್ಗದ ಪಾಳೆಯಗಾರರನ್ನು ಕುರಿತು ಜನಪದರು ಕೋಲುಪದ, ತಾರಾವಳಿ, ದಂಡಕ, ಲಾವಣಿಗಳ ರೂಪದಲ್ಲಿ ಹಾಡಿಹೊಗಳಿದ್ದಾರೆ.

ಬ್ರಿಟಿಷರು ಮೈಸೂರಿನ ಆಡಳಿತದಲ್ಲಿ ಪ್ರವೇಶಿಸಿದ ನಂತರ ಇಲ್ಲಿಯ ಆಡಳಿತದಲ್ಲಿ ಬದಲಾವಣೆಗಳು ಕಂಡುಬಂದವು. ಕಮೀಷನರು ಮೈಸೂರನ್ನು ೫೦ ವರ್ಷಗಳ ಕಾಲ ಆಳಿದರು. ಇವರ ಆಳ್ವಿಕೆ ಕಾಲವನ್ನು 'ಪರಿವರ್ತನೆಯ ಕಾಲ' ಎಂದು ಕರೆಯಲಾಗುತ್ತದೆ. ಶೈಕ್ಷಣಿಕವಾಗಿ, ಆರ್ಥಿಕವಾಗಿ, ಆಡಳಿತಾತ್ಮಕವಾಗಿ ಮೈಸೂರು ಅಭಿವೃದ್ಧಿ ಹೊಂದಿತು. ಮೈಸೂರು ಕ್ರಿ.ಶ.೧೮೩೧ರವರೆವಿಗೂ ಪರೋಕ್ಷವಾದ ವಸಾಹತು ಆಡಳಿತದಲ್ಲಿತ್ತು. ಆದ್ದರಿಂದ ಇಂಗ್ಲೀಷ್ ಈಸ್ಟ್ ಇಂಡಿಯಾ ಕಂಪನಿಯು ಇಲ್ಲಿ ಶಿಕ್ಷಣದ ಪ್ರಸಾರಕ್ಕೆ ಹೆಚ್ಚೇನೂ ಆಸಕ್ತಿ ತೋರಿಸಿರಲಿಲ್ಲ. ನಂತರದಲ್ಲಿ ಈ ಪ್ರದೇಶದಲ್ಲಿ ಸ್ಥಾಪನೆಗೊಂಡ ಅನೇಕ ಕ್ರೈಸ್ತ ಮಿಶನರಿ ಶಾಲೆಗಳಿಂದ ಶೈಕ್ಷಣಿಕ ಪ್ರಗತಿ ಕಂಡುಬಂದಿತು. ಜನಸಾಮಾನ್ಯರಿಗೆ ಶಿಕ್ಷಣ ಪಡೆದುಕೊಳ್ಳುವುದರಲ್ಲಿ ಸ್ವಲ್ಪ ತೊಂದರೆ ಇತ್ತು. ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದಂತಹ ಪಾಳೆಯಗಾರರ ವಂಶಸ್ಥರು ಶಿಕ್ಷಣದಲ್ಲಿ ಅಲ್ಪಸ್ವಲ್ಪ ಸುಧಾರಿಸಿರುವುದನ್ನು ಕಾಣಬಹುದು. ಆದರೆ ಅಧಿಕಾರ ಕಳೆದುಕೊಂಡ ಪಾಳೆಯಗಾರರು ಆರ್ಥಿಕ ದುಸ್ಥಿತಿಗೆ ಗುರಿಯಾದುದೇ ಹೆಚ್ಚಾದ್ದರಿಂದ ಶಿಕ್ಷಣದ ಕಡೆ ಕೊಟ್ಟ ಗಮನ ಕಡಿಮೆ ಎನ್ನಬೇಕು.

ಚಿತ್ರದುರ್ಗ ನಾಯಕರ ವಂಶಸ್ಥರು ಇಂದು ಚಳ್ಳಕೆರೆ, ಕಾಟಪ್ಪನಹಟ್ಟಿ, ಗುಡೇಕೋಟೆ, ಅರೆಹಳ್ಳಿಹಟ್ಟಿಯಲ್ಲಿ ನೆಲೆಸಿರುವರು. ಈ ಮನೆತನದವರ ಶೈಕ್ಷಣಿಕ ವಿವರ ಇಂತಿದೆ. ಪ್ರಾಥಮಿಕ ಹಂತ ಪೂರೈಸಿದವರು ಒಟ್ಟು ೦೭, ಪ್ರೌಢಶಿಕ್ಷಣ ಹಂತ ತಲುಪಿದವರು ೦೫, ಲೊಯರ್ ಸೆಕೆಂಡರಿ ಶಿಕ್ಷಣ ಪಡೆದವರು ೦೧, ಎಲ್.ಎಲ್.ಬಿ ೦೨, ಟಿ.ಸಿ.ಎಚ್ ೦೧, ಹಿಂದಿ ಡಿಗ್ರಿ ೦೧, ಮತ್ತು ಲೋಯರ್ ಇಂಟರ್ ಮೀಡಿಯೆಟ್ ೦೧. ಈ ಶೈಕ್ಷಣಿಕ ವಿವರ ಎರಡು ತಲೆಮಾರಿನ ಹಿಂದಿನಿಂದ ಇಂದಿನವರೆಗೆ ಸಂಬಂಧಿಸಿದ್ದಾಗಿದೆ. ರಾಜ ಮನೆತನದಲ್ಲಿ ಘೋಷಾಪದ್ಧತಿ ಇರುವುದರಿಂದ ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿರುವುದಿಲ್ಲ. ಪ್ರಾಥಮಿಕ ಶಿಕ್ಷಣವನ್ನು ಪಡೆದವರೇ ಹೆಚ್ಚಾಗಿದ್ದಾರೆ. ರಾಮಾಯಣ, ಮಹಾಭಾರತ, ನೀತಿಕಥೆಗಳನ್ನು ಕಾವ್ಯಗಳನ್ನು ತಿಳಿದುಕೊಂಡಿದ್ದ ಕೆಲವರು ಈ ಮನೆತನದಲ್ಲಿದ್ದರು. ಈಗಿರುವ ಪಿ.ಆರ್.ವೀರಭದ್ರನಾಯಕರ ತಾತ ರಾಜಾನಾರಾಯಣಸ್ವಾಮಿನಾಯಕರು ಈ ತರಹದ ಸಾಹಿತ್ಯವನ್ನು ಓದಿ ತಿಳಿದುಕೊಂಡಿದ್ದರು. ಇವರೆಲ್ಲರೂ ಕನ್ನಡ ಭಾಷೆಯನ್ನು ಮಾತನಾಡುತ್ತಾರೆ. ಕೆಲವರು ಅಲ್ಪಸ್ವಲ್ಪವಾಗಿ ತೆಲುಗು, ಇಂಗ್ಲೀಷ್,

ಉರ್ದು, ಹಿಂದಿ ಭಾಷೆಗಳನ್ನು ಮಾತನಾಡುತ್ತಾರೆ. ಚಿತ್ರದುರ್ಗ ಇತಿಹಾಸ ಕುರಿತ ಚಿತ್ರದುರ್ಗದ 'ಗಜಕೇಸರಿ' ಎಂಬ ಕೃತಿಯನ್ನು ಬರೆದವರು ರಾಜಾ ಬಿಚ್ಚುಗತ್ತಿ ಪರಶುರಾಮಪ್ಪನಾಯಕರು. ಒಂದು ತಲೆಮಾರು ಹಿಂದೆ ಆರ್ಥಿಕವಾಗಿ ಉತ್ತಮಸ್ಥಿತಿಯಲ್ಲಿದ್ದುದರಿಂದ ದೊರೆಗಳು ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಿಲ್ಲ. ಆದರೆ ಆರ್ಥಿಕ ಸ್ಥಿತಿ ಅಧೋಗತಿ ತಲುಪಿದ ನಂತರ ಉದ್ಯೋಗದ ಅಗತ್ಯತೆ ಕಂಡುಬಂದಿದ್ದರಿಂದ ಇವರಲ್ಲಿ ಶಿಕ್ಷಣ ಪಡೆಯುವ ಪ್ರಯತ್ನಗಳು ಕಂಡುಬಂದವು.

ಮತ್ತೋಡು ಪಾಳೆಯಗಾರರು ಸಹ ಶಿಕ್ಷಣದ ಪ್ರಗತಿಗಾಗಿ ಶ್ರಮಿಸಿದ್ದರು. ವಿದ್ಯಾಪ್ರೇಮಿಗಳಾಗಿದ್ದ ಈ ನಾಯಕರು ವೀರಶೈವಧರ್ಮಗ್ರಂಥಗಳನ್ನು ಅಧ್ಯಯನ ಮಾಡಿದ್ದರು. ದೊಡ್ಡಹಾಲನಾಯಕನು ಗಂಜಿಗೆರೆ ಅಗ್ರಹಾರವನ್ನು ನಿರ್ಮಿಸಿ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದನು. ಹಾಲಪ್ಪನಾಯಕನನ್ನು ಶೈವಶಾಸ್ತ್ರ ಪಾರಂಗತನೆಂದು ಕರೆಯಲಾಗಿದೆ.[೨೬೪] ಒಮ್ಮೆ ಇವನು ಮತ್ತೋಡು ಸಮೀಪದ ಕಾಡಿಗೆ ಬೇಟೆಗೆಂದು ಹೋದಾಗ ಅಲ್ಲಿ ತನ್ನ ಅಜ್ಜ(ದೊಡ್ಡಹಾಲಪ್ಪನಾಯಕ) ಸ್ಥಾಪಿಸಿದ ಗಂಜಿಗೆರೆ ಅಗ್ರಹಾರವು ಹಾಳುಬಿದ್ದಿರುವುದನ್ನು ಕಂಡು ಮರುಗಿದನು. ಈ ಅಗ್ರಹಾರವನ್ನು ಅದರ ಕೆರೆಯನ್ನು ಜೀರ್ಣೋದ್ಧಾರ ಮಾಡಿ ಆ ಸ್ಥಳಕ್ಕೆ ಮೊದಲಿನ ಹೆಸರಾದ 'ನರಸಾಪುರ' ಎಂದು ಮತ್ತೆ ನಾಮಕರಣ ಮಾಡಿದನು.[೨೬೫] ಈ ದೊರೆಗಳು ಬ್ರಾಹ್ಮಣರಿಗೆ ಅಗ್ರಹಾರ ನಿರ್ಮಾಣ ಮಾಡಿಕೊಟ್ಟು, ಅದರ ನಿರ್ವಹಣೆಗೆ ಹೆಚ್ಚಿನ ಕಾಳಜಿ ವಹಿಸಿದ್ದರು. ಆದುದರಿಂದ ಪರೋಕ್ಷವಾಗಿ ಸಾಂಪ್ರದಾಯಿಕ ವಿದ್ಯೆಗೆ ಪ್ರೋತ್ಸಾಹ ನೀಡಿದಂತಾಗಿತ್ತು.

ಮತ್ತೋಡು ಪಾಳೆಯಗಾರರ ವಂಶಜರಲ್ಲಿ ಕೆಲವರು ಶೈಕ್ಷಣಿಕವಾಗಿ ಪ್ರಗತಿಯ ಹಾದಿಯಲ್ಲಿದ್ದಾರೆ. ಆದರೆ ಮತ್ತೋಡಿನ ಅರಸಿನತೋಟದಲ್ಲಿ ನೆಲೆಸಿದವರಲ್ಲಿ ಮಾತ್ರ ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಈ ಪಾಳೆಯಗಾರ ವಂಶಸ್ಥರ ಶೈಕ್ಷಣಿಕ ಪ್ರಗತಿ ಈ ರೀತಿ ಇದೆ. ಪ್ರಾಥಮಿಕ ಶಿಕ್ಷಣ ೦೨, ಪದವಿಪೂರ್ವ ಶಿಕ್ಷಣ-೦೪, ಪದವಿ-೦೫, ಕೆ.ಎ.ಎಸ್ -೦೧, ಐ.ಎ.ಎಸ್.-೦೧, ಎಂ.ಬಿ.ಬಿ.ಎಸ್ -೦೨, ಇಂಜಿನಿಯರಿಂಗ್ -೦೬. ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡುವಲ್ಲಿ ಈ ಮನೆತನದವರೂ ಹಿಂದುಳಿದಿರುವುದು ಕಂಡುಬರುತ್ತದೆ. ಶಿಕ್ಷಣ ಪಡೆದು ಉದ್ಯೋಗದಲ್ಲಿರುವ ಕೆಲವರು ತಮ್ಮ ಮಕ್ಕಳಿಗೆ ಉತ್ತಮ ಶಿಕ್ಷಣ ಕೊಡಿಸುವ ಮೂಲಕ ಶೈಕ್ಷಣಿಕ ಪ್ರಗತಿಗೆ ಕಾರಣರಾಗಿರುವರು. ಆದರೆ ಕೃಷಿಯಾಧಾರಿತ ಜೀವನ ನಡೆಸುವ ಕುಟುಂಬಗಳ ಶೈಕ್ಷಣಿಕ ಮಟ್ಟ ಪ್ರಗತಿದಾಯಕವಾಗಿಲ್ಲ.

ನಾಯಕನಹಟ್ಟಿ ಪಾಳೆಯಗಾರರು ಸಹ ವಿದ್ಯಾಪ್ರೇಮಿಗಳಾಗಿದ್ದರು. ಮಠಗಳಿಗೆ, ಸಂತರಿಗೆ, ಶರಣರಿಗೆ ಆಶ್ರಯ ನೀಡಿದ್ದರು. ಅಲ್ಲದೆ ದಾನ ದತ್ತಿಗಳನ್ನು ನೀಡುತ್ತಿದ್ದರು. ತಿಪ್ಪೇರುದ್ರಸ್ವಾಮಿಯಂಥಾ ಮಹಾ ಶರಣ ಈ ನಾಯಕರ ಗುರುಗಳಾಗಿ ನಾಯಕನಹಟ್ಟಿಯಲ್ಲಿದ್ದರು. ವೀರಶೈವಧರ್ಮ ಸಂಸ್ಕೃತಿಯಲ್ಲಿ ಪೂರ್ಣ ವಿಶ್ವಾಸವನ್ನು ಹೊಂದಿದ್ದ ಪಾಳೆಯಗಾರರು ಆ ಸಂಸ್ಕಾರಗಳನ್ನು ಮನೆಯಲ್ಲಿ ಅನುಸರಿಸುತ್ತಿದ್ದರು.

ಶಿವಶರಣರ ಬಗ್ಗೆ ತಿಳಿದುಕೊಂಡಿದ್ದರು. ಓದಲು ಬರೆಯಲು ಬರುವಷ್ಟು ಶಿಕ್ಷಣ ಪಡೆದುಕೊಂಡಿದ್ದರಾದರೂ ಹೊರಗಿನ ಜ್ಞಾನ, ಆಡಳಿತ ಜ್ಞಾನ, ಹಿಂದೂ ಸಂಸ್ಕಾರಗಳ ಜ್ಞಾನ ಪಾಳೆಯಗಾರರಲ್ಲಿತ್ತು. ಹಟ್ಟಿಪಾಳೆಯಗಾರರ ವಂಶಸ್ಥರು ಈಗ ನಾಯಕನಹಟ್ಟಿ ಸಮೀಪ ದೊರೆಗಳಹಟ್ಟಿ(ರಾಮದುರ್ಗ) ಮತ್ತು ಚಳ್ಳಕೆರೆಯಲ್ಲಿ ನೆಲೆಸಿದ್ದಾರೆ. ಈ ವಂಶಸ್ಥರ ಒಟ್ಟಾರೆ ಶೈಕ್ಷಣಿಕ ಮಟ್ಟ ಇಂತಿದೆ. ಪ್ರಾಥಮಿಕ ಹಂತದ ಶಿಕ್ಷಣ-೦೫, ಪ್ರೌಢಶಿಕ್ಷಣ-೦೭, ಹಾಗೂ ಬಿ.ಕಾಂ-೦೧. ಶೈಕ್ಷಣಿಕವಾಗಿ ತೀರಾ ಹಿಂದುಳಿದಿರುವ ಈಗಿನ ಮನೆತನದವರು ಸ್ತ್ರೀಯರಿಗೆ ಶಿಕ್ಷಣ ಕೊಡಿಸುವ ಪ್ರಯತ್ನ ಮಾಡಿಲ್ಲ. ಇವರಲ್ಲಿ ಕೆಲವರು ಬರೆಯುವ, ಓದುವ ಹಾಗೂ ಪುರಾಣಗಳನ್ನು ತಿಳಿದುಕೊಳ್ಳುವಷ್ಟು ಬುದ್ಧಿವಂತರೂ ಇದ್ದಾರೆ. ಶೈಕ್ಷಣಿಕವಾಗಿ ಹಿಂದುಳಿದಿರುವಿಕೆಗೆ ಈ ವಂಶಜರು ಆರ್ಥಿಕ ಕಾರಣವನ್ನೇ ಮುಂದಿಡುತ್ತಾರೆ.

ಹರತಿ ಪಾಳೆಯಗಾರರು ಸಹ ಶಿಕ್ಷಣ ಪ್ರೇಮಿಗಳಾಗಿದ್ದರು. ಮಠ, ದೇವಸ್ಥಾನ, ಬ್ರಾಹ್ಮಣರಿಗೆ ಹಾಗೂ ವೀರರಿಗೆ ಯಥೋಚಿತವಾಗಿ ಭೂದಾನ, ನೆತ್ತರು ಕೊಡುಗೆ, ಗ್ರಾಮದಾನ, ಅಗ್ರಹಾರ ದಾನಗಳನ್ನು ನೀಡಿದ್ದಾರೆ. ಹರತಿ ತಿಮ್ಮಣ್ಣನಾಯಕ ಮತ್ತು ಹೊಟ್ಟೆಣ್ಣನಾಯಕರು ಅನೇಕ ದೇವಾಲಯಗಳಿಗೆ ದಾನ ನೀಡಿದರು. ನಿಡುಗಲ್‌ದುರ್ಗದ ಮಂಗಳವಾಡ ಹೋಬಳಿ ಬೂದಸುಗೊಂಡನಹಳ್ಳಿ ಅಪ್ಪಾಲಧಾನಿಗೆ ಅಗ್ರಹಾರವನ್ನಾಗಿ ಮಾಡಿ ದಾನನೀಡಿದರು.[೨೬]

ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಪ್ರಗತಿಗೆ ಬ್ರಿಟೀಷರ ಆಡಳಿತವು ಕಾರಣವಾಯಿತು. ಬಳ್ಳಾರಿಯು ಮದ್ರಾಸ್ ಪ್ರಾಂತ್ಯದಲ್ಲಿ ಸೇರಿತ್ತು. ಮದ್ರಾಸ್ ಪ್ರೆಸಿಡೆನ್ಸಿಯಲ್ಲಿ ತೀವ್ರವಾದ ಶಿಕ್ಷಣದ ಆಸಕ್ತಿಯನ್ನು ತಳೆದಿದ್ದ ಜಿಲ್ಲೆಗಳಲ್ಲಿ ಬಳ್ಳಾರಿಯೂ ಒಂದು. ಮದ್ರಾಸ್ ಎಲಿಮೆಂಟರಿ ಆ್ಯಕ್ಟ್ ೧೮೬೩, ಟೌನ್ ಇಂಪ್ರೂವ್ ಮೆಂಟ್ ಆ್ಯಕ್ಟ್-೧೮೭೧, ಮದ್ರಾಸ್ ಮುನ್ಸಿಪಾಲ್ ಆ್ಯಕ್ಟ್ V೧೮೭೧ ಮತ್ತು ಲೋಕಲ್ ಫಂಡ್ಸ್ ಆ್ಯಕ್ಟ್ iii ೧೮೭೧ ಈ ಶಾಸನಗಳು ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ಭಾರೀ ಮುನ್ನಡೆ ಸಾಧಿಸಲು ಸಹಾಯಮಾಡಿದವು. ಕೆಲವು ಮಿಷನರಿ ಶಾಲೆಗಳು ಆರಂಭಗೊಂಡವು. ಶಿಕ್ಷಣವನ್ನು ಪಡೆಯುವ ಕಡೆ ಈ ಜಿಲ್ಲೆಯ ಪಾಳೆಯಗಾರರು ಗಮನಹರಿಸಲಿಲ್ಲ. ಇದ್ದ ಆಸ್ತಿಯನ್ನು ನೋಡಿಕೊಂಡು ರಾಜಗೌರವದಲ್ಲಿಯೇ ಬದುಕಲು ಪ್ರಯತ್ನಿಸಿದರು. ಈಗಲೂ ಹಿಂದಿನ ರಾಜಸುಖ ಬಯಸುವ ಮನಸ್ಸುಳ್ಳ ಅನೇಕ ಪಾಳೆಯಗಾರ ವಂಶಜರನ್ನು ಕಾಣಬಹುದು. ಶೈಕ್ಷಣಿಕವಾಗಿ ಜರಿಮಲೆಯ ಪಾಳೆಯಗಾರರು ಯಾವುದೇ ರೀತಿಯಲ್ಲಿ ಗುರುತಿಸಿಕೊಂಡಿಲ್ಲ. ರಾಜಕೀಯ ಅಸ್ಥಿರತೆಯಿಂದಾಗಿ ಸಂಸ್ಥಾನದಲ್ಲಿ ವಿದ್ವಾಂಸರಾಗಲೀ ಇತಿಹಾಸಕಾರರಾಗಲೀ, ಕಲಾವಿದರಾಗಲೀ, ಈ ಪಾಳೆಯಗಾರರ ಆಶ್ರಯ ಪಡೆದಿದ್ದುದು ಕಂಡುಬರುವುದಿಲ್ಲ. ಆದರೂ ಪಾಳೆಯಗಾರರು ಶರಣ ಸಂಸ್ಕೃತಿಗೆ ಆಶ್ರಯ ನೀಡಿದುದು ಕಂಡುಬರುತ್ತದೆ. ವೀರಶೈವಧರ್ಮ, ಸಂಸ್ಕೃತಿ, ಸಂಸ್ಕಾರಗಳು ಇಂದಿಗೂ ಈ ದೊರೆಗಳ ಮನೆತನದಲ್ಲಿ ಮುಂದುವರೆದಿವೆ. ಸದ್ಯದಲ್ಲಿ ಜರಿಮಲೆ

ಪಾಳೆಯಗಾರ ಕುಟುಂಬಗಳ ಶೈಕ್ಷಣಿಕ ಸ್ಥಿತಿ ಇಂತಿದೆ. ಪ್ರಾಥಮಿಕ ಹಂತದ ಶಿಕ್ಷಣ-೦೧, ಪದವಿ-೦೧, ಉಳಿದಂತೆ ಅಕ್ಷರಜ್ಞಾನವನ್ನು ಹೊಂದಿರುವವರು ಕಂಡುಬರುತ್ತಾರೆ. ಇತ್ತೀಚಿಗೆ ಅವರ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿರುವರು. ಗುಡೇಕೋಟೆ ಪಾಳೆಯಗಾರರಲ್ಲಿ ಶಿಕ್ಷಣ ಪಡೆದುಕೊಂಡವರ ಸಂಖ್ಯೆ ಪ್ರಾಥಮಿಕ -೦೫, ಪ್ರೌಢಶಿಕ್ಷಣ-೦೧ ಹಾಗೂ ಪಿ.ಯು.ಸಿ-೦೧. ಸ್ತ್ರೀ ಶಿಕ್ಷಣಕ್ಕೆ ಇವರೂ ಗಮನ ನೀಡಿಲ್ಲ. ಗುಡೇಕೋಟೆಯ ಪಾಳೆಯಗಾರರು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿ ಮುಂದುವರೆದುಕೊಂಡು ಬಂದರೂ ಶಿಕ್ಷಣದ ಕಡೆ ಹೆಚ್ಚು ಗಮನ ನೀಡಿಲ್ಲವೆನ್ನಬಹುದು. ಜರಿಮಲೆ ಪಾಳೆಯಗಾರರು ಆರ್ಥಿಕವಾಗಿ ಕಷ್ಟದ ಸ್ಥಿತಿಯಲ್ಲಿ ಮುಂದುವರೆದು ಬಂದಿದ್ದರಿಂದ ಶಿಕ್ಷಣದ ಕಡೆ ಗಮನ ಕೊಡಲಾಗಿಲ್ಲವೆನ್ನುವುದು ಕಾರಣಗಳಲ್ಲೊಂದು. ಜರಿಮಲೆ ಮತ್ತು ಗುಡೇಕೋಟೆ ಗ್ರಾಮಗಳು ಇಂದಿಗೂ ವ್ಯವಸ್ಥಿತವಾದ ಬಸ್ ಸೌಲಭ್ಯಗಳಿಂದ ವಂಚಿತವಾಗಿವೆ. ಹಾಗೂ ಆಧುನಿಕ ಸೌಲಭ್ಯಗಳಿಂದ ದೂರ ಉಳಿದಿವೆ. ಆದರೂ ಇಂಥ ಗ್ರಾಮಗಳಲ್ಲಿಯೇ ಪಾಳೆಯಗಾರರ ವಂಶಜರು ಉಳಿದುಕೊಂಡು ಬದುಕು ನಡೆಸುತ್ತಿರುವುದು ಕಂಡುಬರುತ್ತದೆ.

ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ಬರುವ ಬೇಡ ಸಂಸ್ಥಾನಿಕರಲ್ಲೂ ಶೈಕ್ಷಣಿಕ ಪ್ರಗತಿ ಸಾಧಾರಣವಾಗಿರುವುದು ಕಂಡುಬರುತ್ತದೆ. ಹಣ, ಅಧಿಕಾರ ಹಾಗೂ ರಾಜಗೌರವಕ್ಕೆ ೧೯೪೮ರವರೆಗೆ ಇವರಿಗೆ ಏನೂ ಕೊರತೆ ಇರಲಿಲ್ಲ; ಅವುಗಳಲ್ಲಿಯೇ ಸುಖವಾಗಿ ಬದುಕಿದರು. ಅಧಿಕಾರ ಮತ್ತು ವಿಲಾಸೀ ಜೀವನ ನಡೆಸಿದರು. ಉರ್ದುಭಾಷೆಯ ಪ್ರಭಾವ ಈ ಪ್ರದೇಶದ ಜನರ ಮತ್ತು ದೊರೆಗಳ ಮೇಲಾಯಿತು. ಹಿಂದಿನ ಹಾಗೂ ಈಚೀನ ಕೆಲವು ಸಂಸ್ಥಾನಿಕರು ಉರ್ದುವನ್ನು ಸ್ಪಷ್ಟವಾಗಿ ಓದುತ್ತಿದ್ದರು, ಬರೆಯುತ್ತಿದ್ದರು ಹಾಗೂ ಮಾತನಾಡುತ್ತಿದ್ದರು. ಜೊತೆಗೆ ಕನ್ನಡ, ಇಂಗ್ಲಿಷ್, ತೆಲುಗು ಭಾಷೆಗಳನ್ನು ಸಹ ಕಲಿತುಕೊಂಡಿದ್ದರು. ನಿಜಾಮನು ಚಿಕ್ಕಪುಟ್ಟ ನಾಯಕರನ್ನೆಲ್ಲಾ ದೊರೆಗಳೆಂದು ಕರೆದು ಅವರಿಗೆ ಜಹಗೀರು ನೀಡಿದ್ದನು. ನಿಜಾಮನ ಅಧಿಕಾರವರ್ಗವು ಈ ಸಂಸ್ಥಾನಿಕರ ಮೇಲೆ ಒಳ್ಳೆಯ ಭಾವನೆ ಹೊಂದಿರಲಿಲ್ಲವೆಂದು ಕಾಣಿಸುತ್ತದೆ. ಆದರೆ ನಿಜಾಮನು ಶಿಕ್ಷಣ ಪಡೆಯುವ ಮುಕ್ತ ಅವಕಾಶವನ್ನು ದೊರೆಗಳಿಗೆ ಮತ್ತು ಅವರ ಮಕ್ಕಳಿಗೆ ನೀಡಿದ್ದನು. ಹೈದ್ರಾಬಾದ್‌ನಲ್ಲಿ ಕೆಲವು ಸಂಸ್ಥಾನಿಕರ ಮಕ್ಕಳು, ಶಿಕ್ಷಣ ಪಡೆಯುತ್ತಿದ್ದರು. ಅಂತಹವರಿಗೆ ಬೇಕಾಗುವ ಸೌಲಭ್ಯಗಳನ್ನು ನಿಜಾಮನು ಒದಗಿಸುತ್ತಿದ್ದನು. ಆದರೆ ಸಂಸ್ಥಾನಿಕ ದೊರೆಗಳಾರೂ ಹೆಚ್ಚಿನ ಶಿಕ್ಷಣ ಪಡೆಯುವ ಕಡೆ ಗಮನಹರಿಸಲಿಲ್ಲ.

ಹೈದ್ರಾಬಾದ್ ಸಂಸ್ಥಾನ ಸಾಲರ್ ಜಂಗನ ಕಾಲದಲ್ಲಿ ಆಧುನಿಕ ಶಿಕ್ಷಣದ ಕಡೆಗೆ ಕಾಲಿಡತೊಡಗಿತು. ಶಿಕ್ಷಣ ಕ್ಷೇತ್ರದಲ್ಲಿ ಬೇಕಾದಷ್ಟು ಬದಲಾವಣೆಗಳನ್ನು ಜಾರಿಗೆ ತರಲು ಜಂಗ್ ನಿರ್ಧರಿಸಿದನು.[೨೬] ಈ ಪ್ರದೇಶದ ದೊರೆಗಳಲ್ಲಿ ಕೆಲವರು ಉನ್ನತ ಶಿಕ್ಷಣವನ್ನು ಪಡೆದರು. ಸುರಪುರದ ದೊರೆಯೊಬ್ಬರು ವಿದೇಶದಲ್ಲಿ ಬ್ಯಾರಿಸ್ಟರ್ ಪದವಿಯನ್ನು ಪಡೆದುಕೊಂಡು ಬಂದಿದ್ದರು. ಹುಲಿಹೈದರ್ ಸಂಸ್ಥಾನದ

ರಾಜಾರಂಗಪ್ಪನಾಯಕರು ನಿಜಾಮನ ಮನೆಯಲ್ಲಿಯೇ ಇದ್ದೂ ಶಿಕ್ಷಣವನ್ನು ಪಡೆದುಕೊಂಡು ಬಂದರು. ಇವರಿಗೆ ಕನ್ನಡ ಬರೆಯಲು ಬರುತ್ತಿರಲಿಲ್ಲ. ಆದರೆ ಉರ್ದು ಓದುಬರಹದಲ್ಲಿ ತುಂಬಾ ಜಾಣರಿದ್ದರು. ೧೮೫೫ರಲ್ಲಿ ಸರಕಾರವು ಒಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯೊಂದು ತಾಲ್ಲೂಕು ಮತ್ತು ಜಿಲ್ಲಾಕೇಂದ್ರದಲ್ಲಿ ಕನಿಷ್ಠಪಕ್ಷ ಎರಡು ಶಾಲೆಗಳನ್ನು ಒಂದು ಪರ್ಶಿಯನ್‌ದಲ್ಲಿ, ಇನ್ನೊಂದು ದೇಶಭಾಷೆಯಲ್ಲಿ ತೆರೆಯತಕ್ಕದ್ದು ಎಂದು ಆಜ್ಞೆಯಾಯಿತು. ಆದರೆ ಶೈಕ್ಷಣಿಕವಾಗಿ ಕೆಳವರ್ಗ ಪ್ರಗತಿಯಾಗುವುದು ಕಷ್ಟವಿದ್ದುದರಿಂದ ಶಿಕ್ಷಣದ ಕಡೆ ಆ ವರ್ಗ ಗಮನಹರಿಸಲಿಲ್ಲ. ಹಾಗಾಗಿ ಹೈದ್ರಾಬಾದ್ ಕರ್ನಾಟಕ ಪ್ರದೇಶದ ಶಿಕ್ಷಣ ಪ್ರಗತಿಯಲ್ಲಿ ಹಿಂದುಳಿಯಿತು. ಆರ್ಥಿಕ ಸ್ಥಿತಿಯೇ ಇದಕ್ಕೆ ಪ್ರಮುಖ ಕಾರಣವೆನ್ನಬಹುದು. ಗುಡಗುಂಟಿ ದೊರೆಗಳು ವಿದ್ವಾಂಸರಿಗೆ, ಕಲಾವಿದರಿಗೆ, ಜ್ಯೋತಿಷಿಗಳಿಗೆ, ಪುರಾಣಿಕರಿಗೆ ರಾಜಾಶ್ರಯ ನೀಡಿದ್ದರು. ಇವರಿಗೆ ಇನಾಮುಗಳನ್ನು ಕೊಡುತ್ತಿದ್ದರು. ಸಾಹಿತಿಗಳೂ, ಬರಹಗಾರರೂ ಆದಂತ ಶ್ರೀರಾಮಚಾರ್ಯಜೋಷಿ ಮತ್ತು ಶ್ರೀಕಂಠೀರವ ದೇಶಪಾಂಡೆ ಎಂಬ ವಿದ್ವಾಂಸರು ಈ ದೊರೆಗಳ ಆಶ್ರಯದಲ್ಲಿದ್ದರು. ಉರ್ದು, ಇಂಗ್ಲೀಷ್, ಕನ್ನಡ ಭಾಷೆಗಳಲ್ಲಿ ಈ ಮನೆತನದವರು ಪರಿಣತಿ ಹೊಂದಿದ್ದರು. ಇವರ ಶೈಕ್ಷಣಿಕ ವಿವರ ಹೀಗಿದೆ. ಪ್ರಾಥಮಿಕ ಹಂತದ ಶಿಕ್ಷಣ -೦೨, ಪ್ರೌಢಶಿಕ್ಷಣ-೦೧, ಪದವಿಪೂರ್ವ ಶಿಕ್ಷಣ-೦೧ ಹಾಗೂ ಪದವಿ-೦೧. ಗುಂತಗೋಳ ಸಂಸ್ಥಾನೀಕರು ಸಹ ವಿದ್ಯಾಪ್ರೇಮಿಗಳಾಗಿದ್ದರೆಂದು ತಿಳಿದುಬರುತ್ತದೆ. ಈ ಮನೆತನದ ಶೈಕ್ಷಣಿಕ ಸ್ಥಿತಿ, ಪ್ರೌಢಶಿಕ್ಷಣ -೦೪ ಹಾಗೂ ಪದವಿ-೦೩. ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸುವ ಪ್ರಯತ್ನಗಳು ಇತ್ತೀಚಿಗೆ ಈ ಮನೆತನದಲ್ಲಿ ಕಂಡುಬರುತ್ತವೆ. ಕನಕಗಿರಿ ನಾಯಕರು ಅನೇಕ ಬ್ರಾಹ್ಮಣ ಪುರೋಹಿತರಿಗೆ ಆಶ್ರಯ ನೀಡಿದ್ದರು. ಅಗ್ರಹಾರವನ್ನು ನಿರ್ಮಾಣಮಾಡಿ ಅವರಿಗೆ ಉಂಬಳಿಯನ್ನು ನೀಡಿದ್ದರು. ರಾಜಾರಂಗಪ್ಪ ನಾಯಕರು ಉರ್ದುಭಾಷೆಯಲ್ಲಿ ಪ್ರಾವಿಣ್ಯತೆಯನ್ನು ಪಡೆದುಕೊಂಡಿದ್ದರು. ಕೆಲವು ರಾಜರು ಶಾಸನಗಳನ್ನು ಹಾಕಿಸಿದರು. ದೇವದುರ್ಗ ಸಂಸ್ಥಾನಿಕರು ಶೈಕ್ಷಣಿಕವಾಗಿ ಸುಧಾರಿಸಿಕೊಳ್ಳುತ್ತಿದ್ದಾರೆ. ಅವರ ಮನೆತನದ ಶಿಕ್ಷಣ ವಿವರ ಹೀಗಿದೆ ಪ್ರೌಢಶಿಕ್ಷಣ-೦೨, ಪದವಿಪೂರ್ವ-೦೨, ಪದವಿ-೦೩ ಹಾಗೂ ಇಂಜಿನೀಯರಿಂಗ್-೦೧. ಕನಕಗಿರಿ ನಾಯಕರ ವಂಶಸ್ಥರ ಶೈಕ್ಷಣಿಕ ವಿವರ ಇಂತಿದೆ. ಪ್ರಾಥಮಿಕ-೦೭, ಪ್ರೌಢಶಿಕ್ಷಣ-೦೩ ಪಿ.ಯು.ಸಿ -೦೧ ಹಾಗೂ ಪದವಿ-೦೨. ಇಲ್ಲಿ ಅವಲೋಕಿಸಿರುವ ಅಂಕಿ-ಅಂಶಗಳಲ್ಲಿ ಇತ್ತೀಚಿನ ಸಂಖ್ಯೆಯೇ ಹೆಚ್ಚು, ಮಾಹಿತಿ ನೀಡಿದವರ ತಂದೆ, ತಾತರ ಕಾಲದ್ದು ಸ್ವಲ್ಪ. ಹೀಗಿರುವುದನ್ನು ನೋಡಿದಾಗ ಬೇಡ ಪಾಳೆಯಗಾರರ ಶೈಕ್ಷಣಿಕ ಪ್ರಗತಿ ತೀರಾ ಇತ್ತೀಚಿನದು ಎಂದು ಗೊತ್ತಾಗುತ್ತದೆ.

ಶೈಕ್ಷಣಿಕವಾಗಿ ಸ್ತ್ರೀಯನ್ನು ಕಡೆಗಾಣಿಸಲಾಗಿತ್ತು. ಎಲ್ಲಾ ಸಮುದಾಯಗಳಲ್ಲೂ ಸ್ತ್ರೀಯು ಶಿಕ್ಷಣ ಪಡೆಯುವ ಅವಕಾಶದಿಂದ ವಂಚಿತಳಾಗಿದ್ದಳು. ಪಾಳೆಯಗಾರರು ಸಹ ತಮ್ಮ ಹೆಣ್ಣು ಮಕ್ಕಳಿಗೆ ಶಿಕ್ಷಣ

ಕೊಡಿಸುವಲ್ಲಿ ಅಲಕ್ಷ್ಯ ತೋರಿದರು. ಕೆಲವು ರಾಣಿಯರು ರಾಜಕೀಯದ ಅನುಭವ ಮತ್ತು ಸ್ವಾತಂತ್ರ್ಯ ಪಡೆದುಕೊಂಡು ಸಾರ್ವಜನಿಕ ಕೆಲಸಗಳನ್ನು ಮಾಡುತ್ತಿದ್ದರು. ಧರ್ಮ, ಪುರಾಣ, ಕಾವ್ಯ, ಇತಿಹಾಸ, ಭಾಷೆ ಮುಂತಾದ ವಿಷಯಗಳನ್ನು ಕೇಳಿ ತಿಳಿದುಕೊಂಡಿದ್ದರು. ದಾನ-ಧರ್ಮವನ್ನು ಮಾಡುವುದರ ಜೊತೆಗೆ ದೇವಾಲಯಗಳನ್ನೂ, ಮಠಗಳನ್ನು ಕಟ್ಟಿಸಿದರು. ಶಿಕ್ಷಣ ಪಡೆಯುವ ಸಂದರ್ಭವಿದ್ದರೂ ಅದನ್ನು ಪಡೆಯುವ ಅವಕಾಶದಿಂದ ದೂರ ಉಳಿಸುವ ಪ್ರಯತ್ನ ಅತ್ಯಂತ ಸೂಕ್ಷ್ಮವಾಗಿ ಆಗ ನಡೆಯುತ್ತಿತ್ತು. ಸ್ತ್ರೀಯನ್ನು ಸಮಾಜವು ನೋಡಿದ ದೃಷ್ಟಿಕೋನ ಕುರಿತಂತೆ ಅಬೆದುಬಾಯ್‌ರು ಹೀಗೆ ಹೇಳಿರುವರು. "ಮಾನವನ ಕುಲದ ಸ್ವಾರಸ್ಯವಾದ ಅರ್ಧಭಾಗವು(ಮಹಿಳೆಯರು) ಜಗತ್ತಿನ ಬೇರೆ ಭಾಗಗಳಲ್ಲಿ ಅಗಾಧವಾದ ಅಧಿಕಾರವನ್ನು ಚಲಾಯಿಸುತ್ತಾ, ಅನೇಕ ವೇಳೆ ಸಾಮ್ರಾಜ್ಯಗಳ ವಿಧಿಯನ್ನು ಬರೆಯುತ್ತಿರುವಾಗ ಭಾರತದಲ್ಲಿ ಗುಲಾಮಗಿರಿಗಿಂತ ಎಷ್ಟೋ ಮಾತ್ರಕ್ಕೆ ಉತ್ತಮವಲ್ಲದ ಸ್ಥಿತಿಯಲ್ಲಿದ್ದಾರೆ. ಬದುಕಿನಲ್ಲಿ ಅವರಿಗಿರುವ ಒಂದೇ ಕೆಲಸ, ಪುರುಷನ ದೈಹಿಕ ಸುಖಗಳನ್ನು, ಬಯಕೆಗಳನ್ನು ಪೂರೈಸುವುದು. ಅವರನ್ನು ಹೆಚ್ಚು ಗಮನಾರ್ಹರಾಗುವಂತೆ ಬದುಕಿನಲ್ಲಿ ಉಪಯುಕ್ತವಾದ ಪಾತ್ರವಹಿಸುವ ಸಾಮರ್ಥ್ಯವನ್ನು ಅವರಿಗೆ ಕೊಡುವ ಉನ್ನತ ಮಾನಸಿಕ ಗುಣಗಳು ಯಾವುದನ್ನು ಬೆಳೆಸಿಕೊಳ್ಳಲು ಅವರು ಅಸಮರ್ಥರೆಂದು ಪರಿಗಣಿಸಲಾಗಿತ್ತು.[೨೭೮] ಬೇಡ ಸಂಸ್ಥಾನಿಕರ ಕುಟುಂಬಗಳಲ್ಲಿ ಘೋಷಾ ಪದ್ಧತಿ ಆಚರಣೆಯಲ್ಲಿತ್ತು. ಸ್ತ್ರೀಯನ್ನು ಘೋಷಾ ಹೆಸರಿನಲ್ಲಿ ಮನೆಯೊಳಗೆ ಬಂಧಿಸಿಡಲಾಗಿತ್ತು. ಅವಳ ಎಲ್ಲಾ ಆಸೆ-ಆಕಾಂಕ್ಷೆಗಳನ್ನು 'ದೊರೆ ಮನೆತನದ ಹೆಣ್ಣು' ಎಂಬ ರಾಹು ನುಂಗಿ ಹಾಕಿತ್ತಾದರೂ ಕೆಲವು ರಾಣಿಯರು ಸಾರ್ವಜನಿಕ ಕೆಲಸಗಳಲ್ಲಿ ಕಾಣಿಸಿಕೊಂಡಿದ್ದಾರೆ. ಸ್ತ್ರೀಯು ಪುರುಷನ ಹಿಡಿತದಿಂದ ಇಂದಿಗೂ ಮುಕ್ತಳಾಗಿಲ್ಲ. ಕೆಲವು ಕಡೆ ಘೋಷಾ ಇರುವುದರಿಂದ, ತಮ್ಮ ಮನೆಯಲ್ಲಿ ಹೆಣ್ಣುಮಕ್ಕಳನ್ನು ಓದಿಸುವ ಪದ್ಧತಿ ಇಲ್ಲವೆಂದು ಹೇಳುವ ಹಳೆಯ ಬೇಡ ಸಂಸ್ಥಾನಿಕರೂ ಇದ್ದಾರೆ.

ಬೇಡ ಜನಾಂಗದ ಸಾಂಸ್ಕೃತಿಕ ವೀರರ ಬಗ್ಗೆ ಕೆಳವರ್ಗದ ಜನರು ಅನೇಕ ಹಾಡುಗಳನ್ನು ಹೇಳುತ್ತಾರೆ. ಜನಪದ ವೀರಸಾಹಿತ್ಯದಲ್ಲಿ ಬೇಡರು ಮೇಲುಗೈ ಸಾಧಿಸಿದ್ದಾರೆ. ಗಾದ್ರಿಪಾಲನಾಯಕ, ಜಗಲೂರು ಪಾಪನಾಯಕ, ಕುಮಾರರಾಮ, ಪಟೇಲಪಾಪನಾಯಕ, ಎರಮಂಚನಾಯಕ ಮುಂತಾದವರನ್ನು ಕುರಿತು ಅನೇಕ ಹಾಡುಗಳು ರಚನೆಗೊಂಡಿವೆ. ಬೇಡ ಜನಾಂಗದ ವೀರರ ಕುರಿತು ಲಾವಣಿಗಳು, ಗೀಗಿ ಪದಗಳು ರಚನೆಗೊಂಡಿವೆ. ಚಿತ್ರದುರ್ಗದ ವೀರಮದಕರಿನಾಯಕ, ಸರ್ಜಾಹನುಮಪ್ಪನಾಯಕ, ಹಲಗಲಿ ಬೇಡರು, ಸುರಪುರದ ವೆಂಕಟಪ್ಪನಾಯಕ, ಸಿಂಧೂರ ಲಕ್ಷ್ಮಣ ಮುಂತಾದ ವೀರರ ಕುರಿತು ರಚನೆಗೊಂಡ ಪದಗಳು ಕನ್ನಡಿಗರ ಅಭಿಮಾನದ ಕಿಚ್ಚನ್ನು ಎಚ್ಚರಿಸುತ್ತವೆ. ಜನಪದರ ಹಬ್ಬ, ಮದುವೆ, ಮುಂಜಿ ಇತರ ಸಂದರ್ಭಗಳಲ್ಲಿ ಬೇಡವೀರರ ಕುರಿತು ಅನೇಕ ಗೀತೆಗಳು ಹಾಡಲ್ಪಡುತ್ತವೆ. ಸೋಬಾನ ಪದಗಳು,

ಬೀಸುವ ಕಲ್ಲುಪದಗಳು, ಕೋಲಾಟ ಪದಗಳು ಮುಂತಾದವುಗಳನ್ನು ಇಂದಿಗೂ ಬೇಡಜನಾಂಗದ ಹಿರಿಯ ವ್ಯಕ್ತಿಗಳಲ್ಲಿ, ಅದರಲ್ಲೂ ಮಹಿಳೆಯರ ನೆನಪಿನಾಳದಲ್ಲಿ ಉಳಿದುಕೊಂಡಿವೆ. ಜನಪದ ವಿದ್ವಾಂಸರು ಇಂತಹ ಹಾಡುಗಳನ್ನು ಸಂಗ್ರಹಿಸಿ ದಾಖಲಿಸುತ್ತಿದ್ದಾರೆ. ಗಾದ್ರಿಪಾಲನಾಯಕನ ಮೇಲೆ ರಚನೆಗೊಂಡ ಜನಪದ ಕಥನಗೀತೆ ಬೇಡರಲ್ಲಿ ಮನೆಮಾತಾಗಿದೆ. ಗಾದ್ರಿಪಾಲನಾಯಕನ ಕಥನ ತ್ರಿಪದಿಗಳಲ್ಲಿ ಕಾವ್ಯವಾಗಿ ಬೆಳೆದಿದೆ. ಗಾದ್ರಿಪಾಲನಾಯಕನ ಹೆಂಡಂದಿರಾದ ಕೆಂಚವ್ವ, ಕಾಮವ್ವರ ಕುರಿತಂತೆ ಸುಮಾರು ನೂರೈವತ್ತು ತ್ರಿಪದಿಗಳು ಜನಪದ ಕಥನಗೀತೆಯಿದೆ.[೩೭೯] ಕೋಲುಪದಗಳಲ್ಲಿ ಕೋನಸಾಗರದ ಪಟೇಲ ಪಾಪನಾಯಕನ ಗೀತೆಯು ಒಂದು ದುರಂತ ಗೀತೆಯಾಗಿ ಮೊಳಕಾಲ್ಮೂರು, ಚಳ್ಳಕೆರೆ ಪ್ರದೇಶಗಳಲ್ಲಿ ಪ್ರಚಲಿತವಿದೆ. ಕುಮಾರರಾಮನ ಬಗ್ಗೆ ದಿನಪೂರ್ತಿ ಹಾಡುವ ಹಾಡುಗಾರರಿದ್ದಾರೆ. ಉಚ್ಚಂಗಿ ಎಲ್ಲಮ್ಮ, ಏಕನಾಥೇಶ್ವರಿ, ಸಂಪಿಗೆಸಿದ್ದೇಶ್ವರ, ಮುರಿಗಾಸ್ವಾಮಿಗಳ ಮಠ, ಉಜ್ಜನಿಮಠ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಕನಕಗಿರಿ ಕನಕರಾಯ(ಲಕ್ಷ್ಮೀನರಸಿಂಹ) ಮುಂತಾದ ದೇವತೆಗಳು ಹಾಗೂ ಸಂತರ ಮೇಲೆ ಪದಗಳಿವೆ. ಜನಪದರಲ್ಲಿ ಜನಪದ ಸಾಹಿತ್ಯ ಸಂಗ್ರಹ ಸಂಶೋಧಕರು ಇಂತಹ ಅನೇಕ ಕಥನ, ಕಾವ್ಯ, ಹಾಡುಗಳನ್ನು ಸಂಗ್ರಹಿಸಿದ್ದಾರೆ. ಮತ್ತು ಆ ಕಾರ್ಯ ಮುಂದುವರೆದಿದೆ. ೧೨ನೇ ಶತಮಾನದಲ್ಲಿ ಬೇಡ ಜನಾಂಗದಲ್ಲಿ ಕೆಲವು ವಚನಕಾರರು ಇದ್ದರು. ತೆಲುಗು ಬೊಮ್ಮಯ್ಯ, ತೆಲುಗು ಮಸಣಯ್ಯ, ತಳವಾರ ಕಾಮಿದೇವ, ಕಕ್ಕೆಯ ಮಾರಯ್ಯ(ಬೊಮ್ಮಯ್ಯ) ರಕ್ಕಸ ಬೊಮ್ಮಯ್ಯ ಮುಂತಾದವರೇ ಈ ಬೇಡ ವಚನಕಾರರು.[೩೮೦]

## ಕಲೆ

ಬೇಡ ಜನಾಂಗವು ಬುಡಕಟ್ಟು ಜನಾಂಗವಾದ್ದರಿಂದ, ಇವರು ವಾಸಿಸುವ ಮನೆ ಹಾಗೂ ದೇವಾಲಯಗಳನ್ನು ತಮ್ಮದೇ ಆದ ಕಲಾಶೈಲಿಯಲ್ಲಿ ನಿರ್ಮಿಸುತ್ತಾರೆ. ಕಾಡಿನಲ್ಲಿ ಸಿಗುತ್ತಿದ್ದ ಮರ, ಹುಲ್ಲು, ಕಲ್ಲುಗಳಿಂದ ಮನೆಗಳನ್ನು ದೇವಾಲಯಗಳನ್ನು ಕಟ್ಟುತ್ತಿದ್ದರು. ಈಗ ಮನೆಗಳನ್ನು ಹೆಂಚು, ಕಲ್ಲು, ಸಿಮೆಂಟ್ ಇತ್ಯಾದಿಗಳಿಂದ ಆಧುನಿಕ ಶೈಲಿಗಳಲ್ಲಿ ಕಟ್ಟುತ್ತಿದ್ದಾರೆ.

ಬೇಡ ಜನಾಂಗದ ದೊರೆಗಳು ಕಲಾ ಪ್ರಿಯರಾಗಿದ್ದಾರಲ್ಲದೆ, ಕಲೆಯ ಆಶ್ರಿತರೂ ಆಗಿದ್ದರು. ಅನೇಕ ದೇವಾಲಯಗಳು, ಮಠಗಳು, ಕೋಟೆಗಳು, ಇವರ ಕಾಲದಲ್ಲಿ ನಿರ್ಮಾಣಗೊಂಡವು. ಚಿತ್ರದುರ್ಗ ದೊರೆಗಳು ನಿರ್ಮಿಸಿದ ನೀರ್ಥಡಿ ರಂಗನಾಥಸ್ವಾಮಿ ದೇವಾಲಯ, ಉತ್ಸವಾಂಬಾ ದೇವಾಲಯ, ಬೃಹತ್ ಹೊಂಡಗಳು(ಪುಷ್ಕರಿಣಿಗಳು), ರಾಮದುರ್ಗ ಗುಹಾಂತರ ದೇವಾಲಯ, ಹೀಗೆ ಅನೇಕ ಕಲಾಸ್ಮಾರಕಗಳನ್ನು ವಿಜಯನಗರ ಶೈಲಿಯಲ್ಲಿ ನಿರ್ಮಾಣ ಮಾಡಿದರು. ಹಳೆಯ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದರು. ದೇವಾಲಯಗಳನ್ನು ಸುಂದರವಾಗಿರುವಂತೆ ನೋಡಿಕೊಳ್ಳಲು, ಅಲ್ಲಿ ದಿನನಿತ್ಯ ಪೂಜಾ ಕಾರ್ಯಗಳು ನಡೆಯಲು ಉಂಬಳಿಯನ್ನು ನೀಡಿದರು. ಕನಕಗಿರಿ ನಾಯಕರು ಕನಕಗಿರಿಯಲ್ಲಿ ಅನೇಕ

ದೇವಾಲಯಗಳನ್ನು, ಪುಷ್ಕರಿಣಿಗಳನ್ನು ಕಲಾತ್ಮಕ ಬಾವಿಗಳನ್ನು ನಿರ್ಮಾಣ ಮಾಡಿದರು. ಲಕ್ಷ್ಮೀನರಸಿಂಹ (ಕನಕರಾಯ) ದೇವಾಲಯವು ತುಂಬಾ ಕಲಾತ್ಮಕವಾದುದು. ಈ ನಾಯಕರ ಕಾಲದಲ್ಲಿ ಕನಕಗಿರಿ ಒಂದು ಕಲಾಕೇಂದ್ರವಾಗಿತ್ತು. ಈ ಹಿನ್ನೆಲೆಯಲ್ಲಿ 'ಕಣ್ಣಿದ್ದವರು ಕನಕಗಿರಿ ನೋಡಬೇಕು; ಕಾಲಿದ್ದವರು ಹಂಪೆ ನೋಡಬೇಕು' ಎಂಬ ನಾಣ್ಣುಡಿ ಪ್ರಸಿದ್ಧವಾಯಿತು. ಇಲ್ಲಿನ ವೆಂಕಟಪತಿಬಾವಿ ವಿಜಯನಗರ ಕಾಲದ ಅಪರೂಪದ ಬಾವಿಗಳಲ್ಲಿ ಒಂದು. ಮತ್ತೋಡು, ಜರಿಮಲೆ, ಗುಡೇಕೋಟೆ, ನಾಯಕನಹಟ್ಟಿ, ದೇವದುರ್ಗ, ಗುಡಗುಂಟಿ ದೊರೆಗಳು ಸಹ ಕಲೆಯ ಬಗ್ಗೆ ಜ್ಞಾನವನ್ನು ಹೊಂದಿದ್ದರು. ಗುಡಗುಂಟಿಯ ರಾಜಾದರ್ಬಾರ್ ತುಂಬಾ ಕಲಾತ್ಮಕವಾಗಿದೆ.

ವಿಜಯನಗರೋತ್ತರ ಕಾಲೀನ ಬೇಡ ಜನಾಂಗ ದೊರೆಗಳು ಬಲಿಷ್ಠ ಕೋಟೆಗಳನ್ನು ಕಲಾತ್ಮಕವಾಗಿ ಕಟ್ಟುವಲ್ಲಿ ಹೆಸರಾಗಿದ್ದಾರೆ. ಚಿತ್ರದುರ್ಗದ ಏಳುಸುತ್ತಿನ ಕೋಟೆ ಇದಕ್ಕೊಂದು ಉದಾಹರಣೆ. ಇದೊಂದು ಅತ್ಯಂತ ವ್ಯವಸ್ಥಿತವಾದ ಕೋಟೆ. ಗಿರಿದುರ್ಗಗಳನ್ನು ಕಟ್ಟುವುದರಲ್ಲಿ ಬೇಡರು ನಿಸ್ಸೀಮರಾಗಿದ್ದರು. ಕಣಕುಪ್ಪೆ, ನಿಡುಲ್ಲು, ಗುಡೇಕೋಟೆ, ರಾಮದುರ್ಗ, ಎಮ್ಮಿಗುಡ್ಡ(ಗಂಗಾವತಿ, ತಾ.) ಮುಂತಾದ ಸ್ಥಳಗಳಲ್ಲಿ ಬೇಡನಾಯಕರು ಕಟ್ಟಿಸಿದ ಇಂಥಾ ಕೋಟೆಗಳಿವೆ. ವೈರಿಗಳು ಸುಲಭವಾಗಿ ಆಕ್ರಮಣ ಮಾಡದಂತಹ ಸ್ಥಳಗಳನ್ನು ಆಯ್ಕೆ ಮಾಡಿಕೊಂಡು ಕೋಟೆಗಳನ್ನು ಕಟ್ಟುವ ಜಾಣತನ ಬೇಡರಲ್ಲಿತ್ತು. ಗುಡ್ಡಗಾಡು ಪ್ರದೇಶದಲ್ಲಿಯೇ ಹೆಚ್ಚಾಗಿ ಬೇಡನಾಯಕರು ಕೋಟೆಗಳನ್ನು ಕಟ್ಟಿದ್ದರಿಂದ ಸಹಜವಾಗಿ ಅವು ನೋಡುಗರ ಗಮನವನ್ನು ಸೆಳೆಯುತ್ತವೆ. ನಾಟಕಕಾರರು, ಸಂಗೀತಗಾರರು, ಕಲಾವಿದರು ಆಸ್ಥಾನದ ಆಶ್ರಯದಲ್ಲಿ ದ್ದುದರಿಂದ ಬೇಡನಾಯಕರು ಕಲಾರಸಿಕರೆಂದು ಗೊತ್ತಾಗುತ್ತದೆ. ಕೆಲವು ದೊರೆಗಳು ನಾಟಕಗಳನ್ನು ರಾತ್ರಿಯಿಡೀ ನೋಡುತ್ತಿದ್ದರು; ಕಲಾವಿದರಿಗೆ ಬಹುಮಾನವನ್ನು ನೀಡುತ್ತಿದ್ದರು. ಕೆಲವೊಮ್ಮೆ ನಾಟಕ ನಿರ್ದೇಶನವನ್ನು ಮಾಡಲು ಹಿಂದೇಟು ಹಾಕುತ್ತಿರಲಿಲ್ಲ. ಉದಾಹರಣೆಗೆ ಗೊಂತಗೋಳ, ಗುಡಗುಂಟಿ ನಾಯಕರು ನಾಟಕ ಆಡಿಸುವುದು, ಕಲಾವಿದರನ್ನು ಗೌರವಿಸುವುದು ಮಾಡುತ್ತಿದ್ದರು.

ವಿಶ್ವ ಇತಿಹಾಸದಲ್ಲಿ ಬೇಡರ 'ವೀರಸಂಸ್ಕೃತಿ' ಹೆಸರಾಗಿದೆ. ವೀರಪರಂಪರೆ ಚರಿತ್ರೆಯಲ್ಲಿ ಬೇಡರು ಅಗ್ರಜರು. ಯುದ್ಧ ಮಾಡುವುದರಲ್ಲೂ ಬೇಡರು ಪ್ರಸಿದ್ಧರು. ಸಾಮಾನ್ಯವಾಗಿ ಯುದ್ಧದಲ್ಲಿ ತಾವೇ ನೇರವಾಗಿ ಭಾಗವಹಿಸುತ್ತಿದ್ದರು. ಸೇನಾದಂಡನಾಯಕನ ಮೂಲಕ ಯುದ್ಧಗಳನ್ನು ಮಾಡಿಸಿದ್ದು ಕಡಿಮೆ. "ಗೆದ್ದರೆ ರಾಜ್ಯ, ಸೋತರೆ ವೀರಸ್ವರ್ಗ" ಇದು ಬೇಡದೊರೆಗಳ ಯುದ್ಧನೀತಿಯಾಗಿತ್ತು. ಹೀಗಾಗಿ ಈ ಕಾಲದಲ್ಲಿ ಒಂದು ಪಾಳೆಯಪಟ್ಟು ತಕ್ಷಣವೇ ಸ್ವತಂತ್ರವಾಗುತ್ತಿತ್ತು ಇಲ್ಲವೇ ಇನ್ನೊಬ್ಬರ ಅಧೀನವಾಗುತ್ತಿತ್ತು. ಹೋರಾಡುವುದು ಬೇಡದೊರೆಗಳ ನಿರಂತರ ಕಾರ್ಯವಾಗಿತ್ತು. ಅದು ಅವರ ಕರ್ತವ್ಯವೂ ಆಗಿತ್ತು. ಹೋರಾಟವೇ ಆ ದೊರೆಗಳ ನಿಲುವಾಗಿತ್ತು. ಒಬ್ಬ ಸಾಮಾನ್ಯ ಸೈನಿಕನನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳದ

ಮೈಸೂರು ದೊರೆಗಳು ತಮ್ಮ ಅಧಿಕಾರವನ್ನು ಹೈದರಾಲಿ, ಟಿಪ್ಪೂವಿಗೆ ನೀಡಿ ಸುಮ್ಮನಾಗಿದ್ದ ಕಾಲದಲ್ಲಿ, ಈ ನವಾಬರ ವಿರುದ್ಧ ಹೋರಾಟಕ್ಕೆ ನಿಂತವರೆಂದರೆ ಬೇಡ ದೊರೆಗಳು. ಯುದ್ಧ ಒಪ್ಪಂದ ಬೇಡ ದೊರೆಗಳಲ್ಲಿ ಅಪರೂಪವಾಗಿತ್ತು. ಸೋಲು-ಗೆಲುವನ್ನು ಯುದ್ಧವೇ ನಿರ್ಧರಿಸುತ್ತಿತ್ತು. ಸೋಲು-ಗೆಲುವು ಇವೆರೆಡರಲ್ಲಿ ಒಂದು ಬೇಡದೊರೆಗಳ ದಾಳಿಗಳಲ್ಲಿ ಕಂಡುಬರುತ್ತಿದ್ದವು. ಯುದ್ಧ ಭೂಮಿಯಿಂದ ಓಡಿ ಹೋಗುವುದು, ತಲೆಮರೆಸಿಕೊಳ್ಳುವುದು ಬೇಡ ದೊರೆಗಳಿಗೆ ಸಲ್ಲದಾಗಿತ್ತು. ತಲೆ ಹೋಗುವ ಸಂದರ್ಭ ಬಂದರೂ ಯುದ್ಧಭೂಮಿಯಿಂದ ಓಡಿ ಹೋಗುತ್ತಿರಲಿಲ್ಲ. ಸ್ವಾಮಿನಿಷ್ಠೆಗೆ ಹೆಸರಾದುದು ಬೇಡ ಜನಾಂಗ. ವಿದೇಶಿಯರನ್ನು ಎದುರಿಸಿ ನಿಂತ ವೀರರಲ್ಲಿ ಬೇಡರು ಆದಿವೀರರಾಗಿದ್ದಾರೆ. ಕುಮಾರರಾಮ, ಎಚ್ಚಮನಾಯಕ, ವೀರ ಮದಕರಿನಾಯಕ, ಹಲಗಲಿ ಬೇಡರು, ಸುರಪುರದ ವೆಂಕಟಪ್ಪನಾಯಕ, ಸಿಂಧೂರ ಲಕ್ಷ್ಮಣ, ಸರ್ಜಾಹನುಮಪ್ಪನಾಯಕ ಮುಂತಾದ ಬೇಡವೀರರು ಕರ್ನಾಟಕದ ವೀರಪರಂಪರೆಯಲ್ಲಿ ನಮ್ಮೆದುರಿಗೆ ಬಂದು ನಿಲ್ಲುತ್ತಾರೆ. ಇಂದಿಗೂ ಉಳಿದುಕೊಂಡು ಬಂದಿರುವ ಬೇಡರ ವೇಷ, ಪಾಳೇಗಾರ ವೇಷದಂತಹ ಜನಪದ ಕಲೆಗಳು ಬೇಡ ಜನಾಂಗದ ವೀರ ಪರಂಪರೆಯನ್ನು ಪ್ರತಿನಿಧಿಸುತ್ತದೆ. ಈ ವೇಷಗಳನ್ನು ಬೇಡರು ಹಾಕುತ್ತಾರೆ. ಹೋಳಿ ಹಬ್ಬದ ಸಂದರ್ಭದಲ್ಲಿ ಕರ್ನಾಟಕದ ಕೆಲವು ಕಡೆ ಈ ವೇಷಗಳನ್ನು ಹಾಕುತ್ತಾರೆ. ಹಿಂದಿನ ಪಾಳೆಯಗಾರ, ಬೇಡರ, ಸಾಹಸ, ಧೈರ್ಯ, ಸ್ವಭಾವದ ಸಂಕೇತವಾಗಿ ಈ ವೇಷಗಳನ್ನು ಹಾಕುತ್ತಾರೆ. ಪಾಳೇಗಾರನು ತಲೆಗೆ ಬಣ್ಣದ ರುಮಾಲು ಸುತ್ತಿಕೊಂಡಿದ್ದು, ಚಡ್ಡಿಯನ್ನು ಮಾತ್ರ ಧರಿಸುತ್ತಾನೆ. ಕೆನ್ನೆ, ಗಲ್ಲ, ಹಣೆ, ಮೂಗು, ಕವಿಗಳಿಗೆ ವಿಶಿಷ್ಟ ರೀತಿಯಲ್ಲಿ ಒಪ್ಪುವ ಬಣ್ಣವಿರುತ್ತದೆ.(ಕೆಂಪು, ಕಪ್ಪು, ಬಿಳಿ) ದಪ್ಪವಾದ ಮೀಸೆ, ತಲೆಯಿಂದ ಕತ್ತಿನ ಮೇಲೆ ಇಬ್ಬದಿಗಳಲ್ಲಿ ಇಳಿಬಿಟ್ಟ ಚೌರಿ, ಕೊದಲಿಗೆ ಮಣಿಹಾರ, ಬಲಗೈ, ಎಡಗೈಗಳಲ್ಲಿ ಕ್ರಮವಾಗಿ ಕತ್ತಿ ಗುರಾಣಿಗಳಿಂದ ಅಲಂಕೃತವಾದ ಪಾಳೇಗಾರರನ್ನು ಎರಡು ತೋಳುಗಳಿಗೆ ಮತ್ತು ನಡುಪಟ್ಟಿಗಳಿಗೆ ಹಗ್ಗಗಳನ್ನು ಕಟ್ಟಿ ಎಂಟು ಹತ್ತುಗಜ ದೂರದಲ್ಲಿ ಮೂವರು ಹಗ್ಗಗಳನ್ನು ಹಿಡಿದಿಟ್ಟಿರುತ್ತಾರೆ. ಆ ವೇಷದಿಂದ ಕುಣಿಯುವ ವೇಷಧಾರಿಯನ್ನು ನಿಯಂತ್ರಿಸುವುದು ಇವರ ಕೆಲಸ'' ಮುಂತಾದ ಆಕರ್ಷಣೆಗಳನ್ನು ಈ ಪಾಳೆಯಗಾರ ವೇಷ ಕುಣಿತದಲ್ಲಿ ಕಾಣಬಹುದು.[೨೮೧]

ಹನ್ನೆರಡನೇ ಶತಮಾನದ ಹಿಂದಿನ ಶಾಸನಗಳು ಹೆಚ್ಚಾಗಿ ಬೇಡರನ್ನು ಕೀಳಾಗಿ ಚಿತ್ರಿಸಿವೆ. ನಂತರದ ದಿನಗಳಲ್ಲಿ ಬೇಡ ಪಾಳೆಯಪಟ್ಟು ಸ್ಥಾಪನೆಯನ್ನು ಕಾಣುತ್ತೇವೆ. ಅವುಗಳ ಪ್ರಸಿದ್ಧಿಯನ್ನು ಗಮನಿಸುತ್ತೇವೆ. ಬೇಡರ ನೆಲೆ ಅರಣ್ಯವಾಗಿದ್ದರಿಂದ ನಾಗರೀಕ ಸಮಾಜದಿಂದ ಅವರು ದೂರವಿದ್ದರು. ನಾಗರೀಕ ಸಮಾಜದ ಸಂಪರ್ಕ ಪಡೆದ ನಂತರ ಅನಾಗರೀಕ ಗುಣಗಳನ್ನು ತ್ಯಜಿಸಿದರು. ಬೇಡ ಪಾಳೆಯಗಾರರ ದಾಳಿಗಳು ಜನರಲ್ಲಿ, ರಾಜರಲ್ಲಿ ಭಯವನ್ನುಂಟು ಮಾಡಿದವು. ಬೇಡ ಪಾಳೆಯಗಾರರ ಧೈರ್ಯ, ಸಾಹಸ,

ದಿಟ್ಟತನ ನೋಡಿಯೇ ರಾಜರು ಸ್ವತಂತ್ರವಾಗಿ ಆಳಲು ಅವರಿಗೆ ಅವಕಾಶ ನೀಡಿದರು; ಕ್ರಮೇಣ ಅವರನ್ನು ತಮ್ಮ ಸಾಮಂತರೆಂದು ಒಪ್ಪಿಕೊಂಡರು. ಬಲಿಷ್ಠರಾಗಿದ್ದರೂ ಬೇಡರ ದಾಳಿಗಳಿಗೆ ಅಂಜುತ್ತಿದ್ದವರೇ ಹೆಚ್ಚು. ಬುಡಕಟ್ಟು ಸ್ಥಿತಿಯಿಂದ ನಾಗರೀಕ ಸ್ಥಿತಿಯ ಕಡೆಗೆ ಬಂದ ಬೇಡರಲ್ಲಿ ಮುಖ್ಯವಾಗಿ ಕಂಡು ಬಂದುದು ಅವರಲ್ಲಿನ ಸಾಹಸ ಮತ್ತು ಛಲ. ಈ ಗುಣಗಳಿಂದಲೇ ಅವರು ಪ್ರಗತಿ ಹೊಂದುತ್ತಾ ಬಂದರು. ಇಂತಹ ವೀರಪರಂಪರೆಯನ್ನು ಹೊಂದಿದಂತಹ ಜನಾಂಗದ ಸಂಪ್ರದಾಯವನ್ನು ಮೇಲ್ವರ್ಗದ ಲೇಖಕರು, ಬ್ರಿಟೀಷರು, ಪ್ರವಾಸಿಗರು ಕೆಲವೇ ಅಸಂಗತ ಉದಾಹರಣೆಗಳ ನೆಲೆಯಲ್ಲಿ ಬೇಡರನ್ನು ಕಳ್ಳರು, ದರೋಡೆಕೋರರು ಇತ್ಯಾದಿ ನಿಂದನೀಯ ದೃಷ್ಟಿಕೋನದಿಂದ ನೋಡಿದುದು ಸರಿಯಲ್ಲವೆನಿಸುತ್ತದೆ.

**ಟಿಪ್ಪಣಿಗಳು**

೧. ಬೆಟಗೇರಿ ಕೃಷ್ಣಶರ್ಮ, ಕರ್ನಾಟಕದ ಜನಜೀವನ, ಪು.೧೧೬

೨. ಸತ್ಯನಾರಾಯಣ; *ಮೈಸೂರಿನ ಕಿರಿಯ ರಾಜವಂಶಗಳು,* (ಪ್ರೊ.ಬಿ.ಷೇಕ್ ಅಲಿ (ಸಂ) **ಕರ್ನಾಟಕ ಚರಿತ್ರೆ,** ಸಂಪುಟ ೩, ೧೯೯೭, ಪು.೪೨೮

೩. **ಶಿವಣ್ಣ ಕೆ.ಎಸ್.; ಮೈಸೂರು ಒಡೆಯರ ಇತಿಹಾಸ,** ಅದೇ ಪು.೨೭೮

೪. ಅದೇ, ಪು.೨೮೩

೫. ರಾಬರ್ಟ್‌ಸಿವಿಲ್; **ಇಂಡಿಯಾನ್ ಇಸ್ಟಾರಿಕಲ್ ರಿಸರ್ಚ್,** ವ್ಯಾಲೂಮ್ ೭೬, ಪು.೧೧೩

೬. ಎಂ.ವಿ.ಕೃಷ್ಣರಾವ್, ಎಂ.ಕೇಶವಭಟ್ಟ; **ಕರ್ನಾಟಕದ ಇತಿಹಾಸ ದರ್ಶನ,** ೧೯೭೦, ಪು.೪೯೧

೭. **ಕರ್ನಾಟಕದ ಜನಜೀವನ,** ಪು.೧೩೦

೮. ಡಾ.ಬಿ.ಮುದ್ದಾಚಾರಿ; **ಮೈಸೂರು-ಮರಾಠ ಬಾಂಧವ್ಯ,** ೧೯೭೫, ಪು.೬

೯. ಡಾ.ಕೃಷ್ಣ ಕೊಲ್ಹಾರ ಕುಲಕರ್ಣಿ(ಅನು); **ಬುಸಾತಿನ-ಸಲಾತಿನ,** ೧೯೯೯, ಪು.೧೦೭

೧೦. **ಮೈಸೂರು ಮರಾಠ ಬಾಂಧವ್ಯ,** ಪು.೫

೧೧. ಸಂತೆಬೆನ್ನೂರು ಸುಮತೀಂದ್ರನಾಡಿಗ್; *ಸಂತೇಬೆನ್ನೂರು ನಾಯಕರು,* (ರಾಜರಾಯ ಹೆಗಡೆ, ಅಶೋಕ ಶೆಟ್ಟರ್ (ಸಂ), **ಮಲೆ ಕರ್ನಾಟಕದ ಅರಸು ಮನೆತನಗಳು** ೨೦೦೧, ಪು.೨೫೪

೧೨. **ಮೈಸೂರು ಮರಾಠ ಬಾಂಧವ್ಯ,** ಪು.೨೧

೧೩. ಡಾ.ಸೂರ್ಯನಾಥ ಕಾಮತ್; *ಕರ್ನಾಟಕದಲ್ಲಿ ಮುಸಲ್ಮಾನ ಮತ್ತು ಮರಾಠ ಆಳ್ವಿಕೆ ಕುರಿತು ಕನ್ನಡ ಸಾಹಿತ್ಯಿಕ ಸಾಧನ ಸಾಮಾಗ್ರಿ,* (ಲಕ್ಷ್ಮಣ್ ತೆಲಗಾವಿ(ಸಂ) **ಹರತಿಸಿರಿ,** ೧೯೮೭, ಪು.೧೯೩

೧೪. ಪಿ. ಅಬ್ದುಲ್ ಸತ್ತಾರ್; **ತರೀಕೆರೆಯ ಪಾಳೆಯಗಾರರು,** ೧೯೯೭, ಪು. ೧,೨

೧೫. ಪ್ರೊ.ಕೆ.ಎಸ್.ಶಿವಣ್ಣ ಮತ್ತು ಇತರರು; *ವಿಜಯನಗರ ರಾಜ್ಯಾಡಳಿತದಲ್ಲಿ ಅಮರನಾಯಕರು,* **ಕರ್ನಾಟಕ ಚರಿತ್ರೆ,** ಸಂ.೩, ಪು.೬೯

೧೬. ಅದೇ ಪು.೬೫

೧೭. ಎಂ.ಎಸ್.ಪುಟ್ಟಣ್ಣ; ಚಿತ್ರದುರ್ಗದ ಪಾಳೆಯಗಾರರು, ೧೯೯೭, ಪು.೨೪

೧೮. ಚಿತ್ರದುರ್ಗದ ಪಾಳೆಯಗಾರರು, ಪು.೨೭

೧೯. ರಾಜಶೇಖರಪ್ಪ ಬಿ.; *ಚಿತ್ರದುರ್ಗ ನಾಯಕರ ರಾಜಕೀಯ ಇತಿಹಾಸ,* (ಸಂ.ವಸು ಎಂ.ವಿ.) ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.೯೭

೨೦. ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪೂರ್ವೋಕ್ತ, ಪು.೧೦೦

೨೧. ಮೈಸೂರು ಮರಾಠ ಬಾಂಧವ್ಯ, ಪು.೧೮೭

೨೨. ಕರ್ನಾಟಕ ಚರಿತ್ರೆ, ಸಂ-೫, ಪು.೨೭

೨೩. ಕಪಟರಾಳ್ ಕೃಷ್ಣರಾವ್; ಸುರಪುರ ಸಂಸ್ಥಾನದ ಇತಿಹಾಸ, ೧೯೭೭, ಪು.೨೩೫

೨೪. ತಿ.ತಿ.ಶರ್ಮಾ(ಸಂ); ಚಾರಿತ್ರಿಕ ದಾಖಲೆಗಳು, ೧೯೯೯ ಪು.೧೦೫

೨೫. ಎಂ.ಜಿ.ವೆಂಕಟೇಶಯ್ಯ, ಚಿತ್ರದುರ್ಗದ ಪಾಳೆಯಗಾರರು, ಪು.೭೧

೨೬. ಅದೇ ಪು.೭೯

೨೭. ಬಿ.ಎಲ್.ರೈಸ್, ಮೈಸೂರು ಆ್ಯಂಡ್ ಕೂರ್ಗ್, ೧೯೮೬, ಪು.೧೬೨

೨೮. ಎಲ್.ಕೆ.ಅಯ್ಯರ್, ದಿ ಮೈಸೂರ್ ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್, ವ್ಯಾಲೂಮ್ ೨, ೧೯೮೮, ಪು.೨೦೦

೨೯. ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪೂರ್ವೋಕ್ತ, ಪು.೧೦೮

೩೦. ಲಕ್ಷ್ಮಣ್ ತೆಲಗಾವಿ(ಸಂ); ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೧೯೭೬, ಪು.೧೦೪, ೧೦೫

೩೧. ಅದೇ, ೧೯೯೫, ಪು.೩೮೧

೩೨. ಅದೇ ಪು.೧೨೧

೩೩. ಅದೇ ಪು. ೧೨೨, ೧೨೩

೩೪. ಸಮೇತನಹಳ್ಳಿರಾಮರಾಯ(ಅನು), ಟಿಪ್ಪೂ ಸುಲ್ತಾನನ ಇತಿಹಾಸ, ೧೯೮೮, ಪು.೪೦೫

೩೫. ಹುಲ್ಲೂರು ಶ್ರೀನಿವಾಸಜೋಯಿಸರ ಐತಿಹಾಸಿಕ ಲೇಖನಗಳು, ಪು.೮೮

೩೬. ಲಕ್ಷ್ಮಣ್ ತೆಲಗಾವಿ, *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ,* (ಡಾ.ಎಂ.ವಿ.ಶ್ರೀನಿವಾಸ, ಲಕ್ಷ್ಮಣ್ ತೆಲಗಾವಿ(ಸಂ), ಚಂದ್ರವಳ್ಳಿ, ೧೯೭೬, ಭಾಗ-೧, ಪು.೧೦೬

೩೭. ಬಿ.ಎಸ್.ಶ್ರೀನಿವಾಸನಾಯಕ; ಚಿತ್ರದುರ್ಗದ ಕಾಮಗೇತಿ ಅರಸರು, ೧೯೮೪, ಪು.೨೪

೩೮. ಹುಲ್ಲೂರು ಶ್ರೀನಿವಾಸಜೋಯಿಸರ ಐತಿಹಾಸಿಕ ಲೇಖನಗಳು, ಪು.೧೨೭

೩೯. ಕರ್ನಾಟಕ ಚರಿತ್ರೆ, ಸಂಪುಟ ೬, ಪು.೪೮

೪೦. ಬಿ.ಎಲ್.ರೈಸ್; ಎಫಿಗ್ರಾಫಿಯಾ ಕರ್ನಾಟಿಕಾ, ೧೯೦೩, ಚಿತ್ರದುರ್ಗ ಜಿಲ್ಲೆ, ಬೆಂಗಳೂರು

೪೧. ಡಾ.ಕರಿಶೆಟ್ಟಿರುದ್ರಪ್ಪ; **ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ,** ೧೯೯೫, ಪು.೧೦೫

೪೨. **ಚಂದ್ರವಳ್ಳಿ,** ಪೂರ್ವೋಕ್ತ, ಭಾಗ-೧, ಪು.೭೦

೪೩. ಮೀರಾಸಾಬಿಹಳ್ಳಿ ಶಿವಣ್ಣ; *ನಾಯಕನಹಟ್ಟಿ ಪಾಳೆಯಗಾರರು,* **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪು.೭೭

೪೪. ಮೀರಸಾಬಿಹಳ್ಳಿ ಶಿವಣ್ಣ; **ದುರಗ ಜಾನಪದ,** ಪು.೬೫

೪೫. **ಮ್ಯಾಸನಾಯಕರು : ಒಂದು ಜನಾಂಗಿಕ ಅಧ್ಯಯನ,** ಪು.೧೦೨

೪೬. ಎಂ.ಎನ್.ಪ್ರಭಾಕರ(ಸಂ); *ನಾಯಕನಹಟ್ಟಿ ಬಖೈರ್,* **ಚಂದ್ರವಳ್ಳಿ,** ಭಾಗ ೪, ಪು.೨೪

೪೭. *ನಾಯಕನಹಟ್ಟಿ ಪಾಳೆಯಗಾರರು,* **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪು.೭೯

೪೮. **ಎಫಿಗ್ರಾಫಿಯಾ ಕರ್ನಾಟಿಕಾ** ಚಿತ್ರದುರ್ಗ(ಜಿ), ಹೊಸದುರ್ಗ

೪೯. ಬಾಗೂರು ಆರ್.ನಾಗರಾಜಪ್ಪ; **ಹೊಸದುರ್ಗದ ಸುತ್ತ,** ೧೯೮೪, ಪು.೬೩

೫೦. ಯಶೋಧಾ ರಾಜಶೇಖರಪ್ಪ; *ಮತ್ತೋಡು ಪಾಳೆಯಗಾರರು,* **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪು.೧೭೧

೫೧. ಮಲ್ಲಿಕಾರ್ಜುನ ಎಂ.ಕೆ., *ಮತ್ತೋಡಿನ ಇತಿಹಾಸ,* **ಚಂದ್ರವಳ್ಳಿ,** ಭಾಗ ೩, ಪು.೨೫

೫೨. *ಮತ್ತೋಡಿನ ಪಾಳೆಯಗಾರರು,* **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪು.೧೭೩

೫೩. ಅದೇ, ಪು.೧೭೫

೫೪. *ಚಿತ್ರದುರ್ಗ ಜಿಲ್ಲೆಯಲ್ಲಿ ಪಾಳೆಯಗಾರರ ಆಳ್ವಿಕೆ,* **ಚಂದ್ರವಳ್ಳಿ,** ಭಾಗ ೧, ಪು.೭೪

೫೫. *ಮತ್ತೋಡಿನ ಪಾಳೆಯಗಾರರು,* **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪು.೧೭೫

೫೬. **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು,** ಪು.೧೩೮

೫೭. ಪರಮೇಶ; *ಹರ್ತಿಕೋಟೆ ಇತಿಹಾಸ,* **ಚಂದ್ರವಳ್ಳಿ,** ಭಾಗ ೩, ಪು.೧೪

೫೮. ಶ್ಯಾಮಲ ರತ್ನಕುಮಾರಿ; *ಬಿ.ಎಸ್.ಹರತಿ ಪಾಳೆಯಗಾರರು,* **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪು.೧೫೯

೫೯. ಎಂ.ವಿ.ಚಿತ್ರಲಿಂಗಯ್ಯ; *ಹರತಿ ಪಾಳೆಯಗಾರರ ವಂಶಾವಳಿ : ಒಂದು ವ್ಯಾಸಂಗ,* **ಹರತಿಸಿರಿ,** ಪು.೨೯೦

೬೦. **ಎಫಿಗ್ರಾಫಿಯಾ ಕರ್ನಾಟಿಕಾ,** XI, ಹಿರಿಯೂರು

೬೧. ಅದೇ, ಪು.೨೯೬

೬೨. ಅದೇ ಪು.೩೦೯

೬೩. **ಚಂದ್ರವಳ್ಳಿ,** ಪೂರ್ವೋಕ್ತ, ಭಾಗ ೩, ಪು.೧೭

೧೪. ಟಿ.ಗಿರಿಜಾ; **ಚಿತ್ರದುರ್ಗ ಜಿಲ್ಲಾ ದರ್ಶಿನಿ,** ಪು.೩೮೬

೧೫. ದಕ್ಷಿಣ ಕರ್ನಾಟಕದ ಅರಸುಮನೆತನಗಳು, ಪೂರ್ವೋಕ್ತ, ಪು.೧೬೪

೧೬. ಡಾ.ಎಂ.ಎಂ.ಕಲಬುರ್ಗಿ(ಸಂ); **ಕರ್ನಾಟಕದ ಕೈಫಿಯತ್ತುಗಳು,** ೧೯೯೪, ಪು.೪೭೦

೧೭. ಬಸವರಾಜ ಹೆಚ್.ಎಂ.; **ಗುಡೇಕೋಟೆ : ಸಾಂಸ್ಕೃತಿಕ ಅಧ್ಯಯನ**(ಅಪ್ರಕಟಿತ ಎಂಫಿಲ್ ಪ್ರಬಂಧ) ೨೦೦೨, ಪು.೪೨

೧೮. **ಕರ್ನಾಟಕದ ಕೈಫಿಯತ್ತುಗಳು,** ಪು.೫೪೬

೧೯. ಅದೇ, ಪು.೫೪೭

೨೦. **ಗುಡೇಕೋಟೆ : ಸಾಂಸ್ಕೃತಿಕ ಅಧ್ಯಯನ,** ಪು.೪೩

೨೧. ಲಕ್ಷ್ಮಣ್ ತೆಲಗಾವಿ(ಸಂ); **ದವನಸಿರಿ,** ೧೯೯೨, ಪು.೭೯

೨೨. **ಗುಡೇಕೋಟೆ : ಸಾಂಸ್ಕೃತಿಕ ಅಧ್ಯಯನ,** ಪು.೪೫

೨೩. *ಜರಿಮಲೆ ಸಂಸ್ಥಾನದ ವಂಶಾವಳಿ,* **ಚಂದ್ರವಳ್ಳಿ,** ಭಾಗ ೪, ಪು.೩೭

೨೪. **ಕರ್ನಾಟಕದ ಕೈಫಿಯತ್ತುಗಳು,** ಪು.೫೧೧

೨೫. **ದಶಮಾಪುರ ಗ್ರಾಮ ಸ್ಥಾಪನೆ ಬಗ್ಗೆ ಅದೇ ಊರಿನಲ್ಲಿರುವ ಅಪ್ರಕಟಿತ ಎರಡು ಕಂಚಿನ ಪತ್ರಗಳಿಂದ**

೨೬. ಕೃಷ್ಣಕೊಲ್ಹಾರ ಕುಲಕರ್ಣಿ(ಅನು); **ಬುಸಾತಿನೆ ಸಲಾತೀನ,** ಪು.೩೧೨

೨೭. ವಾಸುದೇವ ಬಡಿಗೇರ; **ಸಂಡೂರು ಪರಿಸರದ ಕಾರ್ತಿಕೇಯ ತಪೋವನ ಚಾರಿತ್ರಿಕ ಅಧ್ಯಯನ,** ೧೯೯೬, ಪು.೧೨

೨೮. ಮೀರಾಸಾಬಿಹಳ್ಳಿ ಶಿವಣ್ಣ; *ನಾಯಕಹಟ್ಟಿ ಪಾಳೆಯಗಾರರು,* **ದಕ್ಷಿಣ ಕರ್ನಾಟಕ ಅರಸುಮನೆತನಗಳು** ಪು.೮೫

೨೯. **ಬಳ್ಳಾರಿ ಜಿಲ್ಲಾ ಗೆಝೆಟಿಯರ್,** ಪು.೮೨

೩೦. ಎನ್.ಎಂ.ಕವಿಕುಮಾರ, ಡಾ.ವೃಷಬೇಂದ್ರಚಾರ್ (ಸಂ); **ಮುನ್ನಡೆಯ ಕೂಡ್ಲಿಗಿ,** ೧೯೯೮, ಪು.೨೯

೩೧. **ಬಳ್ಳಾರಿ ಜಿಲ್ಲಾ ಗೆಝೆಟಿಯರ್,** ಪು.೮೨

೩೨. **ಚಿತ್ರದುರ್ಗದ ಕಾಮಗೇತಿ ಅರಸರು,** ಪು.೧೫

೩೩. **ಮುನ್ನಡೆಯ ಕೂಡ್ಲಿಗಿ,** ಪು.೨೯

೩೪. ಕುಂ.ಬಾ.ಸದಾಶಿವಪ್ಪ; **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ,** ಪು.೩೧

೩೫. ಮ್ಯಾಕ್ಲೇನ್ ಸಿ.ಡಿ., **ಮ್ಯಾನುವಲ್ ಆಫ್ ಆ್ಯಡ್‌ಮಿನಿಷ್ಟ್ರೇಶನ್,** ಮದ್ರಾಸ್ ಪ್ರೆಸ್ಸಿಡೆನ್ಸಿ, ಸಂ.೩, ಪು.೮೨

೩೬. ರಾಜಪುರೋಹಿತ ಜಯತೀರ್ಥ; **ಕನಕಗಿರಿ,** ೧೯೭೫, ಪು.೧೪

೩೭. ಡಾ.ದೇವರಕೊಂಡಾರೆಡ್ಡಿ(ಸಂ); **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨, ಕೊಪ್ಪಳ ಜಿಲ್ಲೆ,** ಪು.೩೭೦

೮೮. ಅದೇ, ಪು.೩೭೦

೮೯. ಕನಕಗಿರಿ, ಪು.೨೦

೯೦. ಶರಣಬಸಪ್ಪ ಕೋಲ್ಕಾರ; ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ೧೯೯೪, (ಅಪ್ರಕಟಿತ ಎಂಫಿಲ್ ಪ್ರಬಂಧ), ಪು.೬೧

೯೧. ಸುರಪುರ ಸಂಸ್ಥಾನ ಇತಿಹಾಸ, ಪು.೭೩

೯೨. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ, ಕೊಪ್ಪಳ(ಜಿ), ಪು.೩೬೭

೯೩. ಅದೇ ಪು.೩೬೯

೯೪. ಅದೇ, ಪು.೩೭೨

೯೫. ಸುರಪುರ ಸಂಸ್ಥಾನದ ಇತಿಹಾಸ, ಪು.೧೩೦

೯೬. ಅದೇ, ಪು.೮೦, ೮೧

೯೭. ರಾಯಚೂರು ಜಿಲ್ಲಾ ಗೆಜೆಟಿಯರ್, ಪು.೭೦೨

೯೮. ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಪು.೬೯

೯೯. ಸುರಪುರ ಸಂಸ್ಥಾನದ ಇತಿಹಾಸ, ಪು.೬

೧೦೦. ಅಮರೇಶ ಯತಗಲ್; *ಗುಡಗುಂಟಿ ಸಂಸ್ಥಾನ*, (ಹರ್ತಿಕೋಟೆ ವೀರೇಂದ್ರ ಸಿಂಹ, ಡಾ.ತೇಜಸ್ವಿ ಕಟ್ಟೀಮನಿ(ಸಂ), ಘುಟ್ಟಿಹೊಸಹಳ್ಳಿ ಗಟ್ಟಿಗ, ೨೦೦೨, ಪು.೨೫

೧೦೧. ಸುರಪುರ ಸಂಸ್ಥಾನದ ಇತಿಹಾಸ, ಪು.೭

೧೦೨. ಅದೇ, ಪು.೧೧೬, ೧೧೭

೧೦೩. ಸುಜಾತಮಲ್ಲನಗೌಡ; ರಾಯಚೂರು ಜಿಲ್ಲೆಯ ಕೋಟೆಗಳು (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦೪. ಸುರಪುರ ಸಂಸ್ಥಾನದ ಇತಿಹಾಸ, ಪು.೭೩

೧೦೫. ಅದೇ, ಪು.೧೧೮, ೧೧೯, ೧೨೦

೧೦೬. ಕರ್ನಾಟಕ ಚರಿತ್ರೆ ಸಂ-೬, ಪು.೧೭೦

೧೦೭. ಪ್ರೊ.ಬಿ.ಷೇಕ್ ಅಲಿ(ಸಂ); ಕರ್ನಾಟಕ ಚರಿತ್ರೆ, ಸಂಪುಟ ೩, ಪು.೩೧೬

೧೦೮. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಪು.೨೪೮

೧೦೯. ಸುರಪುರ ಸಂಸ್ಥಾನ ಇತಿಹಾಸ, ಪು.೧೨೭, ೧೨೮, ೧೨೯

೧೧೦. ಕರ್ನಾಟಕ ಚರಿತ್ರೆ ಸಂಪುಟ ೩, ಪು.೩೧೮

೧೧೧. ಅದೇ, ಪು.೨೪೩

೧೧೨. ಹಸನ್ ಸೈಯದ್ ಸಿರಾಜುಲ್; ದಿ ಕ್ಯಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಆಫ್ ಎಚ್.ಇ.ಎಚ್. ದಿ ನಿಜಾಮ್ಸ್ ಡೊಮೆನಿಯನ್ಸ್, ಪು.೩೭

೧೧೩. ಬಿ.ಎಸ್.ಶ್ರೀನಿವಾಸನಾಯಕ; ಚಿತ್ರದುರ್ಗದ ಕಾಮಗೇತಿ ಅರಸರು, ಪು.೨

೧೧೪. ಎಂ.ಎಸ್.ಪುಟ್ಟಣ್ಣ, ಚಿತ್ರದುರ್ಗದ ಪಾಳೆಯಗಾರರು, ಪು.೨೯

೧೧೫. ಸುರಪುರ ಸಂಸ್ಥಾನದ ಇತಿಹಾಸ, ಪು.೭೮

೧೧೬. ಅದೇ, ಪು.೧೧೮

೧೧೭. ಗುಡೇಕೋಟೆ : ಸಾಂಸ್ಕೃತಿಕ ಅಧ್ಯಯನ(ಅಪ್ರಕಟಿತ ಎಂ.ಫಿಲ್ ಪ್ರಬಂಧ) ಪು.೫೫

೧೧೮. ಕರ್ನಾಟಕ ಚರಿತ್ರೆ, ಪೂರ್ವೋಕ್ತ, ಪು.೩೨೦

೧೧೯. ಚಿತ್ರದುರ್ಗದ ಪಾಳೆಯಗಾರರು, ಪು.೪೨

೧೨೦. ಎಲ್.ಕೆ.ಎ.ಅಯ್ಯರ್, ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್, ವ್ಯಾಲೂಮ್ ೩, ಪು.೨೧೧

೧೨೧. ಬಿ.ರಾಜಶೇಖರಪ್ಪ; ದುರ್ಗಶೋಧನ, ಪು.೧೩೭

೧೨೨. ಅದೇ, ಪು.೧೩೯

೧೨೩. ಚಿತ್ರದುರ್ಗದ ಪಾಳೆಯಗಾರರು, ಪು.೭೬

೧೨೪. ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಪು.೭೦

೧೨೫. ಅಮರೇಶ ಯತಗಲ್; *ಗುಡಗುಂಟಿಸಂಸ್ಥಾನ,* ಘಟ್ಟಿಹೊಸಹಳ್ಳಿಗಟ್ಟಿಗ, ಪು.೨೫

೧೨೬. ಸುರಪುರ ಸಂಸ್ಥಾನದ ಇತಿಹಾಸ, ಪು.೧೧೮

೧೨೭. ದಕ್ಷಿಣ ಕರ್ನಾಟಕದ ಅರಸುಮನೆತನಗಳು, ಪು.೮೪

೧೨೮. ಆರ್.ರಾಜಣ್ಣ; ನಾಯಕ ಜನಾಂಗದ ಇತಿಹಾಸ, ೧೯೮೨, ಪು.೯೦

೧೨೯. ಡಾ.ಚೆನ್ನಕ್ಕ ಎಲಿಗಾರ; ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ೧೯೯೦, ಪು.೭೪

೧೩೦. ಹೆಚ್.ಎಲ್.ನಾಗೇಗೌಡ, ಪ್ರವಾಸಿಕಂಡ ಇಂಡಿಯಾ, ವ್ಯಾಲೂಮ್ ೨, ೧೯೬೬

೧೩೧. ಡಾ.ಎಸ್.ಶ್ರೀಕಂಠಶಾಸ್ತ್ರಿ, ಭಾರತೀಯ ಸಂಸ್ಕೃತಿ, ೧೯೭೫, ಪು.೨೦೫

೧೩೨. ಚಿತ್ರದುರ್ಗದ ಪಾಳೆಯಗಾರರು, ಪು.೬೩

೧೩೩. ವಾಲ್ಮೀಕಿ ಬಂಧು, ಜುಲೈ ೨೦೦೨, ಪು.೧೪

೧೩೪. ವೆಂಕಟರಂಗೋ ಕಟ್ಟೀ; ಗ್ಯಾಝುಟೀಯರು, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಧಾರವಾಡ, ಬೆಳಗಾವಿ, ಬಿಜಾಪುರ, ಕಾನಡ ನಾಲ್ಕು ಜಿಲ್ಲೆಗಳಿದ್ದು, ಮುಂಬೈ ೧೮೯೩, ಪು.

೧೩೫. ಬಿ.ಎಲ್.ರೈಸ್; ಮೈಸೂರು ಗೆಝೆಟಿಯರ್ ವೆಸ್ಟ್‌ಮಿನಿಸ್ಟರ್, ೧೮೯೭, ಪು.೨೧೧

೧೩೬. ಫ್ರಾನ್ಸಿಸ್ ಬುಕಾನನ್; ಎ ಜರ್ನಿ ಫ್ರೋ ಮೈಸೂರು ಕೆನರಾಸ್ ಮಲಬಾರ್, ಸಂ.೧, ೧೮೮೮, ಪು.೭೭-೭೮.

೧೩೭. ಲಕ್ಷ್ಮಣ್ ತೆಲಗಾವಿ (ಸಂ); *ಜನಪದ ವೀರಸಾಹಿತ್ಯ: ಚಾರಿತ್ರಿಕ ವಿವೇಚನೆ,* ಹರತಿಸಿರಿ, ೧೯೮೭, ಪು.೧೦೭೯

೧೩೮. *ಕರ್ನಾಟಕದಲ್ಲಿ ಬೇಡ ನಾಯಕವೀರರ ಆರಾಧನಾ ಕ್ಷೇತ್ರಗಳು,* (ಹರ್ತಿಕೋಟೆ ವೀರೇಂದ್ರಸಿಂಹ(ಸಂ), **ವಾಲ್ಮೀಕಿ ಕಿರಣ,** ೧೯೯೮, ಪು.೪೬

೧೩೯. **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ,** ಪು.೨೪೩

೧೪೦. **ಪ್ರವಾಸಿಕಂಡ ಇಂಡಿಯಾ,** II

೧೪೧. **ಚಿತ್ರದುರ್ಗದ ಪಾಳೆಯಗಾರರು,** ಪು.೩,೪

೧೪೨. ಅದೇ, ಪು.೨೮

೧೪೩. ಅದೇ, ಪು.೩೪

೧೪೪. ಅದೇ, ಪು.೩೭

೧೪೫. **ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು,** ಪು.೧೧೪

೧೪೬. **ಕರ್ನಾಟಕ ಚರಿತ್ರೆ ಸಂಪುಟ ೪,** ಪು.೨೪೮

೧೪೭. ಡಾ.ಕೃಷ್ಣಮೂರ್ತಿ ಹನೂರು; ೧೯೯೩, **ಮ್ಯಾಸಬೇಡರ ಸಂಸ್ಕೃತಿ,** ಪು.೩೫

೧೪೮. **ಕರ್ನಾಟಕ ಚರಿತ್ರೆ ಸಂಪುಟ ೩,** ಪು.೧೬೫

೧೪೯. **ಕರ್ನಾಟಕದ ಇತಿಹಾಸ ದರ್ಶನ,** ೧೯೭೦, ಪು.೫೧೮

೧೫೦. **ಕರ್ನಾಟಕ ಚರಿತ್ರೆ,** ಪೂರ್ವೋಕ್ತ, ಪು.೧೭೦

೧೫೧. ಡಾ.ಪುರುಷೋತ್ತಮ ಬಿಳಿಮಲೆ; **ಕುಮಾರರಾಮ ಮತ್ತು ಕುಮ್ಮಟದುರ್ಗ,** ೧೯೯೯, ಪು.೩೨

೧೫೨. **ಚಂದ್ರವಳ್ಳಿ,** ಭಾಗ ೨, ಪು.೩೦, ೩೧

೧೫೩. ಡಾ.ಹೆಚ್.ಎಸ್.ಗೋಪಾಲರಾವ್(ಸಂ); **ನಾಗಾಭಿನಂದನ,** ೧೯೯೪, ಪು.೧೫೧

೧೫೪. **ಚಿತ್ರದುರ್ಗದ ಪಾಳೆಯಗಾರರು,** ೧೯೯೭, ಪೂರ್ವೋಕ್ತ, ಪು.೩

೧೫೫. **ಚಂದ್ರವಳ್ಳಿ,** ಪು.೪೧-೪೨

೧೫೬. ಎಫಿಗ್ರಾಫಿಯಾ ಕರ್ನಾಟಿಕಾ X, ಚಿತ್ರದುರ್ಗ, ಚಳ್ಳಕೆರೆ, ೧೭೩೬,

೧೫೭. ಜರ್ನಿಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಆ್ಯಂಡ್ ಮಲಬಾರ್, ವ್ಯಾಲೂಮ್ I ಪು.೩೩೯

೧೫೮. ಟಿ.ಎನ್. ಗಂಡುಗಲಿ; **ಪ್ರಮುಖ ಚಿತ್ರದುರ್ಗ,** ೧೯೯೫, ಪು.೩೨

೧೫೯. *ಚಿತ್ರದುರ್ಗ ನಾಯಕರು,* ದಕ್ಷಿಣ ಕರ್ನಾಟಕದ ಅರಸುಮನೆತನಗಳು, ೨೦೦೧, ಪು.೯

೧೬೦. ಕರ್ನಾಟಕದ ಇತಿಹಾಸ ದರ್ಶನ, ಪು.೪೭೯

೧೬೧. **ಚಿತ್ರದುರ್ಗದ ಪಾಳೆಯಗಾರರು,** ಪು.೩

೧೬೨. **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪೂರ್ವೋಕ್ತ, ಪು.೧೦೫

೧೬೩. ಪ್ರೊ.ಲಕ್ಷ್ಮಣ್ ತೆಲಗಾವಿ; **ಮಾಯಕೊಂಡ ಕಾಳಗ,** ಎಚ್.ವಿ.ವೀರನಾಯಕ(ಸಂ); ೧೮.೩.೧೯೭೩, ಕರ್ನಾಟಕ ನಾಯಕ ಜನಾಂಗದ ದ್ವಿತೀಯ ಮಹಾಸಮ್ಮೇಳನ, ಸ್ಮರಣಸಂಚಿಕೆ, ಪು.೧೦

೧೬೪. *ಮತ್ತೋಡು ಪಾಳೆಯಗಾರರು,* **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪು.೧೭೯

೧೬೫. **ಈ ಮನೆತನದ ವಂಶಸ್ಥರಾದ ರಾಜಅಮರಪ್ಪನಾಯಕರಿಂದ ತಿಳಿದುಬಂದುದು**

೧೬೬. **ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು,** ಪು.೬೮

೧೬೭. ಈ ಮನೆತನದ ವಂಶಸ್ಥರಾದ ರಾಜಾ ಶ್ರೀನಿವಾಸನಾಯಕರ ಹೇಳಿಕೆಯಿಂದ

೧೬೮. **ಸುರಪುರ ಸಂಸ್ಥಾನ ಇತಿಹಾಸ,** ಪು.೨೩

೧೬೯. **ಕರ್ನಾಟಕ ಚರಿತ್ರೆ,** ಪೂರ್ವೋಕ್ತ, ಪು.೨೪೬

೧೭೦. ರಾಜಾರಾಮ ಹೆಗಡೆ; **ಹೊಸಗುಂದದ ಅರಸರು ಮಲೆಕರ್ನಾಟಕದ ಅರಸು ಮನೆತನಗಳು,** ಪು.೧೧೪೭

೧೭೧. **ಬುಕಾನನ್ ಜರ್ನಿ,** ವ್ಯಾಲೂಮ್ ೧, ಪು.೧೭೯

೧೭೨. **ಕರ್ನಾಟಕದ ಇತಿಹಾಸ ದರ್ಶನ,** ಪು.೫೧೭

೧೭೩. ಎಂ.ವಿ.ಶ್ರೀನಿವಾಸ; *ಚಿತ್ರದುರ್ಗ ಜಿಲ್ಲೆಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆ,* **ಚಂದ್ರವಳ್ಳಿ,** ಭಾಗ ೧, ಪು.೯೭

೧೭೪. **ಚಿತ್ರದುರ್ಗದ ಪಾಳೆಯಗಾರರು,** ಪು.೧೧೯, ೧೨೦

೧೭೫. **ಕರ್ನಾಟಕದ ಇತಿಹಾಸ ದರ್ಶನ,** ಪು.೫೧೭-೫೧೮

೧೭೬. ವಿರೂಪಾಕ್ಷಿ ಪೂಜಾರಹಳ್ಳಿ; **ಬಳ್ಳಾರಿ ಜಿಲ್ಲೆಯಲ್ಲಿ ಕಲೆಕ್ಟರಗಳ ಆಳ್ವಿಕೆ : ಒಂದು ಸಮೀಕ್ಷೆ**(ಅಪ್ರಕಟಿತ ಎಂ.ಫಿಲ್ ಪ್ರಬಂಧ) ೧೯೯೫, ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು.೧೧, ೧೨

೧೭೭. **ಬುಕಾನನ್ ಜರ್ನಿ,** ವ್ಯಾಲೂಮ್ ೧, ಪು.೨೪೮, ೨೪೯

೧೭೮. **ಮ್ಯಾಸಬೇಡರ ಸಂಸ್ಕೃತಿ,** ಪು.೬೯, ೭೩

೧೭೯. ಸಮೇತನಹಳ್ಳಿ ರಾಮರಾಯ(ಅನು); **ಟಿಪ್ಪುಸುಲ್ತಾನನ ಇತಿಹಾಸ ಮೈಸೂರು,** ೧೯೮೮, ಪು.೪೯೬

೧೮೦. **ಚಿತ್ರದುರ್ಗದ ಪಾಳೆಯಗಾರರು,** ಪು.೫

೧೮೧. *ಗುಡಗುಂಟಿ ಸಂಸ್ಥಾನ,* **ಘುಟ್ಟಹೊಸಹಳ್ಳಿ ಗಟ್ಟಿಗ,** ಪು.೨೬

೧೮೨. **ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು,** ಪು.೬೮

೧೮೩. ಶ್ರೀ ವೀರಭದ್ರನಾಯಕ ಬಿ.ಎಸ್., ಶ್ರೀನಿವಾಸನಾಯಕ ಮತ್ತು ರಾಜಾ ಜಯಚಂದ್ರರಾಜರು ನೀಡಿದ ಮಾಹಿತಿಯಿಂದ

೧೮೪. ಈ ಮನೆತನದ ವಂಶಸ್ಥರಾದ ಶ್ರೀ ಕೃಷ್ಣವರ್ಮರಾಜರು ನೀಡಿದ ಮಾಹಿತಿಯಿಂದ

೧೮೫. ರಾಜಾ ಪಂಪಾಪತಿನಾಯಕ, ಜರಿಮಲೆ ಅವರು ನೀಡಿದ ಮಾಹಿತಿಯಿಂದ

೧೮೬. ಚಂದ್ರವಳ್ಳಿ (ಭಾಗ-೩), ಪು.೨೫

೧೮೭. ಈ ಮನೆತನಕ್ಕೆ ಸೇರಿದ ಪಾಳೆಯಗಾರ ಮಲ್ಲಿಕಾರ್ಜುನನಾಯಕರು ಅವರು ನೀಡಿದ ಮಾಹಿತಿಯಿಂದ.

೧೮೮. ಈ ಮನೆತನದ ವಂಶಸ್ಥರಾದ ಶಿವಸ್ವಾಮಿನಾಯಕ ನೀಡಿದ ಮಾಹಿತಿಯಿಂದ.

೧೮೯. ರಾಜಾ ಅಮರಪ್ಪನಾಯಕರು ನೀಡಿದ ಮಾಹಿತಿಯಿಂದ.

೧೯೦. ಈ ಮನೆತನದ ವಂಶಸ್ಥರಾದ ರಾಜಾ ಶ್ರೀನಿವಾಸನಾಯಕ ನೀಡಿದ ಮಾಹಿತಿಯಿಂದ.

೧೯೧. ಈ ಮನೆತನದ ವಂಶಸ್ಥರಾದ ರಾಜಾ ಕಿಲಿಚನಾಯಕ ನೀಡಿದ ಮಾಹಿತಿ ಆಧಾರಿಸಿ.

೧೯೨. **ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು,** ಪು.೬೮

೧೯೩. ಅದೇ, ಪು.೮೯

೧೯೪. ಈ ವಿಷಯವನ್ನು ರಾಜಾ ನವೀನಚಂದ್ರನಾಯಕರು ತಿಳಿಸಿದರು

೧೯೫. ರಾಜಾ ಚಚ್ಚಪ್ಪನಾಯಕ ಮತ್ತು ರಾಜಾ ಉಡಚೇಂದ್ರನಾಯಕರು ನೀಡಿದ ಮಾಹಿತಿಯಿಂದ.

೧೯೬. ಬರಗೂರು ರಾಮಚಂದ್ರಪ್ಪ; **ಮ್ಯಾಸಬೇಡರ ಸಂಸ್ಕೃತಿ** (ಪ್ರಸ್ತಾವನೆ), ೧೯೯೩, ಪು.೧೨

೧೯೭. ಅದೇ, ಪು.೧೪

೧೯೮. ಅದೇ, ಪು.೧೮

೧೯೯. **ಕರ್ನಾಟಕ ಚರಿತ್ರೆ, ಸಂಪುಟ ೩,** ೧೯೯೭, ಪು.೩೪೭

೨೦೦. ಅದೇ, ಸಂಪುಟ-೪, ಪು.೨೫೯

೨೦೧. **ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು,** ಪು.೨೭೨, ೨೭೪

೨೦೨. **ಮಲೆಕರ್ನಾಟಕದ ಅರಸು ಮನೆತನಗಳು,** ಪು.೭

೨೦೩. **ಕರ್ನಾಟಕದ ಇತಿಹಾಸ ದರ್ಶನ,** ಪು.೪೫೮

೨೦೪. ಶ್ಯಾಮಲಾರತ್ನಕುಮಾರಿ ಬಿ.ಎಸ್.; *ಹರತಿ ಪಾಳೆಯಗಾರರು,* **ದಕ್ಷಿಣ ಕರ್ನಾಟಕದ ಅರಸು ಮನೆತನಗಳು,** ಪು.೪೫೮

೨೦೫. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೨,** ಕೊಪ್ಪಳ(ಜಿ), ೧೯೯೯, ಪು.೩೬೯, ೩೭೦

೨೦೬. *ಗುಡಗುಂಟಿ ಸಂಸ್ಥಾನ,* **ಘಟ್ಟಿಹೊಸಹಳ್ಳಿ ಗಟ್ಟಿಗ,** ಪು.೨೫

೨೦೭. ಟಿ.ಗಿರಿಜ; **ಚಿತ್ರದುರ್ಗ ಜಿಲ್ಲಾ ದರ್ಶಿನಿ,** ಪು.೩೬೦, ೩೬೧

೨೦೮. ಚಂದ್ರವಳ್ಳಿ, ಪು.೮೬

೨೦೯. ಎಪಿಗ್ರಾಫಿಯಾ **ಕರ್ನಾಟಿಕಾ:** ಚಿತ್ರದುರ್ಗ, ದಾವಣಗೆರೆ, ೧೯೬೮, ಪು.೬೪

೨೧೦. **ಚಂದ್ರವಳ್ಳಿ,** ಪು.೮೭

೨೧೧. ಘುಟ್ಟಹೊಸಹಳ್ಳಿ ಗಟ್ಟಿಗ, ಪು.೪೭

೨೧೨. ಎಂ.ಎಲ್. ಶಿವಶಂಕರ, ಚನ್ನಬಸಪ್ಪ ಎಸ್.ಪಾಟೀಲ್(ಸಂ); ವಿಜಯನಗರ ಅಧ್ಯಯನ ೨, ೧೯೯೬, ಪು.೪೫

೨೧೩. ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಪು.೫೯

೨೧೪. ಅದೇ, ಪು.೬೪

೨೧೫. ಕಪಟರಾಳ ಕೃಷ್ಣರಾವ್; ಸುರಪುರ ಸಂಸ್ಥಾನ ಇತಿಹಾಸ, ೧೯೭೭, ಪು.೩

೨೧೬. ಘುಟ್ಟಹೊಸಹಳ್ಳಿ ಗಟ್ಟಿಗ, ಪು.೨೮,೨೯

೨೧೭. ಬಿ.ರಾಜಶೇಖರಪ್ಪ; ದುರ್ಗಶೋಧನ, ೨೦೦೧, ಪು.೧೯೩

೨೧೮. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಪು.೪೨

೨೧೯. ದುರ್ಗಶೋಧನ, ಪು.೧೩೭

೨೨೦. ಅದೇ, ಪು.೧೩೮

೨೨೧. ಅದೇ, ಪು.೧೩೯

೨೨೨. ಚಂದ್ರವಳ್ಳಿ, ಪು.೮೧

೨೨೩. ಜಿ.ಶಿವಕುಮಾರ ಎಂ.ಎಚ್.ಕರಿಸಿದ್ದೇಶ್ವರಸ್ವಾಮಿ(ಸಂ); ಚಿನ್ಮೂಲಾದ್ರಿ ಚೇತನ, ೧೯೮೯, ಪು.೨೦೫

೨೨೪. ಚಂದ್ರವಳ್ಳಿ, ಪೂರ್ವೋಕ್ತ, ಪು.೮೧

೨೨೫. ಚಿನ್ಮೂಲಾದ್ರಿ ಚೇತನ, ಪು.೨೦೬

೨೨೬. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಪು.೪೦

೨೨೭. ಚಿನ್ಮೂಲಾದ್ರಿ ಚೇತನ, ಪು.೨೦೭

೨೨೮. ಅದೇ, ಪು.೨೦೮

೨೨೯. ಡಾ.ಬಿ.ವ್ಹಿ.ಶಿರೂರ(ಸಂ); ಸಿದ್ಧರಾಮ ಸಂಸದ, ೧೯೯೫, ಪು.೧೭೦

೨೩೦. ಹೊಸದುರ್ಗದ ಸುತ್ತಮುತ್ತ, ಪು.೬೫

೨೩೧. ದುರ್ಗಶೋಧನ, ಪು.೧೪೨

೨೩೨. ಹೊಸದುರ್ಗದ ಸುತ್ತಮುತ್ತ, ಪು.೬೭

೨೩೩. ಸಿದ್ಧರಾಮಸಂಪದ, ಪು.೧೭೧

೨೩೪ ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.೧೭೬

೨೩೫. ಸಿದ್ಧರಾಮ ಸಂಪದ, ಪು.೧೭೨

೨೩೬. ಚಂದ್ರವಳ್ಳಿ, ಭಾಗ-೩, ಪು.೨೫

೨೩೭. ಸಿದ್ಧರಾಮ ಸಂಪದ, ಪು.೧೩೫

೨೩೮. ಅದೇ, ಪು.೧೩೬

೨೩೯. ವಿಜಯನಗರ ಅಧ್ಯಯನ ಸಂಪುಟ ೫, ಪು.೬೦

೨೪೦. ಮುನ್ನಡೆಯ ಕೂಡ್ಲಿಗಿ, ಪು.೨೩

೨೪೧. ಇತಿಹಾಸ ದರ್ಶನ ಸಂಪುಟ ೭, ಪು.೧೫೬

೨೪೨. ಸಿದ್ಧರಾಮ ಸಂಪದ, ಪು.೬೩

೨೪೩. ಅದೇ, ಪು.೧೩೯

೨೪೪. ಡಾ.ಡಿ.ವಿ.ಪರಮಶಿವಮೂರ್ತಿ; ಸಂಶೋಧನೆಯ ಸಿರಿ, ೧೯೯೬, ಪು.೧೧

೨೪೫. ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.೧೬೩

೨೪೬. ಅದೇ, ಪು.೧೬೪

೨೪೭. ಚಿತ್ರದುರ್ಗದ ದರ್ಶಿನಿ, ಪು.೩೮೫

೨೪೮. ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು, ಅನುಬಂಧ

೨೪೯ ಗುಡೇಕೋಟೆ : ಸಾಂಸ್ಕೃತಿಕ ಅಧ್ಯಯನ, ಪು.೫೦

೨೫೦. ಡಾ.ಡಿ.ಎನ್.ಯೋಗೀಶ್ವರಪ್ಪ, ಹಾಗಲವಾಡಿ ನಾಯಕರು, ೧೯೯೯, ಪು.೧೪೬

೨೫೧. ಇತಿಹಾಸ ಚಂದ್ರಿಕೆ, ಅಕ್ಟೋಬರ್ ೧೯೮೩, ಸಂಚಿಕೆ ೧೦, ೧೧ ಸಂಪುಟ-೫, ಪು.೧೬

೨೫೨. ಚಿನ್ಮೂಲಾದ್ರಿ ಚೇತನ, ಪು.೨೦೮, ೨೦೯

೨೫೩. ಎಸ್.ಬಿ.ರಂಗನಾಥ, ನಾ.ಲೋಕೇಶ್ ಒಡೆಯರ್(ಸಂ); ಪಟ್ಟಾಭಿಷೇಕ, ಪು.೧೧

೨೫೪. ಚಿತ್ರದುರ್ಗದ ಪಾಳೆಯಗಾರರು, ಪು.೩೭

೨೫೫. ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.೧೨೦

೨೫೬. ಚಿತ್ರದುರ್ಗದ ಪಾಳೆಯಗಾರರು, ಪು.೬೨

೨೫೭. ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಪು.೧೨೭

೨೫೮. ಅದೇ, ಪು.೧೨೭

೨೫೯. ಕರ್ನಾಟಕ ಕೈಫಿಯತ್ತುಗಳು, ಪು.೪೨೭

೨೬೦. ಚಂದ್ರವಳ್ಳಿ, ಭಾಗ-೨, ಪು.೧೩

೨೬೧. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಪು.೩೯೬

೨೬೨. ದಿ ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್, ಸಂ.೨, ಪು.೨೦೦

೨೬೩. ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪು.೨೯೪

೨೬೪. ಟಿಪ್ಪೂಸುಲ್ತಾನನ ಇತಿಹಾಸ, ಪು.೫೪೧

೨೬೫. ಅದೇ, ಪು.೪೮೧

೨೬೬. ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪು.೧೬೬

೨೬೭. ಸುರಪುರ ಸಂಸ್ಥಾನ ಇತಿಹಾಸ, ಪು.೨೩೯

೨೬೮. ಎಫಿಗ್ರಾಫಿಯಾ ಕರ್ನಾಟಿಕಾ, xi, ೫೧, ಕ್ರಿ.ಶ.೧೬೫೩

೨೬೯. ಅದೇ, ಜಗಳೂರು ೪೬, ಕ್ರಿ.ಶ.೧೬೮೩

೨೭೦. ಅದೇ, ಹಿರಿಯೂರು, ೫೮, ಕ್ರಿ.ಶ.೧೬೮೭

೨೭೧. ಅದೇ, ಜಗಳೂರು, ಕ್ರಿ.ಶ.೧೭೧೫

೨೭೨. ಅದೇ, ಚಿತ್ರದುರ್ಗ, ೫೬, ಕ್ರಿ.ಶ.೧೭೧೮

೨೭೩. ಅದೇ, ಹಿರಿಯೂರು, ೫೭, ಕ್ರಿ.ಶ.೧೭೨೧

೨೭೪. ಎಫಿಗ್ರಾಫಿಯಾ ಕರ್ನಾಟಿಕಾ, xi, ಹೊಳಲ್ಕೆರೆ, ೯೬

೨೭೫. ಹೊಸದುರ್ಗ ಸುತ್ತಮುತ್ತ, ಪು.೬೬

೨೭೬. ದಕ್ಷಿಣ ಕರ್ನಾಟಕದ ಅರಸುಮನೆತನಗಳು, ಪು.೧೬೫

೨೭೭. ಕರ್ನಾಟಕ ಚರಿತ್ರೆ ಸಂಪುಟ ೬, ಪು.೨೪೩-೪೪

೨೭೮. ಅದೇ, ಪು.೨೩೩

೨೭೯. ಮ್ಯಾಸಬೇಡರ ಸಂಸ್ಕೃತಿ, ಪು.೧೪೪

೨೮೦. ವಾಲ್ಮೀಕಿ ಕಿರಣ, ಪು.೪೯

೨೮೧. ಹಿ.ಚಿ.ಬೋರಲಿಂಗಯ್ಯ, ಕರ್ನಾಟಕ ಜನಪದ ಕಲೆಗಳ ಕೋಶ, ೧೯೯೬, ಪು.೨೩೯

## ಅಧ್ಯಾಯ ೫

# ಪರಿವರ್ತನೆಯ ಹಾದಿಯಲ್ಲಿ ಈಚಿನ ಬೇಡ ಜನಾಂಗ

## ೫.೧. ರಾಜಕೀಯ ಪರಿವರ್ತನೆ

ದಕ್ಷಿಣ ಭಾರತದ ಯಾವುದೇ ಭಾಗವು ಬ್ರಿಟೀಷರಿಗೆ ಪ್ರತಿರೋಧ ಒಡ್ಡದೆ ಶರಣಾಗಲಿಲ್ಲ. ಆದರೆ ಇಂಥಾ ಪ್ರಬಲ ಪ್ರತಿರೋಧಕ್ಕೆ ಕಾರಣರಾದವರೆಂದರೆ ಪಾಳೆಯಗಾರರು; ಮುಖ್ಯವಾಗಿ ಬೇಡ ಜನಾಂಗದ ಪಾಳೆಯಗಾರರು. ತಮ್ಮ ತಮ್ಮಲ್ಲಿಯೇ ಕಾದಾಡುತ್ತಿದ್ದ ಪಾಳೆಯಗಾರರನ್ನು ವ್ಯವಸ್ಥಿತವಾಗಿ ಪ್ರತ್ಯೇಕಿಸಲಾಯಿತು ಹಾಗೂ ಪರಾಭವಗೊಳಿಸಲಾಯಿತು. ಹದ್ದುಬಸ್ತಿಗೆ ಬಾರದವರನ್ನು ಕೊಲ್ಲಲಾಯಿತು ಮತ್ತು ಉಳಿದವರನ್ನು ನಿರ್ಬಂಧ ಸ್ಥಿತಿಯಲ್ಲಿಡಲಾಯಿತು. ಬ್ರಿಟೀಷರ ಬಲದೆದುರು ತತ್ತರಿಸಿದ ಈ ಪಾಳೆಯಗಾರರು ತಮ್ಮ ತಮ್ಮೊಳಗಿನ ಸ್ಪರ್ಧೆಯಿಂದಾಗಿ ಐಕ್ಯತೆ ಸಾಧಿಸಲಾಗಲಿಲ್ಲ. ಹೀಗಾಗಿ ಬ್ರಿಟೀಷರು ಭಾರತದ ಮೇಲೆ ತಮ್ಮ ಅಧಿಕಾರವನ್ನು ಸ್ಥಾಪಿಸಲು ಇದು ಅವಕಾಶ ಕಲ್ಪಿಸಿಕೊಟ್ಟಂತಾಯಿತು. ಇದು ಬ್ರಿಟೀಷರು ಸ್ಥಳೀಯ ಪಾಳೆಯಗಾರರನ್ನು ಬಗ್ಗುಬಡಿದ ವಿಧಾನವಾದರೆ, ಇನ್ನು ಹೈದ್ರಾಬಾದಿನ ನಿಜಾಮನು ಸಹ ಮಾಡಿದುದು ಇದನ್ನೆ. ಹೈದ್ರಾಬಾದಿನ ನಿಜಾಮ ಅಥವಾ ಬ್ರಿಟೀಷರಲ್ಲಿ ಒಬ್ಬರಿಗೆ ಮಿತ್ರರು ಅಥವಾ ಶತ್ರುಗಳಾದವರು ಇಬ್ಬರಿಗೂ ಮಿತ್ರರು ಅಥವಾ ಶತ್ರುಗಳಾಗುತ್ತಾರೆ ಎಂದು ಘೋಷಿಸಿದನು.[೧] ಬ್ರಿಟೀಷರ ಮತ್ತು ನಿಜಾಮರ ನೀತಿಯಿಂದಾಗಿ ೨೩೫ ವರ್ಷಗಳ ಕಾಲ ಅಧಿಕಾರದ ಗದ್ದುಗೆಯಲ್ಲಿ ವಿರಾಜಿಸಿದ ಸ್ಥಳೀಯ ಪಾಳೆಯಗಾರ ವಂಶಸ್ಥರ ಸ್ಥಿತಿ ಚಿಂತಾಜನಕವಾಯಿತು. ರಾಜಕೀಯವಾಗಿ ಅವರನ್ನು ಮೂಲೆಗುಂಪು ಮಾಡಲಾಯಿತು. ಅಲ್ಲದೆ ಸಾಮಾಜಿಕ, ಸಾಂಸ್ಕೃತಿಕ ರಂಗಗಳಲ್ಲಿ ಮೊದಲಿದ್ದ ಗೌರವಕ್ಕೆ ದಕ್ಕೆ ತಂದರು. ರಾಜಕೀಯವಾಗಿ ಪ್ರಾಮುಖ್ಯತೆ ಹೊಂದಿದ್ದ ಪಾಳೆಯಗಾರ ಪದಕ್ಕೆ ಅಪಾರ್ಥ ಬರುವಂತೆ ಮಾಡಿದರು. ಪಾಳೆಯಗಾರರಿಗೆ ಹುದ್ದೆಗಳನ್ನು ನೀಡುವ ಮೂಲಕ ಇನ್ನಷ್ಟು ಇಕ್ಕಟ್ಟಿನ ಸ್ಥಿತಿಗೆ ತಳ್ಳಿದರು. ಹಿಂದೆ ಇಡೀ ಊರಿನ ರಕ್ಷಣೆಯ ಜವಾಬ್ದಾರಿ ಹಾಗೂ ಗೌರವಯುತ ಕಾಯಕವಾಗಿದ್ದ ತಳವಾರಿಕೆ ಹುದ್ದೆಯನ್ನು ಗೌಡ, ಕುಲಕರ್ಣಿ, ಶ್ಯಾನಭೋಗ, ಗ್ರಾಮಲೆಕ್ಕಿಗರ ಕೈಚೀಲ ಹಿಡಿಯುವಂತೆ ಪರಿವರ್ತಿಸ ಲಾಯಿತು. ಅಲ್ಲದೆ ಬೇಡರು ಅಧಿಕಾರ, ಆಸ್ತಿ, ಅಂತಸ್ತು, ಮಾರ್ಯದೆ ಮುಂತಾದವುಗಳನ್ನು ಕಳೆದುಕೊಳ್ಳುತ್ತಾ ಬರಲು ಬ್ರಿಟೀಷರು ಮುಖ್ಯ ಕಾರಣರಾದರು. ಅತೃಪ್ತಿ ಹಾಗೂ ಅಸಮಾಧಾನದ ಹೊಗೆ ಅಧಿಕಾರ ವಂಚಿತ ಪಾಳೆಯಗಾರರಲ್ಲಿ ಇತ್ತು. ಕೆಲವು ಕಡೆ ಕ್ರಿ.ಶ. ೧೮೫೭ರಲ್ಲಿ ಅದು ಪ್ರತಿಧ್ವನಿಸಿತಾದರೂ ಬ್ರಿಟೀಷರ ತಂತ್ರಗಾರಿಕೆ ಮುಂದೆ ಅದರ ಪರಿಣಾಮ ಏನೂ ಆಗಲಿಲ್ಲ. ಕ್ರಮೇಣ ಬ್ರಿಟೀಷರು ಕೊಟ್ಟ ಮಾಸಾಶನ, ಸ್ಥಾನಮಾನ,

ಕೊಡುಗೆಗಳನ್ನು ತಲೆ ಬಾಗಿ ಸ್ವೀಕರಿಸುತ್ತಾ ಹೋಗುವುದಷ್ಟೇ ಉಳಿಯಿತು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವಂಥಾ ಧೈರ್ಯ, ಉತ್ಸಾಹಗಳು ಈ ಮಾಜಿ ಸಂಸ್ಥಾನಿಕರಲ್ಲಿ ಬರಲಿಲ್ಲ. ಅದುಬಂದಿದ್ದರೆ ೧೮೫೭ಕ್ಕೆ ಮೊದಲು ಅಷ್ಟೇ.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬ್ರಿಟೀಷರ ವಿರುದ್ಧ ಹೆಬ್ಬುಲಿಗಳಂತೆ ಘರ್ಜಿಸಿದವರಲ್ಲಿ ಬೇಡ ಜನಾಂಗದವರು ಅಗ್ರಸ್ಥಾನ ಪಡೆದಿದ್ದಾರೆ. ಸ್ವಾತಂತ್ರ್ಯ ಇಲ್ಲವೆ ಸಾವು ಎಂಬ ಆದರ್ಶವನ್ನು ಪ್ರಾತ್ಯಕ್ಷೆಯೊಡನೆ ತೋರಿದರು. ಕ್ರಿ.ಶ.೧೮೫೭ರ ದಂಗೆಯಲ್ಲಿ ಹಲಗಲಿ ಬೇಡರು ಮತ್ತು ಸುರಪುರದ ದೊರೆ ನಡೆಸಿದ ಹೋರಾಟದಲ್ಲಿ ಬೇಡರ ಸ್ವಾತಂತ್ರ್ಯ ಪ್ರೇಮವನ್ನು ಗುರುತಿಸಬಹುದು. ಈ ಮುನ್ನ ಕ್ರಿ.ಶ.೧೮೩೧ರಲ್ಲಿ ತರೀಕೆರೆ (ಸಂತೆಬೆನ್ನೂರು) ಸರ್ಜಾರಂಗಪ್ಪನಾಯಕ ಮತ್ತು ಸರ್ಜಾಹನುಮಪ್ಪನಾಯಕರು ಬ್ರಿಟೀಷರ ವಿರುದ್ಧ ಹೋರಾಡಿದ ವೀರಗಾಥೆಗಳು ಜನರ ಮನದಾಳದಲ್ಲಿ ಇಂದಿಗೂ ಹಚ್ಚಹಸಿರಾಗಿವೆ. ರಂಗಪ್ಪ ನಾಯಕರನ್ನು ಹಿಡಿದುಕೊಟ್ಟವರಿಗೆ ೧೦೦೦ ಪಗೋಡಗಳ ಬಹುಮಾನ ಕೊಡುವುದಾಗಿ ರೆಸಿಡೆಂಟನು ಕ್ರಿ.ಶ.೧೮೩೧ ಏಪ್ರಿಲ್ ೧ರಂದು ಪ್ರಕಟಿಸಿದ್ದನು.[೨] ಆಂಗ್ಲರನ್ನು ಭಾರತದಿಂದಲೇ ಓಡಿಸಬೇಕೆಂಬ ಹೆಬ್ಬಯಕೆ ರಂಗಪ್ಪನಾಯಕನು ಹೊಂದಿದ್ದನು. ಅವನು ಮೈಸೂರು ಸೈನ್ಯದಲ್ಲಿದ್ದ ಬೇಡರ ಕಂದಚಾರ ಸಿಪಾಯಿಗಳನ್ನು ಸೇರಿಸಿಕೊಂಡು ಬ್ರಿಟೀಷರ ವಿರುದ್ಧ ಹೋರಾಡುತ್ತಲೇ ಮರಣ ಹೊಂದಿದನು.[೩] ಸರ್ಜಾಹನುಮಪ್ಪನಾಯಕನು ತಂದೆ ರಂಗಪ್ಪನಾಯಕನಂತೆಯೇ ಸ್ವಾತಂತ್ರ್ಯ ಪ್ರೇಮಿಯಾಗಿ, ಹೋರಾಟಗಾರನೂ ಆಗಿದ್ದನು. ಇವನನ್ನು ನೇರವಾಗಿ ಹಿಡಿಯಲಾಗದ ಬ್ರಿಟೀಷರು ಅವನ ಸೂಳೆಯ ಸಹಾಯದಿಂದ ಸೆರೆ ಹಿಡಿದು ಬೆಂಗಳೂರಿನ ಗುಟ್ಟಹಳ್ಳಿ ವನ ಪ್ರದೇಶದಲ್ಲಿ ಗಲ್ಲಿಗೆ ಹಾಕಿದರು(ಕ್ರಿ.ಶ.೧೮೩೨).[೪] ಈ ಮುನ್ನ ಕ್ರಿ.ಶ.೧೮೨೪ರಲ್ಲಿ ನಡೆದ ಕಿತ್ತೂರಿನ ಬಂಡಾಯದಲ್ಲಿ ಪ್ರಮುಖ ಪಾತ್ರಧಾರಿಯಾಗಿದ್ದ ಸಂಗೊಳ್ಳಿರಾಯಣ್ಣನು ಬೇಡ ಜನಾಂಗದವನು ಎಂಬುದನ್ನು ಬಾಂಬೆ ಪ್ರಾಂತ್ಯದ ಗೆಜೆಟಿಯರ್ ತಿಳಿಸುತ್ತದೆ.[೫] ಮಲೆನಾಡು ಜನಸಂಖ್ಯೆ ಕೇವಲ ಶೇ.೪ರಷ್ಟಿದ್ದ ಬೇಡರು ಬ್ರಿಟೀಷರ ವಿರುದ್ಧ ಮಿಕ್ಕ ಹಲವು ಸಮುದಾಯಗಳಿಗಿಂತಲೂ ಉತ್ತಮವಾಗಿ ಒಗ್ಗಟ್ಟಾಗಿದ್ದರು. ಏಕೆಂದರೆ ಆಡಳಿತದ ಅನೇಕ ಮಿಲಿಟರಿ ಮತ್ತು ಸಿವಿಲ್ ಅಧಿಕಾರ ಸ್ಥಳಗಳಲ್ಲಿ ಅವರಿದ್ದರು.[೬]

ಕ್ರಿ.ಶ.೧೮೫೭ರಲ್ಲಿ ನಡೆದ ಭಾರತದ ಮೊದಲ ಸ್ವಾತಂತ್ರ್ಯ ಸಂಗ್ರಾಮದ ಬಿಸಿ ಕರ್ನಾಟಕಕ್ಕೂ ತಟ್ಟಿತು. ಮಹಾರಾಷ್ಟ್ರದ ರಾಜಕೀಯ ಪ್ರತಿನಿಧಿ ಲೆಫ್ಟಿನೆಂಟ್ ಕರ್ನಲ್ ಸೆಟನ್‌ಕರ್‌ನು ಒಂದು ಶಾಸನವನ್ನು ಜಾರಿಗೆ ತಂದನು. ಅಪಾಯಕಾರಿಯಾದ ಶಸ್ತ್ರಾಸ್ತ್ರಗಳನ್ನು ಹೊಂದಿರುವವರು ಯಾರೇ ಆಗಲಿ ನಿಶ್ಚಿತ ದಿನಾಂಕದೊಳಗೆ ಅವುಗಳನ್ನು ತಂದು ಕಾರುಬಾರಿಗಳ ಕಚೇರಿಗಳಲ್ಲಿ ಒಪ್ಪಿಸಿ ನೋಂದಾಯಿಸಿ ಕೊಂಡು ಲೈಸೆನ್ಸ್ ಪಡೆಯಬೇಕೆಂದು ವಿಧಿಸಿದರು. ಒಂದು ವೇಳೆ ನೋಂದಾವಣೆ ಮಾಡಿಸದೇ ಇದ್ದಲ್ಲಿ ಬಲತ್ಕಾರವಾಗಿ

ಶಸ್ತ್ರಾಸ್ತ್ರಗಳನ್ನು ಕಸಿದುಕೊಳ್ಳಲಾಗುವುದು. ಈ ಆಜ್ಞೆ ಮುಧೋಳ ಸಂಸ್ಥಾನದ ಕಾರುಬಾರಿ ಕೃಷ್ಣರಾಯನ ಮೂಲಕ ಹಲಗಲಿ ಬೇಡರಿಗೆ ಸುದ್ದಿ ಮುಟ್ಟಿತು. ಇದರಿಂದ ಸಿಟ್ಟಿಗೆದ್ದ ಬೇಡರು 'ಪ್ರಾಣಕೊಟ್ಟೇವು ಹೊರತು ಅಸ್ತ್ರಗಳನ್ನು ಒಪ್ಪಿಸಲಾರೆವು' ಎಂದು ನಿರ್ಧರಿಸಿದರು. ಶಸ್ತ್ರಾಸ್ತ್ರಗಳನ್ನು ಒಪ್ಪಿಸುವುದೆಂದರೆ ತಮ್ಮ ಪ್ರಾಣವನ್ನೇ ಒಪ್ಪಿಸಿದಂತೆ ಎಂದು ತೀರ್ಮಾನಿಸಿದರು. ಇಡೀ ಹಲಗಲಿ ಗ್ರಾಮವೇ ಬ್ರಿಟಿಷರನ್ನು ಎದುರಿಸಲು ಸಿದ್ಧವಾಯಿತು. ಜಡೇಜಿಯಾ ಮತ್ತು ಬಲ್ಯ ಬಂಡಾಯದ ನೇತೃತ್ವವನ್ನು ವಹಿಸಿದರು. ೨೯.೧೧.೧೮೫೭ರಂದು ಸೆಟನಕರ್ ಸೈನ್ಯ ಹಲಗಲಿಗೆ ಬಂದಿತು. ಬೇಡನಾಯಕರು ಯಾವುದಕ್ಕೂ ಹೆದರದೇ ಬ್ರಿಟೀಷ್ ಸೈನ್ಯದ ವಿರುದ್ಧ ಹೋರಾಟಕ್ಕಿಳಿದರು. ಬೇಡರು ಶರಣಾಗದೇ ಹೋರಾಟವನ್ನು ಮುಂದುವರಿಸಿದರು. ಬ್ರಿಟೀಷ್ ಸೈನ್ಯವು ಅವರನ್ನು ಎದುರಿಸಲು ಆಗಲಿಲ್ಲ. ಕೊನೆಗೆ ಬೇಡರ ಗುಡಿಸಲುಗಳಿಗೆ ಬೆಂಕಿಯನ್ನು ಹಚ್ಚಿದರು. ಆಗಲೂ ಬೇಡರು ಪ್ರಾಣಕ್ಕೆ ಹೆದರಲಿಲ್ಲ. ಕೆಲವರು ಗುಡಿಸಲೊಳಗೇ ಬೆಂದರು. ಬೆಂಕಿ ಹತ್ತಿದ ಗುಡಿಸಲೊಳಗಿನಿಂದ ಪ್ರಾಣದ ಹಂಗು ತೊರೆದು ಹೋರಾಡಿದರು. ಆದರೆ ಕೊನೆಗೆ ಬೇಡರ ಹೋರಾಟಕ್ಕೆ ಸೋಲಾಯಿತು. ೨೯೦ ಮಂದಿಯನ್ನು ಬ್ರಿಟೀಷರು ಕೈಸೆರೆ ಮಾಡಿಕೊಂಡರು. ೧೩ ಮಂದಿ ಮುಖಂಡರನ್ನು ಮುಧೋಳ ಸಂತೆಯ ದಿನದಂದು, ಅಂದರೆ ೧೧.೧೨.೧೮೫೭ರಂದು ಗಲ್ಲಿಗೇರಿಸಿದರು. ಉಳಿದ ಆರು ಮಂದಿಯನ್ನು ೧೪.೧೨.೧೮೫೭ರಂದು ಹಲಗಲಿಗೆ ಕರೆತಂದು ಗಲ್ಲಿಗೇರಿಸಲಾಯಿತು. ಕೆಲವರು ದಿಕ್ಕಾಪಾಲಾಗಿ ಓಡಿದರು. ಕೆಲವರು ಸುರಪುರ ಸೇರಿದರು.[೭] ಗುಡಿಗಿಯಾ, ಸನ್ನದಿಬಾಲ, ಪೂಜಾರಿಹಣಮ, ರಾಮ ಮುಂತಾದ ಬೇಡ ನಾಯಕರು ಸ್ವಾತಂತ್ರ್ಯದ ಕಿಚ್ಚಿನಲ್ಲಿ ಸುಟ್ಟರೂ ಕನ್ನಡಿಗರ ಮನದಾಳದಲ್ಲಿ ಇಂದಿಗೂ ಉಳಿದಿದ್ದಾರೆ.

ಸುರಪುರವು ಬೇಡರ ಪ್ರಸಿದ್ಧ ಸಂಸ್ಥಾನ. ಶೌರ್ಯ, ಪರಾಕ್ರಮಗಳಲ್ಲಿ ಸ್ವಾತಂತ್ರ್ಯ ಪ್ರೇಮದಲ್ಲಿ ಪ್ರಜೆಗಳು ಪ್ರಭುಗಳನ್ನು ಪ್ರಭುಗಳು ಪ್ರಜೆಗಳನ್ನು ಮೀರಿಸುತ್ತಿದ್ದರು.[೮] ಹಲಗಲಿ ಬಂಡಾಯ ಬ್ರಿಟಿಷರನ್ನು ಒಡೆದೆಬ್ಬಿಸಿತು. ಅಲ್ಲಿ ತೋರಿದ ಬೇಡ ನಾಯಕರ ಹೋರಾಟ ಮತ್ತು ಸ್ವಾತಂತ್ರ್ಯ ಪ್ರೇಮ ಕರ್ನಾಟಕದ ಜನರ ಹೃದಯವನ್ನು ಗೆದ್ದಿತು. ಕಾಲವನ್ನು ಸೂಕ್ಷ್ಮವಾಗಿ ಗ್ರಹಿಸಿದ ಬ್ರಿಟಿಷರು ಸುರಪುರದ ಕಡೆ ಗಮನಹರಿಸಿದರು. ಡಾಲ್‌ಹೌಸಿಯು ೧೦.೦೩.೧೮೫೩ರಲ್ಲಿ 'ಸುರಪುರಕ್ಕೆ ಒಂದು ಪತ್ರವನ್ನು ಕಳುಹಿಸಿ ಸುರಪುರದಲ್ಲಿ ಓರ್ವ ಬ್ರಿಟೀಷ್ ರಾಜಕೀಯ ಸಲಹೆಗಾರರನ್ನು ನೇಮಿಸಿಕೊಳ್ಳಬೇಕು; ಅವನ ವೆಚ್ಚಕ್ಕಾಗಿ ವರ್ಷಕ್ಕೆ ೨೦,೦೦೦ ರೂ ಕೊಡಬೇಕು' ಎಂದು ಆಜ್ಞೆ ಮಾಡಿದ್ದನು.[೯] ಇದು ವೆಂಕಟಪ್ಪನಾಯಕನನ್ನು ಕೆಣಕಿತು. ಈ ಸಮಯದಲ್ಲಿ ಹಲಗಲಿಯಲ್ಲಿ ಬ್ರಿಟೀಷರ ವಿರುದ್ಧ ನಡೆದ ಬಂಡಾಯ ವೆಂಕಟಪ್ಪನಾಯಕನಿಗೆ ಸ್ಫೂರ್ತಿಯನ್ನು ತಂದಿತ್ತು; ಅವನು ಸೈನ್ಯವನ್ನು ಸಂಘಟಿಸಿದನು. ವೆಂಕಟಪ್ಪನಾಯಕನನ್ನು ಸೋಲಿಸುವುದು ಬ್ರಿಟೀಷರಿಗೆ ಅಸಾಧ್ಯವಾಗಿತ್ತು. ನಿಜಾಮನ ಸಹಾಯದಿಂದ ಬ್ರಿಟಿಷ ಸೈನ್ಯವು ಸುರಪುರವನ್ನು ಮುತ್ತಿತು.

ಆಗಲೂ ವೆಂಕಟಪ್ಪನಾಯಕನನ್ನು ಕೊಲ್ಲುವುದಾಗಲೀ, ಸೆರೆ ಹಿಡಿಯುವುದಾಗಲೀ ಕಷ್ಟವಾಯಿತು. ನಂತರ ಬ್ರಿಟೀಷರು ತಮ್ಮ ಕುಟೀಲ ನೀತಿಯನ್ನು ಬಳಸಿ ವಾನಗೇರೆ ಭೀಮರಾಯ ಎಂಬ ವೆಂಕಟಪ್ಪನಾಯಕನ ಆಪ್ತನನ್ನು ತಮ್ಮ ಕಡೆಗೆ ಸೆಳೆದುಕೊಂಡರು. ಅವನ ಸಹಾಯದಿಂದ ವೆಂಕಟಪ್ಪನಾಯಕನನ್ನು ಸೆರೆಹಿಡಿದರು. ನಂತರ ಹೈದ್ರಾಬಾದಿಗೆ ನಾಯಕನನ್ನು ಕರೆದೊಯ್ಯುವಾಗ, ಬ್ರಿಟೀಷರ ಕಾವಲಿನಲ್ಲಿ ಬದುಕುವುದಕ್ಕಿಂತ ಸಾವೇ ಲೇಸೆಂದು ಸ್ವತಃ ಗುಂಡು ಹೊಡೆದುಕೊಂಡು ಪ್ರಾಣತ್ಯಾಗ ಮಾಡಿದನು.[೧೦] ವೆಂಕಟಪ್ಪ ಆಗಿನ್ನು ನಾಯಕನಿಗೆ ೨೪ ವರ್ಷ ವಯಸ್ಸು. ಬೇಡ ಜನಾಂಗದ ಕ್ಷಾತ್ರ ತೇಜದ ನಕ್ಷತ್ರವೊಂದು ಮರೆಯಾಯಿತು.

ಬ್ರಿಟೀಷರು ಬೇಡರನ್ನು ಜಾಣತನದಿಂದ ಬಗ್ಗು ಬಡಿದಿದ್ದರಿಂದ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವ ಧೈರ್ಯ ಬೇಡರಲ್ಲಿ ಬರಲಿಲ್ಲ. ತಮ್ಮಲ್ಲಿದ್ದ ಅಸ್ತ್ರಗಳನ್ನು ಮನೆಯೊಳಗೇ ಅಡಗಿಸಿಕೊಟ್ಟು ಕೊಂಡರು. ಆದರೂ, ಕೆಲವರು ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದುಂಟು. ಸಾವಿರಾರು ಜನರು ಗಾಂಧೀಜಿಯವರ ಬೆನ್ನೆಲುಬಾಗಿ ನಿಂತರೂ ಅವರಲ್ಲಿ ಯಾರೂ ಚರಿತ್ರೆ ಸೇರಲಿಲ್ಲ. ದಾಖಲೆಯಾದವರ ಪೈಕಿ ಬೇಡರ ವೀರ ಸಿಂಧೂರಲಕ್ಷ್ಮಣನು ಬ್ರಿಟೀಷರಿಗೆ ಚಳ್ಳೆಹಣ್ಣುತಿನ್ನಿಸುತ್ತಾ ತಪ್ಪಿಸಿಕೊಳ್ಳುತ್ತಾ ಅವರಿಗೆ ಸಿಂಹಸ್ವಪ್ನವಾಗಿದ್ದನು. ಅವನ ಧೈರ್ಯ, ಸಾಹಸ ಮತ್ತು ಸ್ವಾತಂತ್ರ್ಯ ಪ್ರೇಮಗಳು ಜನಮನ್ನಣೆಗಳಿಸಿದವು. ಗಾಂಧೀಜಿಯವರ ನಡೆಸಿದ ಸತ್ಯಾಗ್ರಹಗಳಲ್ಲಿ ಅನೇಕ ಬೇಡ ಜನರು ಭಾಗವಹಿಸಿದರು. ೧೯೩೯ ರಲ್ಲಿ ಅರಣ್ಯ ಸತ್ಯಾಗ್ರಹವು ಕರ್ನಾಟಕದಲ್ಲಿ ಯಶಸ್ವಿಯಾಯಿತು. ಚಿತ್ರದುರ್ಗದ ಎ. ಭೀಮಪ್ಪನಾಯಕರು ಈ ಚಳುವಳಿಯಲ್ಲಿ ಭಾಗವಹಿಸಿದ್ದು, ಒಂದು ವರ್ಷ ಜೈಲು ಶಿಕ್ಷೆ ಅನುಭವಿಸಿದರು. ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಅಸಂಖ್ಯ ಜನರು ಭಾಗವಹಿಸಿದರು. ಭೀಮಪ್ಪನಾಯಕರೂ ಈ ಚಳುವಳಿಯಲ್ಲಿ ಭಾಗವಹಿಸಿದ್ದು, ಚಿತ್ರದುರ್ಗ ಮತ್ತು ಬೆಂಗಳೂರು ಜೈಲುಗಳಲ್ಲಿ ಶಿಕ್ಷೆಯನ್ನು ಅನುಭವಿಸಿದರು. ವಿದ್ಯಾರ್ಥಿಯಾಗಿದ್ದ ಘಟ್ಟಿಹೊಸಹಳ್ಳಿಯ ಸಿ. ಮಲೆಸಿದ್ಧಪ್ಪನವರು ಈ ಚಳುವಳಿಯಲ್ಲಿ ಭಾಗವಹಿಸಿದರು ಮತ್ತು ಎರಡು ತಿಂಗಳ ಜೈಲು ಶಿಕ್ಷೆ ಅನುಭವಿಸಿದರು. ಬ್ರಿಟೀಷರ ವಿರುದ್ಧ ನಡೆದ ಅನೇಕ ಚಳುವಳಿಗಳಲ್ಲಿ ಬೇಡರು ಭಾಗವಹಿಸಿದ್ದರಾದರೂ ಅವರು ಚರಿತ್ರೆಯಲ್ಲಿ ದಾಖಲೆಯಾಗಿರುವುದು ಕಡಿಮೆ. ೧೯೪೭ರಲ್ಲಿ ಭಾರತ ಸ್ವಾತಂತ್ರ್ಯ ಪಡೆದರೂ, ೧೯೪೮ರವರೆಗೂ ಹೈದ್ರಾಬಾದಿನ ನಿಜಾಮನು ಭಾರತದೊಳಗೆ ವಿಲೀನವಾಗಲು ಒಪ್ಪಲಿಲ್ಲ. ನಿಜಾಮನ ಪ್ರದೇಶದೊಳಗೆ ತಡವಾಗಿ ಸ್ವಾತಂತ್ರ್ಯ ಹೋರಾಟ ಕಂಡು ಬಂದಿತ್ತು. ನಂತರದ ದಿನಗಳಲ್ಲಿ ರಜಾಕಾರರ ದಬ್ಬಾಳಿಕೆ, ಹಿಂಸೆಗಳನ್ನು ವಿರೋಧಿಸಿ ಹೈದ್ರಾಬಾದ್ ಕರ್ನಾಟಕದಲ್ಲಿ ವಿಮೋಚನಾ ಚಳುವಳಿ ತುಂಬಾ ಪ್ರಭಾವವನ್ನು ಪಡೆದುಕೊಂಡಿತು. ಅನೇಕರು ಈ ಚಳುವಳಿಯಲ್ಲಿ ಭಾಗವಹಿಸಿದರು. ಈಗಿನ ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲೂಕಿನ ಕುಮರಿಕೊಪ್ಪ ಸಣ್ಣ ಗ್ರಾಮವಾದರೂ ಸಂಪೂರ್ಣ ಬೇಡ ಜನಾಂಗದವರಿಂದ

ಕೂಡಿದೆ. ಇಲ್ಲಿಯ ಸುಮಾರು ೨೨ ಜನರು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ದೇಶಭಕ್ತಿಯನ್ನು ತೋರಿದ್ದಾರೆ. ದೊಡ್ಡ ಧರ್ಮಪ್ಪ ತುಮರಿಕೊಪ್ಪ, ಸಣ್ಣಹನುಮಪ್ಪ, ಹನುಮಪ್ಪ ತಳವಾರ, ಬಸಪ್ಪವಾಲೀಕಾರ ಹಾಗೂ ಬಾಲಪ್ಪ ಭೀಮನಗೌಡ. ಅವರಲ್ಲಿ ಪ್ರಮುಖರು ಕುಷ್ಟಗಿಯ ಪರಶುರಾಮನಾಯಕ, ಯಲಬುರ್ಗಾದ ಮುದಿಯಪ್ಪ ತಳವಾರ ಮುಂತಾದವರು ವಿಮೋಚನಾ ಚಳುವಳಿಯಲ್ಲಿ ಭಾಗವಹಿಸಿದ್ದರು. ಈ ಚಳುವಳಿಯಲ್ಲಿ ಭಾಗವಹಿಸಿದ್ದ ಕನಕಗಿರಿಯ ಜಯತೀರ್ಥ ರಾಜಪುರೋಹಿತರನ್ನು ಪೋಲಿಸರು (ರಜಕಾರರು) ಹಿಡಿಯಲು ಬಂದಾಗ ಬೇಡರಾದ ಗೌರೀಪುರದ ಬಾಳನಗೌಡ ಮತ್ತು ಅವನ ಸಹೋದರರು ಶೂರತನ ದಿಂದ ತಮ್ಮ ಬಂದೂಕಗಳನ್ನು ತೆಗೆದುಕೊಂಡು ಅವರನ್ನು ಎದುರಿಸಿ ನಿಂತರು.[೧೧] ಸಂಸ್ಥಾನಿಕರು ಸಾಮಾನ್ಯ ಜನರಂತೆ ನಿಜಾಮನನ್ನು ಎದುರು ಹಾಕಿಕೊಳ್ಳಲಿಲ್ಲ. ಅವರು ನಿಜಾಮನ ವಜ್ರಮುಷ್ಟಿಯಲ್ಲಿ ಬಂಧಿತರಾಗಿದ್ದರು. ಹಾಗೂ ಧೈರ್ಯವಾಗಿ ನಿಜಾಮನನ್ನು ಎದುರಿಸುವ ಶಕ್ತಿ ಅವರಿಗೆ ಕಳೆದುಕೊಂಡಿದ್ದರು.

ಸ್ವಾತಂತ್ರ್ಯ ನಂತರದ ರಾಜಕೀಯದಲ್ಲಿ ಸಂಸ್ಥಾನಿಕರು ಮೂಲೆಗುಂಪಾದರು. ಪ್ರಜಾಪ್ರಭುತ್ವದ ನಡುವೆ ಅರಸುಪ್ರಭುತ್ವ ಬಳಲಿಹೋಯಿತು. ಬೇಡ ಸಂಸ್ಥಾನಿಕರು ಅಧಿಕಾರವಂಚಿತರಾದರೂ ತಮ್ಮ ಹಳೆಯ ದರ್ಪದ ವರ್ತನೆಯನ್ನು ಬಿಡಲಿಲ್ಲ. ತಮ್ಮ ಆಸ್ತಿ, ಅಂತಸ್ತು ಕಡಿಮೆಯಾಗುತ್ತಾ ಬಂದರೂ ರಾಜಪ್ರಭುತ್ವ ಆಚರಣೆಗಳನ್ನು ಬಿಡಲೊಪ್ಪಲಿಲ್ಲ. ಸಾರ್ವತ್ರಿಕ ಚುನಾವಣೆಗಳಲ್ಲಿ ಸ್ಪರ್ಧಿಸುವ ಮನಸ್ಸು ಮಾಡಲಿಲ್ಲ. ರಾಜಕೀಯದಲ್ಲಿ ಭಾಗವಹಿಸುವುದು ತಮ್ಮ ಗೌರವಕ್ಕೆ ಕುಂದೆಂಬುದು ಅವರ ಅಭಿಮತ. ಆರ್ಥಿಕವಾಗಿ, ರಾಜಕೀಯವಾಗಿ ತೀರಾ ಕೆಳಮಟ್ಟಕ್ಕೆ ತಳ್ಳಲ್ಪಟ್ಟಾಗ ಅನಿವಾರ್ಯವಾಗಿ ರಾಜಕೀಯದಲ್ಲಿ ಭಾಗವಹಿಸಲು ಇಚ್ಛಿಸಿದರು. ಆದರೆ ಈ ವೇಳೆಗೆ ನೇರ ಸ್ಪರ್ಧೆಗೆ ಇಳಿಯುವಷ್ಟು ಜನಪ್ರಿಯತೆ, ಆರ್ಥಿಕ ಸಬಲತೆ, ರಾಜಕೀಯ ಚಾಣಾಕ್ಷತನ ಇತ್ಯಾದಿ ಅವರಲ್ಲಿ ಇರಲಿಲ್ಲ. ಬಹುತೇಕ ಸಂಸ್ಥಾನಿಕರು ರಾಜಕಾರಣಿ ಗಳು ನೀಡುವ ಅಲ್ಪ ಸ್ವಲ್ಪ ಹಣಕ್ಕೆ ಸೀಮಿತರಾಗಿ ಅವರ ಪರವಾಗಿ ಮತಯಾಚನೆ ಕಾರ್ಯದಲ್ಲಿ ತೊಡಗಿದರು. ಆಗಲೂ ಜನರ ನಡುವೆ ನೇರವಾಗಿ ಬೆರೆಯದೆ ಅರಮನೆಯ ಮೂಲಕವೇ ಜನರನ್ನು ಸಂಪರ್ಕಿಸಲು ಯತ್ನಿಸಿದರು. ಕೆಲವು, ಅರಸು ಮನೆತನದವರು ರಾಜಕೀಯದಲ್ಲಿ ಪ್ರವೇಶಿಸಿ ಆಯಾ ರಾಜಕೀಯ ಪಕ್ಷದ ರಂಗಕ್ಕೆ ತಕ್ಕಂತೆ ತಾಳ ಹಾಕಿದರು. ಅವರು ಹಿಂದಿನ ದೊರೆತನದ ಗೌರವದ ಜೊತೆ ಆಧುನಿಕ ರಾಜಕಾರಣಿಗಳಿಗೆ ಸಿಗುವ ಸ್ಥಾನಮಾನಗಳನ್ನೂ ಪಡೆದುಕೊಂಡರು. ಸುರಪುರ, ಗುಡಗುಂಟಿ ಮತ್ತು ಗುಂತಗೋಳ ಸಂಸ್ಥಾನಿಕರು ರಾಜಕೀಯದಲ್ಲಿ ಸದಾ ಗುರುತಿಸಿಕೊಳ್ಳುತ್ತಾ ಬಂದಿದ್ದಾರೆ. ಇಂದಿಗೂ ರಾಜ್ಯದ ರಾಜಕಾರಣದಲ್ಲಿ ಬೇಡ ಸಂಸ್ಥಾನಿಕರ ಪೈಕಿ ಇವರದೇ ಉತ್ತಮ ಸ್ಥಾನವೆನ್ನಬಹುದು.

ಸ್ವಾತಂತ್ರ್ಯೋತ್ತರ ಕಾಲದ ರಾಜಕೀಯವು ಬರುಬರುತ್ತಾ ತನ್ನ ಪಾವಿತ್ರ್ಯವನ್ನು ಕಳೆದುಕೊಂಡಿತು. ಜನರು ಸಂಸ್ಥಾನಿಕರ ವಂಶಸ್ಥರಿಗೆ ರಾಜ ಗೌರವವನ್ನು ನೀಡಿ ದೊರೆಗಳೆಂದು ಕರೆಯುತ್ತಿದ್ದರಾದ್ದರಿಂದ

ತಮ್ಮ ಈ ದೊರೆಗಳನ್ನು ರಾಜಕೀಯಕ್ಕೆ ತರುವ ಮನಸ್ಸು ಅವರಲ್ಲಿ ಬರಲಿಲ್ಲ. ಚುನಾವಣೆ ಸಂದರ್ಭದಲ್ಲಿ ನಡೆಯುತ್ತಿದ್ದ ದುಂದುವೆಚ್ಚ, ಕುಡಿತ, ಇತರೆ ಅನೈತಿಕ ಚಟುವಟಿಕೆಗಳಿಗೆ ಜನರ ಆಹ್ವಾನವಿತ್ತು. ಈ ಅನೈತಿಕ ಬೇಡಿಕೆಗಳನ್ನು ರಾಜಮನೆತನದವರಿಂದ ನಿರೀಕ್ಷಿಸುವುದಾಗಲಿ, ಈಡೇರಿಸಿಕೊಳ್ಳುವುದಾಗಲೀ ಅವರಿಗೆ ಇಷ್ಟವಾಗುತ್ತಿರಲಿಲ್ಲ. ಹೀಗಾಗಿ ಬೇರೆಯವರನ್ನು ಚುನಾವಣೆಗೆ ನಿಲ್ಲಿಸುತ್ತಿದ್ದರು. ಸಂಸ್ಥಾನಿಕರ ವಂಶಸ್ಥರು ಈ ರಾಜಕೀಯಕ್ಕೆ ಸೂಕ್ತವಾದವರಲ್ಲವೆಂಬುದು ಅವರ ಅಭಿಮತ. ಜಾತಿ ಜನಸಂಖ್ಯೆ ಆಧಾರದ ಮೇಲೆ ಚುನಾವಣೆಯಲ್ಲಿ ಟಿಕೇಟ್ ನೀಡುವ ಪದ್ಧತಿ ಬಂದಿತು. ಬೇಡರು ಅಧಿಕ ಸಂಖ್ಯೆಯಲ್ಲಿರುವ ಕ್ಷೇತ್ರದಿಂದ ಬೇಡನಾಯಕನೊಬ್ಬ ಆಯ್ಕೆಯಾಗುತ್ತಿದ್ದುದು, ಇಲ್ಲವೇ ಆ ಪ್ರದೇಶದ ಹಿಂದಿನ ದೊರೆ ವಂಶಜರೊಬ್ಬರು ಚುನಾವಣೆಯಲ್ಲಿ ಸ್ಪರ್ಧಿಸುತ್ತಿದ್ದುದು ಕಡಿಮೆ. ಕಾಲಕ್ರಮೇಣ ಬೇಡಜನಾಂಗದಲ್ಲಿ ಜಾತಿಪ್ರಜ್ಞೆ ಮೂಡಿ ಬಂದಿದ್ದರಿಂದ ತಮ್ಮ ಜನಾಂಗದವರನ್ನು ಆಯ್ಕೆ ಮಾಡುವ ಪ್ರಯತ್ನಗಳು ನಡೆದವು. ಆದರೆ ಅಜ್ಞಾನ ಮತ್ತು ಸ್ವಾರ್ಥಗಳಿಗೆ ಬಲಿಯಾಗುವ ಪ್ರವೃತ್ತಿಯಿಂದಾಗಿ ಕೆಲವೊಮ್ಮೆ ಬೇಡರು ತಮ್ಮ ಜನಾಂಗದವರನ್ನೆ ಚುನಾವಣೆಯಲ್ಲಿ ಸೋಲಿಸುತ್ತಿದ್ದರು. ಹಾಗೆಯೇ, ಬೇಡ ಜನಪ್ರತಿನಿಧಿಗಳು ತಮ್ಮ ಜನಾಂಗಕ್ಕೆ ಏನು ಮಾಡದೆ ಸ್ವಾರ್ಥಿಗಳಾಗಿ ವರ್ತಿಸುತ್ತಿದ್ದುದೂ ಅವರ ಸೋಲಿಗೆ ಕಾರಣವಾಗುತ್ತಿತ್ತು.

ರಾಜಕೀಯದಲ್ಲಿ ಪರಿಶಿಷ್ಟ ಪಂಗಡ ಮತ್ತು ಪರಿಶಿಷ್ಟ ಜಾತಿಗಳಿಗೆ ಕೆಲವು ಸ್ಥಾನಗಳನ್ನು ಮೀಸಲಿಟ್ಟದ್ದರಿಂದ ಈ ವರ್ಗದವರು ರಾಜಕೀಯದಲ್ಲಿ ಬೆಳೆಯಲು ಅನುಕೂಲವಾಯಿತು. ರಾಜ್ಯದ ರಾಜಕೀಯದಲ್ಲಿ ಪರಿಶಿಷ್ಟ ಪಂಗಡಕ್ಕೆ ಮೀಸಲಾತಿ ಪ್ರಮಾಣ ಕೇವಲ ಶೇ. ಮೂರರಷ್ಟು. ಹಾಗಾಗಿ ಕೇವಲ ಎರಡು ವಿಧಾನಸಭಾ ಕ್ಷೇತ್ರಗಳು ಮಾತ್ರ ಅವರಿಗೆ ಮೀಸಲು ಇಡಲಾಗಿದೆ. ಇತ್ತೀಚಿಗೆ ಜಾತಿವಾರು ಸಂಖ್ಯೆಗನುಗುಣವಾಗಿ ಕ್ಷೇತ್ರ ಮರುವಿಂಗಡಣೆ ನಡೆಯುತ್ತಿರುವುದರಿಂದ ಬೇಡರಿಗೆ ಸುಮಾರು ೧೦ ರಿಂದ ೧೧ ವಿಧಾನಸಭೆ ಕ್ಷೇತ್ರಗಳು ಮತ್ತು ಒಂದರಿಂದ ಎರಡು ಲೋಕಸಭಾ ಕ್ಷೇತ್ರಗಳು ಮೀಸಲಿಡಲಾಗುವುದೆಂದು ಇತ್ತೀಚಿನ ವರದಿಗಳಿಂದ ತಿಳಿದುಬರುತ್ತದೆ. ಕೆಳಹಂತದ ರಾಜ್ಯ ರಾಜಕೀಯದಲ್ಲಿ ಶೇ. ೩೩ ರಷ್ಟು ಮಹಿಳಾ ಮೀಸಲಾತಿ ಇರುವುದರಿಂದ ಬೇಡ ಜನಾಂಗದ ಸ್ತ್ರೀಯರೂ ಇಂದಿನ ರಾಜಕೀಯದ ಅವಕಾಶ ಪಡೆದುಕೊಂಡಿದ್ದಾರೆ. ಗ್ರಾಮಪಂಚಾಯ್ತಿ, ತಾಲ್ಲೂಕುಪಂಚಾಯ್ತಿ, ಜಿಲ್ಲಾಪಂಚಾಯ್ತಿ ಸದಸ್ಯರಾಗಿ, ಅಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ, ಆಯ್ಕೆಯಾಗಿದ್ದಾರೆ. ಕೆಲವು ಮಹಿಳೆಯರು ವಿಧಾನಸಭೆಯನ್ನು ಪ್ರವೇಶಿಸಿದ್ದಾರೆ. ಆದರೆ ಈವರೆಗೆ ಗಮನಿಸುತ್ತಾ ಬಂದಂತೆ ರಾಜಕೀಯದಲ್ಲಿ ಬೇಡ ಜನಾಂಗದ ನಾಯಕರಲ್ಲಿ ಸ್ವಂತಿಕೆ ಇಲ್ಲ. ಹಾಗೂ ಇನ್ನೊಬ್ಬರ ಹಿಡಿತದೊಳಗೆ ರಾಜಕೀಯ ಮಾಡುವ ದುರ್ಬಲ ಸ್ಥಿತಿ ಅವರದು. ಇದಕ್ಕೆ ರಾಜ್ಯದ ವಿಧಾನ ಸಭೆಗೆ ಆಯ್ಕೆಯಾಗಿ ಹೋಗುವವರ ಸಂಖ್ಯೆ ಕಡಿಮೆ ಇರುವುದು

ಕಾರಣವಿರಬಹುದು. ಈ ಕಾರಣಕ್ಕಾಗಿಯೇ ರಾಜನಹಳ್ಳಿಯಲ್ಲಿರುವ ಬೇಡ ಜನಾಂಗದ ಧರ್ಮಪೀಠಾಧೀಶ್ವ ರಿಂದ ರಾಜ್ಯದ ಬೇಡ ಜನಾಂಗವನ್ನು ಒಂದು ಗೂಡಿಸುವ ಹಾಗೂ ಬೇಡ ಜನಾಂಗದ ಚುನಾಯಿತರನ್ನು ಮೇಲಸ್ಥಾನಕ್ಕೆ ತರುವ ಪ್ರಯತ್ನ ನಡೆಯುತ್ತಿದೆ.

ಸ್ವಾತಂತ್ರ್ಯಾನಂತರ ರಾಜಕೀಯದಲ್ಲಿ ಅಲ್ಲಲ್ಲಿ ಕೆಲವು ಬೇಡನಾಯಕರು ಏಳುಬೀಳುಗಳನ್ನು ಕಂಡರು. ರಾಜಕೀಯವಾಗಿ ಸ್ವಲ್ಪ ಸುಧಾರಿಸಿಕೊಂಡವರು ಜನಾಂಗವನ್ನು ಒಗ್ಗೂಡಿಸುವ ಹಾಗೂ ಸುಧಾರಿಸುವ ಕೆಲಸ ಮಾಡಿದರು. ಚಿತ್ರದುರ್ಗದ ನಾಯಕ ಜನಾಂಗದ ಧುರೀಣ ಎ.ಭೀಮಪ್ಪನಾಯಕರು ಚಿತ್ರದುರ್ಗದ ಸರ್ವಾಂಗೀಣ ಅಭಿವೃದ್ಧಿಗಾಗಿ ಪ್ರಯತ್ನಪಟ್ಟರು; ದುರ್ಗಶಿಲ್ಪಿಯೆಂಬ ಕೀರ್ತಿಗೆ ಭಾಜನರಾದರು. ೧೯೫೨ರಲ್ಲಿ ಮೊಳಕಾಲ್ಮೂರು ವಿಧಾನಸಭೆ ಕ್ಷೇತ್ರದಿಂದ, ೧೯೫೭ರಲ್ಲಿ ಚಳ್ಳಕೆರೆ ಮತ್ತು ಜಗಳೂರು ಜಂಟಿ ಕ್ಷೇತ್ರದಿಂದ ಚುನಾಯಿತರಾಗಿ ವಿಧಾನಸಭೆಯನ್ನು ಪ್ರವೇಶಿಸಿದರು. ಎಸ್. ನಿಜಲಿಂಗಪ್ಪರಂತಹ ರಾಜಕಾರಣಿಗಳು ಇವರ ಆಪ್ತರಾಗಿದ್ದರು. ಭೀಮಪ್ಪನಾಯಕರು ಕೆಲಕಾಲ ಸಹಕಾರ ಸಚಿವರೂ ಆಗಿದ್ದರು. ಚಿತ್ರದುರ್ಗ ಜಿಲ್ಲೆ ಘಟ್ಟಿಹೊಸಹಳ್ಳಿ ಸಿ.ಮಲೆಸಿದ್ದಪ್ಪನವರು ಸ್ವಭಾವತಃ ಸಮತಾವಾದಿ ನೆಲೆಯ ದಿಟ್ಟ ಹೋರಾಟಗಾರ, ರಾಜಕೀಯ ಕ್ಷೇತ್ರದಲ್ಲಿಯ ಸೋಲು ಗೆಲುವುಗಳಿಗೆ ಮುಕ್ತವಾಗಿ ಸ್ಪಂದಿಸಿದರು. ಅವರು ೧೯೫೨, ೧೯೫೭ ಮತ್ತು ೧೯೬೭ರಲ್ಲಿ ಶಾಸನಸಭೆ ಪ್ರವೇಶಿಸಲು ಚುನಾವಣೆಯಲ್ಲಿ ಸ್ಪರ್ಧಿಸಿ ಸೋತರೂ ಎದೆಗುಂದಲಿಲ್ಲ. ಅವರು ೧೯೬೯-೭೧ರ ನಡುವೆ ಹೊಳಲ್ಕೆರೆ ತಾಲ್ಲೂಕು ಬೋರ್ಡ್ ಅಧ್ಯಕ್ಷರಾಗಿ ಸೇವೆಯನ್ನು ಸಲ್ಲಿಸಿದರು. ಚಿತ್ರದುರ್ಗ ಜಿಲ್ಲೆಯಲ್ಲಿ ಗುರುತಿಸಲ್ಪಟ್ಟಿರುವ ಪ್ರತಿಷ್ಠಿತ ವ್ಯಕ್ತಿಗಳಲ್ಲಿ ಇವರೂ ಒಬ್ಬರಾಗಿದ್ದಾರೆ.

೧೯೭೮ ರಿಂದ ೧೯೮೫ರವರೆಗೆ ಕರ್ನಾಟಕದ ರಾಜಕೀಯದಲ್ಲಿ ಗುರುತಿಸಿಕೊಂಡ ಬೇಡನಾಯಕರ ಸಂಖ್ಯೆ ಇಂತಿದೆ.[೨]

| ವರ್ಷ | ಎಂ.ಎಲ್.ಎ | ಎಂ.ಎಲ್.ಸಿ | ಎಂ.ಪಿ |
|---|---|---|---|
| ೧೯೭೮ | ೦೪ | ೦೨ | ೦೧ (೧೯೭೭) |
| ೧೯೮೩ | ೦೧ | -- | ೦೧ (೧೯೮೦) |
| ೧೯೮೪ | ೮೫ | ೦೨ | -- |

ರಾಜಕೀಯವಾಗಿ ಬೇಡರ ಒಡಿತದಲ್ಲಿರುವ ಜಿಲ್ಲೆ ಎಂಬ ಹೆಗ್ಗಳಿಕೆಗೆ ಪಾತ್ರವಾದುದು ರಾಯಚೂರು ಜಿಲ್ಲೆ. ಇಲ್ಲಿಯವರೆಗೆ ಲೋಕಸಭೆಯನ್ನು ಪ್ರವೇಶಿಸಿದವರೆಂದರೆ ಆರ್.ವಿ.ನಾಯಕ (೧೯೭೨), ರಾಜಾ ಅಂಬಣ್ಣನಾಯಕ ದೊರೆ(೧೯೬೯), ಎ.ವೆಂಕಟೇಶನಾಯಕ(೧೯೯೧) ಹಾಗೂ ರಾಜಾರಂಗಪ್ಪನಾಯಕ (೧೯೯೬). ಈಗ ಎ.ವೆಂಕಟೇಶನಾಯಕರು ಎಂ.ಪಿ.ಯಾಗಿರುವರು. ಸದ್ಯದ ಕರ್ನಾಟಕದ ರಾಜಕೀಯ

ಕ್ಷೇತ್ರದಲ್ಲಿ ಬೇಡ ಜನಾಂಗದವರ ಸ್ಥಾನಮಾನಗಳು ಹೇಳಿಕೊಳ್ಳುವಷ್ಟು ಇಲ್ಲ. ಕರ್ನಾಟಕದ ರಾಜಕಾರಣದಲ್ಲಿ ಬೇಡ ಜನಾಂಗದವರ ಭಾಗವಹಿಸುವಿಕೆಯನ್ನು ಗಮನಿಸುವುದಾದರೆ; ಎಂ.ಎಲ್.ಎ-೦೫, ಎಂ.ಎಲ್.ಸಿ-೦೨ ಮತ್ತು ಎಂ.ಪಿ-೦೨ ಒಟ್ಟು ೦೯ ಸ್ಥಾನಗಳನ್ನು ಪಡೆದುಕೊಂಡಿದ್ದಾರೆ. ಹಾಗೆಯೇ ವಿಧಾನಸಭೆ, ವಿಧಾನಪರಿಷತ್ ಮತ್ತು ಲೋಕಸಭೆಗಳನ್ನು ಪ್ರವೇಶಿಸಿದವರ ವಿವರವನ್ನು ಗಮನಿಸಿದರೆ; ವಿಧಾನಸಭೆ ಪ್ರವೇಶಿಸಿದವರು : ಎ.ಭೀಮಪ್ಪನಾಯಕ (ಎರಡು ಬಾರಿ), ಎಚ್.ಸಿ.ಬೋರಯ್ಯ (ಒಂದು ಬಾರಿ), ಪಟೇಲ ಪಾಪನಾಯಕ (ಒಂದು ಬಾರಿ), ಎಲ್.ಆರ್.ನಾಯಕ, ಮುತ್ತಣ್ಣನವರ, ಚಂದ್ರಶೇಖರ, ಶಂಕರ ಕರಿನಿಂಗ, ರಮೇಶ ಜಾರಕಿಹೊಳೆ ಇವರೆಲ್ಲರೂ ಒಂದೊಂದು ಬಾರಿ ಗೋಕಾಕ ಕ್ಷೇತ್ರದಿಂದ ಆಯ್ಕೆಯಾಗಿದ್ದಾರೆ. ಸುರಪುರ ವಿಧಾನಸಭೆಕ್ಷೇತ್ರದ ರಾಜಾಪಿಡ್ಡನಾಯಕ, ರಾಜಾ ಕುಮಾರನಾಯಕ, ರಾಜಾವೆಂಕಟ್ಟಪ್ಪನಾಯಕ, ರಾಜಾಮದನಗೋಪಾಲನಾಯಕ ಮತ್ತು ರಾಜಾ ವೆಂಕಟಪ್ಪನಾಯಕ. ಲಿಂಗಸಗೂರು ಕ್ಷೇತ್ರದಿಂದ ರಾಜಾ ಅಮರಪ್ಪನಾಯಕ (ಒಂದು ಬಾರಿ), ರಾಜಾ ಅಮರೇಶ್ವರನಾಯಕ ಲಿಂಗಸಗೂರು ಕ್ಷೇತ್ರದಿಂದ ಮತ್ತು ಕಲ್ಮಲಾ ಕ್ಷೇತ್ರದಿಂದ ಒಂದೊಂದು ಬಾರಿ ಆಯ್ಕೆಯಾಗಿದ್ದರು. ರಾಜಾ ಅಂಬಣ್ಣನಾಯಕ ಮಾನ್ವಿ ಕ್ಷೇತ್ರದಿಂದ (ಒಂದು ಬಾರಿ), ಗಂಗಾಧರನಾಯಕ (ಒಂದು ಬಾರಿ), ಹೊಸಪೇಟೆ ಕ್ಷೇತ್ರದಿಂದ ಗುಜ್ಜಲ ಹನುಮಂತಪ್ಪ (ಒಂದು ಬಾರಿ), ಗುಜ್ಜಲ ಜಯಲಕ್ಷ್ಮಿ (ಒಂದು ಬಾರಿ), ಕೂಡ್ಲಿಗಿ ಕ್ಷೇತ್ರದಿಂದ ಎನ್.ಟಿ. ಬೊಮ್ಮಣ್ಣ (ಎರಡು ಬಾರಿ) ಕುಂದಗೋಳ ಕ್ಷೇತ್ರದಿಂದ ಗೋವಿಂದಪ್ಪ ಜುಟ್ಟಲ (ಒಂದು ಬಾರಿ), ಸಿರಾ ಕ್ಷೇತ್ರದಿಂದ ಸಾ.ಲಿಂಗಯ್ಯ (ಒಂದು ಬಾರಿ), ಜಗಳೂರು ಕ್ಷೇತ್ರದಿಂದ ಎಂ. ಬಸಪ್ಪ (ಒಂದು ಬಾರಿ), ಚಳ್ಳಕೆರೆ ಕ್ಷೇರದಿಂದ ತಿಪ್ಪೇಸ್ವಾಮಿ (ಎರಡು ಬಾರಿ), ಕೊರಟಗೆರೆ ಕ್ಷೇತ್ರದಿಂದ ವೀರಣ್ಣ (ಒಂದು ಬಾರಿ), ಹುಣಸೂರು ಕ್ಷೇತ್ರದಿಂದ ಚಿಕ್ಕಮಾದು (ಒಂದು ಬಾರಿ), ಮೊಳಕಾಲ್ಮೂರು ಕ್ಷೇತ್ರದಿಂದ ಎನ್.ವೈ. ಗೋಪಾಲಕೃಷ್ಣ (ಒಂದು ಬಾರಿ). ಇನ್ನೂ ವಿಧಾನಪರಿಷತ್ ಪ್ರವೇಶಿಸಿದವರೆಂದರೆ ಡಿ.ಎಂ.ಸಾಲಿ ಹಿರೇಕೇರೂರು, ಕೆ.ಎನ್.ರಾಜಣ್ಣ ಕ್ಯಾತಸಂದ್ರ, ಸತೀಶ್ ಜಾರಕಿಹೊಳಿ ಗೋಕಾಕ, ವಿ.ಎಸ್.ಉಗ್ರಪ್ಪ ಬೆಂಗಳೂರು, ಎಲ್.ಜಿ.ಹಾವನೂರು ಬೆಂಗಳೂರು. ಸದ್ಯದಲ್ಲಿ ಕರ್ನಾಟಕದ ಲೋಕಸಭಾ ಸದಸ್ಯರಲ್ಲಿ ಬೇಡ ಜನಾಂಗದವರ ಸ್ಥಾನ ಕೇವಲ ಎರಡು. ವೆಂಕಟೇಶನಾಯಕ ರಾಯಚೂರು ಲೋಕಸಭಾಕ್ಷೇತ್ರವನ್ನು ಪ್ರತಿನಿಧಿಸುತ್ತಿದ್ದರೆ, ಚಿತ್ರದುರ್ಗ ಲೋಕಸಭಾ ಕ್ಷೇತ್ರವನ್ನು ಸಿನಿಮಾ ತಾರೆ ಶಶಿಕುಮಾರ ಅವರು ಪ್ರತಿನಿಧಿಸಿದ್ದಾರೆ. ಇಲ್ಲಿಯವರೆಗೆ ಕ್ಯಾಬಿನೆಟ್ ದರ್ಜೆಯ ಮಂತ್ರಿಯಾದವರು ಕೇವಲ ಇಬ್ಬರು. ಎಲ್.ಜಿ.ಹಾವನೂರು ಅವರು ಒಮ್ಮೆ ಕಾನೂನು ಸಚಿವರಾಗಿದ್ದರು ಮತ್ತು ಶ್ರೀ ತಿಪ್ಪೇಸ್ವಾಮಿಯವರು ಒಮ್ಮೆ ಅಬಕಾರಿ ಸಚಿವರಾಗಿದ್ದರು. ಇಲ್ಲಿಯವರೆಗೆ ಬೇಡ ಜನಾಂಗದ ಶಾಸಕರಲ್ಲಿ ರಾಜ್ಯಖಾತೆದರ್ಜೆ ಮಂತ್ರಿಸ್ಥಾನವನ್ನು ಪಡೆದವರಲ್ಲಿ ಎ.ಭೀಮಪ್ಪನಾಯಕರು ಕೆಲಕಾಲ ಸಹಕಾರ ರಾಜ್ಯಸಚಿವರಾಗಿದ್ದರು.

ಎಚ್.ಸಿ.ಬೋರಯ್ಯನವರು ಕೆಲಕಾಲ ಸಾರಿಗೆ ರಾಜ್ಯ ಸಚಿವರಾಗಿದ್ದರು. ರಾಜಮದನಗೋಪಾಲನಾಯಕ ಕೃಷಿ ಖಾತೆ ರಾಜ್ಯ ಸಚಿವರಾಗಿದ್ದರು. ಕೊರಟಗೆರೆ ಕ್ಷೇತ್ರದಿಂದ ಆಯ್ಕೆಯಾಗಿದ್ದ ವೀರಣ್ಣನವರು ಸಣ್ಣ ಉಳಿತಾಯ ಮತ್ತು ಬಂಧೀಖಾನೆ ರಾಜ್ಯಸಚಿವರಾಗಿದ್ದರು. ಸದ್ಯದಲ್ಲಿ ಅಮರೇಶ್ವರನಾಯಕರು ಬಂಧೀಖಾನೆ, ಗೃಹರಕ್ಷಕದಳ ಮತ್ತು ಕಾನೂನು ಮಾಪನ ರಾಜ್ಯ ಖಾತೆ ಸಚಿವರಾಗಿದ್ದಾರೆ. ಎನ್.ವೈ. ಗೋಪಾಲಕೃಷ್ಣರು ಕರ್ನಾಟಕ ಕೈಮಗ್ಗ ನಿಗಮದ ಅಧ್ಯಕ್ಷರಾಗಿ ನೇಮಕವಾಗಿದ್ದಾರೆ. ಸದ್ಯದ ಒಂದು ರಾಜ್ಯ ಖಾತೆ ಮತ್ತು ಒಂದು ನಿಗಮ ಮಂಡಳಿ ಅಧ್ಯಕ್ಷಸ್ಥಾನವನ್ನು ಪಡೆದುಕೊಳ್ಳಲು ಬೇಡ ಜನಾಂಗದ ನಾಯಕರು ಮತ್ತು ಅವರ ಮಠಾಧೀಶರು ಹಾಗೂ ಸಂಘ ಸಂಸ್ಥೆಗಳು ಮಾಡಿದ ಪ್ರಯತ್ನ ಹೇಳತೀರದು. ಸು.೬೫ ಲಕ್ಷ ಜನಸಂಖ್ಯೆಹೊಂದಿದ ಬೇಡರಿಗೆ ಈ ಪ್ರಾತಿನಿಧ್ಯ ಕಡಿಮೆ ಎಂದು ಬೇಡ ಜನಾಂಗದ ಸಂಘಸಂಸ್ಥೆಗಳು ಹೇಳುತ್ತವೆ. ಈ ಹಿಂದೆ ದಿ.ಎಚ್.ಸಿ.ಬೋರಯ್ಯನವರು, ಕರ್ನಾಟಕ ರಾಜ್ಯದಲ್ಲಿ ನಾಯಕ ಜನಾಂಗದಲ್ಲಿ ೨೫ ಜನರು ಶಾಸಕರಾಗುವ ಸಾಧ್ಯತೆ ಇದೆ. ಆದರೆ ನಮ್ಮಲ್ಲಿ ಒಮ್ಮತ ಇಲ್ಲದಿದ್ದರಿಂದ ಇರುವ ಅವಕಾಶವನ್ನು ಉಪಯೋಗಿಸಿಕೊಳ್ಳುವ ಯೋಗ್ಯತೆ ನಮಗೆ ಇಲ್ಲದಂತಾಗಿದೆ ಎಂದು ಜನಾಂಗದ ದುಃಖಕರ ಪರಿಸ್ಥಿತಿಯ ಬಗ್ಗೆ ವಿಷಾದ ವ್ಯಕ್ತಪಡಿಸಿದ್ದರು.

ಪ್ರಸ್ತುತ ದಿನಗಳ ರಾಜಕೀಯದಲ್ಲಿ ಬೇಡಜನಾಂಗದವರು ತಮ್ಮನ್ನು ಗುರುತಿಸಿಕೊಳ್ಳಲು ತೀವ್ರಪ್ರಯತ್ನ ನಡೆಸಿರುವರಾದರೂ ಅವರಿಗೆ ಆರ್ಥಿಕ ಬಲಿಷ್ಠತೆ ಇಲ್ಲ. ಮೇಲಾಗಿ ಮೇಲ್ವರ್ಗದಲ್ಲಿರುವ ರಾಜಕೀಯ ಒಗ್ಗೂಡುವಿಕೆಯನ್ನು ಬೇಡ ಜನಾಂಗದಲ್ಲಿ ಕಾಣುವುದು ಕಷ್ಟವಾಗಿದೆ. ಆರ್ಥಿಕವಾಗಿ ತೀರಾ ದುರ್ಬಲರಾಗಿರುವ ಅನೇಕ ಬೇಡ ಸಂಸ್ಥಾನಿಕರು ಇನ್ನೊಬ್ಬರ ಕೈಯಾಳುಗಳಾಗಿ ಚುನಾವಣೆ ಸಂದರ್ಭದಲ್ಲಿ ಮತಯಾಚನೆಗೆ ಜನರ ಬಳಿ ಹೋಗುತ್ತಿದ್ದಾರೆ. ಆ ಪ್ರದೇಶದಲ್ಲಿ ನಮ್ಮ ದೊರೆಗಳು ಎಂಬ ಭಾವನೆಯನ್ನು ಹೊಂದಿರುವಂಥಾ ಹಳೆಯ ಕಾಲದ ಜನರು ಅವರ ಕಡೆ ವಾಲುವುದುಂಟು. ಆದರೆ ಇದರಿಂದ ಈ ಸಂಸ್ಥಾನಿಕರಿಗೇನೂ ಲಾಭವಿಲ್ಲ. ಬೇಡ ಜನಾಂಗದವರು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದರಿಂದ ಆ ಪಂಗಡದ ರಾಜಕೀಯ ಮೀಸಲಾತಿಯನ್ನು ಪಡೆಯುತ್ತಿದ್ದಾರೆ. ಎರಡನೇ ಹಂತದ ಅಧಿಕಾರಾವಧಿಗಾಗಿ ನಿರ್ಧರಿಸಲ್ಪಟ್ಟ ಮೀಸಲಾತಿಯಡಿಯಲ್ಲಿ ಬಳ್ಳಾರಿ ಜಿಲ್ಲಾ ಪಂಚಾಯ್ತಿ ಅಧ್ಯಕ್ಷಸ್ಥಾನವು ಪರಿಶಿಷ್ಟಪಂಗಡಕ್ಕೆ ಮೀಸಲಾಗಿದ್ದರಿಂದ ಸದ್ಯದಲ್ಲಿ ಪರಿಶಿಷ್ಟ ಪಂಗಡದವರೇ ಆದ ಸಣ್ಣಹನುಮಕ್ಕ ಅಧ್ಯಕ್ಷರಾಗಿ ಅಧಿಕಾರದಲ್ಲಿದ್ದಾರೆ. ಚಿತ್ರದುರ್ಗ ಜಿಲ್ಲಾಪಂಚಾಯ್ತಿಯ ಒಟ್ಟು ಸದಸ್ಯರ ಸಂಖ್ಯೆ ೩೧. ಅವರಲ್ಲಿ ಪರಿಶಿಷ್ಟ ಪಂಗಡದವರ ಸಂಖ್ಯೆ ಆರು(ನಾಲ್ಕು ಪುರುಷ, ಹಾಗೂ ಎರಡು ಮಹಿಳೆ). ಒಟ್ಟಿನಲ್ಲಿ ೧೯೯೭ರಲ್ಲಿ ರಾಜ/ರಾಜಕಾರಣದಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರ ಪ್ರಾತಿನಿಧ್ಯ ಇಂತಿದೆ:

| ವಿವರಗಳು | ಒಟ್ಟು ಸಂಖ್ಯೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ | ಸಾಮಾನ್ಯ ವರ್ಗ | ಎಲ್ಲಾ ವರ್ಗದ ಮಹಿಳೆಯರು |
|---|---|---|---|---|---|---|
| ಜಿಲ್ಲಾ ಪಂಚಾಯ್ತಿ ಸದಸ್ಯರು | ೯೧೯ | ೧೬೫ | ೪೭ | ೩೦೬ | ೪೦೧ | ೩೩೫ |
| ತಾಲ್ಲೂಕು ಪಂಚಾಯ್ತಿ ಸದಸ್ಯರು | ೩೩೪೦ | ೬೦೪ | ೧೬೯ | ೧೧೧೭ | ೧೧೫೦ | ೧೩೪೧ |
| ಗ್ರಾಮ ಪಂಚಾಯ್ತಿ ಸದಸ್ಯರು | ೮೦೯೩೭ | ೧೬೮೬೧ | ೭೫೮೫ | ೨೬೯೩೭ | ೨೮೪೫೦ | ೩೫೪೩೦ |
| ಜಿಲ್ಲಾ ಪಂಚಾಯ್ತಿ ಅಧ್ಯಕ್ಷರು, ಉಪಾಧ್ಯಕ್ಷರು | ೨೦ | ೦೪ | ೦೧ | ೦೭ | ೦೮ | ೦೮ |
| ತಾಲ್ಲೂಕು ಪಂಚಾಯ್ತಿ ಅಧ್ಯಕ್ಷರು, ಉಪಾಧ್ಯಕ್ಷರು | ೧೭೫ | ೩೨ | ೦೯ | ೫೮ | ೭೬ | ೫೯ |
| ಗ್ರಾಮ ಪಂಚಾಯ್ತಿ ಅಧ್ಯಕ್ಷರು, ಉಪಾಧ್ಯಕ್ಷರು | ೫೬೫೭ | ೧೦೨೮ | ೨೯೭ | ೧೧೮೬ | ೨೪೪೬ | ೧೮೮೫ |

## ೫.೨ ಸಾಮಾಜಿಕ ಪರಿವರ್ತನೆ

ವರ್ತಮಾನದಲ್ಲಿ ಸಾಮಾನ್ಯವಾಗಿ ಯಾವುದೇ ಸಮಾಜ ಆಧುನಿಕತೆಯ ಪ್ರಭಾವದಿಂದ ದೂರ ಉಳಿದಿಲ್ಲ. ಭಾರತದ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಇತ್ಯಾದಿ ಕ್ಷೇತ್ರಗಳಲ್ಲಿ ತೀವ್ರ ಬದಲಾವಣೆಗಳು ಕಂಡುಬಂದಿವೆ. ಸಾಂಪ್ರದಾಯಿಕ ಸಮಾಜದಲ್ಲಿನ ಬದುಕು ಸ್ಥಿತ್ಯಂತರ ಕಂಡಿದೆ. ಹೊಸದನ್ನು ಬಯಸುವ ಸಮಾಜ ದಿನಕಳೆದಂತೆ ತನ್ನ ಮೂಲ ಆಚಾರ-ವಿಚಾರಗಳಲ್ಲಿನ, ಬದಲಾವಣೆಗಳಿಗೆ ಅವಕಾಶ ನೀಡಿತು. ಭಾರತೀಯ ಚರಿತ್ರೆಯಲ್ಲಿ ೧೯ನೇ ಶತಮಾನವನ್ನು 'ಪುನರುಜ್ಜೀವನ' ಕಾಲಘಟ್ಟ ಎಂದು ಪರಿಗಣಿಸಲಾಗಿದೆ. ೧೮೦೦ ರಿಂದ ೧೯೦೦ ರವರೆಗೆ ನಡೆದ ಪಾಶ್ಚಾತ್ತ್ಯದೇಶೀಯ ಚಿಂತನೆಗಳ ತಾಕಲಾಟಗಳು, ತಾತ್ವಿಕ ನಿಲುವುಗಳು, ಸಮಾಜದಲ್ಲಿನ ವೈಚಾರಿಕ ಸುಧಾರಣೆಗಳು, ಧರ್ಮ ಹಾಗೂ ತಾತ್ವಿಕತೆಯಲ್ಲಿನ ಪಲ್ಲಟಗಳು ಈ ಅವಧಿಯನ್ನು ಸಂಕೀರ್ಣವನ್ನಾಗಿಸಿವೆ.[೧೪] ಇಂಗ್ಲೀಷ್ ಶಿಕ್ಷಣ, ಪಾಶ್ಚಾತ್ಯ ವಿಚಾರಧಾರೆಗಳು, ಜನರನ್ನು ಎಚ್ಚರಿಸಿದವು. ಜನರು ಧಾರ್ಮಿಕ, ಸಾಮಾಜಿಕ, ಮೂಢನಂಬಿಕೆಗಳನ್ನು ಪ್ರಶ್ನಿಸಲಾರಂಭಿಸಿದರು. ಬಾಲ್ಯವಿವಾಹ, ಸತಿಸಹಗಮನ, ಪ್ರಾಣಿಬಲಿ, ಶಿಶುಹತ್ಯೆ, ಬಹುಪತ್ನಿತ್ವ, ಘೋಷಾಪದ್ಧತಿ, ದೇವದಾಸಿಪದ್ಧತಿ, ಮೂರ್ತಿಪೂಜೆ, ಮುಂತಾದ ಅನೇಕ ಸಾಮಾಜಿಕ ಅನಿಷ್ಟ

ಆಚರಣೆಗಳಿಗೆ ಕಡಿವಾಣ ಹಾಕಲಾರಂಭಿಸಿದರು. ನಿಷ್ಠಾವಂತ ಸಮಾಜ ಸೇವಕರ ಪ್ರಯತ್ನದ ಫಲವಾಗಿ ದೇಶಾದ್ಯಂತ ಸಾಮಾಜಿಕ ಮತ್ತು ಇತರ ರಂಗಗಳಲ್ಲಿ ಅನೇಕ ಸುಧಾರಣೆಗಳು ಕಂಡುಬಂದುವು.

ಪ್ರಸ್ತುತ, ಸಮಾಜದಲ್ಲಿ ಬೇಡರು ಶೂದ್ರವರ್ಗದ ಸ್ಥಾನಮಾನಗಳನ್ನು ಹೊಂದಿರುವರಾದರೂ ಪಾಳೆಯಗಾರರು, ದೊರೆಗಳು ಮತ್ತು ಅಧಿಕಾರವಂತರು ಹಾಗೂ ಶ್ರೀಮಂತರು ಉನ್ನತ ಸ್ಥಾನಮಾನಗಳನ್ನು ಗ್ರಾಮೀಣ ಪ್ರದೇಶದಲ್ಲಿ ಮಾತ್ರ ಹೊಂದಿರುವರು. ಆದರೆ ಆರ್ಥಿಕವಾಗಿ ದುರ್ಬಲರಾಗುತ್ತಾ ಬಂದ ಬೇಡ ಅರಸುಮನೆತನಗಳವರು ಈಗ ಸಾಮಾನ್ಯರಂತೆ ಜೀವನವನ್ನು ನಿರ್ವಹಿಸುತ್ತಿದ್ದಾರೆ. ಈ ಆರ್ಥಿಕ ದುಸ್ಥಿತಿ ಅವರ ಸ್ಥಾನಮಾನಗಳಿಗೆ ಧಕ್ಕೆ ತಂದಿದೆ.

ಆರ್ಥಿಕವಾಗಿ, ರಾಜಕೀಯವಾಗಿ ದುರ್ಬಲವಾದಂತೆ ಈ ವಂಶಿಕರ ಸ್ಥಾನಮಾನಗಳು ಕೆಳಮಟ್ಟಕ್ಕೆ ಹೋದವು. ಅವರ ಸಾಮಾಜಿಕ ಬದುಕು ಹಿಂದಿನಂತೆ ಯಾವ ವಿಶಿಷ್ಟತೆಯನ್ನೂ ಉಳಿಸಿಕೊಂಡಿಲ್ಲ. ಆದರೂ ಕೆಲವು ಅಪವಾದಗಳಿಲ್ಲದಿಲ್ಲ. ಸಾಮಾನ್ಯರಂತೆ, ಎಲ್ಲರೊಳಗೆ ಒಂದಾಗಿ ಬದುಕುವುದು ಅವರಿಗೆ ಅನಿವಾರ್ಯವಾಗಿದೆ. ಉಡುಗೆ-ತೊಡುಗೆ, ಆಹಾರ, ಪಾನೀಯ, ವಸತಿ, ಹಬ್ಬ-ಹರಿದಿನಗಳು, ಎಲ್ಲವೂ ಸಾಮಾನ್ಯ ಬೇಡರ ಮಟ್ಟಕ್ಕೆ ಬಂದಿವೆ. ಕೆಲವರು ಮಾತ್ರ ತಮ್ಮ ಹಿಂದಿನ ಸಂಪ್ರದಾಯವನ್ನು ಅನುಸರಿಸುತ್ತಿರುವರಾದರೂ ಅದರಲ್ಲಿ ಹಿಂದಿನ ದಿನಗಳಷ್ಟು ವೈಭವವಾಗಲೀ, ವಿಶೇಷವಾಗಲೀ ಉಳಿದಿರುವುದಿಲ್ಲ.

ಇಂದಿನ ಸಮಾಜದಲ್ಲಿ ಅವಿಭಕ್ತ ಕುಟುಂಬಗಳು ಛಿದ್ರವಾಗ ತೊಡಗಿ, ವಿಭಕ್ತ ಕುಟುಂಬಗಳೇ ಕಂಡು ಬರುತ್ತವೆ. ಜೀವನ ವಿಧಾನವು ಸರಳವಾಗಿದೆ. ಸದ್ಯದಲ್ಲಿ ಕುಟುಂಬಕ್ಕೆ ಯಜಮಾನ ನೆಪ ಮಾತ್ರ. ಈಗ ಹಿರಿಯರಿದ್ದರೂ ಕಿರಿಯರೂ ಕುಟುಂಬ ನಿರ್ವಹಣೆ ಮಾಡುತ್ತಾರೆ. ಹಿರಿಯರಲ್ಲಿದ್ದ ಹಿಂದಿನ ಆದರ್ಶ, ಮಾದರಿ ಕುಟುಂಬ ನಿರ್ವಹಣೆ ಇಂದು ಅಸಾಧ್ಯವಾಗಿದೆ. ಆದರೂ ಕೆಲವು ಹಳ್ಳಿಗಳಲ್ಲಿ ಅವಿಭಕ್ತ ಕುಟುಂಬಗಳು ಇನ್ನೂ ಇರುವುದನ್ನು ಕಾಣಬಹುದು. ಈಗ ಆದರೂ ಗಂಡ-ಹೆಂಡತಿ ಮತ್ತು ಇಬ್ಬರ ಮಕ್ಕಳ ಕುಟುಂಬ ಜೀವನವೇ ಮುಖ್ಯವೆನಿಸಿದೆ. ಹಾಗೂ ಈ ಚಿಕ್ಕ ಕುಟುಂಬ ನಿರ್ವಹಣೆಯೇ ಕೆಲವರಿಗೆ ಭಾರವೆನಿಸಿದ್ದರೆ ಆಶ್ಚರ್ಯವೇನಿಲ್ಲ. ಸರಕಾರದ ಕುಟುಂಬ ಕಲ್ಯಾಣ ಯೋಜನೆಗಳು ಅತೀ ಸಂತಾನವನ್ನು ನಿಯಂತ್ರಿಸಿವೆ. ಗುಡಿಸಲುಗಳಲ್ಲಿ ವಾಸ ಮಾಡುವುದು ಕಡಿಮೆಯಾಗಿದೆ. ಸರಕಾರದ ಆಶ್ರಯ ಯೋಜನೆಯಡಿಲ್ಲಿ ಮಾಡಿದ ಮನೆಗಳಲ್ಲಿ ನೆಲೆಸುತ್ತಿರುವರು. ಹಾಗಾಗಿ ಕಾಡಿನಿಂದ ಕಟ್ಟಿಗೆ, ಹುಲ್ಲು ತಂದು ಗುಡಿಸಲನ್ನು ಹಾಕಿಕೊಂಡು ವಾಸಿಸುವ ಕುಟುಂಬಗಳು ಕಡಿಮೆಯಾಗತೊಡಗಿವೆ. ಕಾಡಿನಂಚಿನಲ್ಲಿ ನೆಲೆಸಿದ ಬೇಡ ಕುಟುಂಬಗಳು ಹೆಚ್ಚಾಗಿ ಗುಡಿಸಲುಗಳಲ್ಲಿಯೇ ವಾಸಿಸಿದ್ದರೂ ಈಗ ಅಲ್ಲಿಗೂ ಸರಕಾರಿ ಮನೆಗಳು ಲಗ್ಗೆ ಹಾಕಿವೆ.

ಹಿರಿಯರು ವಧುವನ್ನು ಆಯ್ಕೆ ಮಾಡಿ, ವಿವಾಹವನ್ನು ನಿಶ್ಚಯಿಸಿ, ಧಾರ್ಮಿಕ ವಿಧಿ-ವಿಧಾನಗಳ ಮೂಲಕ ಮಾಡುತ್ತಿದ್ದ ಸಂಪ್ರದಾಯಬದ್ಧ ವಿವಾಹಗಳು ಬೇಡ ಜನಾಂಗದವರಲ್ಲಿ ಈಗ ಕಡಿಮೆಯಾಗುತ್ತಲಿವೆ. ಸಾಮೂಹಿಕ ವಿವಾಹ, ನೋಂದಾಯಿತ ವಿವಾಹ ಮತ್ತು ಪ್ರೇಮ ವಿವಾಹ, ದೇವಸ್ಥಾನದಲ್ಲಿ ನಡೆಯುವ ವಿವಾಹ ಮುಂತಾದ ಸರಳ, ಆದರ್ಶ ಹಾಗೂ ಮಿತವ್ಯಯ ಮದುವೆಗಳ ಕಡೆ ಎಲ್ಲ ಸಮುದಾಯಗಳಂತೆ ಬೇಡ ಸಮುದಾಯವೂ ಮಾರುಹೋಗಿದೆ. ಹಿಂದಿನ ಮಹತ್ವ, ವೈಭವ, ಕಾಳಜಿ, ಪೂರ್ವತಯಾರಿಗಳು ಇಂದಿನ ವಿವಾಹದಲ್ಲಿ ಕಾಣಲು ಆಗುವುದಿಲ್ಲ. ಹೆಣ್ಣನ್ನು ಎತ್ತಿಕೊಟ್ಟು ಮದುವೆ ಮಾಡುವ ಪದ್ಧತಿ ಕೊಪ್ಪಳ ಜಿಲ್ಲೆಯ ಸುತ್ತಮುತ್ತ ಪ್ರದೇಶದಲ್ಲಿ ಆಚರಣೆಯಲ್ಲಿದ್ದು, ಈಗ ಕಡಿಮೆಯಾಗಿದೆ. ಹೆಣ್ಣಿನವರು ತಮ್ಮ ಮಗಳನ್ನು ಗಂಡಿನವರ ಕಡೆ ಎತ್ತಿಕೊಟ್ಟು ಮಾಡುವ ಈ ಮದುವೆಯಲ್ಲಿ ಹೆಣ್ಣಿನವರಾರೂ ಭಾಗವಹಿಸುವಂತಿಲ್ಲ. ಇದು ಹೆಣ್ಣನ್ನು ಮಾರಾಟ ಮಾಡಿದಂತೆ; ಆಸ್ತಿ, ಹಣದ ಜೊತೆ ಹೆಣ್ಣನ್ನು ಗಂಡಿನವರಿಗೆ ಒಪ್ಪಿಸಿದಂತೆ, ಹೆಣ್ಣಿನ ತಂದೆ-ತಾಯಿ ಮನೆಯಲ್ಲಿ ಯಾವುದೇ ಕಾರ್ಯಗಳು ನಡೆದರೆ ಅಳಿಯ ಮತ್ತು ಮಗಳು ಬರುವಂತಿಲ್ಲ. ಇಂತಹ ಪದ್ಧತಿಗೆ ಈಗ ಕಡಿವಾಣ ಬೀಳುತ್ತಿದೆ. ವಧುದಕ್ಷಿಣೆ (ತೆರ ಪದ್ಧತಿ) ಸ್ಥಾನದಲ್ಲಿ ಬಂದ ವರದಕ್ಷಿಣೆ ಯಾರನ್ನೂ ಬಿಟ್ಟಿಲ್ಲ; ವಿದ್ಯಾವಂತರಿಂದ ಅವಿದ್ಯಾವಂತರವರೆಗೂ ಇದು ಹರಡಿದೆ. ಬಡವನಿರಲಿ, ಶ್ರೀಮಂತನಿರಲಿ ಅಲ್ಪಪ್ರಮಾಣವಾದರೂ ವರದಕ್ಷಿಣೆ ಕೊಡಬೇಕಾಗುತ್ತದೆ.

ಊರು ಮತ್ತು ಮ್ಯಾಸಬೇಡರ ನಡುವೆ ಮೊದಲಿದ್ದ ವಿವಾಹ ನಿರ್ಬಂಧ ಈಗಲೂ ಇದ್ದರೂ ಅದು ಕಡಿಮೆಯಾಗುತ್ತಾ ನಡೆದಿದೆ. ರಾಜನಹಳ್ಳಿಯ ಮಹರ್ಷಿ ವಾಲ್ಮೀಕಿ ಗುರುಪೀಠ ಈ ನಿಟ್ಟಿನಲ್ಲಿ ಈ ಉಪಪಂಗಡಗಳ ನಡುವಿನ ಅಂತರ ಕಡಿಮೆ ಮಾಡಿ, ಪರಸ್ಪರರಲ್ಲಿ ವಿವಾಹ ಸಂಬಂಧಕ್ಕೆ ಪ್ರೋತ್ಸಾಹಿಸುತ್ತಿದೆ. ವಿಧವೆಯು ಮರುಮದುವೆಯಾಗುವುದು ವಿರಳ. ಕೂಡಿಕೆ ವಿವಾಹ ಎಲ್ಲೋ ಒಂದು ನಡೆಯುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಹಿಂದಿನ ತಲೆಮಾರಿನವರ ಆಚಾರ-ವಿಚಾರಗಳೇ ಮುಂದುವರೆದರೂ ಅವು ಸಂದರ್ಭಕ್ಕೆ ತಕ್ಕಂತೆ ಬಳಕೆಯಾಗುತ್ತವೆ. ವೈಷ್ಣವ ಧರ್ಮದ ಪ್ರಭಾವಕ್ಕೊಳಗಾದ ಪಾಳೆಯಗಾರ ವಂಶಸ್ಥರಲ್ಲಿ ವೈದಿಕ ಧರ್ಮದಂತೆಯೇ ಮದುವೆ ಜರುಗುತ್ತದೆ. ವಧೂ-ವರರ ಸುತ್ತ ಅಗ್ನಿಕುಂಡ ರಚನೆಯ ಮಾದರಿಯಲ್ಲಿ ಇಟ್ಟಿಗೆಗಳನ್ನು ಇಡುತ್ತಾರೆ, ಇದನ್ನೇ ಇವರು 'ಹಸೆಕಟ್ಟೆ' ಎನ್ನುವುರು. ಈ ಹಸೆಕಟ್ಟೆಗೆ ಹಾಕಿರುವ ಚಪ್ಪರಕ್ಕೆ ಹತ್ತಿ-ಆಲ, ಅರಳಿ-ಮಾವು ಕೊನೆಗಳನ್ನು ಬಳಸಿರುತ್ತಾರೆ. ಈ ಹಸೆಕಟ್ಟೆ ಏರುವ ಮುನ್ನವೇ ವರನಿಗೆ ಯಜ್ಞೋಪವೀತು ಧಾರಣೆಯಾಗುತ್ತದೆ. ಇದನ್ನು ಮುಂಜಿ ಅಥವಾ ನಾಂದಿ ಎನ್ನುತ್ತಾರೆ. ಈ ನಾಂದಿ ಕಾರ್ಯಕ್ರಮ ಜನಸಾಮಾನ್ಯ ಬೇಡರಲ್ಲಿ ಇಲ್ಲ. ಆದರೆ ಕೆಲವು ಬೇಡರಲ್ಲಿ ಮುದ್ರೆಧಾರಣೆ ಪದ್ಧತಿ ಇದೆ. ಬೆಂಕಿಯಿಂದ ಕಾಯಿಸಿದ ಶಂಖ ಮತ್ತು ಚಕ್ರ ಮುದ್ರೆಗಳಿಂದ ಬೇಡನ

ಎರಡು ಭುಜಕ್ಕೆ ಮುದ್ರಿಸುತ್ತಾರೆ. ನಂತರ ಅಧಿಕೃತವಾಗಿ ಅವನು ಬೇಡ ಜನಾಂಗದೊಳಗೆ ಸೇರಿದನೆಂದು ತಿಳಿಯಲಾಗುತ್ತದೆ. ಈ ಮುದ್ರೆಧಾರಣೆ ಅಥವಾ ನಾಂದಿಕಾರ್ಯ ಆಗದ ಹೊರತು ವಿವಾಹವಾಗುವಂತಿಲ್ಲ. ಈ ಕಾರ್ಯಕ್ರಮವು ಒಂದು ಮದುವೆಯಷ್ಟೇ ಮಹತ್ವ ಪಡೆದಿದೆ. ಈ ಕಾರ್ಯಕ್ರಮ ಆಯಿತೆಂದರೆ ಅರ್ಧ ಮದುವೆಯಾದಂತೆಯೇ ಸರಿ. ಆದರೆ ಈ ಕಾರ್ಯಕ್ರಮ ಮೊದಲಿನಷ್ಟು ಕಟ್ಟುನಿಟ್ಟಾಗಿ ಈಗ ನಡೆಯದೆ ಅವರವರ ಅನುಕೂಲಕ್ಕೆ ತಕ್ಕಂತೆ ನಡೆಯುತ್ತದೆ.

ಗಂಡುಮಗುವಿನ ಅಥವಾ ಒಟ್ಟಾರೆ ಮಕ್ಕಳು ಆಗಲೇಬೇಕೆಂಬ ವ್ಯಾಮೋಹ ಕಡಿಮೆಯಾಗುತ್ತಿದೆ. ಇರುವ ಭೂಮಿ ತುಂಡು ತುಂಡಾಗುತ್ತ ಬಂದುದು, ಸರಿಯಾದ ಮಳೆ-ಬೆಳೆಯಾಗದಿರುವುದು, ಆರ್ಥಿಕ ದುಸ್ಥಿತಿ, ಮುಂತಾದ ಅನೇಕ ಕಾರಣಗಳ ಹಿನ್ನೆಲೆಯಲ್ಲಿ ಸಂತಾನದ ವಿಚಾರದಲ್ಲಿ ಈ ಜನರು ಹೆಚ್ಚಾಗಿ ತಲೆಕೆಡಿಸಿಕೊಳ್ಳುವುದಿಲ್ಲ. ಭವಿಷ್ಯತ್ತಿನೆಡೆ ಚಿಂತನೆ ಮಾಡುವ ಪ್ರವೃತ್ತಿ ಇವರಲ್ಲೂ ಕಂಡು ಬರುತ್ತಿದೆ. ರಕ್ತಸಂಬಂಧ ವಿವಾಹಕ್ಕೆ ಕಡಿವಾಣ ಬೀಳುತ್ತಿದೆ. ವರದಕ್ಷಿಣೆ, ಆಸ್ತಿ, ಆರೋಗ್ಯವೃದ್ಧಿ ಮುಂತಾದವುಗಳ ಬಯಕೆಯ ಹಿನ್ನೆಲೆಯಲ್ಲಿ ರಕ್ತಸಂಬಂಧ ವಿವಾಹಗಳನ್ನು ಅಲಕ್ಷಿಸಲಾಗುತ್ತಿದೆ. ಆದರೆ ಬುಡಕಟ್ಟು ಸ್ಥಿತಿಯಲ್ಲಿರುವ ಇನ್ನು ಕೆಲವು ಬೇಡರು ಈ ರಕ್ತಸಂಬಂಧ ವಿವಾಹವನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಅಂತರ್‌ಜಾತಿ ವಿವಾಹಗಳಿಗೆ ಆದ್ಯತೆಯಿದ್ದರೂ ಅಂತಹ ವಿವಾಹಗಳಿಗೆ ಸಮಾಜ ಸ್ಪಂಧಿಸುವ ರೀತಿಯೇ ಬೇರೆಯಾದ್ದರಿಂದ, ಕೆಲವೊಂದು ಸಂದರ್ಭಗಳಲ್ಲಿ ಈ ರೀತಿಯಲ್ಲಿ ವಿವಾಹವಾದವರನ್ನು ದೂರವಿಡಲಾಗುತ್ತದೆ. ಉಡುಗೆ-ತೊಡುಗೆಗಳಲ್ಲಿ ಬದಲಾವಣೆ ಕಂಡುಬಂದಿವೆ. ಚಲ್ಲಣ, ಕುಪ್ಪಸ ರಹಿತ ಸೀರೆ ತೊಡುವುದು ತೀರಾ ಹಳೆಯ ಕಾಲದ ಉಡುಗೆಗಳಾಗಿವೆ. ಆಧುನಿಕ ರೀತಿಯ ಉಡುಗೆ-ತೊಡುಗೆಗಳು ಮನೆ ಸೇರುತ್ತಲಿವೆ. ವಿವಾಹ ವಿಚ್ಛೇದನವನ್ನು ನ್ಯಾಯಾಲಯಗಳ ಮೂಲಕ ಪಡೆದುಕೊಳ್ಳುವ ಘಟನೆಗಳು ಅಲ್ಲಲ್ಲಿ ಕಂಡುಬರುತ್ತವೆ. ೧೯೫೫ರ ಹಿಂದೂ ವಿವಾಹ ಶಾಸನದನ್ವಯ ನ್ಯಾಯಾಲಯಗಳು ನಿರ್ದಿಷ್ಟ ವಿಚಾರಗಳ ಆಧಾರದ ಮೇಲೆ ವಿಚ್ಛೇದನಕ್ಕೆ ಮಂಜೂರಾತಿ ಕೊಡುತ್ತಲಿವೆ. ಬಾಲ್ಯವಿವಾಹಗಳು ಕಡಿಮೆಯಾಗುತ್ತಲಿವೆ. ವಿದ್ಯಾವಂತ ಯುವಕರು ಮದುವೆಗಿಂತ ಮುಂದಿನ ಜೀವನ ನಿರ್ವಹಣೆಯ ಬಗ್ಗೆ ಯೋಚಿಸುತ್ತಿದ್ದಾರೆ. ಕಾನೂನು ಸಹ ಬಾಲ್ಯವಿವಾಹವನ್ನು ನಿಯಂತ್ರಿಸುತ್ತದೆ. ಈ ಹಿಂದೆ ಮ್ಯಾಸಬೇಡರು, ಕೆಲವು ಊರು ಬೇಡರು ನಿಷೇಧಿಸಲ್ಪಟ್ಟ ಆಹಾರ ಈಗ ಮುಕ್ತವಾಗಿದೆ. ಕೋಳಿ, ನವಣೆ ತಿನ್ನದವರು ಇಂದು ಅವುಗಳನ್ನು ಸೇವಿಸುತ್ತಿದ್ದಾರೆ. ಕೆಲವು ಕಡೆ ಮಾತ್ರ ಕೋಳಿ, ಈಚಲುಚಾಪೆ ಮತ್ತು ನವಣೆ ಗಳಿಗೆ ನಿಷೇಧವಿದೆ. ಈಚಲುಚಾಪೆಯನ್ನು ಬಹುತೇಕವಾಗಿ ಎಲ್ಲರೂ ಬಳಸುತ್ತಾರೆ. ರಸ್ತೆಗಳ ಅಭಿವೃದ್ಧಿ ಯಿಂದ ಗ್ರಾಮಾಂತರ ಪ್ರದೇಶಗಳು ನಗರಗಳ ಸಂಪರ್ಕ ಹೊಂದಿದವು. ರೈಲುಮಾರ್ಗ, ತಂತಿ ವ್ಯವಸ್ಥೆ, ಹೆದ್ದಾರಿಗಳು ನಾಗರಿಕ ಸಂಪರ್ಕವನ್ನುಂಟು ಮಾಡಿದವು. ನಗರೀಕರಣ, ಸಂಸ್ಕೃತೀಕರಣಕ್ಕೆ ಬುಡಕಟ್ಟು

ಜನರು ಗ್ರಾಮಾಂತರ ಪ್ರದೇಶದಲ್ಲಿದ್ದ ಜನರು ಒಳಗಾದರು. ಹೆದ್ದಾರಿಗಳ ಜೊತೆ ಕುಡಿತ, ಆಲಸಿಕೆ ಹಾಗೂ ಕೆಡಕುಗಳೂ ಬರುತ್ತವೆ ಎಂಬ ಅಮೇರಿಕಾದ ಮಾಯಾ ಬುಡಕಟ್ಟಿನ ಗೌಡನೊಬ್ಬನು ಬಲವಾಗಿ ನಂಬಿದ್ದನೆಂದು ರೆಡ್‌ಫಿಲ್ಡ್ ತಿಳಿಸಿದ ವಿವರ ಪ್ರಸ್ತುತ ಸಂದರ್ಭಕ್ಕೆ ಅತ್ಯಂತ ಸೂಕ್ತವಾಗಿದೆ. ಈಗ ಈ ಕುಡಿತ, ಆಲಸ್ಯ ಮತ್ತಿತರ ಅನೇಕ ಸಮಸ್ಯೆಗಳು ಗ್ರಾಮಾಂತರ ಪ್ರದೇಶದಲ್ಲಿ ಬೇಡ ಜನಾಂಗದವರನ್ನು ಆವರಿಸಿಕೊಂಡಿವೆ.

ಸ್ತ್ರೀಯು ಇಂದು ಎಲ್ಲಾ ರಂಗಗಳಲ್ಲೂ ಗುರುತಿಸಿಕೊಳ್ಳುತ್ತಿದ್ದಾಳೆ. ಬೇಡ ಜನಾಂಗದ ಮಹಿಳೆಯರೂ ಸುಧಾರಣೆಯ ಹಾದಿಯಲ್ಲಿದ್ದಾರೆ. ರಾಜಕೀಯ, ಉದ್ಯೋಗ, ಶೈಕ್ಷಣಿಕ ಮೀಸಲಾತಿಯಿಂದ ರಾಜಕೀಯ, ಉದ್ಯೋಗ, ಶಿಕ್ಷಣ ಕ್ಷೇತ್ರದಲ್ಲಿ ಬೇಡ ಮಹಿಳೆ ಮುನ್ನೆಡೆಯುತ್ತಿದ್ದಾಳೆ; ಆದರೆ ಈ ಪ್ರಮಾಣ ಅತ್ಯಂತ ಕಡಿಮೆ. ಕೃಷಿಕ ಕುಟುಂಬಗಳಲ್ಲಿ ಈ ಜನಾಂಗದ ಮಹಿಳೆಯರು ಪುರುಷನಿಗೆ ಸಮನಾಗಿ ಶ್ರಮವಹಿಸಿ ದುಡಿಯುವುದು ಕಂಡುಬರುತ್ತದೆ. ಶಿಕ್ಷಣವಂತ ಕುಟುಂಬಗಳ ಸ್ತ್ರೀಯರು ಸ್ವಲ್ಪ ಸುಧಾರಿಸಿಕೊಂಡು ಆಧುನಿಕ ಸಮಾಜವನ್ನು ಕಟ್ಟುವ ನಿಟ್ಟಿನತ್ತ ಚಿಂತಿಸುತ್ತಿದ್ದಾರೆ. ರಾಜಕೀಯದಲ್ಲಿ ಮಹಿಳೆ ಸಕ್ರಿಯವಾಗಿ ಭಾಗವಹಿಸುತ್ತಿದ್ದಾಳೆ. ಅಧಿಕಾರಸ್ಥರು, ಶ್ರೀಮಂತರು, ಜಮೀನ್ದಾರರು ಮತ್ತು ರಾಜಕಾರಣಿಗಳಿಗೆ ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ನೀಡುವುದು ಕಂಡುಬರುವುದು. ರಾಜಕೀಯವಾಗಿ ಬೇಡ ಜನಾಂಗ ಇನ್ನು ಆರಂಭಿಕ ಬೆಳವಣಿಗೆ ಕಂಡುಬರುವುದರಿಂದ ಸ್ತ್ರೀಯರು, ಇತ್ತೀಚಿಗಷ್ಟೆ ರಾಜಕೀಯ ಕ್ಷೇತ್ರಕ್ಕೆ ಕಾಲಿಡುತ್ತಿದ್ದಾರೆ. ಸದ್ಯದಲ್ಲಿ ಗುಜ್ಜಲ ಜಯಲಕ್ಷ್ಮೀ ಹೊಸಪೇಟೆ ವಿಧಾನಸಭಾ ಕ್ಷೇತ್ರದಿಂದ ಆಯ್ಕೆಯಾದ, ರಾಜ್ಯದ ಏಕೈಕ ಬೇಡ ಜನಾಂಗದ ಮಹಿಳಾ ಶಾಸಕಿಯಾಗಿದ್ದಾರೆ. ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಪಂಚಾಯ್ತಿ ಹಾಗೂ ನಗರಸಭೆ ಮತ್ತು ಪುರಸಭೆ ಹಾಗೂ ಪಟ್ಟಣ ಪಂಚಾಯ್ತಿಗಳಲ್ಲಿ ಪರಿಶಿಷ್ಟ ಪಂಗಡದ ಮಹಿಳಾ ಮೀಸಲಾತಿಯಡಿಯಲ್ಲಿ ಕೆಲವು ಮಹಿಳಾ ರಾಜಕಾರಣಿಗಳು ಗುರುತಿಸಿಕೊಳ್ಳುತ್ತಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ಹೆಸರು ಮಾಡಿದ ಕಮಲಾ ಹಂಪನಾ ಬೇಡ ಜನಾಂಗದವರು ಗುಲ್ಬರ್ಗಾ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರಾದ ಕೊಪ್ಪಳದ ಇಂದಿರಾ ಭಾವಿಕಟ್ಟೆ, ಬಳ್ಳಾರಿ ಜಿಲ್ಲಾ ಪಂಚಾಯ್ತಿ ಈಗಿನ ಆದ್ಯಕ್ಷೆ ಸಣ್ಣ ಹನುಮಕ್ಕ, ಹಿಂದೆ ಧಾರವಾಡ ಜಿಲ್ಲಾ ಪಂಚಾಯ್ತಿ ಅಧ್ಯಕ್ಷರಾಗಿದ್ದ ಶಾಂತಕ್ಕ ಗುಜ್ಜಲ, ನಾಟಕ ಕ್ಷೇತ್ರದಲ್ಲಿ ರಾಜ್ಯಮಟ್ಟದವರೆಗೆ ಪ್ರಸಿದ್ಧರಾದ ರಂಗಕಲಾವಿದೆ ಮರಿಯಮ್ಮನಹಳ್ಳಿ ನಾಗರತ್ನಮ್ಮ, ಮುಂತಾದವರು ಬೇಡ ಜನಾಂಗದ ಮಹಿಳೆಯರೇ, ಅಲ್ಲದೆ ಇನ್ನೂ ಕೆಲವು ಮಹಿಳೆಯರು ರಾಜಕೀಯ, ಮತ್ತಿತರ ಕ್ಷೇತ್ರಗಳಲ್ಲಿ ಇತ್ತೀಚೆಗೆ ಗುರುತಿಸಿಕೊಳ್ಳುತ್ತಿದ್ದಾರೆ; ಪುರುಷರಂತೆ ಎಲ್ಲಾ ರಂಗಗಳಲ್ಲೂ ಬೆಳೆಯುತ್ತಿದ್ದಾರೆ.

ಹಿಂದಿನ ಸಾಂಪ್ರದಾಯಿಕ ವಿವಾಹಗಳು ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತಲಿವೆ. ಈಗ ವಿವಾಹದ ಸಂದರ್ಭದಲ್ಲಿ ಮದುವೆಯಾಗುವ ಹುಡುಗಿಯ ಒಪ್ಪಿಗೆಯನ್ನು ಕೇಳಲಾಗುತ್ತಿದೆ. ಬೇಡ ಜನಾಂಗದಲ್ಲಿ (ಬುಡಕಟ್ಟು ಸಮಾಜದ ಆಚರಣೆ ಇರುವಕಡೆ) ಋತುಮತಿ ಮತ್ತು ಹೆರಿಗೆ ಸಂದರ್ಭದಲ್ಲಿ ಸ್ತ್ರೀಯನ್ನು ಗುಡಿಸಲಿನಿಂದ ಹೊರಗೆ ಇಡುವ ಪದ್ಧತಿ ಇದೆಯಾದರೂ, ಅದು ಕಡಿಮೆಯಾಗುತ್ತದೆ. ಹಾಗೂ ಈ ಸಂದರ್ಭದಲ್ಲಿ ಆಚರಿಸಲಾಗುತ್ತಿದ್ದ ಶಾಸ್ತ್ರ, ಸಂಪ್ರದಾಯಗಳು ಸರಳವಾಗುತ್ತಿವೆ ಹಾಗೂ ಕಡಿಮೆಯಾಗುತ್ತಿವೆ. ವಿದ್ಯಾವಂತ ಕುಟುಂಬಗಳಲ್ಲಿ, ನಗರ ಸಂಪರ್ಕ ಹೊಂದಿದ ಗ್ರಾಮಗಳಲ್ಲಿ ಸಂಸ್ಕೃತೀಕರಣ ಪ್ರಭಾವದಿಂದ ಮೇಲ್ವರ್ಗದಂತೆ ಕೆಲವು ಆಚರಣೆಗಳು ನಡೆಯುತ್ತಲಿವೆ. ಒಟ್ಟಾರೆ ಎಲ್ಲಾ ಸಮುದಾಯಗಳು ತಮ್ಮದೇ ಆದಂತಹ ಹಿಂದಿದ್ದ ಆಚಾರ-ವಿಚಾರಗಳನ್ನು ಕಳೆದುಕೊಳ್ಳುತ್ತಾ ಸಾರ್ವತ್ರಿಕರಣಗೊಳ್ಳುತ್ತಲಿವೆ.

ಹಿಂದೆ ಇದ್ದ ದೇವದಾಸಿ ಎಂಬ ಪದ್ಧತಿಯು ಅನಿಷ್ಟ ಇಂದು ಕಡಿಮೆಯಾಗುತ್ತಾ ಬರುತ್ತಿದೆ. ವಿದ್ಯಾವಂತರಾದ ಬೇಡ ಕುಟುಂಬಗಳಲ್ಲಿ ಈ ಪದ್ಧತಿಯು ಸಂಪೂರ್ಣವಾಗಿ ನಿಂತು ಹೋಗಿದೆ ಎಂದರೆ ತಪ್ಪಾಗಲಾರದು. ಆ ಸಮಾಜವೇ ಈ ಪದ್ಧತಿಯನ್ನು ನಿಲ್ಲಿಸಲು ಪಣತೊಟ್ಟು ನಿಂತಿದೆ. ಕೆಲವು ಕಡೆ ಕೆಲವೊಂದು ಅನಿವಾರ್ಯ ಕಾರಣಗಳ ಮೇಲೆ ಈ ಪದ್ಧತಿ ಆಚರಣೆಯಲ್ಲಿದೆ. ಸಾಮಾಜಿಕವಾಗಿ ದೇವದಾಸಿ ಕುಟುಂಬಗಳು ಕೆಳಸ್ಥಾನಮಾನಗಳನ್ನು ಪಡೆದಿವೆ. ದೇವದಾಸಿ ಮಕ್ಕಳೊಡನೆ ವಿವಾಹ ನಿಷೇಧ ಈಗಲೂ ಕೆಲವು ಕಡೆ ಇದೆಯಾದರೂ ವಿದ್ಯಾವಂತರು ಈ ನಿಷೇಧಕ್ಕೆ ಕಡಿವಾಣ ಹಾಕುತ್ತಿದ್ದಾರೆ. ಗಂಡುಮಗು ಇಲ್ಲದಿದ್ದವರು ತಮ್ಮ ಹೆಣ್ಣುಮಕ್ಕಳಲ್ಲಿ ಒಬ್ಬಳನ್ನು ಮಗನೆಂದು ಭಾವಿಸಿಕೊಂಡು ಮನೆಯಲ್ಲಿ ಬಿಡುವ (ದೇವದಾಸಿ) ಪದ್ಧತಿ ಇತ್ತು. ಆದರೆ ಈಗ ಗಂಡುಮಗ ಆಗಲಿ ಬಿಡಲಿ ಹೆಣ್ಣುಮಕ್ಕಳನ್ನು ಯಾರಿಗಾದರೂ ಕೊಟ್ಟು ಮದುವೆ ಮಾಡುತ್ತಾರೆ. ರಾಯಚೂರು ಜಿಲ್ಲೆಯಲ್ಲಿ ಶೇ. ೭೫ರಷ್ಟು ದೇವದಾಸಿಯರಿದ್ದು, ಅವರಲ್ಲಿ ಶೇ. ೫ ರಷ್ಟು ಬೇಡ ಜನಾಂಗದವರಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಶೇ. ೬೦ ರಷ್ಟು ದೇವದಾಸಿಯರಿದ್ದು, ಅವರಲ್ಲಿ ಶೇ. ೪೦ ರಷ್ಟು ಬೇಡಜನಾಂಗದವರಾಗಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಶೇ. ೧೦ ರಷ್ಟು ದೇವದಾಸಿಯರಿದ್ದು, ಅವರಲ್ಲಿ ಶೇ. ೫ ರಷ್ಟು ಬೇಡಜನಾಂಗಕ್ಕೆ ಸೇರಿದವರಾಗಿದ್ದಾರೆ.[೧೫] ಬಳ್ಳಾರಿ ಜಿಲ್ಲೆಯಲ್ಲಿ ಬೇಡ ಜನಾಂಗಕ್ಕೆ ಸೇರಿದ ದೇವದಾಸಿಯರು ಹೆಚ್ಚಾಗಿ ಇರುವುದಕ್ಕೆ ಕಾರಣ ಕ್ರಿ.ಶ. ೧೫೬೫ರ ತಾಳಿಕೋಟೆ ಯುದ್ಧದ ನಂತರ ಜನಾಂಗಕ್ಕೆ ಒದಗಿದ ಪರಿಸ್ಥಿತಿಯಿರಬಹುದು. ಈ ದೇವದಾಸಿ ಕುಟುಂಬಗಳು ಹೆಚ್ಚಾಗಿ ಹಿಂದೆ ವಿಜಯನಗರ ಕಾಲಕ್ಕೆ ಸೇವೆ ಸಲ್ಲಿಸುತ್ತಿದ್ದ ಸೈನಿಕ ಕುಟುಂಬಗಳಿಗೆ ಸಂಬಂಧಪಟ್ಟವೆಂದು ತಿಳಿದುಬರುತ್ತದೆ. ಮೂಢನಂಬಿಕೆಗಳು ತಮ್ಮ ಹಿಡಿತವನ್ನು ಕಳೆದುಕೊಳ್ಳುತ್ತಿವೆ. ಜಾತ್ರೆ, ಹಬ್ಬ-ಹರಿದಿನ, ಮನರಂಜನೆ ಮುಂತಾದವುಗಳಲ್ಲಿ ಮೊದಲಿದ್ದ ವೈಭವ, ಉತ್ಸಾಹ, ಈಗ ಕಡಿಮೆಯಾಗುತ್ತಿದೆ. ಮನೋರಂಜನೆಗಾಗಿ ಆಡುತ್ತಿದ್ದ ಕ್ರೀಡೆಗಳು ಜೂಜಾಟಗಳಾಗಿ ಪರಿವರ್ತನೆಗೊಳ್ಳುತ್ತಲಿವೆ.

ಹಿಂದಿನಂತೆ ದೈಹಿಕ ಸದೃಢತೆ ಬೇಡ ಯುವಕರಲ್ಲಿ ಇಲ್ಲ. ಗರಡಿಮನೆಗಳು ಮಹತ್ವ ಕಳೆದುಕೊಳ್ಳುತ್ತಲಿವೆ. ಕುಸ್ತಿಪಟುಗಳು ಸಂಖ್ಯೆ ಕಡಿಮೆಯಾಗುತ್ತಿದೆ.

ಪ್ರಾಣಿಗಳನ್ನು ಹೆಣ್ಣು ದೇವತೆಗಳಿಗೆ ಬಲಿಕೊಡುವ ಪದ್ಧತಿ ಇದೆ. ಆದರೆ ಮೊದಲಿನಷ್ಟು ಇಲ್ಲ. ವಿದ್ಯಾವಂತರು ಪ್ರಾಣಿ ಬಲಿಯನ್ನು ವಿರೋಧಿಸುವುದನ್ನು ಕಾಣಬಹುದಾದರೂ ಕೆಲವರು ಜನಾಂಗಿಕ ಮಹತ್ವ ಕಾಯ್ದುಕೊಳ್ಳಲು ಹಾಗೂ ಭಕ್ತಿಯ ಸಂಕೇತವಾಗಿ, ಹರಕೆಯನ್ನು ಈಡೇರಿಸುವುದಕ್ಕಾಗಿ, ಇಲ್ಲವೇ ತಮ್ಮ ಬಯಕೆ-ಬೇಡಿಕೆಯನ್ನು ಈಡೇರಿಸಿಕೊಳ್ಳುವುದಕ್ಕಾಗಿ ದೇವಿಗೆ ಕುರಿ, ಕೋಳಿ, ಕೋಣ ಬಲಿ ಕೊಡುವ ಪದ್ಧತಿ ಕೆಳ ಜಾತಿಗಳಲ್ಲಿ ಇನ್ನು ಉಳಿದುಕೊಂಡು ಬಂದಿದೆ. ಮೊದಲೆಲ್ಲ ಬಲಿಕೊಡುವ ಪ್ರಾಣಿಗಳನ್ನು ಕೆಲವು ದಿವಸಗಳವರೆಗೆ ಭಕ್ತಿಯಿಂದ ಸಾಕುತ್ತಿದ್ದರು. ಆದರೆ ಈಗ ಬಲಿ ಕೊಡುವ ಸಂದರ್ಭದಲ್ಲಿ ಮಾತ್ರ ಇಂಥ ಪ್ರಾಣಿಗಳನ್ನು ಸಂತೆಯಿಂದ ಖರೀದಿ ಮಾಡಿಕೊಂಡು ತರುವುದನ್ನು ಕಾಣಬಹುದು. ಬಲಿ ಕೊಡುವುದನ್ನು ವಿರೋಧಿಸುವವರು ಕೆಲವರು ಮಾತ್ರ. ಘಟ್ಟಿಹೊಸಹಳ್ಳಿ ಯ.ಸಿ.ಮಲೆಸಿದ್ಧಪ್ಪನವರು ತಮ್ಮ ಮನೆ ಮುಂದೆ ಮಾರಿಯನ್ನು ಕೂಡಿಸಿ ನೂರಾರು ಕುರಿಗಳನ್ನು ಬಲಿಕೊಡುತ್ತಿದುದನ್ನು ತಕ್ಷಣಕ್ಕೆ ನಿಲ್ಲಿಸದೆ ಜಾಣತನದಿಂದ ಜನರಿಗೆ ಬುದ್ಧಿವಾದ ಹೇಳಿ ನಿಲ್ಲಿಸಿದರು. ಗ್ರಾಮದೇವತೆಗೆ ಕೋಣ ಬಲಿಕೊಡುವುದನ್ನು ಸರಕಾರ ಸಂಪೂರ್ಣವಾಗಿ ನಿಷೇಧಿಸಿದೆ. ೫ ರಿಂದ ೧೦ ವರ್ಷಗಳ ಕಾಲ ಗ್ರಾಮದೇವತೆಗಳಿಗಾಗಿ ಮೀಸಲು ಬಿಡುತ್ತಿದ್ದ ಕೋಣಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗಿದೆ.

ಕಟ್ಟೆಮನೆ ಮುಖ್ಯಸ್ಥನ ಪಾತ್ರ ಸಮಾಜದಲ್ಲಿ ಮೊದಲಿನಷ್ಟು ಮಹತ್ವ ಹೊಂದಿಲ್ಲ. ನ್ಯಾಯಾಲಯಗಳು, ಕಾನೂನುಗಳು ಬಂದುದರ ಹಿನ್ನೆಲೆಯಲ್ಲಿ ಜನರು ಆ ಕಡೆ ವಾಲುತ್ತಿದ್ದಾರೆ. ಆದರೆ ಇನ್ನು ಕೆಲವೊಂದು ಸಂದರ್ಭದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಈ ಕಟ್ಟೆಮನೆತನಸ್ಥರಿಗೆ ಗೌರವವನ್ನು ಕೊಡಲಾಗುತ್ತದೆ. ಈಗ ಬೇಡ ಜನಾಂಗದವರಾಗಲಿ ಯಾವುದೇ ಜನಾಂಗವಾಗಲೀ ಕುಲ ಶುದ್ಧಿ, ಅಶುದ್ಧಿ ಬಗ್ಗೆ ತಲೆಕೆಡಿಸಿಕೊಳ್ಳು ವುದಿಲ್ಲ. ಕಟ್ಟೆಮನೆ ಯಜಮಾನನ ತೀರ್ಮಾನವನ್ನು ಪ್ರಶ್ನಿಸುವುದು ಮೊದಲು ಇರಲಿಲ್ಲ. ಆದರೆ ಈಗ ಪ್ರಶ್ನಿಲಾಗುತ್ತಿದೆ. ಇತ್ತೀಚಿಗೆ ಕಟ್ಟೆಮನೆ ಯಜಮಾನನಲ್ಲಿ ನ್ಯಾಯಕೋರಿ ಹೋಗುವವರ ಸಂಖ್ಯೆ ಅತ್ಯಂತ ಕಡಿಮೆ ಎನ್ನಬೇಕು. ಇತ್ತೀಚೆಗೆ ಬೇಡಜನಾಂಗದಲ್ಲೂ ವಧೂವರರ ಅನ್ವೇಷಣಾ ಕೇಂದ್ರಗಳು ಸ್ಥಾಪನೆಯಾಗಿವೆ. ಬೆಂಗಳೂರಿನ ವಿಜಯನಗರ ನಾಯಕ ಸಂಘವು ಬೇಡ ಜನಾಂಗದ ವಧೂ-ವರರನ್ನು ಪರಿಚಯಿಸಿ, ವಿವಾಹ ಸಂಬಂಧ ಏರ್ಪಾಡಿಸುವುದಕ್ಕಾಗಿಯೇ ಹುಟ್ಟಿಕೊಂಡ ಸಂಘವಾಗಿದೆ.

ಬೇಟೆಯು ಇಂದು ತನ್ನ ಸಾಂಸ್ಕೃತಿಕ ಹಾಗೂ ಧಾರ್ಮಿಕ ಮಹತ್ವವನ್ನು ಕಳೆದುಕೊಂಡಿದೆ. ಯುಗಾದಿ ಮತ್ತು ದಸರಾ ಹಬ್ಬಗಳ ಸಂದರ್ಭಗಳಲ್ಲಿ ಬೇಡರು ಈಗ ಕೇವಲ ಸಂಪ್ರದಾಯಕವಾಗಿ ಮಾತ್ರ ಬೇಟೆಗೆ ಹೋಗಿ ಬರುತ್ತಾರೆ. ಹಿಂದಿನ ಕಾಲದ ಭರ್ಜಿ, ಚಾಕು, ಗಂಡುಕೊಡಲಿ, ತಲೆಕೋಲು ಮುಂತಾದವು

ಇದ್ದರೂ ಅವು ಮೂಲೆಗುಂಪಾಗಿ ತುಕ್ಕುಹಿಡಿದಿವೆ. ಕೆಲವು ಬೇಡರು ಅವುಗಳ ಮೌಲ್ಯ ಅರಿಯದೇ ಗುಜರಿಯವರಿಗೆ ಮಾರಿಕೊಂಡಿರುವುದುಂಟು. ಬೇಟೆಗಾಗಿ ಜಾತಿ ನಾಯಿಗಳನ್ನು ಸಾಕುವುದು ಈಗ ಕಡಿಮೆಯಾಗಿದೆ. ಕುರಿ, ಮೇಕೆ, ಪಶುಸಾಕಾಣಿಕೆ ಮಾಡುವವರು ಜಾತಿ ಅಥವಾ ಬೇಟೆ ನಾಯಿಗಳನ್ನು ಸಾಕುತ್ತಾರೆ. ಸುಪ್ರಸಿದ್ಧ ಮಧೋಳ ತಳಿ ನಾಯಿಗಳು ಈಗ ನಗರಪ್ರದೇಶಗಳಲ್ಲಿನ ಶ್ರೀಮಂತರ ಮನೆಯ ಕಾಯುವ ನಾಯಿಗಳಾಗಿವೆ. ಬೇಡರಲ್ಲಿನ ವಿದ್ಯಾವಂತರು ಬಹುಸಂಖ್ಯೆ ಮೇಲ್ವರ್ಗಗಳೇ ಹೆಚ್ಚಾಗಿ ನೆಲೆಸಿದ ಪ್ರದೇಶದಲ್ಲಿರುವವರು ಮತ್ತು ನೌಕರರು ತಮ್ಮ ಜನಾಂಗದ ಬಗ್ಗೆ ಹೇಳಿಕೊಳ್ಳಲು ಹಿಂದೇಟು ಹಾಕುವು ದುಂಟು. ಆದರೆ ಇತ್ತೀಚೆಗೆ ಬೇಡ ಜನಾಂಗದ ಮಠ ಸ್ಥಾಪನೆಯಾದ್ದರಿಂದ, ಅಲ್ಲದೆ ಬೇಡರು ರಾಜಕೀಯ ವಾಗಿ, ಶೈಕ್ಷಣಿಕವಾಗಿ, ಔದ್ಯೋಗಿಕವಾಗಿ ಬೇಡರು ಸುಧಾರಿಸುತ್ತಿರುವುದನ್ನು ನೋಡಿದವರು ತಮ್ಮ ಇಂಥ ಭಾವನೆಯನ್ನು ಬದಲಾಯಿಸಿಕೊಳ್ಳುತ್ತಿರುವರು. ಶಿಕ್ಷಣದಿಂದಾಗಿ ಸಿಟ್ಟು, ಒರಟುತನ, ಅಹಂಕಾರ ಮುಂತಾದ ಅವಗುಣಗಳು ಈ ಜನಾಂಗದಲ್ಲಿ ಕಡಿಮೆಯಾಗುತ್ತಿವೆ. ಸೌಜನ್ಯ ನಡವಳಿಕೆಗಳ ಕಡೆ ಒಲವು ತೋರಲಾಗುತ್ತಿದೆ. ಅಜ್ಞಾನ, ಅನಕ್ಷರತೆ, ನಾಗರೀಕ ಪ್ರಪಂಚವನ್ನು ತಿಳಿದುಕೊಳ್ಳದ ಕೆಲವರು ಸಹಜವಾಗಿಯೇ ಕಠೋರ ಸ್ವಭಾವ ಹೊಂದಿರುವುದು ಕಂಡುಬರುತ್ತದೆ.

## ೫.೩ ಆರ್ಥಿಕ ಪರಿವರ್ತನೆ

ಮೂಲತಃ ಬೇಟೆಗಾರರಾಗಿದ್ದ ಬೇಡರು ನಂತರ ಪಶುಪಾಲನೆ, ಕೃಷಿ, ಉದ್ಯೋಗ ಕ್ಷೇತ್ರದಲ್ಲಿ ಗುರುತಿಸಿಕೊಂಡರು. ಅನಂತರ ರಾಜಪ್ರಭುತ್ವದ ಬೆಳವಣಿಗೆಯಿಂದಾಗಿ ಈ ಜನಾಂಗದವರು ಸೈನಿಕ ವೃತ್ತಿಯನ್ನವಲಂಬಿಸಿದರು; ಹಾಗೂ ಅದು ವಂಶಾಪಾರಂಪರ್ಯವಾಗಿ ಬೆಳೆದುಬಂದಿತು. ಸೇನಾಪಡೆಗೆ ಸೇರಿದವರು ಬೇರೆ ಉದ್ಯೋಗಗಳ ಕಡೆಗೆ ಗಮನಹರಿಸಲಿಲ್ಲ. ಸೈನಿಕರಾದವರಲ್ಲಿ, ಬಲಿಷ್ಠರಾದ ಕೆಲವರು ಪಾಳೆಯಗಾರಿಕೆಯನ್ನು ಹೊಂದಿದ್ದರು. ಅವರು ಅನಂತರ ದೊರೆಗಳೆನಿಸಿಕೊಂಡು ಚಿಕ್ಕಪುಟ್ಟ ಸಂಸ್ಥಾನಗಳನ್ನು ಆಳಿದರು. ಕಾಲಕ್ರಮೇಣ ಇವರು ತಮ್ಮ ಅಧಿಕಾರವನ್ನು ಕಳೆದುಕೊಳ್ಳುತ್ತಾ ಬಂದಂತೆ ಬೇರೆ ಉದ್ಯೋಗ ಗಳ ಬಗ್ಗೆ ಅನಿವಾರ್ಯವಾಗಿ ಯೋಚಿಸಬೇಕಾಯಿತು. ಬ್ರಿಟೀಷರು ಇವರನ್ನು ಎಲ್ಲಾ ವಿಧದಲ್ಲೂ ಹತೋಟಿಯಲ್ಲಿಟ್ಟುಕೊಂಡಿದ್ದರಿಂದ ಪಾಳೆಯಗಾರ ವಂಶಸ್ಥರ ಆರ್ಥಿಕಸ್ಥಿತಿ ಕ್ರಮೇಣ ತೀರಾ ಸಂಕಷ್ಟಕ್ಕೆ ಗುರಿಯಾಯಿತು. ಕೆಲವು ಪಾಳೆಯಗಾರ ವಂಶಸ್ಥ ಕುಟುಂಬಗಳು ನಾವು 'ಪಾಳೆಯಗಾರರು, ಪಾಳೆಯಗಾರರ ವಂಶಸ್ಥರು' ಎಂಬ ಭ್ರಮೆಯಿಂದ ಹೊರಬಂದು ಕೈಗೆ ಸಿಕ್ಕ ಉದ್ಯೋಗಗಳನ್ನು ಅವಲಂಬಿಸಿರುವುದನ್ನು ನೋಡಬಹುದು. ಬ್ರಿಟೀಷರು ಪಾಳೆಯಗಾರರ ವಂಶಸ್ಥರಿಗೆ ನೀಡುತ್ತಿದ್ದ ಗೌರವ ಧನವೂ ಕಾಲಕ್ರಮೇಣ ನಿಲ್ಲಿಸಿದ್ದರಿಂದ ಅವರು ತಮ್ಮ ಕುಟುಂಬ ನಿರ್ವಹಣೆಗಾಗಿ ತಮ್ಮ ಆಸ್ತಿಗಳನ್ನು ಮಾರುತ್ತಾ ಬಂದರು.

ಇದ್ದ ಆಸ್ತಿ ಖಾಲಿಯಾದಂತೆ ಯಾವುದಾದರೂ ಒಂದು ಉದ್ಯೋಗವನ್ನು ಪಡೆದುಕೊಳ್ಳಲು ಹಾತೊರೆಯುವುದು ಅನಿವಾರ್ಯವಾಯಿತು.

ಉತ್ಪಾದನಾವ್ಯವಸ್ಥೆ ಬದಲಾದಂತೆ ಆಯಾ ಸಮುದಾಯದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯದಲ್ಲಿ ಆದ ಸ್ಥಿತ್ಯಂತರವನ್ನು ಕಾಣಬಹುದು. ಕಾಡಿನಲ್ಲಿ, ಕಾಡಿನ ತೀರದಲ್ಲಿ ನೆಲೆಸಿದ್ದ ಬೇಡರಿಗೆ ಕಾಡಿನಲ್ಲಿ ಸಿಗುವ ಉತ್ಪನ್ನಗಳೇ ಅವರ ಜೀವನದ ಮೂಲವಾಗಿದ್ದವು. ಆಧುನಿಕತೆಯ ಬೆಳವಣಿಗೆಯಿಂದ ಕಾಡು ಸಂಪತ್ತು ನಶಿಸುತ್ತಾ ಹೋಯಿತು. ಇದರಿಂದ ಕಾಡಿನಲ್ಲಿ ಜೀವಿಸುತ್ತಿದ್ದವರಿಗೆ ಕಷ್ಟವಾಯಿತು. ನಗರ ಸಂಪರ್ಕದಿಂದ ಇವರು ಆಧುನಿಕ ಬದುಕಿಗೆ ಮಾರುಹೋದರು. ಕಾಡಿನಲ್ಲಿ ಪ್ರಾಣಿಗಳನ್ನು ಕೊಂದು ಅವುಗಳ ಚರ್ಮವನ್ನು ನಗರಕ್ಕೆ ತಂದು ಮಾರಿ ಅದರಿಂದ ಬಂದ ಹಣದಿಂದ ಕುಡಿತ ಮತ್ತಿತರ ಹವ್ಯಾಸಗಳನ್ನೂ ಬೆಳಸಿಕೊಂಡರು. ಜೀವನಕ್ಕಾಗಿ ಮತ್ತು ಮನರಂಜನೆಗಾಗಿ ಆಡುತ್ತಿದ್ದ ಬೇಟೆ ದುಡಿಮೆಯಾಗಿ ಪರಿವರ್ತನೆಯಾಯಿತು. ಬೇಟೆಯಾಡಿದ ಕಾಡುಪ್ರಾಣಿಗಳನ್ನು, ಪಕ್ಷಿಗಳನ್ನು ಮಾರಾಟ ಮಾಡಲಾರಂಭಿಸಿದರು. ಇಲ್ಲಿಯವರೆಗೆ ಕಾಡು ಸ್ವಂತ ಜೀವನೋಪಾಯಕ್ಕಾಗಿ ಬಳಕೆಯಾಗುತ್ತಿತ್ತು. ಆದರೆ ಕಾಲಕ್ರಮೇಣ ಕೆಲವು ಶ್ರೀಮಂತರು, ಕೆಲವರು ಬುಡಕಟ್ಟು ಸಮುದಾಯಗಳ ಸಹಾಯ ಪಡೆದು ಶ್ರೀಗಂಧ, ಅಮೂಲ್ಯ ಗಿಡಮೂಲಿಕೆ, ಪ್ರಾಣಿಗಳನ್ನೂ ಅಪಹರಿಸಲಾರಂಭಿಸಿದರು. ಸರಕಾರವು ಅನೇಕ ಶಾಸನಗಳನ್ನು ಜಾರಿ ಮಾಡಿ ಕಾಡು ಮತ್ತು ಅಲ್ಲಿಯ ಅಪರೂಪದ ಪ್ರಾಣಿಗಳನ್ನು ರಕ್ಷಿಸಲು ಮುಂದಾಯಿತು. ೧೯೬೩ ರಲ್ಲಿ ಕರ್ನಾಟಕ ಅರಣ್ಯ ಶಾಸನ ಮತ್ತು ೧೯೭೨ ರಲ್ಲಿ ವನ್ಯಮೃಗ ಸಂರಕ್ಷಣೆ ಕಾಯ್ದೆಗಳು ಜಾರಿಗೆ ಬಂದವು. ಇದರಿಂದ ಬದುಕಿಗಾಗಿ ಕಾಡನ್ನು ಅವಲಂಬಿಸಿದ್ದ ಅನೇಕ ಬುಡಕಟ್ಟು ಸಮುದಾಯಗಳಿಗೆ ತುಂಬಾ ಕಷ್ಟವಾಯಿತು. ಪಶುಪಾಲನೆ, ಕುರಿ ಮತ್ತು ಮೇಕೆ ಸಾಕಾಣಿಕೆಗೆ ತುಂಬಾ ತೊಂದರೆಯಾಯಿತು. ಏಕೆಂದರೆ ಇವುಗಳಿಗೆ ಆಹಾರ ಸಿಗುತ್ತಿದ್ದುದೇ ಕಾಡಿನಲ್ಲಿ. ಅರಣ್ಯ ಕಡಿದು ಭೂಮಿಯಲ್ಲಿ ಕೆಲವು ಬೇಡರು ಕೃಷಿಯನ್ನು ಆರಂಭಿಸಿದರು. ಕಾಲಕ್ರಮೇಣ ಭೂಮಿಯನ್ನು ಮಾರುತ್ತಾ ಮತ್ತೆ ಅರಣ್ಯದ ಹತ್ತಿರಕ್ಕೆ ಹೋಗ ತೊಡಗಿದರು. ಹಾಗೂ ಸರಕಾರದ ಕೆಂಗಣ್ಣಿಗೊ ಗುರಿಯಾದರು. ಇಂತಹ ಬೇಡ ಕುಟುಂಬಗಳನ್ನು ಕೂಡ್ಲಿಗಿ, ಚಳ್ಳಕೆರೆ, ಮೊಳಕಾಲ್ಮೂರ ತಾಲ್ಲೂಕುಗಳಲ್ಲಿ ಕಾಣಬಹುದು.

ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಸರಕಾರವು ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದ್ದರೂ ಏನು ಪ್ರಯೋಜನವಾಗಿಲ್ಲ. ಈ ಸಮುದಾಯಗಳು ಸರಕಾರದ ಸೌಲಭ್ಯಗಳ ಅರಿವು ಹೊಂದಿರುವುದು ಕಡಿಮೆ. ಶೈಕ್ಷಣಿಕ ಪ್ರಗತಿಯಿಂದಾಗಿ ತೀರಾ ಇತ್ತೀಚಿಗೆ ಸರಕಾರಿ ಸೌಲಭ್ಯಗಳ ಕಡೆ ಸ್ವಲ್ಪ ಗಮನವನ್ನು ಹಿಡುತ್ತಾ ಬಂದಿರುವರು. ಶಿಕ್ಷಣ, ಗ್ರಾಮೀಣಾಭಿವೃದ್ಧಿ ಕಾರ್ಯ ಕ್ರಮಗಳು, ಗುಡ್ಡಗಾಡು ಪ್ರದೇಶದಲ್ಲಿರುವ

ಜನಸಮುದಾಯಗಳನ್ನು ಎಚ್ಚರಗೊಳ್ಳುವಂತೆ ಮಾಡಿವೆ. ಆದರೆ ನಗರ ಸಂಪರ್ಕದಿಂದ ಜನರಲ್ಲಿ ದುಂದುವೆಚ್ಚದ ಮನೋಭಾವ ಹುಟ್ಟಿಕೊಂಡಿದೆ. ಜನಸಂಖ್ಯಾ ಸ್ಫೋಟದಿಂದಾಗಿ ಇರುವ ಭೂಮಿ ಮಕ್ಕಳಲ್ಲಿ ಹಾಗೂ ಮೊಮ್ಮಕ್ಕಳಲ್ಲಿ ಹಂಚಿಕೆಯಾಗುತ್ತಾ ತುಂಡು ತುಂಡಾಗಿರುವುದು ಕಂಡುಬರುತ್ತದೆ. ೧೯೮೧ರ ಜನಗಣತಿ ಪ್ರಕಾರ ಶೇ. ೪೪.೪೬ ರಷ್ಟು ಕೃಷಿಕರನ್ನು ಬೇಡ ಜನಾಂಗದಲ್ಲಿ ಕಾಣಬಹುದು. ಲಾಭರಹಿತ ಕೃಷಿ, ಬರಗಾಲ, ಬಿತ್ತನೆಬೀಜ, ರಾಸಾಯನಿಕ ಗೊಬ್ಬರಗಳ ಏರಿಕೆ ಮತ್ತು ಅವುಗಳ ಅನಿವಾರ್ಯತೆ ಮುಂತಾದ ಸಮಸ್ಯೆಗಳಲ್ಲದೆ ಬೆಳೆದ ಬೆಳೆಗೆ ಸೂಕ್ತ ಬೆಲೆ ಇಲ್ಲದಿರುವುದು ಮುಂತಾದ ಅನೇಕ ಸಮಸ್ಯೆಗಳನ್ನು ರೈತರು ಎದುರಿಸಬೇಕಾಗಿದೆ. ಈ ಜನಾಂಗದಲ್ಲಿ ಕೆಲವರು ಕೃಷಿಯನ್ನು ಬಿಟ್ಟು ನಗರ ಸೇರುತ್ತಿದ್ದಾರೆ. ವೀಳ್ಯೆದೆಲೆ ಮಾರುವುದು, ತರಕಾರಿ ಮಾರುವುದು, ಬೀಡಿಕಟ್ಟುವುದು, ಮಂಡಕ್ಕಿ ಹುರಿಯುವುದು, ಕಿರಾಣಿ ಅಂಗಡಿಗಳಲ್ಲಿ ಕೂಲಿ ಕೆಲಸ ಮಾಡುವುದು ಹಮಾಲಿ ಮಾಡುವುದು, ಆಟೋ ಓಡಿಸುವುದು, ಪುಟ್ಟ ಅಂಗಡಿಗಳನ್ನು ಇಟ್ಟುಕೊಳ್ಳುವುದು ಮುಂತಾದ ಅನೇಕ ವೃತ್ತಿಗಳನ್ನು ಆಯ್ದುಕೊಂಡು ಈ ಜನಾಂಗದವರು ಜೀವನ ನಿರ್ವಹಿಸುತ್ತಿದ್ದಾರೆ. ಬೇರೆಯವರ ಭೂಮಿಯನ್ನು ಗೇಣಿ ಮಾಡುತ್ತಾ, ಶ್ರೀಮಂತರ ಹಿಡಿತದಲ್ಲಿ ಬದುಕುವ ಅನೇಕ ಕುಟುಂಬಗಳು ಇನ್ನೂ ಇವೆ. ೧೯೮೧ರ ಜನಗಣತಿ ಪ್ರಕಾರ ಶೇ. ೪೩.೦೮ ರಷ್ಟು ಬಾಲಕಾರ್ಮಿಕರನ್ನು ಬೇಡ ಜನಾಂಗದಲ್ಲಿ ಕಂಡು ಬಂದಿರುವರು. ೧೯೭೪ರ ಭೂಸುಧಾರಣಾ ಶಾಸನ "ಉಳುವವನೇ ಒಡೆಯ" ಎಂದು ಸಾರಿದಾಗ ಕೆಲವು ಬೇಡರು ಭೂ ಒಡೆಯರಾದರೆಂದು ತಿಳಿಯಲಾಗುವುದಿಲ್ಲ.

ಬೇಡರು ಕೆಲವು ಕಡೆ ಪಶುಪಾಲನೆ ಮತ್ತು ಕುರಿ, ಮೇಕೆ ಸಾಕಣೆಯನ್ನು ಇಂದಿಗೂ ಒಂದು ಮುಖ್ಯ ಉದ್ಯೋಗವನ್ನಾಗಿ ಮಾಡಿಕೊಂಡಿದ್ದಾರೆ. ಚಳ್ಳಕೆರೆ, ಮೊಳಕಾಲ್ಮೂರು, ಕೂಡ್ಲಿಗಿ ತಾಲ್ಲೂಕುಗಳಲ್ಲಿ ಈ ಉದ್ಯೋಗವನ್ನಾವಲಂಬಿಸಿರುವ ಬೇಡ ಕುಟುಂಬಗಳನ್ನು ನೋಡಬಹುದು. ಸರಕಾರ ಕುರಿ ಅಭಿವೃದ್ಧಿ ಕಡೆ ಗಮನ ನೀಡಿದ್ದರಿಂದ ಕುರಿಗಳಿಗೆ ಬರುತ್ತಿದ್ದ ರೋಗ-ರುಜಿನಗಳು ಕಡಿಮೆಯಾದವು. ಕುರಿ ರೋಗ ತಜ್ಞರು ಪೂರ್ವಭಾವಿಯಾಗಿ ರೋಗಗಳ ಬಗ್ಗೆ ತಿಳಿಸುವುದರಿಂದ ಹಾಗೂ ಔಷಧವನ್ನು ನೀಡುವುದರಿಂದ ಕುರಿಗಳು ಮಾರಕ ರೋಗಗಳಿಂದ ಸುರಕ್ಷಿತವಾಗಿರಲು ಅನುಕೂಲವಾಗಿದೆ.

ಕುರಿ, ಮೇಕೆ ಮತ್ತು ಹಸುಗಳನ್ನು ಕಾಯುವ ಬೇಡರಲ್ಲಿ ಕೆಲವು ಹಿರಿಯರು ಆಯುರ್ವೇದ ಔಷಧಿ ಬಗ್ಗೆ ತಿಳಿದುಕೊಂಡಿದ್ದಾರೆ. ಇವುಗಳಿಗೆ ಬರುವ ಕೆಲವು ರೋಗಗಳಿಗೆ ತಾವೇ ಔಷಧವನ್ನು ತಯಾರಿಸಿ ಹಾಕುತ್ತಿದ್ದರು. ಬೇಡರು ಸಾಕಿಕೊಂಡು ಬಂದ ಅಮೃತಮಹಲ್ ತಳಿ ರಾಸುಗಳಿಗೆ ಎಲ್ಲಿಲ್ಲದ ಬೇಡಿಕೆ ಇದೆ. ಸರಕಾರ ಈ ಜಾತಿಯ ರಾಸುಗಳ ಅಭಿವೃದ್ಧಿಗಾಗಿ ಅನೇಕ ಕ್ರಮಗಳನ್ನು ಕೈಗೊಂಡಿದೆ. ಪಶುಸಂಗೋಪನಾ ಇಲಾಖೆಯು ಈ ನಿಟ್ಟಿನಲ್ಲಿ ಕೆಲಸ ಮಾಡುತ್ತಿದ್ದು, ಈ ಅಮೃತಮಹಲ್ ತಳಿ

ಅಭಿವೃದ್ಧಿಗಾಗಿ ಪ್ರತ್ಯೇಕ ಜವಾಬ್ದಾರಿಯನ್ನು ತೋರಿ ಸರ್ವೇಗಾರರನ್ನು, ಕಾವಲುಗಾರರನ್ನು ನೇಮಕ ಮಾಡಿಕೊಂಡಿದೆ. ಹೊಳಲ್ಕೆರೆ ಮತ್ತು ಗುಂಡೇಕೆರೆ ಹತ್ತಿರ ಅಮೃತಮಹಲ್ ರಾಸುಗಳ ಅಭಿವೃದ್ಧಿ ಕೇಂದ್ರಗಳನ್ನು ನಿರ್ಮಿಸಿದ್ದಾರೆ. ಇಲ್ಲಿ ಸರ್ವೇಗಾರರು ಬೇಡರೇ ಆಗಿರುವರು. ಈ ರಾಸುಗಳ ಉಪಚಾರ, ಕಾಯುವುದು ದೇವರ ಸೇವೆ ಮತ್ತು ಪುಣ್ಯದ ಕೆಲಸವೆಂಬ ನಂಬಿಕೆಗಳು ಬೇಡರಲ್ಲಿವೆ.[೧೬]

ಶೈಕ್ಷಣಿಕವಾಗಿ ಪ್ರಗತಿಯಾದಂತೆ ವಿದ್ಯಾವಂತರಾದ ಕೆಲವು ಬೇಡರು ಸರಕಾರಿ ಉದ್ಯೋಗದಲ್ಲಿ, ಖಾಸಗಿ ವಿದ್ಯಾಸಂಸ್ಥೆಗಳಲ್ಲಿ, ಕಾರ್ಖಾನೆಗಳಲ್ಲಿ, ಉದ್ಯಮಗಳಲ್ಲಿ ಸೇರಿಕೊಳ್ಳುತ್ತಿರುವರು. ಆದರೆ ಇವರಲ್ಲಿ ಕೂಲಿಯನ್ನು ನೆಚ್ಚಿಕೊಂಡ ದಿನದ ದುಡಿಮೆಗಾರರ ಸಂಖ್ಯೆಯೇ ಅಧಿಕ. ಇಂದು ದುಡಿದರೆ ಹೊಟ್ಟೆಗೆ ಊಟ ಇಲ್ಲದಿದ್ದರೆ ಇಲ್ಲವೆನ್ನುವ ಸ್ಥಿತಿ ಬೇಡರಲ್ಲಿ ಕಂಡುಬರುತ್ತದೆ. ೧೯೮೧ ಜನಗಣತಿ ಪ್ರಕಾರ ಶೇ. ೪೧.೫೩ ಕೃಷಿಕಾರ್ಮಿಕರನ್ನು ಬೇಡಜನಾಂಗದಲ್ಲಿ ಕಾಣಬಹುದು. ಕೃಷಿ, ಅಥವಾ ಇತರ ಕೆಲಸಗಳಲ್ಲಿ ದುಡಿಯುವ ದಿನಗೂಲಿಗಳಲ್ಲಿ ಸಾರಾಯಿ ಕುಡಿತ ಅಧಿಕವಾಗಿದೆ. ಅಂದಿನ ದುಡಿಮೆಯನ್ನು ಅಂದಿಗೇ ಖರ್ಚು ಮಾಡುವ ಪ್ರವೃತ್ತಿ ಇವರದು. ಸರಕಾರಿ ಉದ್ಯೋಗಗಳಲ್ಲಿ ಬೇಡ ಜನಾಂಗದವರ ಸೇರಿಕೊಂಡ ಅಂಕಿ-ಸಂಖ್ಯೆಗಳು ತೃಪ್ತಿದಾಯಕವಾಗಿಲ್ಲ. ಕೆಲವು ಬೇಡ ವಿದ್ಯಾವಂತರು ತೀರಾ ಇತ್ತೀಚೆಗೆ ಉದ್ಯೋಗದಲ್ಲಿ ಸೇರಿಕೊಳ್ಳುತ್ತಿದ್ದಾರೆ. ೧೯೩೬ರ ಜುಲೈ ವೇಳೆಗೆ ಮೈಸೂರು ಸಂಸ್ಥಾನದಲ್ಲಿದ್ದ ಸರಕಾರಿ ನೇಮಕಾತಿಗಳಲ್ಲಿ ಬೇಡರು ನಾನ್ ಗೆಜೆಟಡ್ ನೇಮಕಾತಿಗಳಲ್ಲಿ ೧೨೮ (ಶೇ.೧೦.೫೭) ಮತ್ತು ಗೆಜಟಡ್ ನೇಮಕಾತಿಗಳಲ್ಲಿ ೨ (ಶೇ. ೦.೨೬) ಮಾತ್ರ ನೇಮಕವಾಗಿರುವುದನ್ನು ನೋಡಬಹುದು.[೧೭] ೧೯೬೦ ರಲ್ಲಿ (೩೧ ಮಾರ್ಚ್ ೧೯೫೯ರಲ್ಲಿ) ಬೇಡ ಜನಾಂಗದ ಒಟ್ಟು ಅಂದಾಜು ಸಂಖ್ಯೆ ೧೦,೦೨,೧೦೦ (ಶೇ.೪.೭೪) ಇಷ್ಟು ಜನಸಂಖ್ಯೆಯಲ್ಲಿ ಗೆಜೆಟಡ್ ನೌಕರರ ಸಂಖ್ಯೆ ಒಟ್ಟು ೧೯, ನಾನ್‌ಗೆಜೆಟಡ್ ನೌಕರರ ಒಟ್ಟು ಸಂಖ್ಯೆ ೮೪೯, ೪ನೇ ದರ್ಜೆ ನೌಕರರ ಒಟ್ಟು ಸಂಖ್ಯೆ ೬೩೯, ಒಟ್ಟು ನೌಕರರ ಸಂಖ್ಯೆ ೧೫೫೭ ಅಂದರೆ ಆಗಿನ ಜನಸಂಖ್ಯೆಗೆ ಪಡೆಯಬೇಕಾದ ಪ್ರಾತಿನಿಧ್ಯದಲ್ಲಿ ಶೇ. ೩.೬೯ ರಷ್ಟು ಇಳುವರಿ ಪ್ರಾತಿನಿಧ್ಯವನ್ನು ಪಡೆದಿರುವರು. ೧೯೬೧ ರ ನಾಗನಗೌಡ ಸಮಿತಿ ಪ್ರಕಾರ ಸರಕಾರಿ ನೌಕರಿಗಳಲ್ಲಿ ಅತೀ ಕಡಿಮೆ ಪ್ರಮಾಣದಲ್ಲಿದ್ದುದು ಮತ್ತು ಔದ್ಯೋಗಿಕ ಕ್ಷೇತ್ರಗಳಲ್ಲಂತೂ ಶೂನ್ಯರಾಗಿದ್ದಾರೆಂದು ತಿಳಿದುಬರುತ್ತದೆ. ೧೯೭೨ ರಲ್ಲಿ ಎಲ್.ಜಿ. ಹಾವನೂರು[೧೮] ವರದಿ ಪ್ರಕಾರ ಸರಕಾರಿ ಉದ್ಯೋಗದಲ್ಲಿದ್ದ ಬೇಡರ ಸಂಖ್ಯೆ

ಪ್ರಥಮದರ್ಜೆ ಖಾಯಂ ಉದ್ಯೋಗಿಗಳ ಒಟ್ಟು ಸಂಖ್ಯೆ - ೨೧
ದ್ವಿತೀಯದರ್ಜೆ ಖಾಯಂ ಉದ್ಯೋಗಿಗಳ ಒಟ್ಟು ಸಂಖ್ಯೆ - ೪೭
ತೃತೀಯದರ್ಜೆ ಖಾಯಂ ಉದ್ಯೋಗಿಗಳ ಒಟ್ಟು ಸಂಖ್ಯೆ - ೨೦೮೨
ನಾಲ್ಕನೇದರ್ಜೆ ಖಾಯಂ ಉದ್ಯೋಗಿಗಳ ಒಟ್ಟು ಸಂಖ್ಯೆ - ೨೬೬೪
ಒಟ್ಟು - ೪೩೦೭

ಬೇಡರು ಮತ್ತು ಬೇಡರ ಪರ್ಯಾಯ ಜಾತಿಗಳು ಕೇಂದ್ರ ಸರಕಾರದ ೧೦೮ನೇ ತಿದ್ದುಪಡಿ ಕಾಯ್ದೆಯನ್ವಯ ೧೯೭೬ ರಿಂದ ಗಿರಿಜನ ವರ್ಗವೆಂದು ಪರಿಗಣಿತವಾಗಿದ್ದರೂ ಆಡಳಿತದ ಕಪಿಮುಷ್ಠಿಯಲ್ಲಿ ಸಿಕ್ಕು ಯಾವ ದಾರಿಯನ್ನು ಕಾಣದೆ, ಸಂವಿಧಾನದತ್ತವಾದ ಹಕ್ಕುಗಳಿಂದ ವಂಚಿತರಾಗಿದ್ದಾರೆ. 'ಬ್ಯಾಕಲಾಗ್' ಹುದ್ದೆಗಳು ಉಳಿದಿರುವುದು ಹಾಗೂ ಅವುಗಳನ್ನೂ ಹಾಗೇ ಉಳಿಸಿಕೊಂಡು ಬರುವ ಸರಕಾರದ ಕ್ರಮದಿಂದ ಈ ಜನಾಂಗದ ಉದ್ಯೋಗಿಗಳ ಸಂಖ್ಯೆಗೆ ಪೆಟ್ಟು ಬಿದ್ದಿದೆ. ಇತ್ತೀಚೆಗೆ ಕೆಲವು ನೇಮಕಾತಿಗಳ ಸಂದರ್ಭಗಳಲ್ಲಿ (ಮೌಖಿಕ ಸಂದರ್ಶನ ಮೂಲಕ ಆಗುವ ನೇಮಕಾತಿಗಳು) ಜಾಣತನದಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮೀಸಲಾತಿಯ ಪ್ರಮಾಣದೊಳಗೆಯೇ ಆಯ್ಕೆ ಮಾಡುತ್ತಾರೆ; ಈ ಮೀಸಲಾತಿಯಲ್ಲಿ ಬರುವ ಅಭ್ಯರ್ಥಿಗಳು ಜನರಲ್ ಮೆರಿಟ್‌ಗೆ ಹೋಗುವಷ್ಟು ಅರ್ಹತೆ ಇದ್ದರೂ ಕಡಿಮೆ ಅಂಕಗಳನ್ನು ಮೌಖಿಕ ಸಂದರ್ಶನದಲ್ಲಿ ನೀಡಿ ಅಂತಹ ಅಭ್ಯರ್ಥಿಗಳನ್ನು ಮೀಸಲಾತಿಯಡಿಯಲ್ಲಿಯೇ ನೇಮಿಸುತ್ತಾರೆಂಬುದು ತಿಳಿಯುತ್ತದೆ. ಉನ್ನತಮಟ್ಟದ ಹುದ್ದೆಗಳು ಸೂಕ್ತ ಅರ್ಹತೆಯನ್ನು ಹೊಂದಿದ ಅಭ್ಯರ್ಥಿಗಳ ಕೊರತೆಯಿಂದ ಅವು ಹಾಗೆಯೇ ಉಳಿದುಕೊಳ್ಳುತ್ತಾ ಬಂದಿವೆ. ಈ ಜನಾಂಗದವರು ಉದ್ಯೋಕ್ಕೆ ಹೋಗಿರುವುದು ಕಡಿಮೆ. ೧೯೮೪ ರಲ್ಲಿ ಸರಕಾರಿ ಸೇವೆಯಲ್ಲಿದ್ದ ೧, ೨, ಮತ್ತು ೩ನೇ ದರ್ಜೆ ನೌಕರರ ಸಂಖ್ಯೆಯಲ್ಲಿ ಬೇಡ ಜನಾಂಗದವರು ಈ ಕೆಳಗಿನಂತೆ ಇದ್ದರು :[೧೯]

| | | |
|---|---|---|
| ಒಂದನೇ ದರ್ಜೆ ನೌಕರರ ಒಟ್ಟು ಸಂಖ್ಯೆ | - | ೨೮ |
| ಎರಡನೇ ದರ್ಜೆ ನೌಕರರ ಒಟ್ಟು ಸಂಖ್ಯೆ | - | ೮೨ |
| ಮೂರನೇ ದರ್ಜೆ ನೌಕರರ ಒಟ್ಟು ಸಂಖ್ಯೆ | - | ೨೩೮೪ |
| ಒಟ್ಟು | - | ೨೪೯೪ |

ಶೇ. ೧.೧೧ ರಷ್ಟು ಹುದ್ದೆಗಳು ಮಾತ್ರ ಬೇಡ ಜನಾಂಗಕ್ಕೆ ದೊರೆತಿವೆ. ೩೧.೩.೧೯೯೩ರಲ್ಲಿ ಇದ್ದಂತೆ ಕರ್ನಾಟಕ ಸಿವಿಲ್ ಹುದ್ದೆಗಳಲ್ಲಿ ಪರಿಶಿಷ್ಟ ಜನಾಂಗದವರ ಪಾಲು ಈ ಕೆಳಗಿನಂತಿದೆ :[೨೦]

| ಕ್ರ.ಸ. | ಗುಂಪು | ಮಂಜೂರಾದ ಹುದ್ದೆಗಳು | ಭರ್ತಿ ಮಾಡಿದ ಹುದ್ದೆಗಳು | ಪರಿಶಿಷ್ಟ ಜನಾಂಗದ ಜನರು |
|---|---|---|---|---|
| ೧ | ಎ | ೧೪೩೯೩ | ೧೨೭೧೪ | ೩೩೦ |
| ೨ | ಬಿ | ೨೫೩೯೯ | ೨೧೪೦೮ | ೪೪೪ |
| ೩ | ಸಿ | ೩೧೮೫೩೭ | ೨೮೯೫೯೩ | ೬೭೪೫ |
| ೪. | ಡಿ | ೧೧೧೪೫೧ | ೯೭೩೨೧ | ೩೪೮೦ |
| ಒಟ್ಟು | | | ೪೨೦೦೩೬ | ೧೦,೯೯೯ |

ಮೂಲ : ೧೯೯೩ರಲ್ಲಿ ಕರ್ನಾಟಕ ರಾಜ್ಯದ ಸಿವಿಲ್ ಸೇವೆಗಳಲ್ಲಿ ಪರಿಶಿಷ್ಟಜಾತಿ ಜನಾಂಗಗಳ ಪ್ರಾತಿನಿಧ್ಯ ಕುರಿತ ವರದಿ.

ಈ ಜನಾಂಗದ ಅನೇಕರು ಸೇವಾಭದ್ರತೆಯಿಲ್ಲದೆ ಹಲವಾರು ಹುದ್ದೆಗಳಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ. ಶಿಕ್ಷಣ ಪಡೆದ ಕೆಲವರು ಸರಕಾರಿ ಉದ್ಯೋಗ ಸೇರಿ ಪ್ರಗತಿಯಾಗಿರುವುದನ್ನು ನೋಡಿದ ಜನರು ತಮ್ಮ ಮಕ್ಕಳಿಗೆ ಶಿಕ್ಷಣವನ್ನು ಕೊಡಿಸಲು ಪ್ರಯತ್ನಸುತ್ತಿದ್ದಾರೆ. ವಿದ್ಯಾವಂತರ ಯುವಕರಲ್ಲಿ ಜನಾಂಗಪ್ರಜ್ಞೆ ಹೆಚ್ಚುತ್ತಿದೆ. ಈ ನಿಟ್ಟಿನಲ್ಲಿ ರಾಜನಹಳ್ಳಿ ಮಹರ್ಷಿ ವಾಲ್ಮೀಕಿ ನಾಯಕ ಧರ್ಮಪೀಠವು ಮುಖ್ಯ ಪಾತ್ರವಹಿಸುತ್ತಿದೆ. ಮಹರ್ಷಿ ವಾಲ್ಮೀಕಿಯ ಹೆಸರಿನಲ್ಲಿ ಯುವಕ ಸಂಘಟನೆಗಳು ಹುಟ್ಟಿಕೊಳ್ಳುತ್ತಲಿವೆ. ಜೊತೆಗೆ ಆರ್ಥಿಕ ಚಟುವಟಿಕೆಗಳನ್ನು ನಡೆಸುತ್ತಿವೆ. ಸೊಸೈಟಿಗಳನ್ನು, ಬ್ಯಾಂಕ್‌ಗಳನ್ನು, ಸ್ಥಾಪಿಸಿಕೊಂಡು ಬೇಡ ಜನಾಂಗಕ್ಕೆ ಆಸರೆಯಾದ ಕೆಲವು ಉದಾಹರಣೆಗಳನ್ನು ನೋಡಬಹುದು. ಗೋಕಾಕ ವಾಲ್ಮೀಕಿ ಮಹರ್ಷಿ ಕ್ರೆಡಿಟ್ ಸೊಸೈಟಿ, ತುಮಕೂರು ಏಕಲವ್ಯ ಗಿರಿಜನ ಪತ್ತಿನ ಸಹಕಾರಿ ಸಂಘ, ವಾಲ್ಮೀಕಿ ಮಹಿಳಾ ಸಹಕಾರಿ ಪತ್ತಿನ ಸಂಘ, ದಾವಣಗೆರೆ ಮತ್ತು ಚಿತ್ರದುರ್ಗಗಳಲ್ಲಿಯ ವಾಲ್ಮೀಕಿ ಸಹಕಾರಿ ಕ್ರೆಡಿಟ್-ಸೊಸೈಟಿ ಚಿತ್ರದುರ್ಗ, ಬೆಂಗಳೂರಿನಲ್ಲಿಯ ಮಹರ್ಷಿ ವಾಲ್ಮೀಕಿ ಗಿರಿಜನ ಕೋ-ಅಪರೇಟಿವ್ ಕ್ರೆಡಿಟ್ ಸೊಸೈಟಿ, ಧಾರವಾಡದ ವಾಲ್ಮೀಕಿ ಮಹರ್ಷಿ ಬ್ಯಾಂಕ್, ಚಿತ್ರದುರ್ಗ ಜಿಲ್ಲಾ ವಾಲ್ಮೀಕಿ ಗಿರಿಜನ ಪತ್ತಿನ ಬ್ಯಾಂಕ್ ನಿಯಮಿತ ಹೀಗೆ ರಾಜ್ಯಾದ್ಯಾಂತ ಬೇಡ ಜನಾಂಗವು ಹೆಚ್ಚಾಗಿ ಇರುವ ಕಡೆ ಆರ್ಥಿಕವಾಗಿ ಜನಾಂಗಕ್ಕೂ ಮತ್ತು ಸಮಾಜದ ಇತರ ವರ್ಗಗಳಿಗೂ ಆಸರೆಯಾಗಲು ಇಂತಹ ಸೊಸೈಟಿಗಳು ಹುಟ್ಟಿಕೊಂಡಿರುವುದನ್ನು ಕಾಣಬಹುದು.

ನೀರಾವರಿ ಪ್ರದೇಶಗಳಲ್ಲಿರುವ ಬೇಡ ಜನಾಂಗದವರ ಆರ್ಥಿಕ ಸ್ಥಿತಿ ಸ್ವಲ್ಪ ಉತ್ತಮವೆಂದು ಹೇಳಬಹುದು. ಬಯಲು ಸೀಮೆಯ ಜನರಿಗೆ ಮಳೆಯಾದರೆ ಮಾತ್ರ ಏನಾದರೂ ಸ್ವಲ್ಪ ಬಿತ್ತುವುದು, ಬೆಳೆಯುವುದು ಬೇಡರು ದಟ್ಟವಾಗಿ ನೆಲೆಸಿದ ಪ್ರದೇಶವು ಕುರಚಲಗಿಡ, ಗುಡ್ಡಗಳಿಂದ ಕೂಡಿದ, ಅಷ್ಟೇನು ಫಲವತ್ತಾದ ಭೂಮಿಯನ್ನು ಹೊಂದದ ಪ್ರದೇಶವಾಗಿದೆ. ಬೇಡರ ಆರ್ಥಿಕ ದುಸ್ಥಿತಿಗೆ ಈ ಅಂಶವೂ ಕಾರಣವಾಗಿದೆ. ಬೇಡ ಜನಸಂಖ್ಯೆ ಹೆಚ್ಚಾಗಿದ್ದು ಅವರಿಗೆ ಸೇರಿದ ಭೂಮಿ ಕಡಿಮೆಯಾಗಿದ್ದುದು ಸಹ ಇನ್ನೊಂದು ಕಾರಣವಾಗಿದೆ. ತುಂಗಾಭದ್ರ, ಕೃಷ್ಣಾ, ಕಾವೇರಿ ನದಿಗಳು ಹಾಗೂ ಈ ನದಿಗಳ ಉಪ ನದಿಗಳ ತೀರದಲ್ಲಿ ನೆಲೆಸಿದ ಬೇಡರು ಮತ್ತು ಇತರ ಜನಾಂಗದವರು ಆರ್ಥಿಕವಾಗಿ ಉತ್ತಮವಾಗಿರುವರು. ಆಣೆಕಟ್ಟುಗಳ ನಿರ್ಮಾಣದ ಕಾಲಕ್ಕೆ ಭೂಮಿಯನ್ನು ಕಳೆದುಕೊಂಡ ಕೆಲವು ಬೇಡರ ಕುಟುಂಬಗಳು ತೀರಾ ಸಂಕಷ್ಟಕ್ಕೆ ಗುರಿಯಾಗಿವೆ. ಕೆರೆಗಳು ತುಂಬದ ಈ ದಿನಗಳಲ್ಲಿ ಬಾವಿ ಮತ್ತು ಕೊಳವೆ ಬಾವಿಗಳ ಮೂಲಕ ಕೃಷಿಗೆ ನೀರಾವರಿ ವ್ಯವಸ್ಥೆ ಮಾಡಿಕೊಂಡಿರುವುದನ್ನು ಕಾಣಬಹುದು. ಇತ್ತೀಚೆಗೆ ಅಂತರ್ಜಲ ಮಟ್ಟವೂ ಕಡಿಮೆಯಾಗುತ್ತಾ ಬರುತ್ತಿರುವುದರಿಂದ, ಸರಿಯಾಗಿ ಮಳೆ ಬೀಳದೇ ಇರುವುದರಿಂದ ಇತರೆ ರೈತರರಂತೆ ಬೇಡ ಜನಾಂಗದ ರೈತರ ಸ್ಥಿತಿಯು ಶೋಚನೀಯ ಹಂತ ತಲುಪಿದೆ. ಏರುತ್ತಿರುವ ರಸಾಯನಿಕ ಗೊಬ್ಬರ,

ಬೀಜನಗಳ ಬೆಲೆ, ರೈತರು ಬೆಳೆದ ಬೆಳೆಯ ಬೆಲೆ ಇಳಿಯುತ್ತಿರುವುದು ಬೆಳೆದ ಬೆಳೆಯನ್ನು ಕೊಳ್ಳದ ಸ್ಥಿತಿ, ದಲ್ಲಾಳಿಗಳ ಹಿಡಿತದಲ್ಲಿರುವ ರೈತರು, ಬಡ್ಡಿಯ ಪಾಶಕ್ಕೆ ಗುರಿಯಾದ ರೈತರು, ಹೀಗೆ ಒಂದಲ್ಲ ಒಂದು ಸಮಸ್ಯೆಯಿಂದ ಕೃಷಿ ಕ್ಷೇತ್ರದಲ್ಲಿ ರೈತನು ನೆಮ್ಮದಿಯ ಉಸಿರು ಬಿಡುವಂತಿಲ್ಲ. ಬೇಸಗೆ ಕಾಲದಲ್ಲಿ ಚಿಕ್ಕಮಗಳೂರು ಕಡೆ ಕಾಫಿ ತೋಟಗಳಿಗೂ, ನಗರ ಪ್ರದೇಶದಲ್ಲಿ ಕಟ್ಟಡಗಳ ಕೆಲಸಕ್ಕೂ ಹಳ್ಳಿಗಳಿಂದ ಗುಳೇವು ಹೋಗುವ ಅನೇಕರಲ್ಲಿ ಬೇಡರೂ ಇದ್ದಾರೆ. ನೀರಾವರಿ ಪ್ರದೇಶದ ರೈತರು ಸುಖ ಜೀವನ ನಡೆಸುತ್ತಾರೆ. ದುಂದು ವೆಚ್ಚಕ್ಕೆ ಪ್ರಸಿದ್ಧರಾದ ಇವರು ಶಿಕ್ಷಣಕ್ಕೆ, ಉಳಿತಾಯದ ಕಡೆ ಕೊಟ್ಟ ಗಮನ ಕಡಿಮೆ ಎನ್ನಬಹುದು. ಆಂಧ್ರ ಮತ್ತು ತಮಿಳುನಾಡು ಪ್ರದೇಶದಿಂದ ಬಂದ ರೈತರಿಗೆ ಜಲಾಶಯ ಕೆಳಪ್ರದೇಶದಲ್ಲಿದ್ದ ರೈತರು ಹಣದ ಆಸೆಗಾಗಿ ಇದ್ದ ತಮ್ಮ ಭೂಮಿಗಳನ್ನು ಮಾರಿಕೊಂಡು, ಬಂದ ಹಣದಲ್ಲಿ ಕೆಲವು ದಿನಗಳ ಕಾಲ ವಿಲಾಸಿ ಜೀವನ ಮಾಡಿ ನಂತರ ಇನ್ನೊಬ್ಬರ ಭೂಮಿಯಲ್ಲಿ ಕೂಲಿಯಾಳಾಗಿ ದುಡಿಯುವಂತಹ ಪರಸ್ಥಿತಿ ಕೆಲವು ಕುಟುಂಬಗಳಿಗೆ ಬಂದಿದೆ. ಭದ್ರಾ, ಕಾವೇರಿ, ತುಂಗಾಭದ್ರ, ನಾರಾಯಣಪುರ ಮತ್ತು ಇತರ ಆಣೆಕಟ್ಟುಗಳ ಕೆಳಪ್ರದೇಶದಲ್ಲಿ ಬರುವ ಕೆಳ ವರ್ಗದ ಜನರು ತಮ್ಮ ಭೂಮಿಗಳನ್ನು ಮಾರಿಕೊಂಡ ಇಲ್ಲವೆ ಕೆಲವು ಸಣ್ಣಪುಟ್ಟ ಗುತ್ತಿಗೆ ನೀಡಿದ ಉದಾಹರಣೆಗಳನ್ನು ಕಾಣಬಹುದು.

ಪರಿಶಿಷ್ಟ ಜಾತಿ ಮತ್ತು ಪಂಗಡ ಜನಾಂಗಗಳ ಅಭಿವೃದ್ಧಿಗಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಾ ಬಂದಿವೆ. ಐ.ಆರ್.ಡಿ.ಪಿ., ಜೆ.ಆರ್.ವೈ. ಮತ್ತು ಆರ್.ಎಲ್.ಇ.ಜಿ.ಪಿ. ಯಂತಹ ಯೋಜನೆಗಳು ಪರಿಶಿಷ್ಟ ಜನಾಂಗಗಳ ಅಭಿವೃದ್ಧಿಗಾಗಿ ಶ್ರಮಿಸುವಲ್ಲಿ ಹೆಸರಾಗಿವೆ. ಇವುಗಳಿಂದ ಬಡ ಕುಟುಂಬಗಳಿಗೆ ಸಬ್ಸಿಡಿ ಸಹಿತ ಸಾಲ, ಸ್ವಯಂ ಉದ್ಯೋಗ, ಕಾಲೋನಿ, ಕಟ್ಟಡಗಳು, ನಿವೇಶನಗಳು, ಮುಂತಾದ ಸೌಲಭ್ಯಗಳು ದೊರೆತಿವೆ. ೧೯೭೫ರಲ್ಲಿ ಕರ್ನಾಟಕ ರಾಜ್ಯ ಪರಿಶಿಷ್ಟ ಜಾತಿ, ಪರಿಶಿಷ್ಟಪಂಗಡ ಜನಾಂಗಗಳ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಲಾಯಿತು. ಈ ನಿಗಮದ ಮೂಲಕ ಭೂಮಿಕೊಳ್ಳುವ ಪರಿಯೋಜನೆ, ವೈಯಕ್ತಿಕ ನೀರಾವರಿ ಕೊಳವೆ ಬಾವಿ ಪರಿಯೋಜನೆ, ಸ್ವಯಂ ಉದ್ಯೋಗ ಕಾರ್ಯಕ್ರಮ, ಹೈನುಗಾರಿಕೆ ಚಟುವಟಿಕೆಗಳು, ಎತ್ತು ಮತ್ತು ಗಾಡಿಗಳ ಪರಿಯೋಜನೆ, ಸಣ್ಣ ತೋಟಗಾರಿಕೆಯಲ್ಲಿ ತೊಡಗಿರುವವರಿಗೆ ನೆರವು, ಮುಂತಾದ ಪರಿಯೋಜನೆಗಳಡಿ ಸಬ್ಸಿಡಿ ಸಹಿತ ಸಾಲದ ಆಧಾರದ ಮೇಲೆ ನೆರವು ನೀಡಲಾಗುತ್ತದೆ. ಇಂಥಾ ಅನೇಕ ಸೌಲಭ್ಯಗಳನ್ನು ನೀಡುತ್ತಿರುವುದನ್ನು ಕೆಲವರು ಸರಿಯಾದ ರೀತಿಯಲ್ಲಿ ಬಳಸಿಕೊಂಡರೆ, ಅವಿದ್ಯಾವಂತರಲ್ಲಿ ಅನೇಕರು ಈ ಸೌಲಭ್ಯಗಳ ಮಹತ್ವ ತಿಳಿಯದೇ ಅವುಗಳನ್ನು ದುರುಪಯೋಗ ಮಾಡಿಕೊಂಡಿರುವರು. ಮತ್ತೆ ಕೆಲವು ಸೌಲಭ್ಯಗಳನ್ನು ಮೇಲ್ವರ್ಗಗಳು ಅತ್ಯಂತ ಜಾಣತನದಿಂದ ಈ ವರ್ಗಗಳ ಹೆಸರಿನಲ್ಲಿ ಕಬಳಿಸುವುದು ತಿಳಿದುಬರುತ್ತದೆ.

## ೫.೪. ಶೈಕ್ಷಣಿಕ ಪರಿವರ್ತನೆ

ಬುಡಕಟ್ಟು ಸ್ಥಿತಿಯಲ್ಲಿರುವ ಅನೇಕ ಜನಸಮುದಾಯಗಳು ಬದಲಾವಣೆಗೆ ಒಳಗಾಗುತ್ತಲಿವೆ. ಜಾಗತೀಕರಣದ ಸಂದರ್ಭದಲ್ಲಿ ಬುಡಕಟ್ಟುಗಳು ಪ್ರತ್ಯೇಕವಾಗಿ ಉಳಿಯಲು ಸಾಧ್ಯವಿಲ್ಲದೆ, ಅವುಗಳಿಗೆ ಹೊಸ ಬದಲಾವಣೆಗಳನ್ನು ಒಪ್ಪಿಕೊಳ್ಳುವ ಅನಿವಾರ್ಯತೆ ಉಂಟಾಗಿದೆ. ಬುಡಕಟ್ಟು ನೆಲೆಯ ಬೇಡ ಜನಾಂಗವೂ ಇಂಥಾ ಪರಿವರ್ತನೆ ಕ್ರಿಯೆಗೆ ಸ್ಪಂಧಿಸಿರುವುದನ್ನು ಕಾಣಬಹುದು. ಉತ್ತಮ ಮತ್ತು ಉನ್ನತ ಶಿಕ್ಷಣ ಪಡೆದ ಈ ಜನಾಂಗದ ಕೆಲವರು ಶಿಕ್ಷಣ ಪ್ರಸಾರ ಕುರಿತ ಚಿಂತನೆಯನ್ನು ಆರಂಭಿಸಿದುದು ಸ್ಪಷ್ಟ. ಈ ಜನಾಂಗದ ವಿದ್ಯಾರ್ಥಿಗಳಿಗಾಗಿ ಹಾಸ್ಟಲ್‌ಗಳನ್ನು ಶಿಕ್ಷಣ ಸಂಸ್ಥೆಗಳನ್ನು, ಸಂಘಗಳನ್ನು ಸ್ಥಾಪಿಸಿದುದನ್ನು ನೋಡುತ್ತೇವೆ. ಇಷ್ಟು ವರ್ಷಗಳ ಪರಿಶ್ರಮದ ನಂತರ ಈ ಜನಾಂಗದಲ್ಲಿ ಈ ರೀತಿಯ ಶೈಕ್ಷಣಿಕ ಚಟುವಟಿಕೆಗಳು ಆರಂಭವಾದವು. ಆದ್ದರಿಂದ ಬೇಡ ಜನಾಂಗದಲ್ಲಿ ಕಂಡುಬರುವ ಶೈಕ್ಷಣಿಕ ಪ್ರಗತಿ ತೀರಾ ಇತ್ತೀಚಿನದು. ೧೯೮೧ರ ಜನಗಣತಿ ಪ್ರಕಾರ ಬೇಡರ ನಾಯಕ ಸಾಕ್ಷರತೆ ಪ್ರಮಾಣ ಶೇ.೧೮.೯೫. ಅದರಲ್ಲಿ ಶೇ.೨೮.೪೪ ಪುರುಷರು, ಶೇ.೯.೦೦ಮಹಿಳೆಯರು. ೧೯೯೧ರ ಜನಗಣತಿ ಪ್ರಕಾರ ರಾಜ್ಯದ ಸಾಕ್ಷರತಾ ಪ್ರಮಾಣ ಶೇಕಡ ೫೬.೪ರಷ್ಟು. ಪರಿಶಿಷ್ಟ ಜಾತಿಗಳ ಜನರಲ್ಲಿ ಶೇ.೩೦.೭೧ ಮತ್ತು ಪರಿಶಿಷ್ಟ ಪಂಗಡ ಜನಾಂಗಗಳ ಜನರಲ್ಲಿ ಶೇ.೨೯.೨ರಷ್ಟು ಮಾತ್ರ. ಮಹಿಳಾ ಸಾಕ್ಷರತಾ ಪ್ರಮಾಣ ತೀರಾ ಕಡಿಮೆ ಇದೆ. ಪರಿಶಿಷ್ಟ ಜನಾಂಗಗಳ ಪುರುಷರ ಸಾಕ್ಷರತಾ ಪ್ರಮಾಣ ಶೇ.೩೮.೯೩ರಷ್ಟು ಇದ್ದರೆ, ಮಹಿಳೆಯರ ಸಾಕ್ಷರತಾ ಪ್ರಮಾಣ ಶೇ.೧೯.೨೦ ರಷ್ಟು ಮಾತ್ರ ಇದೆ. ಈ ಹಿಂದೆ ಶಿಕ್ಷಣ ಹೊಂದಿದವರ ಸಂಖ್ಯೆ ಅತ್ಯಂತ ಕಡಿಮೆ ಇದ್ದಿತೆಂಬುದು ಸ್ಪಷ್ಟವಾಗುತ್ತದೆ. ಪರಿಶಿಷ್ಟಪಂಗಡಕ್ಕೆ ಸಂಬಂಧಿಸಿದಂತೆ ಈ ಅಧ್ಯಯನದ ವ್ಯಾಪ್ತಿಗೆ ಒಳಪಡುವ ನಾಲ್ಕು ಜಿಲ್ಲೆಗಳ ಸಾಕ್ಷರತಾ ಪ್ರಮಾಣವನ್ನು ಈ ಕೆಳಗಿನಂತೆ ನೋಡಬಹುದು.[೨೧]

| ಕ್ರ. ಸಂ. | ಜಿಲ್ಲೆಗಳು | ಪರಿಶಿಷ್ಟಪಂಗಡದ ಒಟ್ಟು ಸಂಖ್ಯೆ | ಒಟ್ಟು ಅಕ್ಷರಸ್ಥರು | ಸ್ತ್ರೀಯರು | ಪುರುಷರು |
|---|---|---|---|---|---|
| ೧ | ಚಿತ್ರದುರ್ಗ | ೨೩೭೭೬೩ | ೬೮.೩೦೧ | ೨೦.,೫೬೭ | ೪೭೭೩೪ |
| ೨ | ಬಳ್ಳಾರಿ | ೧೪೭೮೬೯ | ೩೧೧೮೯ | ೦೮೭೪೦ | ೨೨೪೪೯ |
| ೩ | ರಾಯಚೂರು | ೧೨೦೪೪೪ | ೩೧೧೮೯ | ೦೮೭೪೦ | ೨೨೪೪೯ |
| ೪ | ಕೊಪ್ಪಳ | ೦೫೯೮೨೮ | ೧೦೬೮೪ | ೦೧೯೮೨ | ೮೭೦೨ |

ಶಿಕ್ಷಣ ಪಡೆದ ಕೆಲವರು ಸಾಮಾಜಿಕ, ರಾಜಕೀಯ ಕ್ಷೇತ್ರದಲ್ಲಿ ಗುರುತಿಸಿಕೊಂಡು ತಮ್ಮ ಜನಾಂಗೀಯ ಅಭಿವೃದ್ಧಿಗಾಗಿ ಪ್ರಯತ್ನಪಟ್ಟಿರುವುದನ್ನು ಕಾಣಬಹುದು. ಎ.ಭೀಮಪ್ಪನಾಯಕ, ಸಿ.ಮಲೆಸಿದ್ಧಪ್ಪ, ಎಚ್.ಸಿ.ಬೋರಯ್ಯ, ಹರತಿ ವೀರನಾಯಕ, ಮೈಸೂರಿನ ಎಸ್.ಸಂಜೀವಯ್ಯ, ಎಲ್.ಜಿ. ಹಾವನೂರು, ಎಸ್.ಹನುಮಂತಯ್ಯ, ಅಲ್ಲಿಪುರ ಹನುಮಂತಪ್ಪ ಸುರಪುರದ ದೊರೆಗಳು ಹಾಗೂ ಗೋಕಾಕಿನ ಜಾರಕಿಹೊಳಿ ಮನೆತನದವರು ಬೇಡ ಜನಸಮುದಾಯದ ಶೈಕ್ಷಣಿಕ ಏಳ್ಗೆಗಾಗಿ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿರುವುದು ಕಂಡುಬರುತ್ತದೆ. ಶೈಕ್ಷಣಿಕವಾಗಿ ಬೇಡ ಜನಾಂಗ ಸುಧಾರಿಸಲು ಇವರಲ್ಲಿ ಅನೇಕರು ನಾನಾ ರೀತಿಯಲ್ಲಿ ಶ್ರಮಿಸಿದ್ದಾರೆ.

೧೯೩೪ರಲ್ಲಿ ಕಂಟ್ರಾಕ್ಟರ್ ತಿಪ್ಪಯ್ಯ, ಚಿನ್ನೋಬಯ್ಯ, ಭೀಮಪ್ಪನಾಯಕರಿಂದ ಚಿತ್ರದುರ್ಗದಲ್ಲಿ ಬಾಡಿಗೆ ಕಟ್ಟಡದಲ್ಲಿ ಹಾಸ್ಟಲ್‌ನ್ನು ಸ್ಥಾಪಿಸಿದರು. ನಂತರ ಮೈಸೂರು ಆಸ್ಥಾನ ಸಂಗೀತ ವಿದ್ವಾನ್ ಡಾ.ಬಿ.ದೇವೇಂದ್ರಪ್ಪನವರು ತಮ್ಮ ಸಂಗೀತ ಕಚೇರಿಯಿಂದ ಬಂದ ಹಣವನ್ನು ನೀಡಿದ್ದರಿಂದ ಈ ಹಾಸ್ಟೆಲ್ ಸ್ವಂತ ಕಟ್ಟಡವನ್ನು ಪಡೆದುಕೊಂಡಿತು.[೨೨] ಬೇಡ ಜನಾಂಗದಲ್ಲಿ ಶಿಕ್ಷಣದ ಕಡೆ ಗಮನ ಸೆಳೆದ ಈ ಹಾಸ್ಟಲ್ ಆ ಜನಾಂಗವು ಶೈಕ್ಷಣಿಕವಾಗಿ ಬೆಳವಣಿಗೆಯಾಗಲು ಕಾರಣವಾಯಿತು. ಸ್ವಾತಂತ್ರ ಹೋರಾಟಗಾರ, ಸಮಾಜ ಸುಧಾರಕ ಮಲೆಸಿದ್ದಪ್ಪನವರು ಇದೇ ಹಾಸ್ಟೆಲ್‌ನಲ್ಲಿ ಉಳಿದುಕೊಂಡು ವಿದ್ಯಾಭ್ಯಾಸ ಮಾಡಿದ್ದರು. ಶೈಕ್ಷಣಿಕವಾಗಿ ಹಿಂದುಳಿದ ಬೇಡ ಜನಾಂಗದಲ್ಲಿ ೧೯೩೯-೪೦ರಲ್ಲಿ ಬೆಂಗಳೂರು ಇಂಜನಿಯರಿಂಗ್ ಕಾಲೇಜ್‌ಗೆ ಸೇರಿದ ಮೊದಲ ವ್ಯಕ್ತಿ ಎಂದು ಆಗ ಕರೆಯಲಾಗುತ್ತಿತ್ತು. ೧೯೨೦ರಲ್ಲಿ ಹುಬ್ಬಳ್ಳಿಯ ಕೇಶಾವಪುರದಲ್ಲಿ ಸ್ಥಾಪನೆಯಾದ ನಾಯಕ ಸಂಘವು ಬೇಡ ಜನಾಂಗದ ಏಳ್ಗೆಗಾಗಿ ಶ್ರಮಿಸಿತು. ೧೯೨೭ರಲ್ಲಿ ಕರ್ನಾಟಕ ವಾಲ್ಮೀಕಿ ಸಮಾಜ ಹಿತಾಭಿವೃದ್ಧಿ ಸಂಘ ಹುಬ್ಬಳಿಯಲ್ಲಿ ಸ್ಥಾಪನೆಯಾಯಿತು. ೧೯೪೦ರಲ್ಲಿ ಧಾರವಾಡದ ಕೊಪ್ಪದ ಕೆರೆಯಲ್ಲಿ ಆರಂಭವಾದ ಬೋರ್ಡಿಂಗ್ ಶಾಲೆ ಆರ್ಥಿಕ ಮುಗ್ಗಟ್ಟಿನಿಂದ ಮೂರು ನಾಲ್ಕ ವರ್ಷದಲ್ಲಿಯೇ ಮುಚ್ಚಿತು. ಚಿತ್ರದುರ್ಗದ ಶ್ರೀಮದ್ವಾಲ್ಮೀಕಿ ವಿದ್ಯಾಸೇವಾ ಕೇಂದ್ರದ ಸ್ಥಾಪಕರಾದ ಎಚ್.ವಿ.ವೀರನಾಯಕರು ೧೯೪೮ರ ಹೊತ್ತಿಗೆ ನಾಯಕ ಜನಾಂಗದ ಅಭಿವೃದ್ಧಿಯ ಬಗ್ಗೆ ನಾನಾ ದೃಷ್ಟಿಕೋನಗಳಲ್ಲಿ ಯೋಚಿಸಿ ಆ ನಿಟ್ಟಿನಲ್ಲಿ ತಮ್ಮನ್ನು ತಾವೇ ತೊಡಗಿಸಿ ಕೊಂಡರು. ಅವರದೇ ಆದ ಕ್ಷಾತ್ರಾಂಶ ಪ್ರಭೋಧ ಕೃತಿಯಲ್ಲಿ ಜನಾಂಗದ ಬಗ್ಗೆ ಅವರಿಗಿದ್ದ ಮಿಡಿತವನ್ನು ನೋಡಬಹುದು. ಕ್ರಿ.ಶ.೧೯೬೮ರಲ್ಲಿ ಮದಕರಿನಾಯಕ ವಿದ್ಯಾಸಂಸ್ಥೆಯನ್ನು ಡಿ.ಬೋರಪ್ಪನವರು ಸ್ಥಾಪಿಸಿದರು. ಅಲ್ಲದೆ ಚಿತ್ರದುರ್ಗದ ವಿದ್ಯಾಸಂಸ್ಥೆಯನ್ನು ಟಿ.ಮಾರಪ್ಪನವರು ಬೆಳೆಸಿಕೊಂಡು ಬಂದಿದ್ದರು. ೧೯೮೭ರಲ್ಲಿ ಗೋಕಾಕದಲ್ಲಿ ಸ್ಥಾಪನೆಯಾದ ಲಕ್ಷ್ಮೀ ವಿದ್ಯಾಸಂಸ್ಥೆಯು ಬೆಳವಣಿಗೆಯ ಹಾದಿಯಲ್ಲಿದೆ. ಪ್ರಾಥಮಿಕ, ಪ್ರೌಢ ಶಿಕ್ಷಣ, ಪದವಿಪೂರ್ವ, ಪದವಿ ಮತ್ತು ಇಂಜನಿಯರಿಂಗ್ ಕಾಲೇಜುಗಳನ್ನು ಈ ಶಿಕ್ಷಣ ಸಂಸ್ಥೆಯು ಸ್ಥಾಪಿಸಿಕೊಂಡು ಶೈಕ್ಷಣಿಕ ಪ್ರಗತಿಗೆ ಶ್ರಮಿಸುತ್ತಿದೆ.

ಜನಸಂಘಟನೆ ಹಿನ್ನೆಲೆಯಲ್ಲಿ ಬೇಡರ ಮುಖಂಡರು ವಾಲ್ಮೀಕಿ ಮತ್ತು ಚಾರಿತ್ರಿಕ ಪುರುಷರ ಹೆಸರಿನಲ್ಲಿ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿರುವರು. ನಾಯಕ ಜನಾಂಗದ ಜಾಗೃತಿಗಾಗಿ ಸಮ್ಮೇಳನಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ೧೩.೦೬.೧೯೭೧ರಲ್ಲಿ ಅಖಿಲ ಕರ್ನಾಟಕ ನಾಯಕ ಜನಾಂಗದ ಪ್ರಥಮ ಸಮ್ಮೇಳನವು ಬೆಂಗಳೂರಿನಲ್ಲಿ ಪುಟ್ಟಣ್ಣಶೆಟ್ಟಿ ನಗರಭವನದಲ್ಲಿ ಜರುಗಿತು. ಈ ಕಾರ್ಯಕ್ರಮವನ್ನು ಅಂದಿನ ಮುಖ್ಯಮಂತ್ರಿ ದೇವರಾಜ ಅರಸರು ಉದ್ಘಾಟಿಸಿದರು. ಕೋಸಗಿ ರಾಜಮನೆತನದ ಶ್ರೀ ಸತ್ಯನಾರಾಯಣ ಅವರು ಅಧ್ಯಕ್ಷತೆಯನ್ನು ವಹಿಸಿದ್ದರು. ಎರಡನೇ ನಾಯಕ ಜನಾಂಗದ ಸಮ್ಮೇಳನವು ೧೮.೦೩.೧೯೭೩ರಲ್ಲಿ ದಾವಣಗೆರೆಯಲ್ಲಿ ನಡೆಯಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಮೈಸೂರು ರಾಜ್ಯದ ವಾಲ್ಮೀಕಿ ನಾಯಕ ಸಂಘದ ಅಧ್ಯಕ್ಷರಾಗಿದ್ದ ಎಚ್.ಸಿ.ಬೋರಯ್ಯನವರು ವಹಿಸಿದ್ದರು. ಮಹಾರಾಷ್ಟ್ರದ ಸೊಲ್ಲಾಪುರ ನಗರ ಕಾರ್ಪೋರೇಷನ್‌ದ ಮಾಜಿ ಡೆಪ್ಯೂಟಿ ಮೇಯರ್ ಹಾಗೂ ಶ್ರೀ ಕನ್ನಯ್ಯ ಸಮಾಜದ ಅಧ್ಯಕ್ಷರೂ ಆಗಿದ್ದ ಶ್ರೀ ವೈ.ಟಿ.ಜುನರೆ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ೧೯೮೦ರಲ್ಲಿ ಬೆಳಗಾವಿಯಲ್ಲಿಯೂ ನಾಯಕ ಜನಾಂಗದ ಸಮ್ಮೇಳನ ನಡೆಯಿತು. ೦೩.೦೫.೧೯೮೭ರಲ್ಲಿ ಹರ್ತಿಕೋಟೆಯಲ್ಲಿ ಅಖಿಲ ಕರ್ನಾಟಕ ಗಿರಿಜನ ನಾಯಕ ಜನಾಂಗದ ಸಂಘಟನಾ ಸಮ್ಮೇಳನ ನಡೆಯಿತು. ಆಂಧ್ರ, ಮಹಾರಾಷ್ಟ್ರ, ತಮಿಳುನಾಡು ಮತ್ತು ಕರ್ನಾಟಕದ ವಿವಿಧ ಭಾಗಗಳಿಂದ ಪ್ರತಿನಿಧಿಗಳು ಈ ಸಮ್ಮೇಳನಕ್ಕೆ ಬಂದಿದ್ದರು. ೧೯೮೯ರಲ್ಲಿ ಹರ್ತಿಕೋಟೆ ವೀರೇಂದ್ರಸಿಂಹರ ಪ್ರಯತ್ನದ ಫಲವಾಗಿ ಹುಬ್ಬಳಿಯಲ್ಲಿ ಅಖಿಲ ಕರ್ನಾಟಕ ವಾಲ್ಮೀಕಿ ನಾಯಕ ಜನಾಂಗದ ಮಹಾಸಮ್ಮೇಳನ ನಡೆಯಿತು. ೧೧.೧೧.೨೦೦೧ರಂದು ಬೆಳಗಾವಿಯಲ್ಲಿ ೪ನೇ ರಾಜ್ಯಮಟ್ಟದ ವಾಲ್ಮೀಕಿ ಜಯಂತ್ಯೋತ್ಸವ ಮಹಾಸಮ್ಮೇಳನ ನಡೆಯಿತು.

ಇದೀಗ ರಾಜ್ಯಾದ್ಯಾಂತ ಹಳ್ಳಿಹಳ್ಳಿಗಳಲ್ಲಿಯೂ ವಾಲ್ಮೀಕಿ ಜಯಂತ್ಯೋತ್ಸವಗಳು ಜರುಗುತ್ತಲಿವೆ. ಹಿಂದಿನ ಬೇಡ ಜನಾಂಗದ ಚಾರಿತ್ರಿಕ ಮಹಾಪುರುಷರ ಹೆಸರಿನಲ್ಲಿ ಸಂಘ ಸಂಸ್ಥೆಗಳು, ವೇದಿಕೆಗಳು ಹುಟ್ಟಿಕೊಳ್ಳುತ್ತಲಿವೆ. ಬಳ್ಳಾರಿ ಜಿಲ್ಲಾ ವಾಲ್ಮೀಕಿ ಯುವ ಜಾಗೃತಿ ಸಂಘ, ಯುವನಾಯಕ ಜಾಕೃತದಳ, ಅಲ್ಲದೆ ಮದಕರಿನಾಯಕ, ಸಿಂಧೂರ ಲಕ್ಷ್ಮಣ, ಸುರಪುರದ ವೆಂಕಟಪ್ಪನಾಯಕ, ಎಚ್ಚಮನಾಯಕ ಕುಮಾರರಾಮ ಮುಂತಾದವರ ಹೆಸರಿನಲ್ಲಿ ಯುವಕ ಸಂಘಗಳು ಹುಟ್ಟಿಕೊಂಡಿವೆ. ತಮ್ಮ ಜನಾಂಗದ ವಿದ್ಯಾರ್ಥಿಗಳಿಗೆ ಬಹುಮಾನ, ಪ್ರೋತ್ಸಾಹಧನ ಮುಂತಾದವುಗಳನ್ನು ನೀಡುತ್ತಿದ್ದಾರೆ. ಬೇಡ ಜನಾಂಗದ ನೌಕರರ ಒಗ್ಗಟ್ಟು ಕಂಡುಬರುತ್ತದೆ. ಅವರು ಸಂಘವನ್ನು ಸ್ಥಾಪಿಸಿಕೊಂಡು ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಮುಂದಾಗುತ್ತಿದ್ದಾರೆ. ೧೯೯೭ ಸೆಪ್ಟೆಂಬರ್‌ನಲ್ಲಿ ರಾಜ್ಯಮಟ್ಟದ ನಾಯಕ, ನೌಕರರ ಸಮಾಲೋಚನಾ ಸಭೆಯು ದಾವಣಗೆರೆಯಲ್ಲಿ ನಡೆಯಿತು. ಸಹಕಾರಿ ಕ್ಷೇತ್ರದಲ್ಲಿ ಕರ್ನಾಟಕ ರಾಜ್ಯ

ಸಹಕಾರಿ ಅಪೆಕ್ಸ್ ಬ್ಯಾಂಕ್ ಅಧ್ಯಕ್ಷರಾಗಿ ಕೆ.ಎನ್.ರಾಜಣ್ಣ ಕೆಲಸ ಮಾಡುತ್ತಿದ್ದಾರೆ. ಶಿಕ್ಷಣ, ನ್ಯಾಯಾಂಗ, ಆಡಳಿತ, ಸಾರಿಗೆ, ಅಬಕಾರಿ, ಆದಾಯ ತೆರಿಗೆ, ಮಾರಾಟ ತೆರಿಗೆ, ರಾಜ್ಯ ಹಣಕಾಸು ಇಲಾಖೆ, ಅರಣ್ಯ, ಅಭಿಯಂತರ, ಕೇಂದ್ರ ಜವಳಿ ಬಂದೀಖಾನೆ ಮುಂತಾದ ವಲಯಗಳಲ್ಲಿ ಬೇಡರು ಕೆಲವು ಹುದ್ದೆಗಳಲ್ಲಿದ್ದಾರೆ. ಒಟ್ಟಾರೆ ರಾಷ್ಟ್ರ ಮತ್ತು ರಾಜ್ಯದಲ್ಲಿ ಬೆರಳೆಣಿಕೆಯಷ್ಟು ಜನ ಮಾತ್ರ ಉನ್ನತ ಹುದ್ದೆಗಳಲ್ಲಿದ್ದಾರೆ. ಇನ್ನೂ ಉಳಿದಂತೆ ಕೆಳಹಂತದ ಹುದ್ದೆಗಳಲ್ಲಿ ಹೆಚ್ಚಾಗಿದ್ದಾರೆ. ಕೆಲವು ನೌಕರರು ತಾಲ್ಲೂಕು, ರಾಜ್ಯ ಮತ್ತು ರಾಷ್ಟ್ರಮಟ್ಟದ ಪ್ರಶಸ್ತಿಗಳನ್ನು ಪಡೆದಿರುವುದು ಕಂಡುಬರುತ್ತದೆ. ದಾವಣಗೆರೆಯ ಪ್ರಾಚಾರ್ಯರಾದ ಲಿಂಗಪ್ಪ ಅವರು ೧೯೯೮ರಲ್ಲಿ ರಾಷ್ಟ್ರ ಪ್ರಶಸ್ತಿಯನ್ನು ಪಡೆದಿದ್ದಾರೆ. ಆರ್.ಕೆ.ಮೂರ್ತಿಯವರು ಕ್ರೀಡಾರಂಗದಲ್ಲಿ ನೀಡುವ ರಾಷ್ಟ್ರೀಯ ವಿಕಾಸ ಜ್ಯೋತಿ ಪ್ರಶಸ್ತಿಯನ್ನು ೨೦೦೦-೦೧ನೇ ಸಾಲಿನಲ್ಲಿ ಪಡೆದಿರುವರು. ದೆಹಲಿಯ ಇಂಟರ್‌ನ್ಯಾಷನಲ್ ಪಬ್ಲಿಷಿಂಗ್ ಹೌಸ್‌ನವರು ನೀಡುವ ಶ್ರೇಷ್ಠನಾಗರೀಕ ಪ್ರಶಸ್ತಿಯನ್ನು ೨೦೦೨ನೇ ಸಾಲಿನಲ್ಲಿ ಸುರಪುರದ ಶಾಸಕ ವೆಂಕಟಪ್ಪನಾಯಕರಿಗೆ ನೀಡಲಾಗಿದೆ. ಕೆಲವೊಬ್ಬರು ಜಾನಪದ, ಕ್ರೀಡೆ, ಕೃಷಿ, ಆಡಳಿತ, ವಾಣಿಜ್ಯ, ಬ್ಯಾಂಕ್ ಮುಂತಾದ ಕ್ಷೇತ್ರಗಳಲ್ಲಿಯೂ ಕೆಲವರು ಪ್ರಶಸ್ತಿಗಳನ್ನು ಪಡೆದಿದ್ದಾರೆ. ಪೋಲೀಸ್ ಇಲಾಖೆಯಲ್ಲಿ ಮುಖ್ಯಮಂತ್ರಿ ಪದಕಗಳನ್ನು ಪಡೆದಿರುವವರು ಇವರುವರು.

ಸಾಹಿತ್ಯ ಕ್ಷೇತ್ರಕ್ಕೆ ಬೇಡ ಜನಾಂಗದ ಕೆಲವು ಪ್ರತಿಭಾವಂತರ ಕೊಡುಗೆ ಗಮನಾರ್ಹ. ಇಂಥಾ ಕೆಲವರು ಸಾಹಿತ್ಯ ಕೃಷಿಯನ್ನು ಮಾಡಿ ಜನಾಂಗದ ಯುವ ಪೀಳಿಗೆಯವರಿಗೆ ಮಾದರಿಯಾಗಿದ್ದಾರೆ. ಹರ್ತಿಕೋಟೆಯ ಎಚ್.ವಿ.ವೀರನಾಯಕ ಪರತಿ ಅವರು ಒಬ್ಬ ನಾಟಕಕಾರರೂ, ಇತಿಹಾಸಕಾರರೂ, ಚಿಂತಕರೂ, ಜನಾಂಗದ ಬಗ್ಗೆ ಕಳಕಳಿಯನ್ನು ಹೊಂದಿದವರೂ ಆಗಿದ್ದರು. ೧೯೭೧ರಲ್ಲಿ ವಾಲ್ಮೀಕಿ ಪ್ರಿಂಟರ್ಸ್ ಎನ್ನುವ ಮುದ್ರಣಾಲಯವನ್ನು ಬೆಂಗಳೂರಿನಲ್ಲಿ ತೆರೆದರು; 'ಬಿಚ್ಚುಗತ್ತಿ' ಎಂಬ ವಾರಪತ್ರಿಕೆಯನ್ನು ಹೊರತಂದರು. ನಂತರದ ದಿನಗಳಲ್ಲಿ ಕೆಲವು ವಾಲ್ಮೀಕಿನಾಯಕರ ಪತ್ರಿಕೆಗಳೂ ಹುಟ್ಟಿಕೊಂಡವು. ನಾಯಕ ಮಣಿ, ವಾಲ್ಮೀಕಿ ಸಂದೇಶ ಮತ್ತು ಹಾಲಿ ಪ್ರಸಾರದಲ್ಲಿರುವ ವಾಲ್ಮೀಕಿ ಬಂಧು, ವಾಲ್ಮೀಕಿ ವಾಣಿ, ವಾಲ್ಮೀಕಿ ಕರ್ನಾಟಕ ಪತ್ರಿಕೆಗಳು ಕರ್ನಾಟಕದದ್ಯಾಂತ ಈ ಜನಾಂಗದವರ ಜಾಗೃತಿಗೆ ನೆರವಾಗಿವೆ. ಜನಾಂಗದ ಇತರ ವಿಷಯದೊಡನೆ ಸಾಹಿತ್ಯ, ಸಂಸ್ಕೃತಿಗಳಿಗೆ ಸಂಬಂಧಿಸಿದ ಲೇಖನಗಳನ್ನು ಪ್ರಕಟಿಸುತ್ತಲಿವೆ. ದಿ.ನೆ.ಹ.ಕೋಲಕಾರ, ಎಚ್.ವಿ.ವೀರನಾಯಕ. ಡಾ.ತೇಜಸ್ವಿ ಕಟ್ಟೀಮನಿ, ದಿ.ಎಂ.ಕೆ.ನಾಯಕ ಇಂಥವರಿಂದ ಈ ಪತ್ರಿಕೆಗಳ ಸಂಪಾದನ ಕಾರ್ಯಕ್ಕೆ ಹೊಸ ಚಾಲನೆ ದೊರೆತಿದೆ. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರು ಶ್ರೇಷ್ಠ ಬಂಡಾಯ ಸಾಹಿತಿಗಳೂ, ವಿದ್ವಾಂಸರೂ ಆದ ಡಾ. ಬರಗೂರು ರಾಮಚಂದ್ರಪ್ಪ, ಕಥೆಗಾರ್ತಿ, ವಿದ್ವಾಂಸೆ ಡಾ.ಕಮಲಾಹಂಪನಾ, ಕಥೆಗಾರ, ಕಾದಂಬರಿಕಾರ ಬಿ.ಎಲ್.ವೇಣು, ಡಾ.ವಸಂತರಾಯ

ಚೂರು, ಡಾ.ನೀಲಗಿರಿ ತಳವಾರ, ಡಾ.ರಂಗರಾಜವನದುರ್ಗ, ಡಾ. ಶಿವಾನಂದ ಕಲ್ಲೂರು, ಮೋಹನ ನಾಗಮ್ಮನವರ ಹರ್ತಿಕೋಟೆ ವೀರೇಂದ್ರಸಿಂಹ ಮುಂತಾದವರು ಸಾಹಿತ್ಯ ಕ್ಷೇತ್ರದಲ್ಲಿ ಸಾಹಿತಿಗಳಾಗಿ ಕೆಲವರು ಸಂಪಾದಕರಾಗಿ ಜನಪ್ರಿಯರಾಗಿದ್ದಾರೆ. ಸಂಗೀತ ಕ್ಷೇತ್ರದಲ್ಲಿ ಮೈಸೂರು ಸಂಗೀತ ವಿದ್ವಾನ್ ದಿ.ಬಿ.ದೇವೇಂದ್ರಪ್ಪ, ಪ್ರೊ.ಕೃಷ್ಣಪ್ಪ ಮತ್ತು ಪ್ರೊ.ಹನುಮಣ್ಣನಾಯಕ ದೊರೆ ಡಾ.ಮೀರಾಶಿವಶಂಕರ ಗುಂಡಿ ಇವರುಗಳು ಪ್ರಸಿದ್ಧರು. ಕನ್ನಡ ನಾಟಕ ರಂಗದಲ್ಲಿ ಪ್ರೊ.ಸಿ.ಜಿ.ಕೃಷ್ಣಮೂರ್ತಿ ಪ್ರಸಿದ್ಧರು. ರಂಗನಿರ್ದೇಶನದಲ್ಲಿ ಪ್ರಸಿದ್ಧರಾದ ಇವರು ತಮ್ಮ ಆತ್ಮಕಥನವನ್ನು ಬರೆದುಕೊಂಡಿದ್ದಾರೆ. ಮರಿಯಮ್ಮನ ಹಳ್ಳಿ ನಾಗರತ್ನಮ್ಮ ರಂಗಭೂಮಿಯಲ್ಲಿ ಪ್ರಸಿದ್ಧರಾಗಿ ರಾಜ್ಯ ಪ್ರಶಸ್ತಿಯನ್ನು ಮತ್ತು ಇತರ ಅನೇಕ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಈ ಕಲಾವಿದೆಯ ಜೀವನ ಚರಿತ್ರೆ ಸುಧಾ ವಾರಪತ್ರಿಕೆಯಲ್ಲಿ ಧಾರವಾಹಿ ರೂಪದಲ್ಲಿ ಪ್ರಕಟವಾಗಿದೆ. ಈ ಹಿಂದೆ ನಾರಾಯಣದೇವರಕೆರೆಯ ದಾದಮ್ಮನವರ ಸಂಜೀವಮ್ಮ, ರಾಮಕ್ಕ ಹಾಗೂ ಅಜಿನಾಬಾಯಿಯವರು ೧೯೨೪ರ ಹೊತ್ತಿಗೆ ರಂಗನಟಿಯರಾಗಿ ಬಳ್ಳಾರಿ ಪ್ರದೇಶದಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದರು. ನಟರಾದ ಶಶಿಕುಮಾರ, ಸುದೀಪ ಇಂದು ಕನ್ನಡ ಚಲನಚಿತ್ರರಂಗದಲ್ಲಿ ಪ್ರಸಿದ್ಧರಾಗಿದ್ದಾರೆ. ನ್ಯಾಯಾಂಗ ಇಲಾಖೆ ಯಲ್ಲಿ ರಾಷ್ಟ್ರಮಟ್ಟದವರೆಗೂ ಹೆಸರು ಮಾಡಿದವರೆಂದರೆ ಎಲ್.ಜಿ.ಹಾವನೂರು, ಎನ್.ವೈ.ಹನುಮಂತಪ್ಪ ನವರು, ಜಿ.ಎಚ್.ಪ್ರಸಾದರು, ಆರ್.ರಾಮಕೃಷ್ಣರು, ಕೆ.ಎಚ್.ಮಲ್ಲೇಶಪ್ಪನವರು ಮುಂತಾದವರು. ಎಲ್.ಜಿ.ಹಾವನೂರು ಅವರು ನ್ಯಾಯವಾದಿಗಳಾಗಿ ಮೊದಲ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರಾಗಿ, ದಕ್ಷಿಣ ಆಫ್ರಿಕಾದ ಸಂವಿಧಾನರಚನೆಯ ಸಲಹೆಗಾರರಾಗಿ ಹೆಸರಾಗಿದ್ದಾರೆ. ಎನ್.ವೈ. ಹನುಮಂತಪ್ಪ ಅವರೂ ರಾಜ್ಯ ಶ್ರೇಷ್ಠನ್ಯಾಯಾಲಯದ ನ್ಯಾಯಾಧೀಶರಾಗಿ, ಒರಿಸ್ಸಾ ರಾಜ್ಯದ ಹೈಕೋರ್ಟ್‌ನ ಮುಖ್ಯನ್ಯಾಯಾಧೀಶರಾಗಿ ಸೇವೆ ಸಲ್ಲಿಸಿದ್ದಾರೆ.

ಜನಪದ ಹಾಡುಗಾರರು, ಕಲಾವಿದರು ಸೂಕ್ತ ಪ್ರೋತ್ಸಾಹ ಹಾಗೂ ಗುರುತಿಸುವಿಕೆ ಇಲ್ಲದೆ ಹಳ್ಳಿಗಾಡು ಪ್ರದೇಶದಲ್ಲಿ ಎಲೆಮರೆಯ ಕಾಯಿಯಂತೆ ಉಳಿದುಕೊಂಡಿದ್ದಾರೆ. ಪ್ರಭಾಕರ್ ಎ.ಎಸ್. ಅವರ ಸಂಪಾದಿತ 'ಮ್ಯಾಸಬೇಡರ ಕಥನಗಳು' ಕೃತಿಯ ಮುಖ್ಯ ವಕ್ತೃಗಳಾದ ಪಾಲಮ್ಮ ಮತ್ತು ಸಂಗಡಿಗರು ಜನಪದ ಸಾಹಿತ್ಯದ ಸಿರಿವಂತಿಕೆಯನ್ನು ತೋರಿದ್ದಾರೆ. ಹರತಿ ಸಿರಿ (ಎಚ್.ವಿ.ವೀರನಾಯಕರ ನೆನಪಿನ ಸಂಪುಟ) ಘಟ್ಟಿಹೊಸಳ್ಳಿ ಘಟ್ಟಿಗ (ಮಲೆಸಿದ್ದಪ್ಪನವರ ಸ್ಮರಣ ಸಂಪುಟ), ಕತ್ತಾಲೆ ಬೆಳದಿಂಗಳೊಳಗ ಎಂಬ ಸಿ.ಜಿ.ಕೆಯವರ ಆತ್ಮಕಥನ, ಬರಗೂರವರ ಉಪಸಂಸ್ಕೃತಿ ಮಾಲೆಯ ಪ್ರಸ್ತಾವನೆ, ಬಿ.ಎಲ್.ವೇಣು ಅವರ ಕಾದಂಬರಿಗಳು ಕನ್ನಡ ಸಾಹಿತ್ಯಲೋಕದಲ್ಲಿ ಗಮನಸೆಳೆದಂಥವು. ಹರ್ತಿಕೋಟೆ ವೀರೇಂದ್ರಸಿಂಹ ಅವರು ತಮ್ಮ ವಾಲ್ಮೀಕಿ ಸಾಹಿತ್ಯ ಸಂಪದ ಮೂಲಕ ಕೆಲವು ಕೃತಿಗಳನ್ನು ಪ್ರಕಟಿಸಿರುವರು. ಮತ್ತು ವಾಲ್ಮೀಕಿ ಜನಾಂಗ ಸಮ್ಮೇಳನಗಳನ್ನು ಮಾಡುವ ಮೂಲಕ ಜನಾಂಗ ಜಾಗೃತಿಯನ್ನುಂಟು ಮಾಡುವ

ಕಾರ್ಯದಲ್ಲಿ ಮುಂಚೂಣಿಯಲ್ಲಿದ್ದಾರೆ. ತೇಜಸ್ವೀ ಕಟ್ಟೀಮನಿಯವರು ಕರ್ನಾಟಕದ ಬೇಡ ಜನಾಂಗದ ಸಂಘಟನೆ ಹಾಗೂ ಬೆಳವಣಿಗೆಗಾಗಿ ಹಗಲಿರುಳು ಶ್ರಮಿಸುತ್ತಿದ್ದಾರೆ. ಇತ್ತೀಚೆಗೆ ಕೆಲವರು ಐ.ಎ.ಎಸ್, ಐ.ಪಿ.ಎಸ್, ಕೆ.ಎ.ಎಸ್ ಮುಂತಾದ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಈ ಜನಾಂಗದ ಯುವ ಪೀಳಿಗೆಯವರು ಉತ್ತೀರ್ಣರಾಗಿ ಭಾರತ ಮತ್ತು ಕರ್ನಾಟಕದ ಅತ್ಯುನ್ನತ ಹುದ್ದೆಗಳನ್ನು ಪಡೆಯುತ್ತಿದ್ದಾರೆ. ಕೆಲವರು ಉನ್ನತ ವ್ಯಾಸಂಗಕ್ಕಾಗಿ ವಿದೇಶಗಳಿಗೆ ಹೋಗುತ್ತಿದ್ದಾರೆ. ಕೆಲವರು ವಿದೇಶದಲ್ಲಿಯೇ ಉದ್ಯೋಗಿಗಳಾಗಿ ನೆಲೆಸಿದ್ದಾರೆ. ಆದರೆ ಇಂತವರ ಸಂಖ್ಯೆ ಅತ್ಯಂತ ಕಡಿಮೆ ಎನ್ನಬೇಕು. ಪರಮೇಶಿಕಟ್ಟಿಮನಿಯವರು ವಾಲ್ಮೀಕಿ ನಾಯಕ ಜನಾಂಗದ ವಿಳಾಸಗಳನ್ನೊಳಗೊಂಡ ಡೈರಕ್ಟರಿಯನ್ನು ಪ್ರಕಟಿಸಿದ್ದಾರೆ. ಇದರಿಂದ ವಿವಿಧ ಸ್ಥಳದಲ್ಲಿ ಉದ್ಯೋಗದಲ್ಲಿರುವ ಬೇಡ ಜನಾಂಗದವರಲ್ಲಿ ಸಂಪರ್ಕ, ಸಂಬಂಧಗಳಿಗೆ ಅನುಕೂಲವಾಗಿದೆ.

ಜಾತಿ, ಶಿಕ್ಷಣ ಮತ್ತು ಆರ್ಥಿಕ ಮುಂತಾದ ಅಂಶಗಳನ್ನು ಗುರುತಿಸುವ ನಿಟ್ಟಿನಲ್ಲಿ ಭಾರತದಲ್ಲಿ ನೇಮಕಗೊಂಡ ಹಿಂದುಳಿದ ಆಯೋಗಗಳ ಶಿಫಾರಸ್ಸುಗಳಿಂದಾಗಿ ಕೆಲವು ಜಾತಿಗಳಿಗೆ ಭವಿಷ್ಯತ್ತಿನಲ್ಲಿ ಆಶಾಕಿರಣ ಮೂಡಿತು. ೧೯೭೨ರಲ್ಲಿ ಡಾ.ಎಲ್.ಜಿ.ಹಾವನೂರರನ್ನು ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರನ್ನಾಗಿ ರಾಜ್ಯ ಸರ್ಕಾರ ನೇಮಿಸಿತು. ಇದನ್ನು ಮೊದಲ ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗವೆಂದು ಕರೆಯಲಾಗಿದೆ. ಹಾವನೂರರು ೧. ಹಿಂದುಳಿದ ಸಮುದಾಯಗಳು ೨. ಹಿಂದುಳಿದ ಜಾತಿಗಳು ೩. ಹಿಂದುಳಿದ ಬುಡಕಟ್ಟುಗಳು ಎಂದು ವಿಂಗಡಿಸಿ ೧೯೭೫ರಲ್ಲಿ ತಮ್ಮ ವರದಿಯನ್ನು ಸರಕಾರಕ್ಕೆ ಸಲ್ಲಿಸಿದರು. ಬೇಡ ಮತ್ತು ಅನೇಕ ಕೆಳವರ್ಗಗಳ ಬದುಕನ್ನು ಈ ವರದಿಯು ಬದಲಾಯಿಸಿತು. ಇಲ್ಲಿಯವರೆಗೆ ಕಡೆಗಣಿಸಲ್ಪಟ್ಟ ಕೆಳವರ್ಗಗಳೆಲ್ಲವೂ ವರದಿಯ ವ್ಯಾಪ್ತಿಗೆ ಬಂದವು. ಹೀಗಾಗಿ ಈ ವರದಿಯನ್ನು 'ಹಿಂದುಳಿದವರ ಮ್ಯಾಗ್ನಕಾರ್ಟ', 'ಹಿಂದುಳಿದ ವರ್ಗಗಳ ಭಗವದ್ಗೀತೆ' ಎಂದೆಲ್ಲಾ ಕರೆಯಲಾಯಿತು. ಈ ವರದಿಯಿಂದ ಆಗ ಮುಖ್ಯಮಂತ್ರಿಗಳಾಗಿದ್ದ ದೇವರಾಜ ಅರಸರು ಕರ್ನಾಟಕದ ತುಂಬಾ ಪ್ರಸಿದ್ಧಿಗೆ ಬಂದರಲ್ಲದೆ ಭಾರತದ ರಾಜಕೀಯ ಕ್ಷೇತ್ರದಲ್ಲಿ 'ಹಿಂದುಳಿದ ವರ್ಗಗಳ ಹಿತರಕ್ಷಕ' ಎಂದು ಕರೆಸಿಕೊಂಡರು. ಈ ಸೌಲಭ್ಯದಿಂದ ಶಿಕ್ಷಣ, ಉದ್ಯೋಗ ಮತ್ತು ರಾಜಕೀಯದಲ್ಲಿ ಸ್ವಲ್ಪ ಸುಧಾರಿಸಿಕೊಳ್ಳಲು ಸಾಧ್ಯವಾಯಿತು. ೧೯೮೩ರ ಟಿ.ವೆಂಕಟಸ್ವಾಮಿ ಆಯೋಗ ಮತ್ತು ೧೯೮೮ರ ಓ.ಚನ್ನಪ್ಪರೆಡ್ಡಿ ಆಯೋಗಗಳು ಬೇಡ ಜನಾಂಗದ ಹಿಂದುಳಿದಿರುವಿಕೆಯನ್ನು ಗುರುತಿಸಿ ಸೂಕ್ತ ನ್ಯಾಯವನ್ನು ಒದಗಿಸಿಕೊಡುವಲ್ಲಿ ಸಫಲವಾದವು ಎನ್ನಬಹುದು.

೧೯೭೬ರಲ್ಲಿ ಕೇಂದ್ರ ಸರಕಾರವು ನಾಯಕ, ವಾಲ್ಮೀಕಿ, ಬೇಡ ಇವರನ್ನು ಪರಿಶಿಷ್ಟಪಂಗಡಕ್ಕೆ ಸೇರಿಸಿತು. ಆದರೆ ಕರ್ನಾಟಕ ಸರಕಾರ ಈ ಸೌವಲತ್ತನ್ನು ತಡವಾಗಿ ಈ ವರ್ಗದವರಿಗೆ ನೀಡಿತು. ಕರ್ನಾಟಕದಲ್ಲಿ

೧೯.೦೪.೧೯೯೩ರಿಂದ ಬೇಡರು ಈ ಮೀಸಲಾತಿಯ ಸೌಲಭ್ಯ ಪಡೆದರು. ಹಾಸ್ಟಲ್ ಸೌಲಭ್ಯ, ಶಾಲಾಕಾಲೇಜಿನ ಫೀಜು ರಿಯಾಯಿತಿ, ಸಾಲಸೌಲಭ್ಯ, ಬಡ್ಡಿರಿಯಾಯಿತಿ, ಉದ್ಯೋಗ ಮೀಸಲಾತಿ ಮುಂತಾದವುಗಳ ಉಪಯೋಗವನ್ನು ಈ ವರ್ಗವು ಪಡೆಯುವಂತಾಯಿತು. ೧೯೫೦ರಲ್ಲಿ ಅಸ್ತಿತ್ವಕ್ಕೆ ಬಂದ ಪರಿಶಿಷ್ಟಜಾತಿ ಮತ್ತು ಪಂಗಡಗಳ ರಾಷ್ಟ್ರೀಯ ಆಯೋಗವು ತನ್ನ ಉದ್ದೇಶಕ್ಕನುಗುಣವಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಹಿತಾಸಕ್ತಿಯನ್ನು ರಕ್ಷಿಸುವ ಜವಾಬ್ದಾರಿ ಹೊತ್ತಿದೆ. ೧೯೯೯ ಅಕ್ಟೋಬರ್‌ನಲ್ಲಿ ಭಾರತ ಸರಕಾರ ಬುಡಕಟ್ಟುಗಳ ಅಭಿವೃದ್ಧಿಗಾಗಿ ಪ್ರತ್ಯೇಕ ಬುಡಕಟ್ಟು ವ್ಯವಹಾರಗಳ ಖಾತೆಯನ್ನು ಆರಂಭಿಸಿದೆ. ಸಂವಿಧಾನಬದ್ಧ ಸೌಲತ್ತುಗಳನ್ನು ಈ ವರ್ಗಗಳಿಗೆ ನೀಡಲಾಗಿದ್ದರೂ, ಸಾಮಾಜಿಕ, ಆರ್ಥಿಕ ಮತ್ತು ಮೀಸಲಾತಿ ವಲಯಗಳಲ್ಲಿ ಈ ವರ್ಗಗಳಿಗೆ ನ್ಯಾಯಯುತ ಸ್ಥಾನಮಾನ ಮತ್ತು ಸಮಾನ ಆದ್ಯತೆಗಳು ದೊರಕದಿರುವುದನ್ನು ಕಾಣಬಹುದು. ಕರ್ನಾಟಕದಲ್ಲಿ ಪರಿಶಿಷ್ಟ ಪಂಗಡಕ್ಕೆ ನಿಗದಿಪಡಿಸಿದ ಮೀಸಲಾತಿ ಪ್ರಮಾಣ ಕೇವಲ ಶೇಕಡಾ ೩ರಷ್ಟು ಮಾತ್ರ. ಅದರಲ್ಲೂ ಬೇಡ ಜನಾಂಗದ ಜೊತೆಯಲ್ಲಿ ಇತರ ಕೆಲವು ಬುಡಕಟ್ಟು ಸಮುದಾಯ ಜನಾಂಗಗಳು ಈ ಸೌಲಭ್ಯವನ್ನು ಪಡೆಯುತ್ತಲಿವೆ.

ಶಿಕ್ಷಣದಲ್ಲಿ ಬೇಡರು ತೀರಾ ಹಿಂದುಳಿದಿರುವುದನ್ನು ಕಾಣಬಹುದು. ಉನ್ನತ ಶಿಕ್ಷಣವಂತೂ ಕೆಲವೇ ಕೆಲವರು ಪಡೆದಿರುವುದನ್ನು ಹಾಗೂ ಕೆಲವು ವಿಷಯಗಳಲ್ಲಿ ಮಾತ್ರ ಉನ್ನತ ಶಿಕ್ಷಣ ಪಡೆದಿರುವುದು ಕಂಡುಬಂದಿದೆ. ವೈದ್ಯಕೀಯ, ತಾಂತ್ರಿಕ, ವಿಜ್ಞಾನ, ವಿಷಯಗಳಲ್ಲಿ ಉನ್ನತ ಶಿಕ್ಷಣ ಪಡೆದ ಅರ್ಹ ಅಭ್ಯರ್ಥಿಗಳು ಸಿಗದೇ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ, ಸಂಶೋಧನಾ ಕ್ಷೇತ್ರಗಳಲ್ಲಿ ಅನೇಕ ಹುದ್ದೆಗಳು ಹಾಗೇ ಉಳಿದುಕೊಂಡು ಬರುತ್ತಲಿವೆ. ಉನ್ನತ ಹಂತದವರೆಗೆ ಓದಿಸುವಷ್ಟು ತಾಳ್ಮೆ, ಖರ್ಚುಮಾಡುವ ಆರ್ಥಿಕ ಸಾಮರ್ಥ್ಯ ಬೇಡರಲ್ಲಿ ಇಲ್ಲದಿರುವುದೇ ಇದಕ್ಕೆ ಕಾರಣ. ಬಡತನ, ಅಜ್ಞಾನವೂ ಇನ್ನೊಂದು ಮುಖ್ಯ ಕಾರಣ. ವಿದ್ಯಾವಂತ ಕುಟುಂಬಗಳಲ್ಲಿ ಮುಂದುವರೆದ ಕುಟುಂಬದವರು ಮಾತ್ರ ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸುವ ಪ್ರಯತ್ನ ಮಾಡಿರುವುದು ಕಂಡುಬರುತ್ತದೆ. ಇತ್ತೀಚಿನ ಪ್ರಸಾರ ಮಾಧ್ಯಮ ಗಳ ಪ್ರಭಾವದಿಂದ ರೈತರು ತಮ್ಮ ಮಕ್ಕಳಿಗೆ ಶಿಕ್ಷಣ ನೀಡುವಲ್ಲಿ ಉತ್ಸಾಹ ತೋರುತ್ತಾರಾದರೂ ಹೈಸ್ಕೂಲ್ ಹಂತಕ್ಕೆ ಅವರ ಉತ್ಸಾಹ ನಿಂತುಹೋಗುತ್ತಿರುವುದನ್ನು ಕಾಣಬಹುದು. ೧೯೬೧ರಲ್ಲಿ ನಾಗನಗೌಡ ಸಮಿತಿಯ ಪ್ರಕಾರ ಹೈಸ್ಕೂಲಿನಲ್ಲಿ ಕೊನೆಯ ಮೂರು ವರ್ಗಗಳನ್ನು ಪರಿಶೀಲಿಸಿದಾಗ ಹೈಸ್ಕೂಲಿನಲ್ಲಿ ಕಲಿಯುವ ಈ ಜನಾಂಗದವರ ಮಕ್ಕಳ ಸಂಖ್ಯೆ ಅತೀ ಕಡಿಮೆ ಇದ್ದಿತು. ಗಿರಿಜನರು ಪ್ರತಿ ಸಾವಿರಕ್ಕೆ ೧.೪ರಷ್ಟು ಇದ್ದರೆ, ಬೇಡ ಜನಾಂಗದ ಬಾಲಕರ ಸಂಖ್ಯೆ ಪ್ರತಿ ಸಾವಿರಕ್ಕೆ ೧.೨ರಷ್ಟು ಮಾತ್ರ ಇದ್ದುದು ಕಂಡುಬಂದಿದೆ. ೧೯೭೨ರಲ್ಲಿ ರಾಜ್ಯದ ಬೇಡ ಜನಾಂಗದಲ್ಲಿ ಎಸ್.ಎಸ್.ಎಲ್.ಸಿ ಪಾಸಾದವರ ಸಂಖ್ಯೆ ಒಟ್ಟು ೭೧೦ ಮಾತ್ರ. ಹಾಗೆಯೇ, ೧೯೮೮ರಲ್ಲಿ ಈ ಪರೀಕ್ಷೆಗೆ ಕುಳಿತವರು ೨೫೭೪;

ಇವರಲ್ಲಿ ಪಾಸಾದವರು ೧೧೯೯ ಮಾತ್ರ. ಹೀಗೆ ಬೇಡ ಜನಾಂಗದವರು ಶಿಕ್ಷಣದ ಬಗ್ಗೆ ಉದಾಸೀನತೆಯನ್ನು ತೋರಿರುವುದು ಕಂಡುಬರುತ್ತದೆ.

ಈ ಜನಾಂಗದವರ ಈಚೀನ ಪ್ರವೃತ್ತಿಯೆಂದರೆ ತಮ್ಮ ಮಕ್ಕಳಿಗೆ ಅಲ್ಪ ಸ್ವಲ್ಪ ಶಿಕ್ಷಣ ನೀಡಿ ತಮ್ಮ ವೃತ್ತಿಯನ್ನೇ ಮುಂದುವರೆಸುವಂತೆ ಪ್ರೋತ್ಸಾಹಿಸುತ್ತಿರುವುದು. ಒಟ್ಟಿನಲ್ಲಿ ಈ ಅಧ್ಯಯನ ವ್ಯಾಪ್ತಿಯೊಳಗೆ ಬರುವ ಜಿಲ್ಲೆಗಳಲ್ಲಿ ಬರುವ ಬೇಡರ ಶೈಕ್ಷಣಿಕ ಸ್ಥಿತಿಗತಿ ತೃಪ್ತಿದಾಯಕವಾಗಿಲ್ಲದಿರುವುದು ಸ್ಪಷ್ಟ.

## ೫.೫. ಸಾಂಸ್ಕೃತಿಕ ಪರಿವರ್ತನೆ

ಸಂಸ್ಕೃತಿ ಸ್ವಭಾವತಃ ಸಂಪ್ರದಾಯವಾದಿಯಾಗಿದ್ದು, ಸ್ಥಿರತೆಯ ಕಡೆಗೆ ಒಲವು ತೋರಿದರೂ ಅದು ಕೂಡ ಕಾಲಾಂತರದಲ್ಲಿ ಪರಿವರ್ತನೆ ಹೊಂದುತ್ತದೆ; ಹೊಸ ಬದಲಾವಣೆಗಳಿಗೆ ಅವಕಾಶ ಕಲ್ಪಿಸುತ್ತದೆ. ಸಂಸ್ಕೃತಿಯ ಬದಲಾವಣೆ ಕ್ರಮೇಣ ಆಗುತ್ತದಾದರೂ, ನಾಗರಿಕತೆಯಲ್ಲಿ ಅದು ಶೀಘ್ರವಾಗಿ ಆಗುತ್ತದೆ. ಪಾಶ್ಚಾತ್ಯ ಶಿಕ್ಷಣ ಮತ್ತು ನಾಗರಿಕತೆ ಬೆಳೆದಂತೆ ದೇವಾಲಯದ ವಿಧಿಗಳು ಮತ್ತು ಧಾರ್ಮಿಕ ಆಚರಣೆಗಳು ಕುಂಠಿತವಾದವು. ವೈಜ್ಞಾನಿಕತೆ ಬೆಳೆದಂತೆ ಧರ್ಮದ ಬಗೆಗಿನ ನಿಲುವುಗಳಲ್ಲಿಯೂ ಬದಲಾವಣೆಗಳಾದವು. ಬೇಡ ಜನಾಂಗವೂ ಇಂಥ ಗಮನಾರ್ಹ ಪರಿವರ್ತನೆಗಳಿಗೆ ಗುರಿಯಾಯಿತು.

ಬೇಡ ಜನಾಂಗವು ನಿಸರ್ಗದ ಮಡಿಲಿನಲ್ಲಿ ಬೆಳೆದ ಬುಡಕಟ್ಟು ಜನಾಂಗವಾದರೂ ಕಾಲಾನಂತರದಲ್ಲಿ ಇದರಲ್ಲಿ ಅನೇಕ ಬದಲಾವಣೆಗಳು ಕಾಣಿಸಿಕೊಂಡವು. ಆದರೂ ಇನ್ನೂ ತನ್ನ ಮೂಲ ಸಂಸ್ಕೃತಿಯನ್ನು ಅಲ್ಪಸ್ವಲ್ಪವಾದರೂ ಉಳಿಸಿಕೊಂಡು ಬಂದಿದೆಯೆನ್ನಲಡ್ಡಿಯಿಲ್ಲ. ಬೇಡ ಜನಾಂಗಕ್ಕೆ ಹಿಂದಿನಿಂದಲೂ ಮಠಗಳಾಗಲೀ, ಮಠಾಧಿಪತಿಗಳಾಗಲೀ ಇರಲಿಲ್ಲ. ಬೇಡರ ದೊರೆಗಳೇ ಬೇಡರ ಮತ ಸಂಪ್ರದಾಯಗಳಿಗೂ ಮಾರ್ಗದರ್ಶಕರಾಗಿದ್ದರು. ಆದುದರಿಂದ ಬೇಡ ದೊರೆಗಳು "ಶ್ರೀಮನ್ಮಾಹಾನಾಯಕಾಚಾರ್ಯ", "ನಾಯಕ ಶಿರೋಮಣಿ" ಎಂದು ಕರೆದುಕೊಂಡಿರುವುದು ಕಾಣುತ್ತದೆ. ಕೆಲವು ದೊರೆಗಳು ಗುರುಗಳಾಗಿ ಮತ್ತು ದೊರೆಗಳಾಗಿ ನಡೆದುಕೊಂಡಿದ್ದರು. ಕನಕಗಿರಿ ನಾಯಕರು ಗುರು ಮತ್ತು ದೊರೆ ಎರಡೂ ಸ್ಥಾನಮಾನಗಳನ್ನು ಪಡೆದಿದ್ದರು. ಈಗಲೂ ಈ ನಾಯಕ ಮನೆತನದ ವಂಶಸ್ಥರು ಈ ಸ್ಥಾನಮಾನಗಳನ್ನು ಅನುಭವಿಸುತ್ತಿದ್ದರೂ, ಮೊದಲಿನಷ್ಟು ಇಲ್ಲ. ಇವರು ಈ ಭಾಗದಲ್ಲಿ ಮಾತ್ರ ಬೇಡ ಜನಾಂಗದ ಧರ್ಮಗುರುಗಳೇ ವಿನಾ ಇಡೀ ಕರ್ನಾಟಕದ ಬೇಡ ಜನಾಂಗದ ಗುರುಗಳಲ್ಲ. ಈ ಹಿಂದಿನ ಕನಕಗಿರಿ ಸಂಸ್ಥಾನದ ವಿಸ್ತಾರ ಪ್ರದೇಶಕ್ಕೆ ಮಾತ್ರ ಗುರುಗಳು. ಕರ್ನಾಟಕದ ಬೇಡರು ಇತ್ತೀಚಿಗೆ ೧೯೯೮ರಲ್ಲಿ ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನ ರಾಜನಹಳ್ಳಿಯಲ್ಲಿ ಮಹರ್ಷಿ ವಾಲ್ಮೀಕಿ ನಾಯಕ ಮಹಾಸಂಸ್ಥಾನವನ್ನು ಸ್ಥಾಪಿಸಿಕೊಂಡ ನಂತರ ಸಮಸ್ತ ಬೇಡ ಜನಾಂಗಕ್ಕೆ ಈ ಸಂಸ್ಥಾನವು ಗುರುಪೀಠವೆನಿಸಿದೆ. ಶ್ರೀ ಪುಣ್ಯಾನಂದಪುರಿ ಮಹಾಸ್ವಾಮಿಗಳು ಈ ಸಂಸ್ಥಾನದ ಮೊದಲ ಪೀಠಾಧೀಶರಾಗಿ ಧರ್ಮಸೇವೆ ಆರಂಭಿಸಿದ್ದಾರೆ. ಈ

ಮೊದಲು ಬೆಂಗಳೂರಿನಲ್ಲಿ ಡಾ. ಸತ್ಯಾನಂದಪುರಿ ಮಹಾಸ್ವಾಮಿಗಳು ಬೇಡ ಜನಾಂಗಕ್ಕೆ ಧರ್ಮ ಗುರುಗಳೆಂದು ಕೆಲವು ದಿನಗಳ ಕಾಲ ಕರ್ನಾಟಕದ ತುಂಬಾ ಪ್ರವಾಸ ಮಾಡಿರುವುದು ತಿಳಿದುಬರುತ್ತದೆ. ಸಾಂಸ್ಕೃತಿಕವಾಗಿ ಬೇಡರನ್ನೂ ಒಗ್ಗೂಡಿಸುವ ಹಾಗೂ ಸುಧಾರಿಸುವ ಸ್ವಾಮೀಜಿಯವರ ಪ್ರಯತ್ನಕ್ಕೆ ಬೇಡ ಜನಾಂಗ ಪೂರಕ ಪ್ರತಿಕ್ರಿಯೆ ನೀಡಿದೆ.

ಬೇಡ ಜನಾಂಗದಲ್ಲಿ ಪ್ರಚಲಿತವಿದ್ದ ಮುಂಗಾರಿ ಹಬ್ಬ, ಹಿರಿಯರ ಹಬ್ಬ, ಢಿಕ್ಕಿ ಹಬ್ಬ, ಗುಗ್ಗರಿ ಹಬ್ಬ, ವಾಸೆ ಕೊಯ್ಯೋದು ಮುಂತಾದ ಹಬ್ಬಗಳು ಈಗ ವೈಭವವನ್ನು ಕಳೆದುಕೊಳ್ಳುತ್ತಲಿವೆ. ಆದರೂ ಗ್ರಾಮೀಣ ಪ್ರದೇಶದಲ್ಲಿನ ಜನರು ಕೆಲವೊಮ್ಮೆ ಈ ಹಬ್ಬಗಳ ಆಚರಣೆ ಮಾಡುತ್ತಾರೆ. ಹಿಂದೂಧರ್ಮದ ಪ್ರಭಾವದಿಂದ ಇವರ ಹಬ್ಬಗಳು ಸಂಸ್ಕೃತೀಕರಣಗೊಳ್ಳುತ್ತಲಿವೆ. ೧೯೬೧-೧೯೭೧ ಜನಗಣತಿ ಪ್ರಕಾರ ಬೇಡರು ಶೇ. ೧೦೦ ರಷ್ಟು ಹಿಂದೂಗಳಾಗಿದ್ದರು. ಗಣೇಶ ಚರ್ತುಥಿ, ದೀಪಾವಳಿ, ಮುಂತಾದ ಹಬ್ಬಗಳ ಜೊತೆಗೆ ವ್ರತಗಳು ಆರಂಭವಾಗಿವೆ. ನಗರದಲ್ಲಿ ನೆಲೆಸಿರುವವರು ಮೇಲ್ವರ್ಗಗಳ ಆಚರಣೆಗಳನ್ನು ಅನುಕರಣೆ ಮಾಡುತ್ತಿದ್ದಾರೆ. ಬೇಡರು ತಮ್ಮ ಜನಾಂಗದ ಸಾಂಸ್ಕೃತಿಕ ವೀರರನ್ನು ಹಿಂದಿನಿಂದಲೂ ಆರಾಧಿಸುತ್ತಾ ಬಂದಿರುವರು. ಜೊತೆಗೆ ಪುಣ್ಯಕ್ಷೇತ್ರಗಳ ದೇವರುಗಳನ್ನು ಪೂಜಿಸುತ್ತಾರೆ. ಉಪವಾಸ, ವ್ರತ, ತೀರ್ಥಯಾತ್ರೆ, ಮಡಿವಂತಿಕೆ ಮುಂತಾದವುಗಳು ವಿದ್ಯಾವಂತರ ಗಮನವನ್ನು ಸೆಳೆಯುತ್ತಲಿವೆ. ಮನೆಗಳನ್ನು, ದೇವಸ್ಥಾನಗಳನ್ನು, ಆಧುನಿಕ ತಂತ್ರಜ್ಞಾನದ ಮೂಲಕ ನಿರ್ಮಾಣ ಮಾಡುತ್ತಿದ್ದಾರೆ. ದೇವತೆಗಳ ಬಗೆಗಿನ ನಂಬಿಕೆ, ಭಕ್ತಿ ವಿಷಯಗಳು ನಾಟಕೀಯ ಸ್ವರೂಪ ಪಡೆದುಕೊಂಡಿವೆ. ತಮ್ಮ ಜನಾಂಗದ ಸಾಂಸ್ಕೃತಿಕ ವೀರರ ಆರಾಧನೆ ಜೊತೆಗೆ ಇತರ ಸ್ಥಳಗಳಲ್ಲಿ ಪ್ರಸಿದ್ಧರಾದ ಸಾಂಸ್ಕೃತಿಕ ಸಿದ್ಧಿಪುರುಷರ ಆರಾಧನೆಯು ನಡೆಯುತ್ತಲಿದೆ. ಉದಾ: ಧರ್ಮಸ್ಥಳ ಮಂಜುನಾಥ, ತಿರುಪತಿ ವೆಂಕಟರಮಣ, ಕೊಟ್ಟೂರು ಕೊಟ್ರೇಶ, ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ, ಮಂತ್ರಾಲಯ ರಾಘವೇಂದ್ರ, ಇಟಗಿ ಭೀಮಾಂಬಿಕೆ, ಕೊಲ್ಲೂರು ಮೂಕಾಂಬಿಕೆ, ಕನಕಗಿರಿಯ ಕನಕರಾಯ, ಸುರಪುರದ ವೇಣುಗೋಪಾಲ, ಗುಡಗುಂಟಿಯ ಅಮರೇಶ್ವರ, ಹಂಪೆಯ ವಿರೂಪಾಕ್ಷ, ಶಬರಿಮಲೆ ಅಯ್ಯಪ್ಪ ಮುಂತಾದ ದೇವತೆಗಳನ್ನು ಬೇಡರು ಆರಾಧಿಸುತ್ತಾರೆ; ಈ ದೇವತೆಗಳ ಹೆಸರುಗಳನ್ನು ತಮ್ಮ ಮಕ್ಕಳಿಗೆ ನಾಮಕರಣ ಮಾಡುವುದನ್ನು ಬೇಡರಲ್ಲಿ ಕಾಣಬಹುದು. ಮೊದಲಿನಂತೆ ದೇವಾಲಯಗಳನ್ನು ನಿರ್ಮಾಣ ಮಾಡದೇ ಆಧುನಿಕ ರೀತಿಯಲ್ಲಿ ನಿರ್ಮಾಣ ಮಾಡುತ್ತಾರೆ. ಬೀಳುತ್ತಿರುವ, ಇಲ್ಲವೆ, ಹಾಳಾದ ದೇವಾಲಯಗಳು ಜೀರ್ಣೋದ್ಧಾರ ಗೊಳ್ಳುತ್ತಲಿವೆ. ಪ್ರತಿವರ್ಷಕ್ಕೊಮ್ಮೆ ತಮ್ಮ ಮನೆದೇವರಿರುವ ಕ್ಷೇತ್ರಕ್ಕೆ ಹೋಗಿಬರುತ್ತಿದ್ದ ಸಂಪ್ರದಾಯ ಈಗಿಲ್ಲ. ಯಾವುದಾದರೊಂದು ಶುಭ ಸಂದರ್ಭಗಳು ತಮ್ಮ ಮನೆಗಳಲ್ಲಿ ನಡೆಯುತ್ತಿದ್ದರೆ ಆಗ ಇಂತಹ ಸ್ಥಳಗಳಿಗೆ ಹೋಗಿ ಬರುವ ಪದ್ಧತಿ ಇದೆ. ಈ ಬದಲಾವಣೆ ಕೇವಲ ಬೇಡ ಜನಾಂಗಕ್ಕೆ ಸೀಮಿತವಾಗಿರದೇ

ಎಲ್ಲಾ ಜನಾಂಗಗಳಿಗೂ ಅನ್ವಯಿಸುತ್ತವೆ. ಮೇಲ್ವರ್ಗದವರಂತೆ ವೇಷಭೂಷಣ, ಪೂಜೆ ಪುರಸ್ಕಾರ ಮಾಡುತ್ತಿರುವುದನ್ನು ಬೇಡರಲ್ಲಿಯೂ ಕಾಣಬಹುದು. ಮಾಂಸಾಹಾರವನ್ನು ತ್ಯಜಿಸಿದ ಕುಟುಂಬಗಳು ಬೇಡರಲ್ಲೂ ಕಾಣಬಹುದು. ಮೇಲ್ವರ್ಗದ ಮಠಗಳು, ಪುಣ್ಯಕ್ಷೇತ್ರದರ್ಶನ ಮುಂತಾದವುಗಳ ಪ್ರಭಾವದಿಂದ ಅನಾಗರಿಕ ಸಂಸ್ಕೃತಿಯ ಲಕ್ಷಣಗಳನ್ನು ಕೈಬಿಟ್ಟು ಸಂಸ್ಕೃತರಾಗಿ ಬದುಕುವ ದೃಷ್ಟಿ ಬೇಡ ಜನಾಂಗಗದಲ್ಲಿ ಕಂಡುಬರುತ್ತಿದೆ.

ಬೇಡ ಜನಾಂಗದಲ್ಲಿ ಮದುವೆ ಮತ್ತು ಇತರ ಸಂದರ್ಭಗಳಲ್ಲಿ ನಡೆಯುತ್ತಿದ್ದ ದೇವತಾ ಕಾರ್ಯಗಳು ಈಗ ಮೊಟಕುಗೊಂಡಿವೆ. ಹಬ್ಬಗಳು ಸರಳವಾಗಿವೆ. ಹಬ್ಬದ ಹಿಂದಿನ ತಯಾರಿ, ಉತ್ಸಾಹಗಳು ಈಗ ಹಬ್ಬ ದಿನವಷ್ಟೇ ನೋಡಬೇಕಾಗುತ್ತದೆ. ಸಮಾಜದಲ್ಲಿ ವಿದ್ಯಾವಂತರು ಪುರೋಹಿತರನ್ನು, ಅಯ್ಯಗಳನ್ನು, ಸಾಂದರ್ಭಿಕವಾಗಿ ಮಾತ್ರ ಬಳಸಿಕೊಳ್ಳುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ನೆಲೆಸಿದ ಬೇಡರು ಹಿಂದಿನ ಪದ್ಧತಿಗಳನ್ನು ಅನುಸರಿಸುತ್ತರಾದರೂ ಅವುಗಳಲ್ಲಿ ಮೊದಲಿನಷ್ಟು ಕಟ್ಟುನಿಟ್ಟು ಇಲ್ಲ. ಮೊದಲು ಮುದ್ರಾಧಾರಣೆ ಕಾರ್ಯಕ್ರಮ ಧಾರ್ಮಿಕ ವಿಧಿ-ವಿಧಾನಗಳ ಮೂಲಕ, ಕುಲ ಗುರುಗಳು ಮತ್ತು ದೇವಾಲಯದ ಪೂಜಾರಿಗಳ ನೇತೃತ್ವದಲ್ಲಿ ಹಾಗೂ ಊರಿನ ಸಮ್ಮುಖದಲ್ಲಿ ನಡೆಯುತ್ತಿತ್ತು. ಈಗ ಅದು ಸರಳವಾಗಿದೆ. ಮಹರ್ಷಿ ವಾಲ್ಮೀಕಿ ಜಯಂತ್ಯೋತ್ಸವನ್ನು ಇಂದು ಸಾರ್ವಜನಿಕ ಕಾರ್ಯಕ್ರಮವಾಗಿ ನಡೆಯುತ್ತಲಿದೆ; ವಾಲ್ಮೀಕಿ ಮಹರ್ಷಿ ಮಂದಿರಗಳು, ದೇವಾಲಯಗಳು ನಿರ್ಮಾಣಗೊಂಡಿವೆ. ಶಿವರಾತ್ರಿಯಂದು ಬೇಡರ ಕಣ್ಣಪ್ಪನ ಆರಾಧನೆ. ಕುಮಾರಾಮ, ಗಾದ್ರಿಪಾಲನಾಯಕ, ಜಗಲೂರಜ್ಜ ಮುಂತಾದ ವ್ಯಕ್ತಿಗಳ ಆರಾಧನೆಯು ಬೇಡರಲ್ಲಿ ಕಂಡುಬರುತ್ತದೆ. ಕುಮಾರರಾಮ ದೇವರು ಶ್ರೀ ರಾಮದೇವರಾಗಿ ಆರಾಧನೆಗೊಳ್ಳುವುದು, ಕುಮಾರರಾಮ ದೇವಾಲಯಗಳು ಶ್ರೀರಾಮದೇವಾಲಯವಾಗಿ ಬದಲಾದುದು ಬೇಡ ಜನಾಂಗದಲ್ಲಿ ಕಾಣಬಹುದು. ವೀರಶೈವ ಧರ್ಮ ಪ್ರಭಾವವಿರುವ ಕಡೆ ಬಹುತೇಕವಾಗಿ ಬೇಡರು ವೀರಶೈವ ಧರ್ಮದವರಂತೆ ಬಸವ ಜಯಂತಿ, ಶಿವರಾತ್ರಿ, ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ. ಕೇವಲ ಬೇಡರೇ ನೆಲೆಸಿರುವ ಗ್ರಾಮಗಳಲ್ಲಿ ತಮ್ಮದೇ ಆದ ಬುಡಕಟ್ಟು ವಿಧಿ-ವಿಧಾನಗಳ ಮೂಲಕ ಹಬ್ಬ-ಆಚರಣೆ, ದೇವತೆಗಳ ಸ್ಮರಣೆ ನಡೆಯುತ್ತವೆ. ಆದರೆ ಆಧುನಿಕತೆಯ ಪ್ರಭಾವದಿಂದ ಆಚರಣೆಗಳು ಸರಳವಾಗಿವೆ.

ವೀರಶೈವ ಧರ್ಮಕ್ಕೆ ಮತಾಂತರರಾದ ಪಾಳೆಯಗಾರರ ವಂಶದವರಲ್ಲಿ ಹಿಂದಿದ್ದ ವೀರಶೈವ ಧರ್ಮಾಚರಣೆ ಈಗ ಕಡಿಮೆ ಹಾಗೂ ಅನಿವಾರ್ಯವಷ್ಟೆ. ವಾಲ್ಮೀಕಿನಾಯಕ ಮಹಾಸಂಸ್ಥಾನದ ಮೊದಲ ಪೀಠಾಧೀಶ್ವರರಾದ ಶ್ರೀ ಪುಣ್ಯಾನಂದಪುರಿ ಮಹಾಸ್ವಾಮಿಗಳು ಬೇಡ ಜನಾಂಗವನ್ನು ಒಂದುಗೂಡಿಸಲು ಹಾಗೂ ಅವರಲ್ಲಿ ಜಾಗೃತಿಯನ್ನುಂಟು ಮಾಡಲು ಪ್ರಯತ್ನಿಸುತ್ತಿರುವರು. ಧಾರ್ಮಿಕ ಕಂದಾಚಾರಗಳನ್ನು

ಅಂದರೆ ಬಲಿಕೊಡುವುದು, ದೇವದಾಸಿ ಬಿಡುವುದು, ದುಂದುವೆಚ್ಚದಲ್ಲಿ ಹಬ್ಬ-ಹರಿದಿನಗಳನ್ನು ಮಾಡುವುದು ಮುಂತಾದ ಅನೇಕ ಪದ್ಧತಿಗಳನ್ನು ಬೇಡರಿಂದ ತೆಗೆದು ಹಾಕುವ ಪ್ರಯತ್ನ ಅವರದು. ಈ ಮಠದ ಸ್ಥಾಪನೆಯಿಂದ ಬೇಡರಲ್ಲಿ ನವಶಕ್ತಿ ಬಂದಂತಾಗಿದೆಂಬುದರಲ್ಲಿ ಅನುಮಾನವಿಲ್ಲ. ರಾಜಕೀಯವಾಗಿ ಸಾಮಾಜಿಕವಾಗಿ ಜನಾಂಗಕ್ಕೇನಾದರೂ ಅನ್ಯಾಯವಾದಾಗ ಹೋರಾಟ ಮಾಡಲು ಚೇತನ ಶಕ್ತಿಯನ್ನು ಈ ಮಠ ನೀಡುತ್ತಿದೆ ಎಂಬ ಮಾತುಗಳು ಬೇಡ ಜನಾಂಗದಲ್ಲಿ ಕೇಳಿಬರುತ್ತವೆ. ಜನಾಂಗಕ್ಕೆ ಅನ್ಯಾಯವಾದ ಸಂದರ್ಭಗಳಲ್ಲಿ ಈ ಸ್ವಾಮೀಜಿ ಪ್ರವೇಶಿದ ಸಂದರ್ಭಗಳು ಕಂಡುಬಂದಿವೆ. ಶೈಕ್ಷಣಿಕವಾಗಿ ಮಠವು ಈಗ ವಿದ್ಯಾಸಂಸ್ಥೆಯೊಂದನ್ನು ಸ್ಥಾಪಿಸಿಕೊಂಡಿದೆ. ಶಿಕ್ಷಣದ ಬೆಳವಣಿಗೆಗೆ ಮುಂದಿನ ದಿನಗಳಲ್ಲಿ ಮಠವು ಅಮೂಲ್ಯ ಕೊಡುಗೆ ನೀಡಬಹುದೆಂಬ ನಿರೀಕ್ಷೆ ಈ ಜನಾಂಗದಲ್ಲಿದೆ.

ಬೇಡ ಜನಾಂಗದ ಮೇಲೆ ಇತರ ಧರ್ಮಗಳ ಪ್ರಭಾವವಾಗಿದೆ. ೧೯೭೧ ರಲ್ಲಿ ಶೇ. ೧೦೦ ರಷ್ಟು ಹಿಂದೂಗಳಾಗಿದ್ದ ಬೇಡರು ೧೯೯೯ ಜನಗಣತಿ ಪ್ರಕಾರ ೯೯.೯೯ ರಷ್ಟು ಹಿಂದೂ ಧರ್ಮವನ್ನು ಆಚರಿಸಿರುವುದು ತಿಳಿದುಬರುತ್ತದೆ. ಕ್ರೈಸ್ತ ಇಸ್ಲಾಂ, ಬೌದ್ಧ, ಇತರ ಧರ್ಮಗಳ ಕಡೆ ಬೇಡರು ಹೋಗಿರುವ ಅಂಶವನ್ನು ಇದರಿಂದ ತಿಳಿಯಬಹುದು. ಇಸ್ಲಾಂ ಧರ್ಮದ ಪ್ರಭಾವ ಬೇಡ ಜನಾಂಗದ ಮೇಲೂ ಆಗಿರುವುದರಿಂದ ಅವರು ಮುಸ್ಲಿಂ ಹಬ್ಬವಾದ ಮೊಹರಂ ಹಬ್ಬವನ್ನು ಆಚರಿಸುತ್ತಾರೆ. ಬಹುತೇಕವಾಗಿ ಹಿಂದುಗಳೇ ಹೆಚ್ಚಾಗಿ ಈ ಹಬ್ಬದಲ್ಲಿ ಪಾಲ್ಗೊಳ್ಳುತ್ತಾರೆ. ದರ್ಗಾಗಳಿಗೆ ಭಕ್ತಿಪೂರ್ವಕವಾಗಿ ಹೋಗಿ ಬರುವ ಅನೇಕ ಹಿಂದೂಗಳಿದ್ದಾರೆ. ಯಮನೂರಪ್ಪದರ್ಗಾ, ಹೊನ್ನೂರಸ್ವಾಮಿ ದರ್ಗಾಗಳಿಗೆ ಹೋಗಿಬರುತ್ತಾರೆ. ಅಲ್ಲದೆ ತಮ್ಮ ಮಕ್ಕಳಿಗೆ ಈ ಸಂತರ ಹೆಸರುಗಳನ್ನು ಇಡುವುದನ್ನು ಕೆಳಜಾತಿಗಳಲ್ಲಿ ಕಾಣಬಹುದು. ಬೇಡ ಜನಾಂಗದಲ್ಲಿಯೂ ಯಮನೂರಪ್ಪ, ಯಮನೂರಸ್ವಾಮಿ, ಹೊನ್ನೂರಪ್ಪ, ಹೊನ್ನೂರಸ್ವಾಮಿ, ಎಂಬ ಹೆಸರನ್ನು ಹೊಂದಿದವರನ್ನು ಕಾಣಬಹುದು. ನನ್ನಿವಾಳದ ದೊರೆಗಳು ಮುಸ್ಲಿಂ ಧರ್ಮದವರಂತೆ 'ಮುಂಜಿ' ಸಂಪ್ರದಾಯವನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ. ಆದರೆ ವಿದ್ಯಾವಂತ ಯುವಕರು ಈ ಸಂಪ್ರದಾಯವನ್ನು ವಿರೋಧಿಸುತ್ತಾರೆ. ಕ್ರೈಸ್ತ, ಬೌದ್ಧ ಧರ್ಮಗಳ ಪ್ರಭಾವವೂ ಬೇಡ ಜನಾಂಗದಲ್ಲಿ ಕಂಡುಬಂದಿದೆ.

**ಟಿಪ್ಪಣಿಗಳು**

೧. ನಾಗಣ್ಣ ಸಿ.(ಅನು); ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ೨೦೦೦, ಪು.೩೪

೨. ಪ್ರೊ ಬಿ.ಷೇಕ್‌ಅಲಿ(ಸಂ); ಕರ್ನಾಟಕದ ಚರಿತ್ರೆ ಸಂಪುಟ ೬, ೧೯೯೭, ಪು.೧೦೪

೩. ರಾಜಾರಾಮಹೆಗಡೆ, ಅಶೋಕಶೆಟ್ಟರ್(ಸಂ); ಮಲೆಕರ್ನಾಟಕದ ಅರಸು ಮನೆತನಗಳು, ೨೦೦೧, ಪು.೨೫೯

೪. ಅದೇ, ಪು.೨೫೯

೫. ವೆಂಕಟರಂಗೋ ಕಟ್ಟೀ; ಗ್ಯಾಝೆಟೀಯರು, ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕದ ಭಾಗದ್ದು, ಧಾರವಾಡ, ಬೆಳಗಾವಿ, ಬಿಜಾಪುರ, ಕಾನಡ ನಾಲ್ಕು ಜಿಲ್ಲೆಗಳದ್ದು, ೧೮೯೩, ಪು.೧೯೯

೬. ಕರ್ನಾಟಕ ಚರಿತ್ರೆ ಸಂಪುಟ ೬, ಪು.೧೧೬

೭. ತಿರುಮಲ ತಾತಾಚಾರ್ಯಶರ್ಮ; ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ೧೯೫೭, ಪು.೯೯, ೧೦೦

೮. ಅದೇ, ಪು.೬೪

೯. ಶಿವರಾಮು; ಕನ್ನಡದ ಕಡುಗಲಿಗಳು, ೧೯೭೧, ಪು.೨೦೭

೧೦. ಶ್ರೀನಿವಾಸರಾವ್ ಕೊರಟಿ; ರಾಜಾವೆಂಕಟಪ್ಪನಾಯಕ, ೧೯೭೨, ಪು.೧೬೪

೧೧. ಜಿಲ್ಲಾ ಆಡಳಿತ ಕೊಪ್ಪಳ; ವಿಮೋಚನೆ, ಕೊಪ್ಪಳ ಜಿಲ್ಲೆಯ ಹೈದ್ರಾಬಾದ್ ವಿಮೋಚನಾ ಹೋರಾಟದ ಕಥೆ, ೧೯೯೯, ಪು.೨೮೦

೧೨. ರಿಪೋರ್ಟ್ ಆಫ್ ದಿ ಸೆಕೆಂಡ್ ಬ್ಯಾಕ್‌ವರ್ಡ್ ಕ್ಲಾಸ್ಸ್ ಕಮೀಷನ್, ವ್ಯಾಲೂಮ್ ೩, ೧೯೮೬

೧೩. ಜನಪದ, ಮಾಸಿಕ, ಜುಲೈ ೧೯೯೭

೧೪. ಕರ್ನಾಟಕ ಚರಿತ್ರೆ ಸಂಪುಟ ೬, ಪು.೧೫೮

೧೫. ಚೆನ್ನಣ್ಣವಾಲೀಕಾರ; ಕರ್ನಾಟಕ ದೇವದಾಸಿಯರ ಸಮಾಜೋಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ೨೦೦೦, ಪು.೨೭೭, ೨೭೮, ೨೯೦

೧೬. ಕೃಷ್ಣಮೂರ್ತಿ ಹನೂರು; ಮ್ಯಾಸಬೇಡರ ಸಂಸ್ಕೃತಿ, ೧೯೯೩, ಪು.೬೯

೧೭. ಪ್ರೊ.ಲಕ್ಷ್ಮಣ ತೆಲಗಾವಿ, ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು, ೧೯೯೯, ಪು.೩೮

೧೮. ಹಾವನೂರು ಎಲ್.ಜಿ.; ಹಿಂದುಳಿದ ವರ್ಗಗಳ ಆಯೋಗ, ಸಂಪುಟ-೨, ೧೯೭೨, ಪು.೧೪೫

೧೯. ಹಿಂದುಳಿದ ವರ್ಗಗಳ ಮತ್ತು ದಲಿತ ಚಳುವಳಿಗಳು, ಪು.೬೫

೨೦. ಡಾ.ಕರಿಗೌಡ ಬೀಚನಹಳ್ಳಿ(ಸಂ); ಕನ್ನಡ ಅಧ್ಯಯನ, ಸಂಪುಟ ೩, ೧೯೯೫, ಪು.೮೮

೨೧. ಅದೇ, ಪು.೮೪

೨೨. ಹರ್ತಿಕೋಟೆ ವೀರೇಂದ್ರಸಿಂಹ, ಡಾ.ತೇಜಸ್ವಿ ಕಟ್ಟೀಮನಿ(ಸಂ); ಘಟ್ಟಹೊಸಹಳ್ಳಿ ಗಟ್ಟಿಗ, ೨೦೦೨, ಪು.೨೬೮

ಅತ್ಯಂತ ಪ್ರಾಚೀನ ಬುಡಕಟ್ಟು ಜನಾಂಗಗಳಲ್ಲಿ ಒಂದೆಂದು ಪರಿಗಣಿಸಲಾದ ಬೇಡ ಜನಾಂಗವು ಚರಿತ್ರೆಯುದ್ದಕ್ಕೂ ಗುರುತಿಸಲ್ಪಡುತ್ತಾ ಬಂದಿದೆ. ಆದಿಕವಿ ವಾಲ್ಮೀಕಿ, ಚಕ್ರವರ್ತಿ ನಳ, ಶಬರಿ, ಧರ್ಮವ್ಯಾಧ, ಏಕಲವ್ಯ, ಮೂಗನಾಯಕ, ಬೇಡರಕಣ್ಣಪ್ಪ, ಕುಮಾರರಾಮ ಮುಂತಾದ ಪ್ರತಿಷ್ಠಿತ ಸಾಂಸ್ಕೃತಿಕ ವ್ಯಕ್ತಿಗಳು ಈ ಜನಾಂಗದವರು. ಪಾಂಡವರಲ್ಲಿ ಪ್ರತಿಯೊಬ್ಬರೂ ಒಂದೊಂದು ಬೇಡ ಪಡೆಯನ್ನು ಹೊಂದಿದ್ದರೆಂಬುದು ಗಮನಾರ್ಹ.

ಬೇಡ ಜನಾಂಗದಲ್ಲಿ ಅನೇಕ ಉಪಪಂಗಡಗಳಿವೆ. ಬೇಡರನ್ನು ಪ್ರದೇಶಕ್ಕನುಗುಣವಾಗಿ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಕರ್ನಾಟಕದಲ್ಲಿ ಊರುಬೇಡ ಮತ್ತು ಮ್ಯಾಸಬೇಡರೆಂದು ವಿಭಾಗಿಸಿ ಕರೆಯಲಾಗುತ್ತದೆ. ಈ ಎರಡೂ ಪಂಗಡಗಳು ಮೂಲದಲ್ಲಿ ಒಂದೇ ಆಗಿದ್ದಂಥವು. ಸಾಂಸ್ಕೃತಿಕ ಆಚರಣೆಗಳಲ್ಲಿ ಕೆಲವು ಭಿನ್ನತೆಗಳಿದ್ದರೂ ಉಳಿದಂತೆ ಬದುಕಿನ ಇತರ ಲಕ್ಷಣಗಳೆಲ್ಲವೂ ಒಂದೇ ಆಗಿವೆ. ಇತ್ತೀಚಿಗೆ ಈ ಜನಾಂಗದವರು ತಮ್ಮದೇ ಆದ ಧಾರ್ಮಿಕ ಮಠವೊಂದನ್ನು ಸ್ಥಾಪಿಸಿಕೊಂಡು ಈ ಭೇದವನ್ನು ಅಳಿಸಿಹಾಕಲು ಪ್ರಯತ್ನಿಸುತ್ತಿರುವರು.

ಬೇಡರು ವಿಂಧ್ಯಪರ್ವತ ಪ್ರದೇಶದಲ್ಲಿಯೂ ಅನಂತರ ದಕ್ಷಿಣಭಾರತದ ವಿವಿಧ ಸ್ಥಳಗಳಲ್ಲಿಯೂ ನೆಲೆಸಿದರೆಂದು ವ್ಯಕ್ತಪಡುತ್ತದೆ. ಜನಗಣತಿ ವರದಿಗಳಿಂದ ತಿಳಿದುಬರುವಂತೆ ಕರ್ನಾಟಕದಲ್ಲಿ ಬೇಡ ಜನಾಂಗ ಹೆಚ್ಚಾಗಿ ನೆಲೆಸಿರುವುದು ಚಿತ್ರದುರ್ಗ, ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ. ಬೇಡರ ಸಂಸ್ಥಾನಗಳು ಹೆಚ್ಚಾಗಿ ಸ್ಥಾಪಿಸಲ್ಪಟ್ಟುದ್ದು ಈ ಪ್ರದೇಶದಲ್ಲೆ. ಬೇಡ, ನಾಯಕ, ಗುರಿಕಾರ, ತಳವಾರ, ಪರಿವಾರ, ದೊರೆ, ಪಾಳೆಯಗಾರ ಎಂಬ ಹೆಸರುಗಳಿಂದ ಬೇಡರನ್ನು ಕರೆಯಲಾಗುತ್ತದೆ. ಬೇಡರ ನೆಲೆಗಳು ಪ್ರಮುಖವಾಗಿ ಕಂಡುಬರುವುದು ಅರಣ್ಯ, ಅರಣ್ಯದ ಅಂಚು, ಇಲ್ಲವೆ ಗುಡ್ಡಗಾಡು ಪ್ರದೇಶ ಅಥವಾ ಕುರುಚಲು ಗುಡ್ಡಗಾಡು ಪ್ರದೇಶಗಳಲ್ಲಿ.

ಅಶೋಕನ ಕಾಲದಿಂದಲೂ ಬೇಡರು ಸಂಘಟಿತರಾಗಿ ರಾಜ್ಯಗಳನ್ನು ಕಟ್ಟಿಕೊಂಡಿರುವುದುಂಟು. ಶಾಸನಗಳಿಂದ ತಿಳಿದುಬರುವಂತೆ, ಅಶೋಕನ ಕಾಲದ ಅಟವಿಬಲ, ಅಟವಿರಾಜ್ಯಗಳು ಬೇಡರಿಗೆ ಸಂಬಂಧಪಟ್ಟುವು. ಧೈರ್ಯ, ಸ್ಥೈರ್ಯಗಳ ಸಾಕಾರ ಮೂರ್ತಿಗಳಂತಿದ್ದ ಬೇಡರನ್ನು ಶಾತವಾಹನ, ಕದಂಬ, ಗಂಗ, ಚಾಲುಕ್ಯ, ಹೊಯ್ಸಳ, ವಿಜಯನಗರ ಮುಂತಾದ ಮನೆತನಗಳ ಅರಸರು ತಮ್ಮ

ಸೈನ್ಯದಲ್ಲಿ, ಆಡಳಿತದಲ್ಲಿ ಸೇರಿಸಿಕೊಂಡು ಯುದ್ಧದಲ್ಲಿ ಗೆಲುವು ಸಾಧಿಸುತ್ತಿದ್ದರು. ಇವರ ಕಾಲಾವಧಿಯಲ್ಲಿ ಸೈನಿಕ ವೃತ್ತಿ ಬೇಡರಲ್ಲಿ ವಂಶಪಾರಂಪರ್ಯವಾಗಿ ಮುಂದುವರಿಯಿತು. ಕದಂಬರು ಮತ್ತು ಹೊಯ್ಸಳ ರಾಜ್ಯ ಸ್ಥಾಪಕ ಸಳ. ಇವರೆಲ್ಲರೂ ಬೇಡರು ಎಂಬ ಅಭಿಪ್ರಾಯಗಳು ವ್ಯಕ್ತಪಟ್ಟಿವೆ. ಚಾರಿತ್ರಿಕವಾಗಿ ಬೇಡ ಜನಾಂಗ ಸಾಕಷ್ಟು ಹಿನ್ನೆಲೆಯನ್ನು ಹೊಂದಿದೆ ಎಂಬ ಅಂಶ ಇದರಿಂದ ವ್ಯಕ್ತಪಡುತ್ತದೆ.

ವಿಜಯನಗರಕ್ಕೆ ಮುನ್ನ ಆ ಪ್ರದೇಶದಲ್ಲಿ ರಾಜ್ಯವಾಳಿದ ಕುಮ್ಮಟದುರ್ಗದ ದೊರೆಗಳು ಬೇಡರು ಎಂದು ತಿಳಿಯುತ್ತದೆ. ಈ ಕಾಲವು ಬೇಡರ ರಾಜಕೀಯ ಚರಿತ್ರೆಯಲ್ಲಿ ಉನ್ನತ ಹಂತ ತಲುಪಿದ ಮೊದಲ ಘಟ್ಟವಾಗಿದೆ. ಸೈನಿಕರಾಗಿ, ಅಧಿಕಾರಿಗಳಾಗಿ ನಂತರ ರಾಜ್ಯವನ್ನು ಸಮರ್ಥವಾಗಿ ಆಳಿದ್ದುದು ಇಲ್ಲಿಂದಲೇ. ಬೇಡರ ವಲಸೆ ಪ್ರವೃತ್ತಿಯನ್ನು ಈ ಅರಸರು ನಿಲ್ಲಿಸಿ, ಅವರಿಗೆ ಸೂಕ್ತ ಸೌಕರ್ಯಗಳನ್ನು ಮಾಡಿಕೊಟ್ಟು ಕುಮ್ಮಟದುರ್ಗದ ಸುತ್ತಮುತ್ತ ನೆಲೆಸುವಂತೆ ಮಾಡಿದರು. ಮುಮ್ಮಡಿಸಿಂಗ, ಕಂಪಿಲರಾಯ ಮತ್ತು ಕುಮಾರರಾಮ ಇವರು ಕುಮ್ಮಟದುರ್ಗ ಚರಿತ್ರೆಯಲ್ಲಿ ಗುರುತಿಸಲ್ಪಟ್ಟ ಪ್ರಮುಖರು. ಮಲ್ಲಿಕಾಫರ ಮತ್ತು ಮಹಮ್ಮದ್ ಬಿನ್ ತುಘಲಕರ ದಾಳಿಗಳನ್ನು ಧೈರ್ಯವಾಗಿ ಹಿಮ್ಮೆಟ್ಟಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಹಾಗಾಗಿ ಕುಮಾರರಾಮನು ಇಂದಿಗೂ ಬೇಡರ ಆರಾಧ್ಯದೈವವಾಗಿ ಪೂಜಿಸಲ್ಪಡುತ್ತಾನೆ. ನಂತರ ಈ ಪ್ರದೇಶ ತುಘಲಕನ ಹಿಡಿತಕ್ಕೊಳಪಟ್ಟಿತಾದರೂ ನಂತರ ಅದೇ ಭಾಗದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತು. ಇದರ ಸ್ಥಾಪಕರು ಹಕ್ಕಬುಕ್ಕರು. ಇವರು ಕಂಪಿಲರಾಯನ ಭಾವ ಸಂಗಮನ ಮಕ್ಕಳು. ಕುಮ್ಮಟದುರ್ಗದ ಅರಸರ ಬಳಿಯಿದ್ದ ಅನೇಕ ಸೈನಿಕರು ಹಾಗೂ ಆ ಪ್ರದೇಶದಲ್ಲಿ ನೆಲೆಸಿದ್ದ ಬೇಡರು ಇವರಿಗೆ ರಕ್ಷಕರಾಗಿ ಎದೆಗೊಟ್ಟು ನಿಂತರು; ಹಾಗೂ ವಿಜಯನಗರವನ್ನು ರಕ್ಷಿಸಿದರು.

ವಿಜಯನಗರ ಕಾಲದಲ್ಲಿ ಬೇಡರು ಸೈನಿಕರಾಗಿ, ಅಧಿಕಾರಿಗಳಾಗಿ, ಸಂಸ್ಥಾನಿಕರಾಗಿ, ಅಮರನಾಯಕರಾಗಿ ಪ್ರಸಿದ್ಧರಾಗಿದ್ದರು. ವಿಜಯನಗರದ ಅರಸರು ಜಾರಿಗೆ ತಂದ ನಾಯಕರ ಆಡಳಿತಪದ್ಧತಿಯು ಸ್ಥಳೀಯ ಅರಸರಿಂದ ಕೂಡಿದ್ದಿತು. ಸ್ಥಳೀಯ ಆಡಳಿತದಲ್ಲಿ ಬೇಡರು ಹೆಚ್ಚಿನ ಸಂಖ್ಯೆಯಲ್ಲಿದ್ದರು. ವಿಜಯನಗರ ವನ್ನಾಳಿದ ಅರಸರೆಲ್ಲರೂ ಬೇಡರಿಗೆ ಉತ್ತಮ ಸ್ಥಾನಮಾನಗಳನ್ನು ನೀಡಿರುವರು. ಕೃಷ್ಣದೇವ ರಾಯನ ತಾಯಿ ನಾಗಲಾದೇವಿ ಬೇಡ ಜನಾಂಗದವಳೆಂಬ ಅಂಶವೂ ವ್ಯಕ್ತಪಟ್ಟಿದೆ. ವಿಜಯನಗರ ಅರಸರ ಪ್ರೋತ್ಸಾಹ ಹಾಗೂ ಅನುಮತಿಯಿಂದ ಸ್ಥಾಪಿಸಲ್ಪಟ್ಟ ಅನೇಕ ಪಾಳೆಯಪಟ್ಟುಗಳಲ್ಲಿ ಬೇಡರವೇ ಅಧಿಕ ಸಂಖ್ಯೆಯಲ್ಲಿದ್ದವು. ಹರತಿ, ದುಮ್ಮಿ, ಕನಕಗಿರಿ, ನಾಯಕನಹಟ್ಟಿ, ಚಿತ್ರದುರ್ಗ, ಹಾಗಲವಾಡಿ, ಜರಿಮಲೆ, ಗುಡೇಕೋಟೆ, ಸಂತೇಬೆನ್ನೂರು, ಹರಪನಹಳ್ಳಿ ಮುಂತಾದವು ಕೆಲವು ಉದಾಹರಣೆಗಳು.

ವಿಜಯನಗರೋತ್ತರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಂತಹ ಪಾಳೆಯಗಾರರಲ್ಲಿ ಬೇಡರು ಅಧಿಕ ಸಂಖ್ಯೆಯಲ್ಲಿದ್ದುದು ಸ್ಪಷ್ಟ. ಪ್ರಸ್ತುತ ಅಧ್ಯಯನದ ವ್ಯಾಪ್ತಿಯೊಳಗೆ ಬರುವ ಹೆಚ್ಚು ಪಾಳೆಯಪಟ್ಟುಗಳು

ಬೇಡರವಾಗಿದ್ದವು. ವಿಜಯನಗರ ಅರಸರ ದುರ್ಬಲತೆ ಇಂತಹ ಸ್ಥಳೀಯ ಅರಸರು ಸ್ವತಂತ್ರವಾಗಿ ಪ್ರವರ್ತಿಸುವುದಕ್ಕೆ ಪ್ರೇರಣೆ ನೀಡಿತು; ಹಾಗೂ ವಿಜಯನಗರದ ಅವನತಿಗೆ ಪ್ರಮುಖ ಕಾರಣವಾಯಿತು. ಕ್ರಿ.ಶ.೧೫೬೫ರ ರಕ್ಕಸತಂಗಡಿ ಕದನದಲ್ಲಿ ಅನೇಕ ಬೇಡರು ತೊಂದರೆಗೊಳಗಾದರೂ ಕೆಲವು ಬಲಿಷ್ಠ ಬೇಡನಾಯಕರು ಸಂಸ್ಥಾನಗಳನ್ನಾಳಿದರು. ಚಿತ್ರದುರ್ಗ, ಬಳ್ಳಾರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ವ್ಯಾಪ್ತಿಯೊಳಗಿನ ಪ್ರದೇಶದಲ್ಲಿ ಬೇಡ ದೊರೆಗಳು ಪ್ರಸಿದ್ಧಿಗೆ ಬಂದರು. ಚಿತ್ರದುರ್ಗದ ನಾಯಕ ಅರಸರು ಕರ್ನಾಟಕದ ಇತಿಹಾಸದಲ್ಲಿ ಸ್ಥಿರವಾಗಿ ಉಳಿದಿದ್ದಾರೆ. ಇವರು ೨೧೧ ವರ್ಷಗಳ ಕಾಲ ಚಿತ್ರದುರ್ಗವನ್ನು ಆಳಿರುವುದು ತಿಳಿದುಬರುತ್ತದೆ. ಮತ್ತಿತಿಮ್ಮಣ್ಣನಾಯಕನಿಂದ ಆರಂಭವಾದ ಚಿತ್ರದುರ್ಗದ ಚರಿತ್ರೆ ಕೊನೆಯ ರಾಜಾ ವೀರಮದಕರಿನಾಯಕನ ಕಾಲದಲ್ಲಿ ಅವನತಿಯನ್ನು ಕಂಡಿತು. ಹೈದರಾಲಿಯು ಈ ಮದಕರಿನಾಯಕನ ಸಹಾಯದಿಂದಲೇ ತನಗೆ ಅಸಾಧ್ಯವಾದ ಕೋಟೆಗಳನ್ನು, ರಾಜ್ಯಗಳನ್ನು ಗೆದ್ದುಕೊಂಡನು. ಆದರೆ ಚಿತ್ರದುರ್ಗದ ಪತನಕ್ಕೆ ಆತನೇ ಮೂಲಕಾರಣನಾದನು. ಈ ಜಿಲ್ಲೆಗಳಲ್ಲಿದ್ದ ಬೇಡ ಅರಸರೆಲ್ಲರೂ ರಕ್ತಸಂಬಂಧಿಗಳಾಗಿದ್ದರೂ ಅವರವರೊಳಗೆ ಜಗಳ, ದ್ವೇಷ, ಅಸೂಯೆಗಳಿದ್ದವು. ಚಿತ್ರದುರ್ಗ ಬೇಡ ಅರಸರು ತೊಂದರೆಗೊಳಗಾಗಿದ್ದು ತಮ್ಮ ರಕ್ತಸಂಬಂಧಿ ಬೇಡನಾಯಕರಿಂದಲೇ. ಹೈದರಾಲಿ, ಟಿಪ್ಪೂಸುಲ್ತಾನರು ಪಾಳೆಯಗಾರರ ವಿರೋಧಿಗಳಾಗಿದ್ದರು. ಅವರು ತಮ್ಮದೇ ಆಡಳಿತವನ್ನು ರೂಪಿಸಲು ಅನೇಕ ಪಾಳೆಯಗಾರರನ್ನು ಸದೆಬಡಿದರು; ಅವರಿಂದ ಅಧಿಕಾರವನ್ನು ಕಿತ್ತುಕೊಂಡರು. ಚಿತ್ರದುರ್ಗದ ಅನೇಕ ಬೇಡ ಸೈನಿಕರನ್ನು ಇಸ್ಲಾಂ ಧರ್ಮಕ್ಕೆ ಮತಾಂತರಿಸಿದರು. ವಿಜಯನಗರೋತ್ತರ ಕಾಲದಲ್ಲಿ ಹರತಿ, ನಾಯಕನಹಟ್ಟಿ, ಮತ್ತೋಡು, ಗುಡೇಕೋಟೆ, ಜರಿಮಲೆ, ಕನಕಗಿರಿ ನಾಯಕರ ಆಳ್ವಿಕೆಗೆ ಇತಿಹಾಡಿದವರೆಂದರೆ ಇವರೇ. ಅಧಿಕಾರ ಕಳೆದುಕೊಂಡ ನಾಯಕರು ಅನಂತರ ಅನೇಕ ಕಷ್ಟಗಳಿಗೊಳಗಾದ ಸಂದರ್ಭಗಳನ್ನು ಕಾಣಬಹುದು.

ಚಿತ್ರದುರ್ಗನಾಯಕ ಅರಸರನ್ನು ಹೊರತುಪಡಿಸಿದರೆ ಉಳಿದ ಬೇಡ ಅರಸರು ಸ್ವಯಂಸಾಮರ್ಥ್ಯವನ್ನು ಹೊಂದಿದುದು ಕಡಿಮೆ. ಜರಿಮಲೆ, ಗುಡೇಕೋಟೆ, ಕನಕಗಿರಿ, ನಾಯಕನಹಟ್ಟಿ, ಹರತಿ ಮತ್ತು ಮತ್ತೋಡು ಪಾಳೆಯಗಾರರು ಒಬ್ಬರು ಇನ್ನೊಬ್ಬರನ್ನು ನೆಚ್ಚಿಕೊಂಡಿದ್ದರು. ಚಿತ್ರದುರ್ಗದ ಅರಸರು ಇಂತಹ ಅರಸರನ್ನು ಕೆಲವೊಮ್ಮೆ ಸಹಾಯಕ್ಕೆ ತಗೆದುಕೊಂಡು ವೈರಿಗಳನ್ನು ಹೆದರಿಸಿದ್ದುಂಟು. ತಮ್ಮ ಅಸ್ತಿತ್ವ ಉಳಿಸಿಕೊಳ್ಳುವ ನಿಟ್ಟಿನಲ್ಲಿ ಈ ಸಂಸ್ಥಾನಿಕರು ಕೆಲವೊಮ್ಮೆ ಚಿತ್ರದುರ್ಗದ ಅರಸರ ವಿರುದ್ಧವೂ ನಿಂತುದುಂಟು. ತೀರಾ ವಿಸ್ತಾರವಾದ ರಾಜ್ಯವನ್ನು ಹೊಂದದ, ಆರ್ಥಿಕವಾಗಿ, ಸೈನಿಕವಾಗಿ ಬಲಿಷ್ಠರಾಗಿಲ್ಲದ ಇಂತಹ ಬೇಡ ಅರಸರು ತಮ್ಮ ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ಸದಾ ಏನೆಲ್ಲ ಯೋಜನೆಗಳನ್ನು ರೂಪಿಸಿಕೊಳ್ಳುತ್ತಲೇ ಇರಬೇಕಾಗಿತ್ತೆಂಬ ಸಂಗತಿ ವ್ಯಕ್ತಪಡುತ್ತದೆ.

ರಾಯಚೂರು ಜಿಲ್ಲೆಯ ಬೇಡ ಸಂಸ್ಥಾನಿಕರು ಬಲಿಷ್ಠರಾಗಿದ್ದರೂ ಹೈದರಾಬಾದಿನ ನಿಜಾಮನ ಅಧೀನತೆಯಿಂದ ಸ್ವತಂತ್ರರಾಗುವಷ್ಟು ಬಲಿಷ್ಠರಾಗಿರಲಿಲ್ಲ. ಗುಂತಗೋಳ, ಗುಡಗುಂಟಿ, ದೇವದುರ್ಗ ಮತ್ತು ಕ್ಯಾದಗೇರೆ ಸ್ಥಳಗಳಲ್ಲಿ ಬೇಡ ಅರಸರು ಅಧಿಕಾರದಲ್ಲಿದ್ದರೂ ಆರ್ಥಿಕವಾಗಿ, ರಾಜಕೀಯವಾಗಿ ಸ್ವತಂತ್ರರಾಗಿರಲಿಲ್ಲ. ಆದರೆ ದಕ್ಷಿಣ ಕರ್ನಾಟಕ ಭಾಗದ ಬೇಡ ಅರಸರಿಗೆ ಹೋಲಿಸಿದರೆ ಇವರು ಉತ್ತಮ ಸ್ಥಿತಿಯಲ್ಲಿಯೇ ಮುಂದುವರೆದಂದು ಕಾಣುತ್ತದೆ. ಹೈದ್ರಾಬಾದಿನ ನಿಜಾಮನು ಈ ಬೇಡ ಅರಸರಿಗೆ ಕೆಲವು ಗ್ರಾಮಗಳನ್ನು ಜಹಗೀರು ಹಾಕಿಕೊಟ್ಟಿದ್ದನು. ಇವರು ಈ ಪ್ರದೇಶದಲ್ಲಿ ಪೊಲೀಸ್ ಆಡಳಿತ ಮತ್ತಿತರ ಅಧಿಕಾರಗಳನ್ನು ಚಲಾಯಿಸುತ್ತಿದ್ದರು. ಅಲ್ಲದೆ ಇವರು ೧೯೪೮ರವರೆಗೂ ಈ ಅಧಿಕಾರಗಳ ಮೇಲೆ ಹಿಡಿತವನ್ನು ಹೊಂದಿದ್ದರು. ಈ ಪ್ರದೇಶದ ಬೇಡ ಅರಸರು ತಮ್ಮನ್ನು ಪಾಳೆಯಗಾರರು ಎಂದು ಕರೆದುಕೊಳ್ಳದೆ 'ರಾಜಾ' ಎಂದೇ ಕರೆದುಕೊಂಡಿದ್ದಾರೆ. 'ಪಾಳೆಯಗಾರ' ಪದದ ಬಳಕೆ ವಿಜಯನಗರೋತ್ತರ ಕಾಲದಲ್ಲಿ ಕಡಿಮೆಯಾಗಿರಬೇಕು. ಕಾಲಕ್ರಮೇಣ ಬೇಡ ನಾಯಕರು ದೊರೆಗಳು, ಅರಸರು, ನಾಯಕರು ಎಂದೆಲ್ಲಾ ಕರೆದುಕೊಳ್ಳತೊಡಗಿದರು. ೧೫೬೫ರ ನಂತರ ಬೇಡ ಅರಸರು ಕ್ಷತ್ರಿಯರಂತೆ ರಾಜ್ಯಗಳನ್ನಾಳಿದುದಲ್ಲದೆ, ಅವರ ಸ್ಥಾನಮಾನಗಳನ್ನು ಅನುಭವಿಸಿದರು.

ಬುಡಕಟ್ಟು ಸ್ಥಿತಿಯಿಂದ ಕ್ರಮೇಣ ಸುಧಾರಿತ ನಗರ ಸಂಸ್ಕೃತಿಯ ಕಡೆಗೆ ವಾಲಿದ ಕೆಲವು ಬೇಡ ನಾಯಕರು ಬೇಡರ ಸಮಾಜದಲ್ಲಿ ಮುಂದುವರೆದ ವರ್ಗವಾಗಿ ಗುರುತಿಸಲ್ಪಟ್ಟರು; ಸಹಜವಾಗಿಯೆ ಅಂದಿನ ಸಮಾಜದ, ರಾಜಕೀಯದ ಪ್ರತಿನಿಧಿಗಳಾದರು. ಅಧಿಕಾರಸ್ಥ ಬೇಡ ಸೈನಿಕರು, ಗುರಿಕಾರರು, ತಳವಾರರು, ದೇಸಾಯಿಗಳು, ಪೋಲಿಸ್‌ಪಾಟೀಲರು, ಗೌಡರು ಮುಂತಾದವರು ಇವರ ನಂತರದ ಸ್ಥಾನದಲ್ಲಿ ಗುರುತಿಸಲ್ಪಟ್ಟರು. ಧಾರ್ಮಿಕ ಕೆಲಸಕಾರ್ಯಗಳನ್ನು ಮಾಡುತ್ತಿದ್ದ ದಾಸಪ್ಪಗಳು, ಜೋಗಯ್ಯಗಳು, ಪೂಜಾರಿಗಳು ಹಾಗೂ ರೈತರು, ಕೂಲಿಗಳು, ಕುಲಕಸುಬುದಾರರು ಆನಂತರದಲ್ಲಿ ಕ್ರಮವಾಗಿ ಕಂಡುಬಂದರು. ಹೀಗೆ ಬೇಡ ಜನಾಂಗದಲ್ಲಿ ಈ ನಾಲ್ಕು ವರ್ಗಗಳ ಕಲ್ಪನೆಯನ್ನು ಕಾಣಬಹುದಿತ್ತು. ಈ ವರ್ಗ ವಿಭಜನೆ ಆಂತರಿಕವಾಗಿ ಸೂಕ್ಷ್ಮನೆಲೆಯಲ್ಲಿ ಕ್ರಿಯಾಶೀಲವಾಗಿದ್ದರೂ ಬಾಹ್ಯವಾಗಿರಲಿಲ್ಲ. ದೊರೆಗಳಷ್ಟೆ ಉಳಿದೆಲ್ಲಾ ವರ್ಗಗಳಿಗಿಂತ ಉನ್ನತ ಸ್ಥಾನಮಾನಗಳನ್ನು ಸಂಪಾದಿಸಿದ್ದರು. ಉಡುಗೆ-ತೊಡುಗೆ, ಆಹಾರ-ಪಾನೀಯ, ಆಚಾರ-ವಿಚಾರ, ನಂಬಿಕೆ-ಸಂಪ್ರದಾಯಗಳು ಇವೆಲ್ಲವೂ ಬೇಡ ಅರಸರಲ್ಲಿ ಹೊಸರೂಪವನ್ನು ಪಡೆದವು. ಹಿಂದೂ, ಮುಸ್ಲಿಂ ಸಮಾಜಗಳ ಪ್ರಭಾವವೂ ಇವುಗಳ ಮೇಲಾಯಿತು. ಸಂಸ್ಕೃತೀಕರಣವು ಇವರಲ್ಲಿ ಹೆಚ್ಚಾಗಿ ಕಂಡುಬಂದಿತು. ಈ ಹಿನ್ನೆಲೆಯಲ್ಲಿ ಹಲವಾರು ವಿಶಿಷ್ಟ ಆಚರಣೆಗಳನ್ನು ಬೇಡ ಅರಸರ ಕುಟುಂಬಗಳಲ್ಲಿ ನೋಡಬಹುದಾಗಿತ್ತು.

ಬೇಟೆಗಾರರಾಗಿ, ಸೈನಿಕರಾಗಿ ಗುರುತಿಸಲ್ಪಟ್ಟ ಬೇಡರು ಕ್ರಮೇಣ ಪಾಳೆಯಗಾರರಾಗಿ ಅಧಿಕಾರಸ್ಥರಾದುದು ಈ ಜನಾಂಗದಲ್ಲಾದ ಪ್ರಮುಖ ಬೆಳವಣಿಗೆ. ಒಂದು ಕಾಲಕ್ಕೆ ಬೇಟೆಯೇ ಅವರ ಜೀವನದ ಮುಖ್ಯ ಕಸುಬಾಗಿತ್ತು. ನಂತರ ಸೈನಿಕವೃತ್ತಿ ಹಾಗೂ ಆಳ್ವಿಕೆಗಳಲ್ಲಿ ತೊಡಗಿದವರಿಗೆ ಬೇರಾವ ವೃತ್ತಿಯ ಕಡೆಗೂ ಗಮನ ನೀಡಲಾಗಲಿಲ್ಲ. ಹೀಗಾಗಿ ಇತ್ತೀಚಿನ ದಿನಗಳವರೆಗೂ ಅವರು ಬೇರೆ ವೃತ್ತಿಗಳನ್ನು ಆಯ್ದುಕೊಳ್ಳುವ ನಿಟ್ಟಿನಲ್ಲಿ ಮನಸ್ಸು ಮಾಡದೇ ಇದ್ದುದನ್ನು ಗಮನಿಸಬಹುದು. ಯೋಧ ಹಾಗೂ ಅರಸು ಜನಾಂಗವೆಂದು ಬೇಡರನ್ನು ಕರೆದುದು ಈ ಹಿನ್ನೆಲೆಯಲ್ಲಿಯೇ. ರಾಜ್ಯಾಧಿಕಾರ ಕೈತಪ್ಪಿದ ನಂತರ ಪಾಳೆಯಗಾರರು ಅನೇಕ ಏರಿಳಿತಕ್ಕೊಳಗಾದರು. ಹಲ್ಲುಕಿತ್ತ ಹಾವಿನಂತಾದರು. ಅವರ ಸ್ಥಾನಮಾನಗಳೆಲ್ಲಾ ಕುಸಿದುಬಿದ್ದವು. ಪ್ರಸ್ತುತ ದಿನಗಳಲ್ಲಿ ದಿನನಿತ್ಯದ ಜೀವನ ನಿರ್ವಹಣೆ ಮಾಡುವುದೇ ಕಷ್ಟವೆನ್ನುವಂತಹ ಪರಿಸ್ಥಿತಿಯಲ್ಲಿ ಅನೇಕ ಬೇಡ ಅರಸು ಕುಟುಂಬಗಳಿರುವುದು ಕಂಡುಬರುತ್ತದೆ.

ಬೇಡ ಅರಸು ವರ್ಗದಲ್ಲಿ ಹಿಂದೂಧರ್ಮದ ಪ್ರಭಾವವೇ ಹೆಚ್ಚಾಗಿದೆ. ವೈಷ್ಣವ, ಶೈವ ಸಂಪ್ರದಾಯಗಳಲ್ಲಿ ಬೇಡ ದೊರೆಗಳು ಮುಂದುವರೆದರು. ಜಗಲೂರು ಪಾಪನಾಯಕ, ಯರಮಂಚನಾಯಕ, ಶುಕ್ಲಮಲ್ಲ ನಾಯಕ, ಕುಮಾರರಾಮ ಮುಂತಾದ ಬೇಡ ಸಾಂಸ್ಕೃತಿಕ ವೀರರು ಬುಡಕಟ್ಟು ಸ್ಥಿತಿಯಲ್ಲಿದ್ದ ಬೇಡರಲ್ಲಿ ಮಾತ್ರ ಪೂಜಿಸಲ್ಪಡುತ್ತಿದ್ದರು. ಬೇಡ ಅರಸರಲ್ಲಿ ಕೆಲವರು ಲಿಂಗಧಾರಿಗಳಾಗಿ ಮುಂದುವರೆದರೆ ಇನ್ನೂ ಕೆಲವರು ಮಧ್ಯದಲ್ಲಿಯೇ ಆ ಧರ್ಮವನ್ನು ಕೈಬಿಟ್ಟರು. ಮತ್ತೆ ಕೆಲವರು ವೈಷ್ಣವಧರ್ಮವನ್ನು ಆಚರಿಸಿ ದರಲ್ಲದೆ, ಕ್ಷಾತ್ರತ್ವದ ಸಂಕೇತವೆಂದು ಜನಿವಾರಧಾರಣೆಯನ್ನು ಮಾಡಿಸಿಕೊಂಡರು. ಸಾಂಪ್ರದಾಯಿಕ ಆಚಾರ-ವಿಚಾರಗಳೆಲ್ಲವೂ ದೂರವಾಗಿ ನಾಗರಿಕ ಸಮಾಜದ ಬದಲಾವಣೆಗಳೆಲ್ಲವೂ ಈ ಅರಸು ವರ್ಗದಲ್ಲಿ ಕಂಡುಬಂದವು. ಇಸ್ಲಾಂಧರ್ಮದ ಪ್ರಭಾವದ ಹಿನ್ನೆಲೆಯಲ್ಲಿ ಕೆಲವು ಬೇಡ ಅರಸುಮನೆತನದ ಸ್ತ್ರೀಯರು ಘೋಷಾ ಧರಿಸುವುದು ರೂಢಿಗೆ ಬಂದಿತು. ಇಸ್ಲಾಂಧರ್ಮದ ಸಂಪ್ರದಾಯಗಳನ್ನು ಕೆಲವು ಬೇಡ ಅರಸು ಮನೆತನದವರು ಈಗಲೂ ಮುಂದುವರೆಸಿಕೊಂಡು ಬಂದಿರುವುದುಂಟು. ಈ ಪಾಳೆಯಗಾರರು ಅನೇಕ ದೇವಾಲಯಗಳಿಗೆ ದಾನದತ್ತಿಯನ್ನು ನೀಡಿದ್ದರಲ್ಲದೆ ಎಲ್ಲಾ ಧರ್ಮದವರಿಗೂ ಸಮಾನ ಸ್ಥಾನಮಾನ ಕಲ್ಪಿಸಿದ್ದರು. ಅವರು ಕಟ್ಟಿಸಿದ ದೇವಾಲಯಗಳು, ಕೋಟೆಗಳು, ಬಾವಿಗಳು, ಪುಷ್ಕರಿಣಿಗಳು ಅವರ ಬದುಕು ಹಾಗೂ ಸಾಧನೆಗಳ ವಿಭಿನ್ನ ಸಾಂಸ್ಕೃತಿಕ ಮುಖಗಳನ್ನು ಪರಿಚಯಿಸುತ್ತವೆ.

ಹೈದರ್‌ಅಲಿ, ಟಿಪ್ಪೂಸುಲ್ತಾನ, ಮರಾಠರು, ಹೈದರಾಬಾದಿನ ನಿಜಾಮ ಮತ್ತು ಬ್ರಿಟೀಷರು ಇವರ ರಾಜಕೀಯ ಇಚ್ಛೆಗನುಗುಣವಾಗಿ ಬೇಡ ಅರಸರ ಬದುಕು ಪಲ್ಲಟಗೊಂಡಿತು. ಅನೇಕ ಸ್ಥಳೀಯ ಅರಸರು ನಿರುದ್ಯೋಗಿಗಳಾದರು. ವಿಜಯನಗರ ನಂತರದ ಚರಿತ್ರೆಯಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದ್ದ ಬೇಡ ದೊರೆಗಳು ಸಮಕಾಲೀನ ಪ್ರಬಲಶಕ್ತಿಗಳಿಗೆಲ್ಲ ಸಂದರ್ಭಾನುಸಾರ ಎದುರಾಳಿಗಳಾಗಿದ್ದವರೇ. ಈ ಬೇಡ

ದೊರೆಗಳ ಅಧಿಕಾರವನ್ನು ಕಸಿದುಕೊಳ್ಳುವುದರ ಮೂಲಕ ಈ ಪ್ರಬಲ ಶಕ್ತಿಗಳು ಬೇಡರನ್ನು, ಬೇಡ ಅರಸರನ್ನು ತಮ್ಮ ಇಚ್ಛೆಗನುಗುಣವಾಗಿ ಬಳಸಿಕೊಂಡವು. ಬ್ರಿಟೀಷರಂತೂ 'ಪಾಳೆಯಗಾರ' ಎಂಬ ಪದವನ್ನು ದರೋಡೆಕೋರ, ಲೂಟಿಕೋರ, ಗೂಂಡಾ ಎಂಬರ್ಥದಲ್ಲಿ ಚಾಣಾಕ್ಷತೆಯಿಂದ ಬಳಸಿದರು ಹಾಗೂ ಪ್ರಚಾರ ಮಾಡಿದರು; ಬೇಡರ ಧೈರ್ಯ, ಸ್ಥೈರ್ಯ, ಸ್ವಾತಂತ್ರ್ಯಾಭಿಮಾನಗಳನ್ನು ಕಾಯ್ದೆ, ಕಾನೂನುಗಳ ಮೂಲಕ ನಾಶಗೊಳಿಸಿದರು. ಆದರೂ ಹಲಗಲಿ ಬೇಡರು, ಸುರಪುರದ ವೆಂಕಟಪ್ಪನಾಯಕ, ಸಿಂಧೂರ ಲಕ್ಷ್ಮಣ ಮುಂತಾದವರು ಬ್ರಿಟೀಷರ ವಿರುದ್ಧ ಮಾಡಿದ ಸ್ವಾಭಿಮಾನಿ ಹೋರಾಟಗಳು ಜನರಲ್ಲಿ ದೇಶಾಭಿಮಾನ, ಸ್ವಾತಂತ್ರ್ಯಪ್ರೇಮಗಳನ್ನು ಬೆಳೆಸಿದವು.

ಇತ್ತೀಚಿನ ರಾಜ್ಯ ರಾಜಕಾರಣದಲ್ಲಿ ಹಿಂದಿನ ಬೇಡ ಅರಸುವಂಶಕ್ಕೆ ಸೇರಿದವರಾರೂ ಪ್ರಭಾವಯುತ ಸ್ಥಾನಮಾನಗಳನ್ನು ಹೊಂದಿಲ್ಲ. ರಾಯಚೂರು ಜಿಲ್ಲೆಯ ಬೇಡ ಅರಸು ವಂಶಸ್ಥರು ರಾಜ್ಯ ರಾಜಕಾರಣ ದಲ್ಲಿ ಗುರುತಿಸಲ್ಪಡುತ್ತಿದ್ದಾರಾದರೂ ಅವರ ಸ್ಥಾನಮಾನಗಳು ತೃಪ್ತಿದಾಯಕವಾಗಿಲ್ಲ. ಗುಂತಗೋಳ ಮತ್ತು ಗುಡಗುಂಟಿ ದೊರೆಗಳ ಮನೆತನದವರು ರಾಜಕೀಯದ ಜೊತೆ ನಿರಂತರವಾಗಿ ಮುಂದುವರೆದಿರುವರು. ಇತ್ತೀಚಿನ ಜನರಲ್ಲಿ ಬೇಡ ಅರಸುವಂಶಸ್ಥರ ಬಗ್ಗೆ ಗೌರವ ಕಡಿಮೆಯಾಗುತ್ತಿದೆ. ಚುನಾವಣಾ ಸಂದರ್ಭದಲ್ಲಿ ಮಾತ್ರ ಗಟ್ಟಿ ವ್ಯಕ್ತಿತ್ವವಿಲ್ಲದ ರಾಜಕಾರಣಿಗಳ ಹಿಂಬಾಲಕರಂತೆ ಈ ಬೇಡ ಅರಸು ವಂಶಸ್ಥರು ಕಂಡುಬರುವುದೊಂದು ವಿಪರ್ಯಾಸದ ಸಂಗತಿ.

ಕರ್ನಾಟಕದ ಈಚೀನ ಜನಾಂಗದಲ್ಲಿ ಅನೇಕ ಪರಿವರ್ತನೆಗಳಾಗಿವೆ. ಬೇಡರು ಪರಿಶಿಷ್ಟಪಂಗಡದ ಸೌಲಭ್ಯವನ್ನು ಪಡೆದುಕೊಳ್ಳುತ್ತಿದ್ದಾರೆ. ಗ್ರಾಮ, ತಾಲ್ಲೂಕು, ಜಿಲ್ಲಾಮಟ್ಟದ ರಾಜಕೀಯದಲ್ಲಿ ಈ ಸೌಲಭ್ಯವನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ರಾಜಕೀಯವಾಗಿ ಕೆಲವರು ಶಾಸಕರಾಗಿ, ಮಂತ್ರಿಗಳಾಗಿ ಗುರುತಿಸಲ್ಪಟ್ಟಿರುವುದುಂಟು. ಆದರೂ ರಾಜಕೀಯ ಪ್ರತಿನಿಧೀಕರಣದಲ್ಲಿ ವರ ಸಂಖ್ಯೆ ತೃಪ್ತಿದಾಯಕವಾಗಿಲ್ಲ. ಆಧುನಿಕತೆ, ವೈಜ್ಞಾನಿಕತೆ, ಸಾಂಸ್ಕೃತೀಕರಣ, ಜಾಗತೀಕರಣಗಳ ಪ್ರಭಾವದಿಂದ ಸಾಮಾಜಿಕವಾಗಿ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಬೇಡರು ಬದಲಾಗುತ್ತಿದ್ದಾರೆ. ಸಂಪ್ರದಾಯ, ಆಚಾರ-ವಿಚಾರ, ಉಡುಗೆ- ತೊಡುಗೆ ಮುಂತಾದವುಗಳಲ್ಲಿ ಬದಲಾವಣೆಗಳು ಕಂಡುಬಂದಿವೆ. ಮೂಢನಂಬಿಕೆಗಳು ಕಡಿಮೆಯಾಗ ತೊಡಗಿವೆ. ಬೇಡರು ಬದುಕಿಗಾಗಿ ಅನೇಕ ವೃತ್ತಿಗಳನ್ನು ಆಯ್ದುಕೊಳ್ಳುತ್ತಿದ್ದಾರೆ. ಸರ್ಕಾರಿ, ಖಾಸಗಿ ರಂಗಗಳಲ್ಲಿ ಉದ್ಯೋಗಿಗಳಾಗಿ ಕೆಲಸ ನಿರ್ವಹಿಸುತ್ತಿರುವುದು ವಾಸ್ತವ ಸಂಗತಿಯಾಗಿದೆ. ಶೈಕ್ಷಣಿಕವಾಗಿ ಸುಧಾರಿಸಿರುವ ಕೆಲವು ಬೇಡರು ಸಾಹಿತಿ, ಕಲಾವಿದ, ನಟ, ಪತ್ರಕರ್ತ, ವಿದ್ವಾಂಸರಾಗಿ ಕಂಡುಬಂದಿರುವರು. ಆದರೆ ಇವರಲ್ಲಿ ಅನಕ್ಷರಸ್ಥರ ಸಂಖ್ಯೆಯೂ ಹೆಚ್ಚಾಗಿದೆ. ಬೇಡ ಅರಸು ಮನೆತನ ದವರು ಸಹ ಇತ್ತೀಚಿನವರೆಗೂ ಶಿಕ್ಷಣದ ಕಡೆಗೆ ಹಾಗೂ ಇತರ ಉದ್ಯೋಗಗಳ ಕಡೆಗೆ ಗಮನಹರಿಸದಿರು

ವುದು ಕಂಡುಬರುತ್ತದೆ. ಕೆಲವು ಶಿಕ್ಷಣ ಪ್ರೇಮಿ ಬೇಡ ನಾಯಕರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಜ್ಞಾನದಾಸೋಹ ನಡೆಸುತ್ತಿದ್ದಾರೆ. ಸುಶಿಕ್ಷಿತ ಬೇಡರಲ್ಲಿ ತಮ್ಮ ಜಾತಿಪ್ರಜ್ಞೆ ತೀವ್ರವಾಗುತ್ತಿರುವುದೊಂದು ಕುತೂಹಲಕಾರಿ ಬೆಳವಣಿಗೆ. ತಮ್ಮದೇ ಆದ ಮಠವೊಂದನ್ನು ರಾಜನಹಳ್ಳಿ(ಹರಿಹರ ತಾ.)ಯಲ್ಲಿ ಸ್ಥಾಪಿಸಿಕೊಂಡು ಜನಜಾಗೃತಿ ಕಾರ್ಯದಲ್ಲಿ, ಜನಾಂಗದ ಸುಧಾರಣೆಯ ಕಾರ್ಯದಲ್ಲಿ ಆಸಕ್ತಿ ಹೊಂದಿದ್ದಾರೆ.

ಬೇಡ ಜನಾಂಗವು ಇಂದು ಅನೇಕ ಸ್ಥಿತ್ಯಂತರಗಳನ್ನು ಕಂಡ ಜನಾಂಗವಾಗುಳಿದಿದೆ. ಬುಡಕಟ್ಟು ಸ್ಥಿತಿಯಲ್ಲಿ ಉಳಿದುಕೊಂಡಿದ್ದ ಜನಾಂಗವೊಂದು ಕಾಲಗತಿಗೆ ಸಿಕ್ಕು ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಗಮನಾರ್ಹ ಸಾಧನೆ ಮಾಡಿರುದು ಪ್ರಮುಖ ಅಂಶವಾದರೂ ಅಷ್ಟೇ ತೀವ್ರವಾಗಿ ಅಧೋಗತಿಗೆ ಇಳಿದುದು ಅಚ್ಚರಿ ಹುಟ್ಟಿಸುವ ಸಂಗತಿಯಾಗಿದೆ.

ತಮ್ಮ ರಾಜ್ಯಾಧಿಕಾರವನ್ನು ಕಳೆದುಕೊಂಡ ಬಳಿಕ ಬೇಡ ಅರಸರು ದಿಕ್ಕುತಪ್ಪಿದಂತಾದರಲ್ಲದೆ ಯಾವ ವೃತ್ತಿಯನ್ನವಲಂಬಿಸಿ ತಮ್ಮ ಜೀವನ ನಿರ್ವಹಿಸಬೇಕೆಂಬ ವಿಚಾರದಲ್ಲಿ ಗೊಂದಲಕ್ಕೊಳಗಾದರು. ಅಲ್ಲಿಯವರಿಗೆ ಜನರಿಂದ ರಾಜಮಾರ್ಯದೆ ಸ್ವೀಕರಿಸುತ್ತಾ ಸುಖದ ಹಾಗೂ ಗೌರವಯುತ ಬದುಕು ನಡೆಸಿದವರಿಗೆ ಅನಂತರ ಕೂಡಲೇ ಇತರ ವೃತ್ತಿಗಳ ಕಡೆ ಗಮನ ನೀಡುವುದು ಅಸಾಧ್ಯವೆನಿಸಿತು. ಬದಲಾದ ರಾಜಕೀಯ ಸಂದರ್ಭಕ್ಕೆ ಹೊಂದಿಕೊಳ್ಳುವ ರಾಜಿಸ್ವಭಾವ ಅವರಲ್ಲಿ ಬರಲಿಲ್ಲ. ಸ್ವಾಭಿಮಾನ ಮತ್ತು ಪ್ರತಿಷ್ಠೆಗಳ ಪ್ರಶ್ನೆ ಎದುರಾಯಿತು. ಈ ಹಿಂದೆ ನಡೆಸಿದ ವಿಲಾಸಿಜೀವನವನ್ನು ಮುಂದುರೆಸುವುದು ಅಸಾಧ್ಯವೆನಿಸಿದ ಹಿನ್ನೆಲೆಯಲ್ಲಿ ಅನಿವಾರ್ಯವಾಗಿ ತಮ್ಮ ಆಸ್ತಿಗಳ ಮಾರುತ್ತಾ ಬಂದರು. ಹಾಗಾಗಿ ಈ ಕುಟುಂಬವರ್ಗದವರು ತೀರಾ ಕಷ್ಟಕ್ಕೊಳಗಾದರು. ಸಾಮಾಜಿಕ ಸ್ಥಾನಮಾನ ಹಾಗೂ ರಾಜಕೀಯ ಗೌರವಗಳನ್ನು ನಿರ್ಧರಿಸುವಲ್ಲಿ ಆರ್ಥಿಕ ಪರಿಸ್ಥಿತಿಯೇ ಮುಖ್ಯ ಪಾತ್ರವಹಿಸುವ ಪ್ರಸ್ತುತ ಸಂದರ್ಭದಲ್ಲಿ ಬೇಡ ಅರಸು ವಂಶಸ್ಥರು ಸರ್ವದೃಷ್ಟಿಯಿಂದಲೂ ಕೆಳಹಂತಕ್ಕೆ ತಳ್ಳಲ್ಪಟ್ಟಿದ್ದು ಸಹಜವೇ ಆಗಿದೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಸ್ತುತ ರಾಜಕೀಯಜ್ಞಾನದ ಕೊರತೆ ಬೇಡ ಅರಸು ಮನೆತನದವರಲ್ಲಿ ಮತ್ತು ಬೇಡರಲ್ಲಿ ಹೆಚ್ಚಾಗಿದೆ. ಅವರಲ್ಲಿ ತಮ್ಮ ಹಿಂದಿನ ಪ್ರತಿಷ್ಠೆ ಬಗೆಗಿನ ಮನೋಧರ್ಮ ಕಡಿಮೆಯಾಗಬೇಕಿದೆ. ಬದಲಾಗುತ್ತಿರುವ ಸಾಮಾಜಿಕ ವ್ಯವಸ್ಥೆಗೆ ಹೊಂದಿಕೊಂಡು ಮುನ್ನಡೆಯುವ ಅಗತ್ಯವಿದೆ. ಶಿಕ್ಷಣದ ಕಡೆ ಗಮನ ನೀಡಿ ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣವನ್ನು ನೀಡುವಲ್ಲಿಯೂ ಪ್ರಯತ್ನಶೀಲರಾಗಬೇಕಿದೆ. ಬೇಡರಾಗಿಯೂ ಬೇಡ ಜನಾಂಗದವರಾಗಿ ಗುರುತಿಸಿಕೊಳ್ಳದಂಥಾ ಮನೋಧರ್ಮವನ್ನು ಈ ವರ್ಗದಲ್ಲಿ ಕೆಲವರು ಬೆಳೆಸಿಕೊಂಡಿದ್ದಾರೆ. ಇದು ತಪ್ಪಬೇಕು. ಒಟ್ಟಿನಲ್ಲಿ, ಇತ್ತ ಸಮಾಜದಿಂದ ಪ್ರತ್ಯೇಕಗೊಳ್ಳುತ್ತಿರುವ ಹಾಗೂ ಅತ್ತ ಸರಕಾರದಿಂದ ನಿರ್ಲಕ್ಷಿಸಲ್ಪಡುತ್ತಿರುವ ಈಗಿನ ಬೇಡ ಅರಸು ಕುಟುಂಬದವರ ಏಳ್ಗೆಗೆ ಪ್ರತ್ಯೇಕ ಚಿಂತನೆ ನಡೆಸಬೇಕಾದ ಅಗತ್ಯವೂ ತೋರುತ್ತದೆನ್ನಬಹುದು.

# ೧. ಗ್ರಂಥಋಣ


ವೆಂಕಟರಂಗೋಕಟ್ಟಿ(ಅನು); *೧೮೮೩*, **ಗ್ಯಾಜೆಟಿಯರ್**, ಮುಂಬೈ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಧಾರವಾಡ, ಬೆಳಗಾವಿ, ಬಿಜಾಪುರ, ಕಾನಾಡ ನಾಲ್ಕು ಜಿಲ್ಲೆಗಳದ್ದು, ಮುಂಬೈ ಗವರ್ನ್‌ಮೆಂಟ್ ಸೆಂಟ್ರಲ್ ಬುಕ್ ಡಿಪೋ, ಮುಂಬೈ.

ಜೋಷಿ.ಶಂ.ಬಾ.: *೧೯೩೬*, **ಕರ್ನಾಟಕದ ವೀರಕ್ಷತ್ರಿಯರು ಅಥವಾ ಹಟ್ಟಿಕಾರರು**, ಮನೋಹರ ಗ್ರಂಥ ಭಂಡಾರ, ಧಾರವಾಡ.

ಕೃಷ್ಣಶರ್ಮ ಬೆಟಗೇರಿ; *೧೯೩೯*, **ಕರ್ನಾಟಕ ಜನಜೀವನ**, ಸಮಾಜ ಪುಸ್ತಕಾಲಯ, ಧಾರವಾಡ.

ತಿರುಮಲ ತಾತಾಚಾರ್ಯಶರ್ಮ; *೧೯೫೭*, **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ**, ಮೈಸೂರು ಸರಕಾರ, ಬೆಂಗಳೂರು.

ಕೋಡದ ಎಸ್.ಬಿ.; *೧೯೬೦*, **ವಿಜಯನಗರ ನಿರ್ಣಾಯಕ ಯುದ್ಧ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ರಾಜಾ ಬಿಚ್ಚುಗತ್ತಿಪರಶುರಾಮಪ್ಪನಾಯಕರು; *೧೯೬೧*, **ಚಿತ್ರದುರ್ಗದ ಗಜಕೇಸರಿ ಭಾಗ-ಒಂದು**, ಚಿತ್ರದುರ್ಗ.

ನಾಗೇಗೌಡ ಎಚ್.ಎಲ್.(ಅನು); *೧೯೬೬*, **ಪ್ರವಾಸಿಕಂಡ ಇಂಡಿಯಾ ಸಂಪುಟ-೩**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪ್ರಗತಿಚಿತ್ರ; *೧೯೬೬*, **ರಾಯಚೂರು ಜಿಲ್ಲೆ**, ಮೈಸೂರು ಸರಕಾರ.

ವರದರಾಜರಾವ್ ಜಿ.; *೧೯೬೬*, **ಕುಮಾರರಾಮನ ಸಾಂಗತ್ಯಗಳು**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಜಯತೀರ್ಥ ರಾಜಪುರೋಹಿತ(ಸಂ); *೧೯೬೮*, **ತುಂಗಾತರಂಗ**, ಗುಲ್ಬರ್ಗಾ.

ಕೇಶವರಾವ್.ಎಂ.ವಿ, ಕೇಶವಭಟ್ಟ, ಎಂ.(ಸಂ); *೧೯೭೦*, **ಕರ್ನಾಟಕದ ಇತಿಹಾಸ ದರ್ಶನ**, ಕರ್ನಾಟಕ ಸಹಕಾರಿ ಪ್ರಕಾಶನ ಕೇಶವಭಟ್ಟ ಮಂದಿರ, ಚಾಮರಾಜಪೇಟೆ, ಬೆಂಗಳೂರು.

ರಾಜಶೇಖರ ಪಿ.ಕೆ.; *೧೯೭೦*, **ಪಿರಿಯಾಪಟ್ಟಣದ ಕಾಳಗ**, ಹೊನ್ನೂರು ಜನಪದ ಗಾಯಕರು, ಮೈಸೂರು.

ಶಾಸ್ತ್ರೀ.ಬಿ.ಎನ್.; *೧೯೭೦*, **ಕರ್ನಾಟಕದ ಪರಂಪರೆ**, ಕರ್ನಾಟಕ ಸರ್ಕಾರ, ಬೆಂಗಳೂರು.

ವೆಂಕಟೇಶಯ್ಯ, ಎಂ.ಜಿ.; *೧೯೭೧*, **ಚಿತ್ರದುರ್ಗದ ಪಾಳೆಯಗಾರರು**, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

ಶಿವರಾಮು; *೧೯೭೧*, **ಕನ್ನಡದ ಕಡುಗಲಿಗಳು**, ಬೆಂಗಳೂರು.

ನಾಗರಾಜಯ್ಯ ಎಚ್.ಎಮ್.; *೧೯೭೨* ವಿಜಯನಗರ ಮತ್ತು ಮೈಸೂರು ಇತಿಹಾಸ, ದಖಿನ್ ಪಬ್ಲಿಕೇಷನ್, ಬೆಂಗಳೂರು.

ಶ್ರೀನಿವಾಸ ಕೊರಟಿ; *೧೯೭೨* ರಾಜಾವೆಂಕಟಪ್ಪನಾಯಕ, ಬೆಂಗಳೂರು.

ಷೇಕ್ಅಲಿ ಬಿ.; *೧೯೭೨* ಟಿಪ್ಪುಸುಲ್ತಾನ್, ನ್ಯಾಷನಲ್ ಬುಕ್ ಟ್ರಸ್ಟ್, ನ್ಯೂಡೆಲ್ಲಿ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ (ಪುನರ್ ಮುದ್ರಣ); *೧೯೭೩*, ಕರ್ನಾಟಕದ ಜನತೆಯ ಸಂಸ್ಕೃತಿ ಮತ್ತು ಜಾನಪದ ಸಾಹಿತ್ಯ, ಜೀವನ ಕಾರ್ಯಾಲಯ, ಬೆಂಗಳೂರು.

ವರದರಾಜರಾವ್.ಜಿ.; *೧೯೭೩*, ಕುಮ್ಮಟ ಕೇಸರಿ, ಉಷಾ ಸಾಹಿತ್ಯಮಾಲೆ, ಮೈಸೂರು.

ವೆಂಕಟರತ್ನ ಎ.ವಿ.; *೧೯೭೪*, ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು.

ಶಂಕರಕೆದಿಲಾಯ ಎ.(ಅನು); *೧೯೭೪*, ಪೆರಿಯಾಪುರಾಣಂ ಭಾಗ-೧, ಮದ್ರಾಸ್ ವಿಶ್ವವಿದ್ಯಾಲಯ, ಮದ್ರಾಸ್.

ಕ.ರಾ.ಕೃ (ಸಂ); *೧೯೭೫*, ಚಿತ್ರಕಲ್ಲು ಮದಕರಿ : ಜನಪದ ಗೀತೆಗಳ ಸಂಗ್ರಹ, ಬೆಂಗಳೂರು.

ಜಯತೀರ್ಥ ರಾಜಪುರೋಹಿತ; *೧೯೭೫*, ಕನಕಗಿರಿ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

ಮುದ್ದಾಚಾರಿ ಬಿ.; *೧೯೭೫*, ಮೈಸೂರು ಮರಾಠ ಬಾಂಧವ್ಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಶ್ರೀಕಂಠಶಾಸ್ತ್ರೀ ಎಸ್.(ಸಂ); *೧೯೭೫*, ಸಂಶೋಧನಾ ಲೇಖನಗಳು, ಮೈಸೂರು.

ಶ್ರೀಕಂಠಶಾಸ್ತ್ರೀ ಎಸ್.; *೧೯೭೫*, ಭಾರತೀಯ ಸಂಸ್ಕೃತಿ, ಮಾನಸ ಗಂಗೋತ್ರಿ, ಮೈಸೂರು.

ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ.ಎಂ.ವಿ (ಸಂ); *೧೯೭೬*, ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಚಿತ್ರದುರ್ಗ.

ಶ್ರೀನಿವಾಸ ಎಂ.ವಿ.(ಸಂ); *೧೯೭೬*, ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.

ಶಾಸ್ತ್ರೀ ಕೆ.ಜಿ., ಪಾಟೀಲ ಎಸ್.ಪಿ.(ಅನು); *೧೯೭೬*, ಕರ್ನಾಟಕದ ಸಾಂಸ್ಕೃತಿಕ ಪರಂಪರೆ, ಸಮಾಜ ಪುಸ್ತಕಾಲಯ, ಧಾರವಾಡ.

ಕಪಟರಾಳ ಕೃಷ್ಣರಾವ್; *೧೯೭೭*, ಸುರಪುರ ಸಂಸ್ಥಾನ ಇತಿಹಾಸ, ಮಂಜುನಾಥ ಪ್ರಕಾಶನ, ಬೆಂಗಳೂರು.

ಚಿದಾನಂದಮೂರ್ತಿ ಎಂ.(ದ್ವಿ.ಮುದ್ರಣ); *೧೯೭೯*, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಧೃವನಾರಾಯಣ; *೧೯೭೯,* ನಾರಾಯಣ ದೇವರಕೆರೆ, ಯುವಕರ ಸಂಘ, ಹಗರಿಬೊಮ್ಮನಹಳ್ಳಿ,

ನಿರಂಜನ ಮೈಸೂರು(ಅನು); *೧೯೭೯,* ಸಂಗಮ ರಾಜಕೀಯ-ಸಾಮಾಜಿಕ ವ್ಯವಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಲಕ್ಷ್ಮಣ್ ತೆಲಗಾವಿ, ವೆಂಕಣ್ಣಚಾರ್ ಕೆ.; *೧೯೭೯,* ಐತಿಹಾಸಿಕ ಚಿತ್ರದುರ್ಗ, ಚಿತ್ರದುರ್ಗ.

ಈಶ್ವರಪ್ಪ ಎಂ.ಜಿ., *೧೯೮೨,* ಮ್ಯಾಸಬೇಡರು, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

ತಪಸ್ವೀಕುಮಾರ.ನಂ, *೧೯೮೨,* ಕನ್ನಡ ಜನಪದ ಗೀತೆಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ.

ರಾಜಣ್ಣ ಆರ್.; *೧೯೮೨,* ನಾಯಕ ಜನಾಂಗದ ಇತಿಹಾಸ, ಚಳ್ಳಕೆರೆ.

ವಸುಂಧರಾ ಫಿಲಿಯೋಜಾ; *೧೯೮೨,* ಅಳಿದುಳಿದ ಹಂಪೆ, ಮಾನಸೋಲ್ಲಾಸ ಪ್ರಕಾಶನ, ಬೆಂಗಳೂರು.

ಶಂಕರನಾರಾಯಣ ತೀ.ನಂ; *೧೯೮೨,* ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಶೇಷಶಾಸ್ತ್ರಿ; *೧೯೮೨,* ಕರ್ನಾಟಕದ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಬೆಟಗೇರಿ ಕೃಷ್ಣಶರ್ಮ; *೧೯೮೩,* ಕರ್ನಾಟಕದ ಜನಜೀವನ, ವಿಶ್ವಕನ್ನಡ ಸಮ್ಮೇಳನ, ಬೆಂಗಳೂರು.

ಶ್ರೀಕಂಠಯ್ಯ; *೧೯೮೩,* ವಿಜಯನಗರ ಕಾಲದ ಕನ್ನಡ ಸಾಹಿತ್ಯದಲ್ಲಿ ಜನಜೀವನ ಚಿತ್ರ, ಗೀತಾಬುಕ್ ಹೌಸ್, ಮೈಸೂರು.

ಸೀತರಾಮಯ್ಯ ಎ.ವಿ.(ಸಂ); *೧೯೮೩,* ಶ್ರೀ ಕೃಷ್ಣದೇವರಾಯನ ದಿನಚರಿ, ಬಿ.ಎಂ.ಶ್ರೀ ಪ್ರತಿಷ್ಠಾನ, ಬೆಂಗಳೂರು.

ಬಾಗೂರು ಆರ್.ನಾಗರಾಜಪ್ಪ; *೧೯೮೪,* ಹೊಸದುರ್ಗದ ಸುತ್ತಮುತ್ತ, ಅಭಿವ್ಯಕ್ತಿ ವೇದಿಕೆ, ಹೊಸದುರ್ಗ

ಶ್ರೀನಿವಾಸನಾಯಕ ಬಿ.ಎಸ್.; *೧೯೮೪,* ಚಿತ್ರದುರ್ಗದ ಕಾಮಗೇತಿ ಅರಸರು, ಸರ್ಜರಾಮಸ್ವಾಮಿ ನಾಯಕರು, ಚಿಕ್ಕಮಗಳೂರು.

ಸೂರ್ಯನಾಥ ಕಾಮತ್; *೧೯೮೪,* ವಿಜಯನಗರ ಕಥೆಗಳು, ಹಂಸಧ್ವನಿ ಪ್ರಕಾಶನ, ಬೆಂಗಳೂರು.

ಚಿದಾನಂದಮೂರ್ತಿ ಎಂ.; *೧೯೮೫,* ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ನಂಜಮ್ಮಣ್ಣಿ ಎಂ.; *೧೯೮೬,* ಅರಸು ಜನಾಂಗ ಒಂದು ಅಧ್ಯಯನ, ತ. ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು.

ನಂಜುಂಡಸ್ವಾಮಿ ಎ.ಎಸ್.; *೧೯೮೬,* ಕರ್ನಾಟಕದ ಪಾಳೆಯಗಾರರು ಮತ್ತು ಒಡೆಯರ ಇತಿಹಾಸ, ಸಮಾಜ ಪುಸ್ತಕಲಾಯ, ಧಾರವಾಡ.

ಶಿವರಾಮಪ್ಪ ಎ.; ೧೯೮೭, **ಹೊಸಪೇಟೆ ತಾಲೂಕು ದರ್ಶನ**, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು.

ವೀರನಾಯಕ ಎಚ್.ವಿ.(ದ್ವಿತೀಯ ಮುದ್ರಣ); ೧೯೮೭, **ಕ್ಷಾತ್ರಾಂಶ ಪ್ರಭೋಧ**, ಸಾಹಿತ್ಯಸಂಪದ ಹರ್ತಿಕೋಟೆ, ಚಿತ್ರದುರ್ಗ(ಜಿ).

ರಾಮರಾವ್ ಆರ್.ಎಸ್.(ದ್ವಿತೀಯ ಮುದ್ರಣ); ೧೯೮೮, **ಎಚ್ಚಮನಾಯಕ**, ಐ.ಬಿ.ಎಚ್ ಪ್ರಕಾಶನ, ಬೆಂಗಳೂರು.

ಡಂಗ ಡಿ.ಬಿ., ೧೯೮೮, **ಜನಾಂಗ ಪರಿಚಯ**, ಪೆರಿಯರ್ ಪ್ರಕಾಶನ, ಧಾರವಾಡ.

ಸಮೇತನಹಳ್ಳಿ ರಾಮರಾಯ(ಅನು); ೧೯೮೮, **ಟಿಪ್ಪೂ ಸುಲ್ತಾನನ ಇತಿಹಾಸ**, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಸಣ್ಣಯ್ಯ ಬಿ.ಎಸ್.; ೧೯೮೮, **ದೇವೇಂದ್ರ ವಿರಚಿತ ರಾಜಾವಳಿ ಕಥಾಸಾರ**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಕುಶಾಲಪ್ಪಗೌಡ ಕೆ.(ಅನು); ೧೯೮೯, **ಮಧುರಾ ವಿಜಯಂ ಅಥವಾ ವೀರಕಂಪಣರಾಯ ಚರಿತಂ**, ಜಯಗೌರಿ ಪ್ರಕಾಶನ, ಸುಳ್ಯ.

ಕುಂಬಾಸ; ೧೯೯೦, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ**, ಹರಪನಹಳ್ಳಿ, ಶ್ರೀ ಮಾಲತೇಶ ಪ್ರಕಾಶನ, ಕುಂಚೂರು.

ಚೆನ್ನಕ್ಕ ಎಲಿಗಾರ; ೧೯೯೦, **ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಗಿರಿಜಾ ಟಿ.; ೧೯೯೧, **ಚಿತ್ರದುರ್ಗ ಜಿಲ್ಲಾ ದರ್ಶನಿ**, ರೇಖಾ ಪ್ರಕಾಶನ, ದಾವಣಗೆರೆ.

ದೀಕ್ಷಿತ್ ಜಿ.ಎಸ್.(ಸಂ); ೧೯೯೧, **ಸಂಗಮರ ಕಾಲದ ವಿಜಯನಗರ**, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

ಕಾಮತ್, ಸೂರ್ಯನಾಥ ಯು.; ೧೯೯೧, **ವಿಜಯನಗರ ಸಾಮ್ರಾಜ್ಯ**, ಪ್ರಕಾಶ ಸಾಹಿತ್ಯ ಬೆಂಗಳೂರು.

ಕ್ಯಾತನಹಳ್ಳಿ ರಾಮಣ್ಣ(ಸಂ) (ವಿಸ್ತೃತ ಎರಡನೇ ಮುದ್ರಣ); ೧೯೯೧, **ಫ್ಲೀಟರು ಸಂಗ್ರಹಿಸಿದ ಐತಿಹಾಸಿಕ ಲಾವಣಿಗಳು**, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪಡಶೆಟ್ಟಿ ಎಂ.ಎಂ.; ೧೯೯೨, **ತಿಂಥಣಿ ಮೊನಪ್ಪಯ್ಯ ಒಂದು ಅಧ್ಯಯನ**, ವೀರಶೈವ ಅಧ್ಯಯನ ಸಂಸ್ಥೆ, ಗದಗ.

ಸದಾನಂದ ಕನವಳ್ಳಿ (ಅನು); ೧೯೯೨, **ಮರೆತುಹೋದ ಸಾಮ್ರಾಜ್ಯ**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಎಲ್ಲೆಸ್ಸೆ, ೧೯೯೪, **ದಾಸಶ್ರೇಷ್ಠ ಕನಕದಾಸರ ಮೋಹನ ತರಂಗಿಣಿ**, ವಿದ್ಯಾನಿಧಿ ಪ್ರಕಾಶನ, ಗದಗ.

ಕಲಬುರ್ಗಿ ಎಂ.ಎಂ.(ಸಂ); ೧೯೯೪, **ಕರ್ನಾಟಕದ ಕೈಫಿಯತ್ತುಗಳು**, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಪುರುಷೋತ್ತಮ ಬಿಳಿಮಲೆ ಮತ್ತು ಇತರರು; *೧೯೯೪,* **ಹೊಸಪೇಟೆ ತಾಲ್ಲೂಕು ದರ್ಶನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಮುದ್ದೇಬಿಹಾಳು ಆರ್.ಸಿ.; *೧೯೯೪,* **ಬೇಡನಾಯಕರ ಪಾಡು,** ಪ್ರಕಾಶಕರು ರಂಗನಗೌಡ, ಎಚ್. ಪಾಟೀಲ, ಅಂಜಳ, ಬಿಜಾಪುರ(ಜಿ).

ಶರಣಬಸಪ್ಪ ಕೋಲ್ಕಾರ; *೧೯೯೪,* **ಕನಕಗಿರಿ ಪ್ರದೇಶದ ಸ್ಮಾರಕಗಳು ಮತ್ತು ಮೂರ್ತಿಶಿಲ್ಪಗಳು** (ಅಪ್ರಕಟಿತ ಎಂ.ಫಿಲ್ ಪ್ರಬಂಧ) ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಈಶ್ವರಪ್ಪ ಎಂ.ಜಿ.; *೧೯೯೫,* **ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಕರೆಶೆಟ್ಟಿ ರುದ್ರಪ್ಪ; *೧೯೯೫,* **ಮ್ಯಾಸಬೇಡರು : ಒಂದು ಜನಾಂಗಿಕ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಗಂಡುಗಲಿ ಟಿ.ಎನ್.; *೧೯೯೫,* **ಪ್ರಮುಖ,** ಮದಕರಿ ಪ್ರಕಾಶನ, ಚಿತ್ರದುರ್ಗ.

ಲಕ್ಷ್ಮಣ್ ತೆಲಗಾವಿ, ಶ್ರೀನಿವಾಸ ಎಂ.ವಿ.(ಸಂ); *೧೯೯೫,* **ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನಾ ಲೇಖನಗಳು,** ಚಿತ್ರದುರ್ಗ.

ವಿರೂಪಾಕ್ಷಿ ಪೂಜಾರಹಳ್ಳಿ; *೧೯೯೫,* **ಬಳ್ಳಾರಿ ಜಿಲ್ಲೆಯಲ್ಲಿ ಕಲೆಕ್ಟರುಗಳ ಆಳ್ವಿಕೆ(೧೮೦೦-೧೯೪೭) : ಒಂದು ಸಮೀಕ್ಷೆ** (ಅಪ್ರಕಟಿತ ಎಂ.ಫಿಲ್ ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಶಿರೂರು ಬಿ.ವ್ಹಿ(ಸಂ); *೧೯೯೫,* **ಸಿದ್ಧರಾಮ ಸಂಪದ,** ಯಲಬುರ್ಗಾ, ಕೊಪ್ಪಳ(ಜಿ).

ಗೋಪಾಲ ಬಾ.ರಾ.; *೧೯೯೬,* **ಇತಿಹಾಸಶಾಸ್ತ್ರ ಮತ್ತು ಸಿದ್ಧಾಂತ,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಪರಮಶಿವಮೂರ್ತಿ ಡಿ.ವಿ.; *೧೯೯೬,* **ಸಂಶೋಧನೆಯಸಿರಿ,** ಗುಣನಿಧಿ ಪ್ರಕಾಶನ, ಬೆಂಗಳೂರು.

ಪುರುಷೋತ್ತಮ ಬಿಳಿಮಲೆ, ಚೆಲುವರಾಜು; *೧೯೯೬,* **ಹಂಪಿ ಜಾನಪದ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಭಾನುಮತಿ ವೈ.ಸಿ.; *೧೯೯೬,* **ಕೃಷ್ಣಶರ್ಮ ವಿರಚಿತ ಸರಜಾ ಹನುಮೇಂದ್ರ ಯಶೋವಿಲಾಸಂ,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಶಿವಶಂಕರ ಎಂ.ಎಲ್., ಚೆನ್ನಬಸಪ್ಪ ಎಸ್., ಪಾಟೀಲ(ಸಂ); *೧೯೯೬,* **ವಿಜಯನಗರ ಅಧ್ಯಯನ ಸಂಪುಟ- II,** ಪ್ರಾಚ್ಯವಸ್ತುಸಂಗ್ರಹಾಲಯ, ಮೈಸೂರು.

ಸದಾಶಿವಪ್ಪ ಕುಂ.ಬಾ.; *೧೯೯೬,* **ಹರಪನಹಳ್ಳಿ ಪಾಳೆಯಗಾರರು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ವಾಸುದೇವ ಬಡಿಗೇರ; ೧೯೯೬. ಸಂಡೂರು ಪರಿಸರದ ಕಾರ್ತಿಕೇಯ ತಪೋವನ - ಚಾರಿತ್ರಿಕ ಅಧ್ಯಯನ, ಮಾಯಾ ಪ್ರಕಾಶನ, ಕಮಲಾಪುರ, ಬಳ್ಳಾರಿ(ಜಿ).

ಪರಮಶಿವಯ್ಯ ಜಿ.ಶಂ.; ೧೯೯೭, ಪಿರಿಯಾ ಪಟ್ಟಣದ ಕಾಳಗ, ಚೇತನ ಬುಕ್ ಹೌಸ್ , ಮೈಸೂರು.

ಅಬ್ಬುಲ್ ಸತ್ತಾರ್; ೧೯೯೭, ತರೀಕೆರೆಯ ಪಾಳೆಯಗಾರರು, ಶ್ರೀಲೋಕಪಾವನಿ ಪ್ರಕಾಶನ, ಪಾಂಡವಪುರ, ಮಂಡ್ಯ(ಜಿ).

ಪುಟ್ಟಣ್ಣ ಎಂ.ಎಸ್.(ಪುನರ್ ಮುದ್ರಣ); ೧೯೯೭, ಮಹಾರಾಷ್ಟ್ರ ಜಾನಪದ (ಬುಡಕಟ್ಟು ಅಧ್ಯಯನ), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ಷೇಕ್‌ಅಲಿ ಮತ್ತು ಇತರರು; ೧೯೯೭, ಕರ್ನಾಟಕ ಚರಿತ್ರೆ ಸಂಪುಟಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೋಮಶೇಖರ ಎಸ್.ವೈ.; ೧೯೯೭, ಹಂಪೆಯ ಬಜಾರಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪಾಟೀಲ ಬಿ.ಸಿ.; ೧೯೯೮, ಕೊಪ್ಪಳ : ಸಾಂಸ್ಕೃತಿಕ ಪರಂಪರೆ, ಹರಿಹರ ಪ್ರಕಾಶನ, ಕೊಪ್ಪಳ.

ರವಿಕುಮಾರ ಎನ್.ಎಮ್., ವೃಷಬೇಂದ್ರಚಾರ್ ಎ.(ಸಂ), ೧೯೯೮, ಮುನ್ನಡೆಯ ಕೂಡ್ಲಿಗಿ, ಹೇಮಂತ ಪ್ರಕಾಶನ, ಎಂ.ಬಿ. ಅಯ್ಯನಹಳ್ಳಿ, ಬಳ್ಳಾರಿ ಜಿ.

ವಿಮೋಚನೆ; ೧೯೯೮, ಕೊಪ್ಪಳ ಜಿಲ್ಲೆಯ ಹೈದ್ರಾಬಾದ್ ವಿಮೋಚನಾ ಹೋರಾಟದ ಕಥೆ, ಜಿಲ್ಲಾ ಆಡಳಿತ, ಕೊಪ್ಪಳ.

ಕೆಳದಿಗುಂಡಾ ಜೋಯಿಸ್ (ಗದ್ಯಾನುವಾದ); ೧೯೯೯, ಕೆಳದಿ ನೃಪವಿಜಯ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ದಿಬ್ಬೂರು ಶ್ರೀನಿವಾಸರಾವ್ (ಗದ್ಯಾನುವಾದ); ೧೯೯೯, ಮಹಾಕವಿ ಷಡಕ್ಷರ ದೇವ ವಿರಚಿತ ಶಬರಶಂಕರ ವಿಳಾಸ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ದೇವರಕೊಂಡಾರೆಡ್ಡಿ(ಸಂ); ೧೯೯೯, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನಿರುಪಮಾ; ೧೯೯೯, ಅಮುಕ್ತ ಮೌಲ್ಯದ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಭಾಕರ ಎ.ಎಸ್.; ೧೯೯೯, ಪಾಲಮ್ಮ ಮತ್ತು ಸಂಗಡಿಗರು ಹಾಡಿದ ಮ್ಯಾಸಬೇಡರ ಕಥನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಜೋಯಿಸ ಮ.ಭಾ.(ಗದ್ಯ ಅನುವಾದ); ೧೯೯೯, ತಿರುಮಲಾರ್ಯ ವಿರಚಿತ, ಚಿಕ್ಕದೇವರಾಯ ವಂಶಾವಳಿ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಮೀರಾಸಾಬಿಹಳ್ಳಿ ಶಿವಣ್ಣ; *೧೯೯೯,* **ಗೊಲ್ಲಕದಗ,** ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು.

ಮೀರಾಸಾಬಿಹಳ್ಳಿ ಶಿವಣ್ಣ; *೧೯೯೯,* **ದುರುಗ ಜಾನಪದ,** ಶಕ್ತಿ ಮುದ್ರಣ ಮತ್ತು ಪ್ರಕಾಶನ, ರಾಜಾಜಿನಗರ, ಬೆಂಗಳೂರು.

ಮಹಮ್ಮದ್ ಇಬ್ರಾಹಿಂ ಜುಬೇರಿ (ಅನು : ಕೃಷ್ಣಕೋಲ್ಹಾರ ಕುಲ್ಕರ್ಣಿ); *೧೯೯೯,* **ಬುಸಾತಿನೆ ಸಲಾತೀನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಯೋಗೀಶ್ವರಪ್ಪ ಡಿ.ಎನ್.; *೧೯೯೯,* **ಹಾಗಲವಾಡಿ ನಾಯಕರು,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಲಕ್ಷ್ಮಣ್ ತೆಲಗಾವಿ; *೧೯೯೯,* **ಹಿಂದುಳಿದ ವರ್ಗಗಳು ಮತ್ತು ದಲಿತ ಚಳುವಳಿಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಸುಂಧರಾ ಫಿಲಿಯೋಜಾ; *೧೯೯೯,* **ವಿಜಯನಗರ ಸಾಮ್ರಾಜ್ಯ ಸ್ಥಾಪನೆ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಶರ್ಮಾ ತಿ.ತಾ.(ಸಂ) (ಮರು ಮುದ್ರಣ); *೧೯೯೯,* **ಚಾರಿತ್ರಿಕ ದಾಖಲೆಗಳು,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಶ್ರೀನಿವಾಸಮೂರ್ತಿ ಎಂ.ಆರ್.(ಸಂ); *೧೯೯೯,* **ಚನ್ನಬಸವಪುರಾಣ ಸಂಗ್ರಹ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

ಹಳ್ಳಿಕೇರಿ ಎಫ್.ಟಿ.; *೧೯೯೯,* **ಎಮ್ಮೆ ಬಸವನ ಕಾಲಜ್ಞಾನ ಸಾಹಿತ್ಯ,** ಕನ್ನಡ ವಿಶ್ವವಿದ್ಯಾಲಯ ಹಂಪಿ.

ಗಂಗಾಧರ ದೈವಜ್ಞ; *೨೦೦೦,* **ಬುಡಕಟ್ಟು ಸಮಾಜ : ಹುಟ್ಟು ಸಾವಿನ ನಡುವೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕಲಬುರ್ಗಿ ಎಂ.ಎಂ., ವೀರಣ್ಣರಾಜೂರ(ಸಂ); *೨೦೦೦,* **ಹೊಸ ಕುಮಾರರಾಯನ ಸಾಂಗತ್ಯ,** ಕನ್ನಡ ವಿಶ್ವವಿದ್ಯಾಲಯ ಹಂಪಿ.

ಚೆನ್ನಣ್ಣ ವಾಲೀಕಾರ; *೨೦೦೦,* **ಕರ್ನಾಟಕ ದೇವದಾಸಿಯರ ಸಮಾಜೋ, ಧಾರ್ಮಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು** ರಾಜಕೀಯ ಸಮಸ್ಯೆಗಳ ಸಮಗ್ರ ಅಧ್ಯಯನ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲ್ಬರ್ಗಾ.

ನಾಗಣ್ಣ ಸಿ.(ಅನು); *೨೦೦೦,* **ದಕ್ಷಿಣ ಭಾರತ** ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಪ್ರಭಾಕರ್ ಎ.ಎಸ್.; *೨೦೦೦,* ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ.

ಬಸವರಾಜಪ್ಪ ಎಚ್.ಇ.; *೨೦೦೦,* ಚಿತ್ರದುರ್ಗ ಪ್ರದೇಶದ ಭೂಹಿಡುವಳಿಗಳ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಅಧ್ಯಯನ(ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ ಹಂಪಿ.

ವಿರೂಪಾಕ್ಷಿ ಪೂಜಾರಹಳ್ಳಿ; *೨೦೦೦,* ಮಧ್ಯಕಾಲೀನ ಕನ್ನಡಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ ಸಂದರ್ಭಗಳು : ಒಂದು ಚಾರಿತ್ರಿಕ ಅಧ್ಯಯನ (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವೀಣಾ ಎಂ.ಪಿ.; *೨೦೦೦,* ಮನೆ, ಸಮಾಜ ಮತ್ತು ಸಂಸ್ಕೃತಿ, ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ.

ಸುಜಾತಮಲ್ಲನಗೌಡ; *೨೦೦೦,* ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು : ಒಂದು ಅಧ್ಯಯನ (ಅಪ್ರಕಟಿತ ಪಿಎಚ್.ಡಿ.ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಸೋಮಶೇಖರ ಎಸ್.ವೈ., ೨೦೦೦, ವಿಜಯನಗರ ಕಾಲದ ಸೈನಿಕ ಆಡಳಿತ ವ್ಯವಸ್ಥೆ (ಅಪ್ರಕಟಿತ ಪಿಎಚ್. ಡಿ.ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹಿರೇಮಠ ಎಸ್.ಎಸ್.; *೨೦೦೦,* ದಲಿತ ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ತಂಬಂಡ ವಿಜಯಪೊಣ್ಣಚ್ಚ(ಸಂ); *೨೦೦೧,* ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ವಿಶ್ವಕೋಶ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ನರಸಿಂಹಮೂರ್ತಿ ಎ.ವಿ.(ಕ.ಅನು: ಪ್ರ.ಸಂ); *೨೦೦೧,* ದೆಹಲಿ ಸುಲ್ತಾನರ ಆಧಿಪತ್ಯ ಭಾಗ-ಒಂದು, ಭಾರತೀಯ ವಿದ್ಯಾಭವನ, ಬೆಂಗಳೂರು.

ಬಾಸ್ಕರರಾವ್ ಮುಡಬೂಳ; *೨೦೦೧,* ಮರೆತು ಹೋದ ಸುರಪುರ ಇತಿಹಾಸ, ಬೆಂಗಳೂರು.

ಮಲ್ಕಾಪುರೆ ಸುಚಿತಾನಂದ ಕೆ.; *೨೦೦೧,* ಬೀದರ್ ಜಿಲ್ಲೆಯ ಬೇಡ ಬುಡಕಟ್ಟು : ಒಂದು ಅರ್ಥಶಾಸ್ತ್ರೀಯ ಅಧ್ಯಯನ (ಅಪ್ರಕಟಿತ ಪಿಎಚ್ ಡಿ ಮಹಾಪ್ರಬಂಧ) ಕನ್ನಡ ವಿಶ್ವವಿದ್ಯಾಲಯ ಹಂಪಿ.

ಮಹೇಶ ತಿಪ್ಪಶೆಟ್ಟಿ(ಅನು); *೨೦೦೧,* ಮೈಸೂರು ಚಾಮುಂಡೇಶ್ವರಿ ದೇವಸ್ಥಾನ ಒಂದು ಸಾಮಾಜಿಕ ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ರಾಜರಾಮಹೆಗಡೆ, ಅಶೋಕ ಶೆಟ್ಟರ್(ಸಂ); *೨೦೦೧,* ಮನೆ ಕರ್ನಾಟಕದ ಅರಸು ಮನೆತನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ರಾಜಶೇಖರಪ್ಪ ಬಿ.; *೨೦೦೧,* ಇತಿಹಾಸ ಕಥನ, ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು.

ರಾಜಶೇಖರಪ್ಪ ಬಿ.; *೨೦೦೧,* ದುರ್ಗಶೋಧನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ವಸು ಎಂ.ವಿ(ಸಂ); *೨೦೦೧,* ದಕ್ಷಿಣ ಕರ್ನಾಟಕದ ಅರಸು ಮನೆತನಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಚಂದ್ರಶೇಖರ ಎಸ್.; *೨೦೦೨,* ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ, ಬಳಿಗೆರೆ, ತಿಪಟೂರು(ತಾ).

ನಾಗಯ್ಯ ಜೆ.ಎಂ.: *೨೦೦೨,* **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ,** ಲೋಹಿಯಾ ಪ್ರಕಾಶನ, ಬಳ್ಳಾರಿ.

ಮೈತ್ರಿ ಕೆ.ಎಂ.; *೨೦೦೨,* **ಬುಡಕಟ್ಟು ಕುಲಕಸುಬುಗಳು,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೊಟ್ರೇಶ್ ಎಂ.; *೨೦೦೨,* **ಕೋಟೆ-ಕೊತ್ತಳಗಳು ಒಂದು ಅಧ್ಯಯನ** (ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ) (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ), ಕನ್ನಡ ವಿಶ್ವವಿದ್ಯಾಲಯ ಹಂಪಿ.

ಬಸವರಾಜ ಎಚ್.ಎಂ.; *೨೦೦೨,* **ಗುಡೇಕೋಟೆ : ಸಾಂಸ್ಕೃತಿಕ ಅಧ್ಯಯನ** (ಅಪ್ರಕಟಿತ ಎಂ.ಫಿಲ್ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ ಹಂಪಿ.

ರಮೇಶ್ ಕೆ.; *೨೦೦೨,* **ಉಜ್ಜನಿ ಗ್ರಾಮಾಧ್ಯಯನ**(ಅಪ್ರಕಟಿತ ಎಂ.ಫಿಲ್ ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಸಂತ ಕುಷ್ಟಗಿ; *೨೦೦೨,* **ವಿಜಯನಗರ ಸಾಮ್ರಾಜ್ಯದ ಪತನಾನಂತರದ ಹರಿದಾಸ ಸಾಹಿತ್ಯ,** ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಹರ್ತಿಕೋಟೆ ವೀರೇಂದ್ರ ಸಿಂಹ ಮತ್ತು ತೇಜಸ್ವೀ ಕಟ್ಟೀಮನಿ(ಸಂ), *೨೦೦೨* **ಘಟ್ಟಿ ಹೊಸಹಳ್ಳಿ ಗಟ್ಟಿಗ,** ಹರ್ತಿಕೋಟೆ, ಚಿತ್ರದುರ್ಗ(ಜಿ).

Rice B.L.; *1903,* **Epigraphia Carnatic,** Vol xi, Chitradurga Dist, Bangalore

Thurston; *1906,* **Ethongraphic notes in Southern India,** Government Press, Madras

Sathyanath Aiyer R.; *1924,* **History of the Nayakas of Madurai,** Oxford Press

Venkataramanih N.; *1929,* Kampli and Vijayanagara, Christian Literature Soceites Press, Madras

Saletore B.A.; *1934,* **Social and Political life in the Vijayanagar Eimpire,** Vol II, B.G.Poul and Co, Madras

Mujumadar B.K.; *1960,* **The Militory System in Ancient India,** F.K.I.M.Pvt, Ltd, Calcutta

Sarkar J.; *1960,* **Military History of India,** Calcutta

Cherian A.; *1961,* **The Impact of Islam on South India,** Bombay University, Bombay

Krishna Rao M.V., Halappa G.S.(Ed).; *1964-65,* **History of Freedom Movement in Karnataka** Vol II, Bangalore

Robert Swell; *1962,* **Forgotten Empire,** National Book Trust, Delhi

Dikshit G.S.; *1964,* **The Local Self Government in Medievel Karnataka,** Karnataka University, Dharwar

Mahalingum T.V.; *1967,* **South Indian Polity,** Madras University, Madras

Diwakar R.R.; *1968,* **Karnataka Through the ages,** Mysore

Bhargavi S.; *1972,* **Krishnadevaraya: his life and achievements,** Karnataka University, Dharwar

Karmakar D.P.; *1974,* **A Cultural History of Karnataka,** Karnataka Vidhyavardaka Sangha, Dharwar

Sherring M.A.; *1974,* **Hindu Tribes and Castes,** Vol-I, Cosomo Publications Delhi

Machlen C.D.(Ed); *1987,* **Mannual of the Administration,** Madras Presidency, Vol-I, Missian Publication, New Delhi

Iyer L.K.A., *1988*(Reprint); **The Mysore Tribes and Castes,** Vol-2, Mittal Publications, Delhi

Francis Buchanan, *1988*(Reprint); **A Journy through Mysore,** Canare, Malbar Vol-I, Assian Publications, New Delhi

Mark Wilks, *1989,* **History of Mysore,** Vol-I, II, Asian Educational Services, New Delhi

Hassan Syed Sirajul; *1989,* **The Castes and Tribes of H.E.H.,** The Nizamas Dominions

Banden Powell B.H.(Reprint); *1990,* **The Land systems of British India,** Vol-III, Low Price Publications, Delhi

Mahajan V.D.; *1991,* **History of Medieval India,** S.chand Campany Ltd., New Delhi

Channabasappa S.Patil; *1991,* **Kummata In Vijayanagar Progress of Research 1987-88(Ed) D.V.Devaraj,** Channabasappa S.Patil Mysore Directorate of Archaeology and Museums

Singh K.S.; *1994,* **The Scheduled Tribes,** Oxford Press, Madras

Nilakanta Shastri K.A.; *1995,* **History of South India from Pre-Historic Times to the fall of Vijayanagar,** Oxford University Press, Oxford

**The Encyclopaedic District Gazetters of India,** Vol-I(List of Schedulted Castes and Scheduled Tribes Orders Act, 1976), Karnataka State, 1997

Aruni S.K.; *1998,* **History and Culture of Surapura Samsthana(1857-1958) A Ph.D Thesis,** University of Puna, Puna

Simha R.N.; *1999,* **Scheduled Castes and Scheduled Tribes(Prohibition of Transfer of Certain lands) Act and Rules in Karnataka,** Ambika Book House, Bangalore

Gururaj Batt P.; *1975,* **Studies in Tuluva History and Culture,** Power Press Manipal.

Havanur L.G.; *1975,* **Karnataka Backward Classess commssion Report,** Government

Press, Bangalore

Basavaraj K.R.(Ed); *1978,* **The Vijayanagara Crbanity,** N.S.U.P, Hospet

Desh Pande M.T.; *1979,* **The Chitradurga State(156801779)(unpublished Thesis),** University of Puna, Pune

Heras; *1980,* **The Aravidu Dynasty of Vijayanagar,** Vol-I, Cosmo Publications, New Delhi

Jyotsna Kamath; *1980,* **Social Life in Medieval Karnataka,** Abhinava Publications, New Delhi

Basavaraj K.R.; *1984,* **History and Culture of Karnataka,** Dharwad

Lewis Rice B.; *1986,* **Mysore and Coorg,** Asian Educational Services New Delhi

Thurston; *1906,* **Ethonographic notes in Southern India,** Government Press, Madras

Turston, Edigar and Rangachari K.; *1987,* **Castes and Tribes of Southern India,** Asian Educational Services, New Delhi, Madras


**ಗೆಝೆಟಿಯರ್, ಡಿಕ್ಷನರಿ, ವಿಶ್ವಕೋಶ ಮತ್ತು ಪತ್ರಿಕೆಗಳು**

Rice B.L.(Ed).; *1897,* **Mysore Gazetteer,** Vol-II, Westminister

Francis (Ed); *1904,* **Madras District Gazetter,** Bellary District Govt Press, Madras

Srisathyan B.N.(Ed); *1967,* **Chitraduga District Gazetteer,** Mysore State, Gazetteer, Bangalore

**Raichur District Gazetteer,** *1970,* Karnataka State Gazetteer, Bangalore

Abhisankar K.(Ed).; *1972,* **Karnataka Gazetteer,** Bellary District, Government Press, Bangalore

Suryanatha Kamath (Ed); *1982,* **Karnataka State Gazetteer,** Part-I, Govt of Karnataka, Bangalore

Hayavadana Rao C.(Ed); *1984*(First Reprint), **Mysore Gazetteer Vol-I, II, III and IV,** B.R.Publishing, Corpration, Delhi

Rev. F.Kittel; *1991,* **Kannada-English Diectionary,** Assian Educational Services, Madras

ನಾಯಕ ಹಾ.ಮಾ.(ಸಂ); *೧೯೭೯,* **ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಬೋರಲಿಂಗಯ್ಯ ಹಿ.ಚಿ.; *೧೯೯೬,* **ಕರ್ನಾಟಕದ ಜನಪದ ಕಲೆಗಳ ಕೋಶ,** ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಪತ್ರಿಕೆಗಳು**

೧. ವಾಲ್ಮೀಕಿ ಸಂದೇಶ, ಮಾಸಿಕ, ಗದಗ.

೨. ವಾಲ್ಮೀಕಿ ಬಂಧು, ಮಾಸಿಕ, ಧಾರವಾಡ.

೩. ವಾಲ್ಮೀಕಿ ವಾಣಿ, ಮಾಸಿಕ, ಚಿತ್ರದುರ್ಗ.

೪. ವಾಲ್ಮೀಕಿ ಕರ್ನಾಟಕ, ಮಾಸಿಕ, ಬೆಂಗಳೂರು.

೫. ಇತಿಹಾಸ ಚಂದ್ರಿಕೆ, ತುಮಕೂರು.

೬. ಜನಪದ, ಮಾಸಿಕ, ಬೆಂಗಳೂರು.

೭. ಕನ್ನಡ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಅಭಿವೃದ್ಧಿಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಇತಿಹಾಸದರ್ಶನ, ಇತಿಹಾಸ ಅಕಾಡೆಮಿ, ಬೆಂಗಳೂರು.

೧೦. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

## ೨. ವಕ್ತೃಗಳು

| ಕ್ರ.ಸಂ. | ಹೆಸರು | ವಯಸ್ಸು | ಊರು | ತಾಲ್ಲೂಕು |
|---|---|---|---|---|
| ೧. | ಸಿ.ವೀರಭದ್ರನಾಯಕ | ೪೮ | ಚಳ್ಳಕೆರೆ | ಚಳ್ಳಕೆರೆ |
| ೨. | ಸಿ.ಪಿ.ಗೋಪಾಲಸ್ವಾಮಿನಾಯಕ | ೮೫ | ಕಾಟಪ್ಪನ ಹಟ್ಟಿ | ಚಳ್ಳಕೆರೆ |
| ೩. | ಸಿ.ಪಿ.ರಾಜಣ್ಣ | ೫೯ | ಕಾಟಪ್ಪನಹಟ್ಟಿ | ಚಳ್ಳಕೆರೆ |
| ೪. | ಬಸವರಾಜನಾಯಕ | ೩೬ | ನಾಯಕನಹಟ್ಟಿ | ಚಳ್ಳಕೆರೆ |
| ೫. | ಶಿವಸ್ವಾಮಿನಾಯಕ | ೮೪ | ದೊರೆಗಳಹಟ್ಟಿ | ಚಳ್ಳಕೆರೆ |
| ೬. | ರಂಗಸ್ವಾಮಿನಾಯಕ | ೫೮ | ದೊರೆಗಳಹಟ್ಟಿ | ಚಳ್ಳಕೆರೆ |
| ೭. | ಯೋಗಾನಂದಶಾಸ್ತ್ರೀ | ೬೫ | ನಾಯಕನಹಟ್ಟಿ | ಚಳ್ಳಕೆರೆ |
| ೮. | ರೇವಣ್ಣ ಪಾರುಪತ್ಯಗಾರ | ೭೦ | ನಾಯಕನಹಟ್ಟಿ | ಚಳ್ಳಕೆರೆ |
| ೯. | ಬಿ.ಎಸ್.ಶ್ರೀನಿವಾಸ ನಾಯಕ | ೮೦ | ಅರೆಹಳ್ಳಿ | ಹೊಳಲ್ಕೆರೆ |
| ೧೦. | ಡಾ.ರಾಜಾ ಬಿ.ಜಯಚಂದ್ರರಾಜ | ೫೨ | ಗುಡೇಕೋಟೆ | ಕೂಡ್ಲಿಗಿ |
| ೧೧. | ಕರಿಯಪ್ಪ ಪಾಳೆಯಗಾರ | ೪೨ | ಮತ್ತೋಡು | ಹೊಸದುರ್ಗ |
| ೧೨. | ಪಾಳೆಯಗಾರ ಮಲ್ಲಿಕಾರ್ಜುನ | ೪೦ | ಮತ್ತೋಡು | ಹೊಸದುರ್ಗ |
| ೧೩. | ಪಿ.ಜಿ.ಕೃಷ್ಣವರ್ಮರಾಜರು | ೮೦ | ಗುಡೇಕೋಟೆ | ಕೂಡ್ಲಿಗಿ |
| ೧೪. | ಪಂಪಾಪತಿರಾಜು | ೬೦ | ಜರಿಮಲೆ | ಕೂಡ್ಲಿಗಿ |
| ೧೫. | ರಾಜಾ ಅಮರಪ್ಪನಾಯಕ | ೫೨ | ಗುಡಗುಂಟಿ | ಲಿಂಗಸೂಗುರು |
| ೧೬. | ರಾಜಾ ಕಿಲಿಚನಾಯಕ | ೭೩ | ದೇವದುರ್ಗ | ದೇವದುರ್ಗ |
| ೧೭. | ರಾಜಾ ಶ್ರೀನಿವಾಸನಾಯಕ | ೩೮ | ಗುಂತಗೋಳ | ಲಿಂಗಸೂಗುರು |
| ೧೮. | ರಾಜಾನವೀನ ಚಂದ್ರನಾಯಕ | ೪೩ | ಹುಲಿಹೈದರ | ಗಂಗಾವತಿ |
| ೧೯. | ರಾಜಾ ಉಡೆಚೇಂದ್ರನಾಯಕ | ೩೬ | ಹುಲಿಹೈದರ | ಗಂಗಾವತಿ |
| ೨೦. | ರಾಜಾ ಚಚ್ಚಪ್ಪನಾಯಕ | ೪೮ | ಹುಲಿಹೈದರ | ಗಂಗಾವತಿ |
| ೨೧. | ಡಾ.ತೇಜಸ್ವೀ ಕಟ್ಟೀಮನಿ | ೪೮ | ಧಾರವಾಡ | ಧಾರವಾಡ |
| ೨೨. | ಡಾ.ರಂಗರಾಜ ವನದುರ್ಗ | ೩೬ | ಶಂಕರಘಟ್ಟ | ಶಿವಮೊಗ್ಗ |
| ೨೩. | ಬಿ.ಆರ್.ತುಬಾಕಿ | ೫೦ | ಕೊಪ್ಪಳ | ಕೊಪ್ಪಳ |
| ೨೪. | ಹರ್ತಿಕೋಟೆ ವೀರೇಂದ್ರಸಿಂಹ | ೪೯ | ಹರ್ತಿಕೋಟೆ | ಚಿತ್ರದುರ್ಗ |
| ೨೫. | ಅಹೋಬಲನಾಯಕ | ೪೮ | ಚಿತ್ರದುರ್ಗ | ಚಿತ್ರದುರ್ಗ |



ಶ್ರೀ ಬಿ.ಎಸ್.ಶ್ರೀನಿವಾಸನಾಯಕ ಮತ್ತು ಅವರ ಮನೆ, ಅರೆಹಳ್ಳಿ



ಶ್ರೀ ವೀರಭದ್ರನಾಯಕ ಮತ್ತು ಅವರ ಕುಟುಂಬ, ಚಳ್ಳಕೆರೆ

# ಮತ್ತೋಡು ಪಾಳೆಯಗಾರರ ವಂಶಸ್ಥರು



ಪಾಳೆಯಗಾರ ಮಲ್ಲಿಕಾರ್ಜುನ ಮತ್ತು ಅವರ ಕುಟುಂಬ, ಅರಸನ ತೋಟ



ವಿದೇಶದಲ್ಲಿ ನೆಲೆಸಿರುವ ಮತ್ತೋಡು ಪಾಳೆಯಗಾರ ವಂಶಸ್ಥರು ಮತ್ತು ಮನೆ

## ನಾಯಕನಹಟ್ಟಿ ಪಾಳೆಯಗಾರರ ವಂಶಸ್ಥರು



ಶ್ರೀ ಶಿವಸ್ವಾಮಿನಾಯಕ ಮತ್ತು ಅವರ ಮನೆ, ದೊರೆಗಳಹಟ್ಟಿ



ಶ್ರೀ ಬಸವರಾಜನಾಯಕ ಅವರ ಮನೆ, ನಾಯಕನಹಟ್ಟಿ

# ಗುಡೇಕೋಟೆ ಮತ್ತು ಜರಿಮಲೆ ಪಾಳೆಯಗಾರರ ವಂಶಸ್ಥರು



ಶ್ರೀ ಪಿ.ಜಿ.ಕೃಷ್ಣವರ್ಮರಾಜರು ಮತ್ತು ಅವರ ಮನೆ, ಗುಡೇಕೋಟೆ



ಶ್ರೀ ಪಂಪಾಪತಿರಾಜು ಮತ್ತು ಅವರ ಮನೆ, ಜರಿಮಲೆ



ಶ್ರೀ ರಾಜಾ ಅಮರಪ್ಪನಾಯಕ ಮತ್ತು ಅವರ ಮನೆ, ಗುಡಗುಂಟಿ



ಗುಡಗುಂಟಿ ದೊರೆಗಳ ರಾಜದರ್ಬಾರ, ಗುಡಗುಂಟಿ



ಶ್ರೀ ರಾಜಾ ಕಿಲಿಚನಾಯಕ ಮತ್ತು ಅವರ ಮನೆ, ದೇವದುರ್ಗ



ದೇವದುರ್ಗ ದೊರೆಗಳ ಹಳೆಯ ದರ್ಬಾರ್, ದೇವದುರ್ಗ



ಶ್ರೀ ರಾಜಾ ಶ್ರೀನಿವಾಸನಾಯಕ ಅವರ ಮನೆ, ಗುಡಗುಂಟಿ



ಶ್ರೀ ರಾಜಾ ಅಮರೇಶ್ವರನಾಯಕ ಅವರ ಮನೆ, ಗುಡಗುಂಟಿ



ಶ್ರೀ ರಾಜಾ ರಂಗಪ್ಪನಾಯಕ ಮತ್ತು ಅವರ ಕುಟುಂಬ, ಹುಲಿಹೈದರ



ಶ್ರೀ ರಾಜಾ ಚಚ್ಚಪ್ಪನಾಯಕ ಮತ್ತು ಅವರ ಮನೆ, ಹುಲಿಹೈದರ



ಬೇಡರು ಬೇಟೆಗೆ ಹೊರಟ ದೃಶ್ಯ, ದಶಮಾಪುರ



ಪ್ರಸ್ತುತ ನಾಯಕ ಅರಸುಮನೆತನದ ರಾಣಿಯರು ಸಂಚಾರಕ್ಕಾಗಿ
ಬಳಸುತ್ತಿರುವ ಎತ್ತಿನಗಾಡಿ, ಹುಲಿಹೈದರ



ಶ್ರೀ ಮಹರ್ಷಿವಾಲ್ಮೀಕಿ ಗುರುಪೀಠ, ರಾಜನಹಳ್ಳಿ, ಹರಿಹರ ತಾಲ್ಲೂಕು



ಜಗದ್ಗುರು ಶ್ರೀ ಪುಣ್ಯಾನಂದಪುರಿ ಮಹಾಸ್ವಾಮಿಗಳವರು

